# ಆಧುನಿಕ ಪಠ್ಯಗಳಲ್ಲಿ ಬಸವಣ್ಣನನ್ನು ಕುರಿತ ಗ್ರಹಿಕೆಗಳು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ಬಸವರಾಜ

ಮಾರ್ಗದರ್ಶಕರು

ಡಾ. ಎಂ. ಮಲ್ಲಿಕಾರ್ಜುನಗೌಡ

ಸಹಾಯಕ ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ





ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

# ಆಧುನಿಕ ಪಠ್ಯಗಳಲ್ಲಿ ಬಸವಣ್ಣನನ್ನು ಕುರಿತ ಗ್ರಹಿಕೆಗಳು

**ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ**

ಸಂಶೋಧಕರು

**ಬಸವರಾಜ**

ಮಾರ್ಗದರ್ಶಕರು

**ಡಾ. ಎಂ. ಮಲ್ಲಿಕಾರ್ಜುನಗೌಡ**

ಸಹಾಯಕ ಪ್ರಾಧ್ಯಾಪಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ



ಭಾಷಾ ನಿಕಾಯ

**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೩

# ದೃಢೀಕರಣ ಪತ್ರ

**"ಆಧುನಿಕ ಪತ್ಯಗಳಲ್ಲಿ ಬಸವಣ್ಣನನ್ನು ಕುರಿತ ಗ್ರಹಿಕೆಗಳು"** ಎಂಬ ವಿಷಯದ ಕುರಿತು **ಬಸವರಾಜ** ಇವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದು ಇವರ ಸ್ವತಂತ್ರ ಸಂಶೋಧನ ಅಧ್ಯಯನವಾಗಿದೆ. ಇದನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲಾಗಿದೆ.

ಮಾರ್ಗದರ್ಶಕರು


**(ಡಾ. ಎಂ. ಮಲ್ಲಿಕಾರ್ಜುನಗೌಡ)**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**


**ದಿನಾಂಕ** : ೨೧. ೦೭. ೨೦೧೨
**ಸ್ಥಳ** : **ವಿದ್ಯಾರಣ್ಯ**

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ **"ಆಧುನಿಕ ಪಠ್ಯಗಳಲ್ಲಿ ಬಸವಣ್ಣನನ್ನು ಕುರಿತ ಗ್ರಹಿಕೆಗಳು"** ಎಂಬ ಎಂಬ ಮಹಾಪ್ರಬಂಧವು **ಡಾ. ಎಂ. ಮಲ್ಲಿಕಾರ್ಜುನಗೌಡ,** ಸಹಾಯಕ ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಅಧ್ಯಯನವನ್ನು ಆಧರಿಸಿ ರಚನೆಗೊಂಡಿದ್ದಾಗಿದೆ. ಈ ಮಹಾಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಹಾಗೂ ಇದು ಬಿಡಿ ಇಲ್ಲವೆ ಇಡಿಯಾಗಿ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು
**(ಬಸವರಾಜ)**
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

ದಿನಾಂಕ : ೨೧. ೦೨. ೨೦೧೨
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

### ಪ್ರಸ್ತಾವನೆ

ಕನ್ನಡ ಸಾಹಿತ್ಯ ಚರಿತ್ರೆಯು ಆರಂಭದಿಂದ ಹಲವಾರು ಹೊಸ ತಿರುವುಗಳನ್ನು ಪಡೆದು ಕೊಳ್ಳುತ್ತಾ ಬಂದಿದೆ. ಅದರೊಂದಿಗೆ ವಾಸ್ತವ ಅಂಶಗಳನ್ನು ಮೈಗೂಡಿಸಿಕೊಳ್ಳುತ್ತಾ ಭವಿಷ್ಯವನ್ನು ಎದುರು ನೋಡುವ ನೋಟ ಕನ್ನಡ ಸಾಹಿತ್ಯದಲ್ಲಿದೆ. ಪ್ರತಿಯೊಂದು ಕಾಲಘಟ್ಟದಲ್ಲಿ ಸಾಹಿತ್ಯ ನಿರ್ಮಾಣವಾಗುವಾಗ ಆ ಕಾಲದ ಗ್ರಹಿಕೆಗಳು ಮತ್ತು ಧೋರಣೆಗಳು ಪ್ರಮುಖವಾಗಿ ಎದ್ದು ಕಾಣುತ್ತವೆ. ಆದ್ದರಿಂದ ಸಾಹಿತ್ಯವನ್ನು ಜೀವನದಿಂದ ಹೇಗೆ ಬೇರ್ಪಡಿಸಲು ಸಾಧ್ಯವಿಲ್ಲವೋ, ಹಾಗೇ ಜೀವನವನ್ನು ಬಿಟ್ಟು ಸಾಹಿತ್ಯ ಇರುವುದಿಲ್ಲ.

ಮನುಷ್ಯನ ಆಲೋಚನೆಗಳು ಚಿಂತನೆಗಳು ಬರಹ ರೂಪ ಪಡೆದಾಗ ಅದು ಸಾಹಿತ್ಯವಾಗುತ್ತದೆ ಎನ್ನುವುದು ಸಾಮಾನ್ಯವಾದ ವಿಚಾರ. ಅದು ಭವಿಷ್ಯತ್ತಿನ ಜನರಿಗೆ ಕೊಡುವ ಸಂಗತಿಗಳು ಮುಖ್ಯವೆನಿಸುತ್ತವೆ. ಈ ಕಾರಣಕ್ಕಾಗಿ ಆರಂಭದ ಸಾಹಿತ್ಯವನ್ನು ನಾವು ಗಣನೆಗೆ ತೆಗೆದುಕೊಂಡಾಗ ಸಂಸ್ಕೃತದ ಪ್ರಭಾವವಿದ್ದರೂ ಕನ್ನಡದ ಸಂಗತಿಗಳು ಅತ್ಯಂತ ಹೆಮ್ಮರವಾಗಿ ನಿಂತಿರುವುದಕ್ಕೆ ನಮ್ಮ ಪ್ರಾಚೀನ ಸಾಹಿತ್ಯವೇ ನಿದರ್ಶನವಾಗಿದೆ. ಪಂಪ, ರನ್ನ, ಪೊನ್ನರು ಜೈನ ಧರ್ಮ ತತ್ವವನ್ನು ಪ್ರಚಾರ ಮಾಡುವ ಉದ್ದೇಶವೊಂದಾದರೆ, ತಾವು ಆಶ್ರಯಿಸಿದ ರಾಜರನ್ನು ಓಲೈಸಿ, ಗೆಳೆತನದಿಂದ ಕಂಡು ಪುರಾಣದ ಕಥಾವಸ್ತುವನ್ನು ಕನ್ನಡಿಸಿರುವುದು ಕಾಣಬಹುದಾಗಿದೆ. ಅಂದಿನ ಸಾಹಿತ್ಯ ೧೦ನೇ ಶತಮಾನದ ಹೊತ್ತಿಗೆ ಸುವರ್ಣಯುಗವೆಂದು ಕರೆಯಿಸಿಕೊಂಡಿರುವುದು ಒಂದು ವಿಶೇಷ. ಮೌಲ್ಯಗಳು, ಆದರ್ಶಗಳು ಕಾಲದಿಂದ ಕಾಲಕ್ಕೆ ನಿರಂತರವಾಗಿ ಹರಿದು ಬರುವಲ್ಲಿ ಹಳೆಗನ್ನಡ ಸಾಹಿತ್ಯ ಒಂದು ತೋರುಬೆರಳಾಗಿ ನಿಲ್ಲುತ್ತದೆ. ಪಂಡಿತ-ಪಾಮರರನ್ನು ಉದ್ದೇಶದಲ್ಲಿಟ್ಟುಕೊಂಡು ಬರೆದರೂ ಸಹ ರಾಜ ಮತ್ತು ಪ್ರಜೆಗಳ ನಡುವಿನ ಸಂಬಂಧವನ್ನು ಎಳೆ ಎಳೆಯಾಗಿ ಬಿಚ್ಚಿಟ್ಟಿರುವುದನ್ನು ಮನಗಾಣಬಹುದಾಗಿದೆ.

ಪಂಡಿತವರ್ಗಕ್ಕೆ ಸೀಮಿತವಾಗಿರುವಂತಹ ಸಾಹಿತ್ಯವನ್ನು ಜನಸಾಮಾನ್ಯರ ಮನದಾಳದಲ್ಲಿ ನೆಲೆ ನಿಲ್ಲುವಂತೆ ಸರಳ ಭಾಷೆಯನ್ನು ಮೈಗೂಡಿಸಿಕೊಂಡು ಸಾಮಾಜಿಕ, ಧಾರ್ಮಿಕ, ರಾಜಕೀಯ,

ಆರ್ಥಿಕ ಹಾಗು ಇತರೆ ಕ್ಷೇತ್ರಗಳಲ್ಲಿ ಇರುವ ತಾರತಮ್ಯವನ್ನು ಯಥಾವತ್ತಾಗಿ ಹೇಳುವಂತಹ ಎದೆಗಾರಿಕೆ ಬಹುತೇಕ ನಡುಗನ್ನಡ ಸಾಹಿತ್ಯ ಸಂದರ್ಭದಲ್ಲಿ ಉಂಟಾಯಿತು. ಹೀಗಾಗಿ ಸಾಹಿತ್ಯ ಕ್ರಾಂತಿಯನ್ನೇ ಉಂಟು ಮಾಡಿದ ಕಾಲಘಟ್ಟ ಅದಾಗಿತ್ತು. ಒಂದು ಕಡೆ ಧಾರ್ಮಿಕ ಕ್ರಾಂತಿ, ಮತ್ತೊಂದು ಕಡೆಗೆ ಸಾಹಿತ್ಯಿಕ ಕ್ರಾಂತಿ ಎರಡೂ ಕೂಡಿಕೊಂಡಿರುವುದು ೧೨ನೇ ಶತಮಾನದ ವಚನ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಮನದಾಳದ ಮಾತುಗಳನ್ನು ನೇರವಾಗಿ ಸರಳವಾದ ಭಾಷೆಯಲ್ಲಿ ಮುಟ್ಟುವಂತೆ ಹೇಳುವಂತಹ ಕಲಾತ್ಮಕತೆ ವಚನ ಸಾಹಿತ್ಯದಲ್ಲಿ ಅಡಗಿದೆ. ಈ ಸಾಹಿತ್ಯವನ್ನು ಕಟ್ಟಿ ಬೆಳೆಸಿದಂತಹ ಹಲವಾರು ಮಹನೀಯರು ಜೇಡರದಾಸಿಮಯ್ಯ, ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ, ನಾಗಲಾಂಬಿಕೆ, ಚೆನ್ನಮಲ್ಲಿಕಾರ್ಜುನ, ಸಿದ್ಧರಾಮ, ಹಡಪದ ಅಪ್ಪಣ್ಣ, ಕೊಂಡಗೋಳಿ ಕೇಶಿರಾಜ, ಉರಿಲಿಂಗಪೆದ್ದಿ, ಮುಕ್ತಾಯಕ್ಕ, ಅಮುಗೆ ರಾಯಮ್ಮ ಮುಂತಾದ ಶರಣ-ಶರಣೆಯರು ನಡೆದು-ನುಡಿದ ಮಾತುಗಳಿಗೆ ಬರಹದ ರೂಪ ಕೊಟ್ಟು ಅದನ್ನೇ ವಚನ ಸಾಹಿತ್ಯವೆಂದು ಕರೆದರು. ಮೊದಲು ರಾಜಸ್ತುತಿಯಿಂದ ಬಂದಿರುವಂತ ಸಾಹಿತ್ಯ ಜನಸಾಮಾನ್ಯರ ಸ್ತುತಿಯಾಗಲು ಬಸವಣ್ಣನವರು ಮೂಲ ಕಾರಣಿಕರ್ತರಾದವರು. ಏಕೆಂದರೆ ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ ಯಾವುದೇ ಬೇಧ-ಭಾವವಿಲ್ಲದೇ ಸ್ತ್ರೀಯರು-ಪುರುಷರು ಒಂದೆಡೆ ಸೇರಿ ತಮ್ಮ ವಿಚಾರಗಳನ್ನು ಅಭಿವ್ಯಕ್ತಪಡಿಸಲು ಅವಕಾಶ ಮಾಡಿಕೊಟ್ಟ ಮಹಾನ್ ಮೇಧಾವಿಯೇ ಬಸವಣ್ಣನವರು. ಈ ಕುರಿತು ಸೃಜನಶೀಲ ಸಾಹಿತ್ಯ ಹಾಗೂ ಸೃಜನೇತರ ಸಾಹಿತ್ಯ ಪ್ರಕಾರಗಳಲ್ಲಿ ಹರಡಿಕೊಂಡಿರುವುದು ನಮ್ಮೆಲ್ಲರಿಗೂ ತಿಳಿದಿರುವ ಸಂಗತಿ.

## ಅಧ್ಯಯನದ ಉದ್ದೇಶ-ವ್ಯಾಪ್ತಿ

೧೫ನೇ ಶತಮಾನದಲ್ಲಿ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ೧೦೧ ವಿರಕ್ತರು ವಚನಕಾರರ ವಚನಗಳನ್ನು ಸಂಗ್ರಹಿಸಲು ಮುಂದಾದರು. ಇಲ್ಲಿ ಬೆಳಕಿಗೆ ಬಂದ ವಚನ ಸಂಕಲನಗಳು ಶರಣರ ವಚನಗಳನ್ನು ಒಂದು ಸಾಂಸ್ಥಿಕ ಚೌಕಟ್ಟಿಗೆ ಒಳಪಡಿಸುವ ಯತ್ನ ಮಾಡಿದರು. ಇದರಿಂದ ವಚನಗಳು ಮೂಲ ಆಶಯಕ್ಕೆ ವಿರೋಧವಾಗಿ ಮಿತಿಗೆ ಒಳಪಟ್ಟವು. ವಚನಗಳು ವೀರಶೈವ ಧರ್ಮದ ತತ್ವಗಳಾಗಿ ಬಳಕೆಯಾದವು. ಇವುಗಳನ್ನು ವಚನಕಾರರ ಹೆಸರಿನಲ್ಲಿಯೇ ಸಂಕಲಿಸಿದರು. ಹೀಗೆ ಸೇರಿದ ವಚನಗಳನ್ನು ಮತ್ತು ವಚನಕಾರರನ್ನು ಅಧ್ಯಯನಕ್ಕೆ ಒಳಪಡಿಸಿದರು. ಹೀಗಾಗಿ ಸಂಕಲನಗಳಲ್ಲಿ ವೀರಶೈವ ಧರ್ಮದ ಸಿದ್ಧಾಂತಗಳಾಗಿ ವಚನಕಾರರ ಎಷ್ಟೋ ವಚನಗಳನ್ನು ಷಟ್‌ಸ್ಥಲಕ್ಕೆ ಅಳವಡಿಸಿದರು. ಷಟ್‌ಸ್ಥಲಕ್ಕೆ ಅಳವಡದೇ ಇರುವ ವಚನಗಳು ಸಂಕಲನಕಾರರಿಗೆ ತೊಡಕಾದವು. ವಚನಕಾರರನ್ನು ಕಥನಕ್ಕೆ ಅಳವಡಿಸಿ ಪುರಾಣ ಪುರುಷರನ್ನಾಗಿ ಬೇರೊಂದು ರೂಪದಲ್ಲಿ ಸೃಷ್ಟಿಸಲಾಯಿತು. ಬಸವಣ್ಣನನ್ನೇ ಅನೇಕ ತರದಲ್ಲಿ ಕಾಣಿಸಲಾಯಿತು. "ಹೀಗೆ ಕಾಣಿಸಿಕೊಂಡ ಬಸವಣ್ಣನನ್ನು ಆಯಾ ಕಥನಗಳ ಮೂಲಕ ನೋಡಬೇಕಾಯಿತು. ವಚನಗಳ ಮೂಲಕ ಕಾಣಬೇಕಾಗಿದ್ದ ಬಸವಣ್ಣ ಹಿನ್ನೆಲೆಗೆ ಸರಿಯ

ಬೇಕಾಯಿತು. ಹೀಗಾಗಿ ವಚನಕಾರ ಬಸವಣ್ಣ ಕಥಾನಕಗಳ ಬಸವಣ್ಣಗಳು ಬೆಳೆದರು. ಇದರಿಂದಾಗಿ ಬಸವಣ್ಣನನ್ನು ಕುರಿತು ಯಾರೇ ಮಾತನಾಡಿದರೂ ಅವರ ಮಾತಿನಲ್ಲಿ ಯಾವ ಬಸವಣ್ಣ ಇರುತ್ತಾನೆ ಎಂಬ ಪ್ರಶ್ನೆ ಏಳುತ್ತದೆ. ಆಧುನಿಕ ಕಾಲದ ಚಿಂತಕರು ವಚನಕಾರ ಬಸವಣ್ಣನನ್ನು, ಕಥಾನಕಗಳ ಬಸವಣ್ಣನನ್ನು ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಅರ್ಥದಲ್ಲಿ ಬೇರೆ ಬೇರೆ ಮಾಡಿ ನೋಡುತ್ತಾರೋ, ಒಂದರೊಳಗೊಂದು ಸೇರಿಸಿ ನೋಡುತ್ತಾರೋ ಎಂಬುದು ತಿಳಿಯುವುದಿಲ್ಲ"(ಸಂ. ಅಮರೇಶ ನುಗಡೋಣಿ, ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ, ಪ್ರಸ್ತಾವನೆ, ಪುಟ ೧೧, ೨೦೦೪).

ಆದರೂ ವಚನಸಾಹಿತ್ಯ ಚಳುವಳಿಯಲ್ಲಿ ಬಸವಣ್ಣನವರು ಪ್ರಧಾನವಾಗಿ ಕಾಣಿಸಿಕೊಂಡಿದ್ದಾರೆ. ವಿವಿಧ ರೀತಿಯ ವ್ಯಾಖ್ಯಾನಗಳಿಗೆ ಒಳಗಾಗಿದ್ದಾರೆ. ಇಷ್ಟೊಂದು ವ್ಯಾಖ್ಯಾನಗಳಿಗೆ ಒಳಗಾಗಲು ಬಸವಣ್ಣನ ವ್ಯಕ್ತಿತ್ವ ಮತ್ತು ಆತನ ವಚನಗಳು ಕಾರಣವಾಗಿವೆ. ಅಲ್ಲದೇ ಆ ಕಾಲದ ಸಾಂಸ್ಕೃತಿಕ ಸಂದರ್ಭವೂ ಕಾರಣವಾಗಿದೆ. ಹರಿಹರನ ಕಾಲದಲ್ಲಿ ವಚನಕಾರರ ಹೆಚ್ಚು ಕಥನಗಳು ಪವಾಡೀಕರಣಗೊಂಡವು. ಹರಿಹರನ ನಂತರದಲ್ಲಿ ವೀರಶೈವ ಪರಂಪರೆಗೆ ಬಸವಣ್ಣ ಮುಖ್ಯನಾಗಿದ್ದಾನೆ. ಹೀಗಾಗಿ ಪಠ್ಯಗಳು ಬಸವಣ್ಣನನ್ನು ಕುರಿತೇ ಹೆಚ್ಚಾಗಿ ಮಾತನಾಡುತ್ತವೆ. ವರ್ತಮಾನದ ಬದುಕನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಳ್ಳಲು ಮುಂದಿನ ವೀರಶೈವ ಪಠ್ಯಗಳೆಲ್ಲೆಲ್ಲಾ ಪ್ರಯತ್ನಿಸಲಾಯಿತು. ಅದರಲ್ಲಿ ಭೀಮಕವಿಯ 'ಬಸವ ಪುರಾಣ', ಸಿಂಗರಾಜನ 'ಅಮಲಬಸವ ಚರಿತೆ', ಬಸವಲಿಂಗಕವಿಯ 'ಬಸವೇಶ್ವರ ಕಾವ್ಯ', ಷಡಕ್ಷರದೇವನ 'ಬಸವರಾಜ ವಿಜಯಂ', ಶಂಕರಕವಿಯ 'ಚೋರಬಸವ ಪುರಾಣ', 'ಸಾಟಿಕಾ ಬಸವೇಶ ವಿಜಯಂ', ಕವಿಕಾಡನ 'ಬಸವ ಶಿಖಾಮಣಿ', ಚನ್ನಬಸವರಾಜನ 'ಶಿಷ್ಯ ಬಸವ ಪವಾಡ', ಸಂಶಿವಿಭೂನ 'ಬಸವ ಶತಕ', ಉತ್ತರದೇಶದ ಬಸವಲಿಂಗನ 'ಬಸವೇಶ್ವರ ಪುರಾಣ ಕಥಾಸಾಗರ' ಮುಂತಾದವೆಲ್ಲ ಬಸವಣ್ಣನ ಜೀವನವನ್ನೇ ಪ್ರಧಾನವಾಗಿ ಪಠ್ಯಗಳಲ್ಲಿ ಚಿತ್ರಿಸಿದ್ದಾರೆ.

ಈ ಪಠ್ಯಗಳ ಮೂಲಕ ವೀರಶೈವ ಧರ್ಮಕ್ಕೆ ಸಾಂಸ್ಥಿಕತೆಯ ಲೇಪವನ್ನು ನೀಡಲು ಬಸವಣ್ಣನನ್ನು ಗಾಳವಾಗಿ ಬಳಸಿಕೊಳ್ಳಲಾಯಿತು. ಯಾಕೆಂದರೆ ವೈದಿಕ ಧರ್ಮಕ್ಕೆ ಸರಿಸಾಟಿಯೆಂದು ಬೀಗುತ್ತಿದ್ದ ವೀರಶೈವ ಧರ್ಮಕ್ಕೆ ಸಾಮಾಜಿಕವಾಗಿ ಉನ್ನತ ಸ್ತರವನ್ನು ಪಡೆದುಕೊಳ್ಳುವ ಸಲುವಾಗಿ ವಚನ ಚಳುವಳಿಯಲ್ಲಿ ಮುಖ್ಯನಾಗಿದ್ದ ಬಸವಣ್ಣನನ್ನು ಕುರಿತು ಕೃತಿ ರಚಿಸುವುದು ಆ ಕಾಲಕ್ಕೆ ಅಗತ್ಯವಾಗಿತ್ತು. ಅದರಂತೆಯೇ ಚಾಮರಸನ 'ಪ್ರಭುಲಿಂಗಲೀಲೆ, ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ', ಸಿದ್ದನಂಜೇಶನ 'ಗುರುರಾಜ ಚಾರಿತ್ರ್ಯ', ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ', ಗುಬ್ಬಿಯ ಮಲ್ಲಣಾರ್ಯನ 'ವೀರಶೈವಾಮೃತ ಪುರಾಣ', 'ಗಣ್ಯಭಾಷ್ಯ ರತ್ನಮಾಲೆ', ಕಲ್ಲುಮಠದ ಪ್ರಭುದೇವನ 'ಲಿಂಗಲೀಲಾವಿಲಾಸ ಚಾರಿತ್ರ್ಯ', ಜಕ್ಕಣಾರ್ಯನ 'ಏಕೋತ್ತರ ಷಟ್‌ಸ್ಥಲ', 'ಶೂನ್ಯ ಸಂಪಾದನೆಗಳು' ಬಸವಣ್ಣನ ಜೀವನವನ್ನು ಅನುಷಂಗಿಕ ವಾಗಿಯೂ ಮತ್ತು ಮುಖ್ಯವಾಗಿಯೂ ಸ್ವೀಕರಿಸಿ ಕೃತಿ ರಚಿಸಿದರು. ವೀರಶೈವ ಧರ್ಮದ

ಮುಖ್ಯ ಆಶಯಗಳನ್ನು ಬಿಟ್ಟು ಸ್ಥಲಕಟ್ಟುಗಳಿಗೆ ಅನುಗುಣವಾಗಿ ಕೃತಿ ರಚಿಸಿದರು. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಬಸವಣ್ಣನನ್ನು ಈ ಮೇಲಿನ ಕೃತಿಗಳಲ್ಲಿ ಪ್ರಶ್ನಾತೀತ ನಾಯಕನೆಂಬಂತೆ ಚಿತ್ರಿಸಲಾಗಿದೆ.

ವೀರಶೈವ ಕೃತಿಗಳಲ್ಲದೇ ಧರಣಿ ಪಂಡಿತನ 'ಬಿಜ್ಜಳರಾಯ ಚರಿತೆ', ಚಂದ್ರಸಾಗರ ವರ್ಣಿಯ 'ಬಿಜ್ಜಳರಾಯ ಪುರಾಣ', ದೇವಚಂದ್ರನ 'ರಾಜಾವಳಿ ಕಥೆ' ಈ ಕೃತಿಗಳು ಬಸವಣ್ಣನ ಕುರಿತು ವಿಭಿನ್ನ ಚಿತ್ರಣಗಳನ್ನು ನೀಡಿದೆ. ಜೈನ ಧರ್ಮದ ಕೃತಿಯಾದ ರಾಜಾವಳಿ ಕಥೆಯು ಬಸವಣ್ಣನನ್ನು ಖಂಡಿಸುತ್ತದೆ. ಮಧ್ಯಕಾಲದ ಈ ಎಲ್ಲಾ ಪ್ರಕ್ರಿಯೆಗಳ ನಡುವೆಯೇ ಕಲ್ಯಾಣದ ಬಸವಣ್ಣನ ಆಶಯಗಳನ್ನು ಮುಖ್ಯ ಧಾರೆಯಾಗಿಸಿಕೊಂಡು ಮೌಖಿಕವಾಗಿಯೂ, ಆಚರಣಾತ್ಮಕವಾಗಿಯೂ ಜನಪದ ಸಮುದಾಯಗಳು ಪಠ್ಯಗಳನ್ನು ರೂಪಿಸಿಕೊಂಡವು.

ಆಧುನಿಕ ಸಂದರ್ಭದಲ್ಲಿ ಬಸವಣ್ಣನನ್ನು ಕುರಿತು ಸೃಜನಶೀಲ ಪಠ್ಯಗಳಿಗಿಂತ ಹೆಚ್ಚಾಗಿ ಸಂಶೋಧನೆ, ಸಂಪಾದನೆ, ವಿಮರ್ಶೆ, ವಿಶ್ಲೇಷಣೆ ಮುಂತಾದ ಸೃಜನೇತರ ಪಠ್ಯಗಳು ಕಾಣಿಸಿಕೊಳ್ಳುತ್ತವೆ. ಅದರಲ್ಲೂ ೧೯ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಉಂಟಾದ ಸಾಮಾಜಿಕ ಬದಲಾವಣೆಗಳು ವಿಪುಲವಾಗಿ ವೀರಶೈವ ಪಠ್ಯಗಳ ರಚನೆಗೆ ಕಾರಣವಾಯಿತು. ಈ ಪಠ್ಯಗಳು ವೀರಶೈವ ಪರಂಪರೆಯನ್ನು ಕಟ್ಟಿಕೊಳ್ಳಬೇಕು ಎಂಬ ಒತ್ತಡವನ್ನು ಉಂಟು ಮಾಡಿದವು. ೧೯ನೇ ಶತಮಾನದಲ್ಲಿ ವೀರಶೈವ ಕುರಿತ ಬಂದ ಪಠ್ಯಗಳೆಲ್ಲಾ ಬಸವಣ್ಣನನ್ನೇ ಕೇಂದ್ರವಾಗಿಸಿ ಕೊಂಡಂತವುಗಳು. ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ೧೨ನೇ ಶತಮಾನದ ಶರಣ ಸಾಹಿತ್ಯದ ಕೊಡುಗೆ ಮಹತ್ತರವಾದುದು. ಶರಣರು ಚರಿತ್ರೆಯಲ್ಲಿ ಉಂಟುಮಾಡಿದ ಸಂಚಲನವು ಮಿಂಚಿನಂತಹದು. ಅದು ೨೧ನೇ ಶತಮಾನದಲ್ಲಿಯೂ ಮಿಂಚಿನ ಬೆಳಕನ್ನು ಬೀರುತ್ತಲಿದೆ. ಆ ಚಳುವಳಿಯ ಭಾಗವಾದ ವಚನ ಸಾಹಿತ್ಯ ವಿವಿಧ ರೀತಿಯ ವ್ಯಾಖ್ಯಾನಗಳಿಗೆ ಒಳಗಾಗಿದೆ. ಅದರಲ್ಲಿ ಬಸವಣ್ಣನದು ಮುಖ್ಯವಾದ ವ್ಯಕ್ತಿತ್ವ. ಆತನ ವಚನಗಳು ಆ ಕಾಲದ ಸಾಂಸ್ಕೃತಿಕ ಸಂದರ್ಭಕ್ಕೆ ಸಾಕ್ಷಿಯಾಗಿವೆ.

ಆಧುನಿಕ ಸಂದರ್ಭದಲ್ಲಿ ಕನ್ನಡದ ಮಹತ್ವದ ಲೇಖಕರು ಬಸವಣ್ಣನನ್ನು ಕುರಿತು ಆತನ ಚರಿತ್ರೆಯನ್ನು ಕುರಿತು ವಿಭಿನ್ನವಾದ ಸೃಜನಶೀಲ ಪಠ್ಯಗಳನ್ನು ರಚಿಸಿದ್ದಾರೆ. ೧೯೨೦ರಿಂದ ೧೯೬೦ರವರೆಗೆ ಚಾಲ್ತಿಯಲ್ಲಿದ್ದ ಪ್ರಗತಿಶೀಲ ಆಶಯಗಳು ಹಾಗೂ ಸಮಾಜವಾದಿ ಆಶಯಗಳು ಕೂಡ ಬಸವಣ್ಣನನ್ನು ಚಿತ್ರಿಸುವಲ್ಲಿ ಕೆಲಸ ಮಾಡಿದೆ. ಅನಕೃರವರ 'ಜಗಜ್ಯೋತಿ ಬಸವೇಶ್ವರ' ನಾಟಕ ಹಾಗೂ ೧೯೬೦ರ ದಶಕದಲ್ಲಿ ಬಿ. ಪುಟ್ಟಸ್ವಾಮಯ್ಯನವರು ಬರೆದ 'ಕ್ರಾಂತಿ ಕಲ್ಯಾಣ' ಹಾಗೂ ಈ ಸರಣಿಯ 'ಉದಯರವಿ', 'ರಾಜ್ಯಪಾಲ', 'ಕಲ್ಯಾಣೇಶ್ವರ', 'ನಾಗಬಂಧ', 'ಮುಗಿಯದ ಕನಸು' ಮುಂತಾದ ಕಾದಂಬರಿಗಳನ್ನು ಸೂಚಿಸಬಹುದಾಗಿದೆ. ಇದರಲ್ಲಿ ಬಸವಣ್ಣ ಚಾರಿತ್ರಿಕ ಪುರುಷನಾಗಿರುವಂತೆಯೇ ಅವತಾರ ಸ್ವರೂಪಿಯ ಕೆಲವು ಗುಣಗಳನ್ನು ಹೊಂದಿದ್ದಾನೆ.

ಇಡೀ ವಚನಕಾರ ಚಳುವಳಿಯು ಬಸವನೆಂಬ ದಿವ್ಯಶಕ್ತಿಯ ಮೇಲೆ ನಿಂತಿದೆ ಎಂಬುದನ್ನು ಪ್ರತಿಪಾದಿಸುತ್ತದೆ. ಬಸವಣ್ಣನು ಪ್ರತಿಪಾದಿಸುತ್ತಾ ಬಂದ ಜನಪದ ತಾತ್ವಿಕ ಹಿನ್ನೆಲೆಯಲ್ಲಿ ಅವತಾರ ಪುರುಷ ಎಂದು ನಂಬುವ ಜನರ ಕಲ್ಪನೆಗಳ ಮಟ್ಟಕ್ಕಿಂತ ಹೆಚ್ಚಿನದನ್ನು ಈ ಕೃತಿಗಳು ಹೇಳುತ್ತವೆ. ಸಮಕಾಲೀನ ಚಿಂತನೆಗಳ ಹಿನ್ನೆಲೆಯಲ್ಲಿ ಬಸವಣ್ಣನನ್ನು ಹಲವು ಮಗ್ಗಲು ಗಳಿಂದ ಪರಿಶೀಲಿಸಿರುವ ಆಧುನಿಕ ಸೃಜನಶೀಲ ಪಠ್ಯಗಳು ನಮ್ಮ ಮುಂದಿವೆ. ಇವುಗಳ ಕುರಿತ ಅಧ್ಯಯನ ಕುತೂಹಲವಾದುದು. ಲಂಕೇಶರ 'ಸಂಕ್ರಾಂತಿ' ನಾಟಕವು ವಚನಕಾರರ ಚಳುವಳಿಯ ನಿರ್ದಿಷ್ಟ ಐತಿಹಾಸಿಕ ಘಟನೆಯನ್ನು ನೇರವಾಗಿ ಚಿತ್ರಿಸುವುದಿಲ್ಲ. ಬದಲಾಗಿ ಸಾಂಸ್ಕೃತಿಕವಾಗಿ ಹಲವು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ. ಹಾಗೆಯೇ ಎಚ್.ಎಸ್. ಶಿವಪ್ರಕಾಶರವರ 'ಮಹಾಚೈತ್ರ' ನಾಟಕದಲ್ಲಿ ಬಸವಣ್ಣನು ಎಲ್ಲಿಯೂ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲ. ಅವನೊಬ್ಬ ಅವತಾರ ಸ್ವರೂಪಿ ಎಂಬಂತೆ ತದ್ವಿರುದ್ಧವಾಗಿ ನೋಡಿದ ಬಗೆಯನ್ನು ಚಿತ್ರಿಸಲಾಗಿದೆ. ಬಸವಣ್ಣ ಈ ಕೃತಿಯಲ್ಲಿ ಪ್ರಶ್ನಿತನಾಗಿದ್ದಾನೆ. ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕವು ಚಾರಿತ್ರಿಕ ಸನ್ನಿವೇಶವೊಂದನ್ನು ವಾಸ್ತವತೆಗೆ ಹತ್ತಿರವಾಗಿರುವ ಮಾನವೀಯ ಘಟನೆಗಳಾಗಿ ನಿರೂಪಿತಗೊಂಡಿರುವುದನ್ನು ಕಾಣಬಹುದು. ತಲೆದಂಡ ನಾಟಕದಲ್ಲಿ ಬಸವಣ್ಣನ ಪವಾಡಗಳಿವೆ. ಆದರೆ ಅವೆಲ್ಲಾ ಲೌಕಿಕ ಪವಾಡಗಳು. ಈ ಮೂರು ಪಠ್ಯಗಳ ಜೊತೆಗೆ 'ಜಂಗಮದೆಡೆಗೆ' ಕೃತಿಯು ಸೇರಿಕೊಳ್ಳುತ್ತದೆ. ಈ ಕೃತಿಗಳು ವರ್ತಮಾನದ ಎಲ್ಲ ದ್ವಂದ್ವ ಹಾಗೂ ಎಚ್ಚರಗಳ ಸಮೇತ ಬಸವಣ್ಣನನ್ನು ಆತನ ಚೇತನವನ್ನು ಹಾಗೂ ಪ್ರಸ್ತುತತೆಯನ್ನು ನಮ್ಮ ಮುಂದಿಟ್ಟಿರುವಂತದ್ದು ಅಧ್ಯಯನಕ್ಕೆ ಕುತೂಹಲವಾದದ್ದು. ಈ ಹಿನ್ನೆಲೆಯಲ್ಲಿ ಆಧುನಿಕ ಪಠ್ಯಗಳಲ್ಲಿ ಬಸವಣ್ಣನ ಕುರಿತು ಹೇಗೆ ಗ್ರಹಿಸಿದ್ದಾರೆ ಎಂಬುದನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಬಸವಣ್ಣನ ಕುರಿತ ಆಧುನಿಕ ಸೃಜನಶೀಲ ನಾಟಕ ಹಾಗೂ ಕಾದಂಬರಿ ಪಠ್ಯಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಆಧುನಿಕ ಪಠ್ಯಗಳಲ್ಲಿ ಬಸವಣ್ಣನನ್ನು ಕುರಿತು ಗ್ರಹಿಕೆಗಳು ಎಂಬ ವಿಷಯವನ್ನು ಕುರಿತು ಸಂಶೋಧನೆಯನ್ನು ಕೈಗೊಳ್ಳಲು ಮೂಲ ಉದ್ದೇಶವೇನೆಂದರೆ ಬಸವಣ್ಣನ ಜೀವನ ಚರಿತ್ರೆಯನ್ನು ಕುರಿತು ಆಧುನಿಕ ಸೃಜನಶೀಲ ಬರಹಗಾರರು ತಮ್ಮದೇ ಆದ ಗ್ರಹಿಕೆಯಲ್ಲಿ ಅರ್ಥೈಸಲು ಪ್ರಯತ್ನಪಟ್ಟಿದ್ದಾರೆ. ಈ ಗ್ರಹಿಕೆಯ ಪ್ರಯತ್ನಗಳು ಬಸವಣ್ಣನ ಜೀವನವನ್ನು ಕುರಿತು ಯಾವ ರೀತಿ ಅನಾವರಣ ಮಾಡಿದ್ದಾರೆ ಎನ್ನುವುದು ಇಲ್ಲಿ ಮುಖ್ಯವಾದದು. ಹಾಗೇ ಅನಾವರಣ ಮಾಡುವಾಗ ಅವರು ತೆಗೆದುಕೊಂಡ ವಿಧಾನ ಎಂತಹದ್ದು. ಅದಕ್ಕೆ ಅವರು ಕೊಡುವ ಕಾರಣಗಳೇನು? ಆ ಕಾರಣಗಳು ಆ ಪಠ್ಯದಲ್ಲಿ ಎಷ್ಟರಮಟ್ಟಿಗೆ ಪ್ರತಿಬಿಂಬಿತವಾಗಿವೆ? ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶ ನನ್ನ ಅಧ್ಯಯನದಲ್ಲಿದೆ. ಒಬ್ಬ ಮಹಾನ್ ವ್ಯಕ್ತಿಯ ಜೀವನವನ್ನು ಚರಿತ್ರೆಯಾಗಿ ಬರೆಯುವಾಗ ಹಲವಾರು ಆಕರಗಳು ದಾಖಲೆಯಾಗಿ ನಿಲ್ಲುತ್ತವೆ. ಅಂತಹ ದಾಖಲೆಗಳಲ್ಲಿರುವ ಸಂಗತಿಗಳನ್ನು ಇಟ್ಟುಕೊಂಡು ಪ್ರಸ್ತುತ ಸನ್ನಿವೇಶದಲ್ಲಿ ಆಧುನಿಕ

ಲೇಖಕರು ಪರಿಚಯಿಸಿದ ರೀತಿಯನ್ನು ಗುರುತಿಸುವುದೇ ಈ ಅಧ್ಯಯನದ ಮೂಲ ಉದ್ದೇಶಗಳಲ್ಲಿ ಒಂದಾಗಿದೆ.

### ಅಧ್ಯಯನದ ಸ್ವರೂಪ

ಅಧ್ಯಯನದ ಅನುಕೂಲಕ್ಕಾಗಿ ಸಂಶೋಧನಾ ಮಹಾಪ್ರಬಂಧವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದೇನೆ. ಮೊದಲನೇ ಅಧ್ಯಾಯದಲ್ಲಿ ಸಂಶೋಧನೆಯ ಉದ್ದೇಶ, ವ್ಯಾಪ್ತಿ ಸ್ವರೂಪ ಮತ್ತು ವಿಧಾನವನ್ನು ಕುರಿತು ವಿವರಿಸಿದ್ದೇನೆ. ಈಗಾಗಲೇ ಮೇಲೆ ಹೇಳಿದಂತೆ ಬಸವಣ್ಣನವರನ್ನು ಕುರಿತು ಪಠ್ಯಗಳಲ್ಲಿ ಅನಾವರಣವಾದ ಅವರ ಬದುಕು-ಸಾಧನೆ ಇವುಗಳನ್ನು ತೌಲನಿಕವಾಗಿ ಗುರುತಿಸಿ, ವಿವೇಚಿಸಿ, ವಿಮರ್ಶಿಸಿ ವಿಷಯ ವಸ್ತುವನ್ನು ಒರೆಗಲ್ಲಿಗೆ ಹಚ್ಚಲಾಗಿದೆ. ಬಸವಣ್ಣನನ್ನು ಕೇಂದ್ರೀಕರಿಸಿ ಆತನ ಜೀವನವನ್ನು ಬರೆದಿರುವ ಆಧುನಿಕ ಕನ್ನಡದ ಸಾಹಿತ್ಯ ರೂಪಗಳಾದ ನಾಟಕ ಹಾಗೂ ಕಾದಂಬರಿಗಳಲ್ಲಿ ಬಸವಣ್ಣನವರ ಜೀವನ ಹೇಗೆ ಚಿತ್ರಿತವಾಗಿದೆ ಎಂಬುವುದನ್ನು ಈ ಅಧ್ಯಯನದ ವ್ಯಾಪ್ತಿಗೆ ಸೀಮಿತಪಡಿಸಿಕೊಂಡಿದ್ದೇನೆ. ಸಂಶೋಧನೆಯ ವಿಧಾನ ವ್ಯಕ್ತಿಯ ಜೀವನಕ್ಕೆ ಸಂಬಂಧಪಟ್ಟಿರುವುದರಿಂದ ವ್ಯಕ್ತಿ ಅಧ್ಯಯನ ಎನ್ನುವುದಕ್ಕಿಂತ ಆ ವ್ಯಕ್ತಿಯನ್ನು ಕುರಿತು ಇಲ್ಲಿಯವರೆಗೆ ರಚಿತವಾಗಿರುವ ಗ್ರಂಥಗಳನ್ನು ಇಟ್ಟುಕೊಂಡು ಬಸವಣ್ಣನವರ ಪ್ರತಿಯೊಂದು ಹಂತದ ವಿಚಾರಗಳನ್ನು ಸಮೀಕರಿಸುವ ವಿಧಾನ ಸಂಶೋಧನಾ ಮಹಾಪ್ರಬಂಧದಲ್ಲಿ ಕಾಣಬಹುದಾಗಿದೆ.

ಎರಡನೇ ಅಧ್ಯಾಯದಲ್ಲಿ ಬಸವಣ್ಣನವರನ್ನು ಕುರಿತು ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ನಡೆದ ವಿಮರ್ಶಾ ಲೇಖನಗಳು ಹಾಗು ಅಧ್ಯಯನಗಳ ಆಧಾರಗಳ ಮೇಲೆ ಸಮೀಕ್ಷೆಯನ್ನು ನಡೆಸಿದ್ದೇನೆ. ಪ್ರತಿಯೊಬ್ಬ ಕವಿ ಒಬ್ಬ ವ್ಯಕ್ತಿಯನ್ನು ಕುರಿತು ಬರೆಯುವಾಗ ವ್ಯಕ್ತಿಗೆ ಮಹತ್ವವನ್ನು ಕೊಟ್ಟಿದ್ದಾನೋ? ಅಥವಾ ಆತ ವ್ಯಕ್ತಿತ್ವಕ್ಕೆ ಮಹತ್ವ ಕೊಟ್ಟಿದ್ದಾನೋ ಎಂಬುದು ಅರ್ಥಮಾಡಿಕೊಳ್ಳಲು ಸಂಶೋಧನೆಯು ಮಹತ್ವದ್ದಾಗಿದೆ.

ಮೂರನೇ ಅಧ್ಯಾಯದಲ್ಲಿ ಬಸವಣ್ಣನವರನ್ನು ಕುರಿತು ನಾಟಕಗಳು ಎಂಬ ಶೀರ್ಷಿಕೆ ಅಡಿಯಲ್ಲಿ ಬಸವಣ್ಣನನ್ನು ಕೇಂದ್ರೀಕರಿಸಿಕೊಂಡು ರಚನೆಯಾದ ಪ್ರಾತಿನಿಧಿಕ ನಾಟಕಗಳಾದ ಅ.ನ.ಕೃ. ಅವರ ಜಗಜ್ಯೋತಿ ಬಸವೇಶ್ವರ(೧೯೪೯), ಏಣಗಿ ಬಾಳಪ್ಪ ಅವರ ಜಗಜ್ಯೋತಿ ಬಸವೇಶ್ವರ(೧೯೫೬), ಪಿ. ಲಂಕೇಶ ಅವರ ಸಂಕ್ರಾಂತಿ(೧೯೭೩), ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮೀಜಿ ಅವರ ಮರಣವೇ ಮಹಾನವಮಿ(೧೯೮೩), ಶ್ರೀಕಂಠಶಾಸ್ತ್ರಿ ನಲವಡಿ ಅವರ ಜಗಜ್ಯೋತಿ ಬಸವೇಶ್ವರ(೧೯೮೩), ಎಚ್.ಎಸ್. ಶಿವಪ್ರಕಾಶ ಅವರ ಮಹಾಚೈತ್ರ(೧೯೮೬), ಜೋಳದರಾಶಿ ದೊಡ್ಡನಗೌಡ ಅವರ ಕ್ರಾಂತಿಪುರುಷ ಬಸವಣ್ಣ(೧೯೮೬), ಗಿರೀಶ ಕಾರ್ನಾಡ ಅವರ ತಲೆದಂಡ(೧೯೯೦), ಎಂ.ಸಿ. ರಾಮಲಿಂಗಯ್ಯ ಅವರ ಕ್ರಾಂತಿಯೋಗಿ ಬಸವಣ್ಣ(೧೯೯೨), ಡಾ. ಎಂ.ಎಂ. ಕಲಬುರ್ಗಿ ಅವರ ಕೆಟ್ಟಿತ್ತು ಕಲ್ಯಾಣ(೧೯೯೫), ಶಂಕರಾನಂದ ಉತ್ಲಾಸರ

ಅವರ ಬಸವಣ್ಣನ್ನು ಬದುಕಿಸಿ(೨೦೦೨), ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ ಅವರ ಜಂಗಮದೆಡೆಗೆ(೨೦೦೩), ವ್ಯಾಸ ದೇಶಪಾಂಡೆ ಅವರ ಇವ ನಮ್ಮವ(೨೦೦೬), ಡಾ. ಚಂದ್ರಶೇಖರ ಕಂಬಾರ ಅವರ ಶಿವರಾತ್ರಿ(೨೦೧೧). ಈ ನಾಟಕ ಪಠ್ಯಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ವಿಶ್ಲೇಷಣೆಯ ಅನುಕೂಲಕ್ಕಾಗಿ ಧಾರ್ಮಿಕತೆಗೆ ಸಂಬಂಧಿಸಿ ಗ್ರಹಿಕೆಗಳು, ಸಾಮಾಜಿಕತೆಗೆ ಸಂಬಂಧಿಸಿ ಗ್ರಹಿಕೆಗಳು, ಆರ್ಥಿಕತೆಗೆ ಸಂಬಂಧಿಸಿ ಗ್ರಹಿಕೆಗಳು, ರಾಜಕೀಯಕ್ಕೆ ಸಂಬಂಧಿಸಿ ಗ್ರಹಿಕೆಗಳು ಎಂದು ವಿಭಾಗ ಮಾಡಿಕೊಳ್ಳಲಾಗಿದೆ. ಆದರೆ ಕೆಲವು ಸಂಗತಿಗಳು ಕರಾರುವಕ್ಕಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಬರವಣಿಗೆಯ ಅನುಕೂಲತೆಯನ್ನು ಅನುಸರಿಸಿ ಕೆಲವು ಸಂಗತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಬಸವಣ್ಣನನ್ನು ಕುರಿತು ನಾಟಕಗಳಲ್ಲಿ ಪ್ರಧಾನ ಪಾತ್ರಗಳು ಹಾಗೂ ಸಂಗತಿಗಳ ಚಿತ್ರಣವನ್ನು ಕಾಣಲಾಗಿದೆ. ಬಸವಣ್ಣ ಮತ್ತು ಕಾಯಕತತ್ವ ಸಂಬಂಧ ಹೇಗೆ ಮೂಡಿಬಂದಿದೆ ಹಾಗೂ ಬಸವಣ್ಣನ ತತ್ವವನ್ನು ನಾಟಕಕಾರರು ತಮ್ಮ ಪಠ್ಯಗಳಲ್ಲಿ ಅನಾವರಣಗೊಳಿಸಿದ ಬಗೆಯನ್ನು ಇಲ್ಲಿ ಕಾಣಲಾಗಿದೆ. ಕಾಯಕತತ್ವವನ್ನು ಕುರಿತು ಬಸವಣ್ಣನ ನಿಲುವು ಪಠ್ಯಗಳಲ್ಲಿ ಹೇಗೆ ಒಡಮೂಡಿದೆ ಎಂಬುದು ಇಲ್ಲಿ ಮುಖ್ಯವಾದುದು. ಬಸವಣ್ಣ ಮತ್ತು ಬಿಜ್ಜಳನ ಸಂಬಂಧ ಹಾಗೂ ಅವುಗಳ ಮೂಲಕ ಸೃಜನಶೀಲ ಬರಹಗಾರ ನೀಡುವ ಚಿತ್ರಣವನ್ನು ಇಲ್ಲಿ ಕಾಣಲಾಗಿದೆ. ಬಸವಣ್ಣ ಮತ್ತು ಅಕ್ಕಮಹಾದೇವಿ ಹಾಗೂ ಬಸವಣ್ಣ ಮತ್ತು ಚಳುವಳಿ ಹೀಗೆ ಮುಖಾಮುಖಿಗೊಳಿಸಿ ಪ್ರಸ್ತುತ ಸಂದರ್ಭಕ್ಕೆ ಈ ಸಂಗತಿಗಳು ಬೆಳಕು ಚೆಲ್ಲುವ ಅಂಶಗಳನ್ನು ಇಲ್ಲಿ ಕೇಂದ್ರೀಕರಿಸಿ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಬಸವಣ್ಣನವರನ್ನು ಕುರಿತು ಕಾದಂಬರಿಗಳು ಎಂಬ ಭಾಗದಲ್ಲಿ ಸಾಹಿತ್ಯದ ಇನ್ನೊಂದು ಪ್ರಕಾರವಾದ ಕಾದಂಬರಿಯಲ್ಲಿಯೂ ಸಹ ಬಸವಣ್ಣನ ಜೀವನಕ್ಕೆ ಸಂಬಂಧಪಟ್ಟಂತೆ ಅನೇಕ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಮೈದಾಳಿವೆ. ಪ್ರಮುಖ ಕಾದಂಬರಿಗಳಾಗಿರುವ ಬಿ. ಪುಟ್ಟಸ್ವಾಮಯ್ಯನವರು ಬರೆದಿರುವ ಆರು ಸಂಪುಟಗಳಾದ ಉದಯರವಿ, ರಾಜ್ಯಪಾಲ, ಕಲ್ಯಾಣೇಶ್ವರ, ನಾಗಬಂಧ, ಮುಗಿಯದ ಕನಸು, ಕ್ರಾಂತಿ ಕಲ್ಯಾಣ ಪಠ್ಯಗಳು ಹಾಗೇ ಎಚ್. ತಿಪ್ಪೇರುದ್ರಸ್ವಾಮಿಯವರ ಕರ್ತಾರನ ಕಮ್ಮಟ ಹಾಗೂ ಜಿ.ಎಚ್. ಹನ್ನೆರಡುಮಠರು ಬರೆದಿರುವ ಮಹಾಸಂಪುಟಗಳಾದ ಕೂಗಿತ್ತು ಕೂಡಲಸಂಗಮ, ಗುರುವೆಂದರ್‍ಯಾರೋ ಹರವೆಂದರ್‍ಯಾರೋ, ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ, ಭೃಂಗ ಬಂದಾವೋ ಲಿಂಗ ತುಂಬ್ಯಾವೋ, ಕಲ್ಯಾಣ ಕೂಗೈತೋ, ತೇರು ಸಾಗಿತಣ್ಣಾ ಬಸವಣ್ಣನ ಪಾಜ ಬಂದಿತಣ್ಣಾ, ಉಳವಿಯಲ್ಲಿ ಓಂಕಾರ ಈ ಮುಂತಾದ ಕಾದಂಬರಿಗಳಲ್ಲಿ ಬಸವಣ್ಣನವರ ಜೀವನವನ್ನು ಕುರಿತು ಅವರು ನೋಡಿರುವ ಜೀವನಕ್ರಮ, ಆಯ್ದುಕೊಂಡ ವಿಷಯವಸ್ತು, ಮಾಡಿಕೊಂಡ ಬದಲಾವಣೆಗಳು ಇವರುಗಳು ಹೇಳಿದ ಭಿನ್ನತೆಯ ರೀತಿ ಈ ಎಲ್ಲಾ ಅಂಶಗಳನ್ನು ಆಧಾರವಾಗಿಟ್ಟು

ಕೊಂಡು ನಾಟಕ ಸಾಹಿತ್ಯದಲ್ಲಿ ಮಾಡಿಕೊಂಡಂತೆ ಇಲ್ಲಿಯೂ ಸಹ ಪ್ರಮುಖ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಬಸವಣ್ಣನು ಉಳಿದ ಪಾತ್ರಗಳನ್ನು ನೋಡಿರುವ ರೀತಿ ಎನ್ನುವ ಘಟಕದಲ್ಲಿ ನಾಟಕಗಳು ಮತ್ತು ಕಾದಂಬರಿಗಳನ್ನು ಆಧರಿಸಿ ವಿವರಿಸಲಾಗಿದೆ. ಬಸವಣ್ಣನು ಎಲ್ಲಾ ಶರಣರನ್ನು ಹಾಗೂ ಪ್ರಭುತ್ವದ ಪ್ರತಿನಿಧಿಗಳನ್ನು ಸಾಮ್ಯತೆ ದೃಷ್ಟಿಯಿಂದ ನೋಡುತ್ತಾನೆ. ಶರಣರಾದ ಕಲಾವತಿ ಮತ್ತು ಶೀಲವಂತರನ್ನು ಶರಣ ಸಮುದಾಯದ ನಿಜ ಸ್ವರೂಪದಲ್ಲಿ ಕಾಣುತ್ತಾ ಹೋಗುತ್ತಾನೆ. ವಿರೋಧಿಗಳನ್ನು ಪರಿವರ್ತಿಸಲು ತನ್ನ ಸಮರ್ಥ ಧೋರಣೆಯನ್ನು ತಾಳುತ್ತಾನೆ. ಅವುಗಳು ಪರಿವರ್ತನೆಯಾಗದಿದ್ದಾಗ ಸಮಾಜದ ಚಿಂತನೆಯನ್ನು ಒಡ್ಡುತ್ತಾನೆ. ಹೀಗಾಗಿ ಬಸವಣ್ಣನನು ಉಳಿದ ಪಾತ್ರಗಳನ್ನು ನೋಡುವುದು ಒಂದು ರೀತಿಯಲ್ಲಿ ಬಹಳ ವಿಶಿಷ್ಟವಾದ ಹಾಗೂ ಕುತೂಹಲವಾದ ಅಧ್ಯಾಯ ಇದಾಗಿದೆ.

ಏಳನೇ ಅಧ್ಯಾಯದಲ್ಲಿ ಉಳಿದ ಪಾತ್ರಗಳು ಬಸವಣ್ಣನನ್ನು ನೋಡಿರುವ ರೀತಿ ಎನ್ನುವ ಘಟಕದಲ್ಲಿ ನಾಟಕಗಳು ಮತ್ತು ಕಾದಂಬರಿಗಳನ್ನು ಆಧರಿಸಿ ವಿವರಿಸಲಾಗಿದೆ. ಕೆಲವು ಪಾತ್ರಗಳು ಬಸವಣ್ಣನ ಕಾರ್ಯತತ್ಪರತೆಯನ್ನು ಮೆಚ್ಚಿಕೊಂಡರೆ, ಇನ್ನು ಕೆಲವು ಪಾತ್ರಗಳು ಬಸವಣ್ಣನ ವ್ಯಕ್ತಿತ್ವವನ್ನು ಪ್ರಶ್ನಿಸುವ ನೆಲೆಯಲ್ಲಿ ರೂಪಿತಗೊಂಡಿವೆ. ಈ ಅಂಶಗಳನ್ನು ಗುರುತಿಸಲಾಗಿದೆ. ಬಸವತತ್ವದ ಪರವಾಗಿ ಕಾಣಿಸಿಕೊಳ್ಳುವ ಪಾತ್ರಗಳು ಹಾಗೂ ಬಸವತತ್ವದ ವಿರೋಧವಾಗಿ ಕಾಣಿಸಿಕೊಳ್ಳುವ ಪಾತ್ರಗಳು ಎಂದು ವಿಭಾಗೀಕರಿಸಿ ಇವುಗಳು ಬಸವಣ್ಣನನ್ನು ಹೇಗೆ ಗ್ರಹಿಸುತ್ತವೆ ಎಂಬುದನ್ನು ಇಲ್ಲಿ ಕಾಣಲಾಗಿದೆ. ಹೀಗೆ ಕಾಣಿಸುವಾಗ ಬರಹಗಾರ ಏನನ್ನು ಹೇಳಲಿಕ್ಕೆ ಪ್ರಯತ್ನಿಸುತ್ತಿದ್ದಾನೆ ಎಂಬುದನ್ನು ಇಲ್ಲಿ ವಿಶೇಷವಾಗಿ ಗುರುತಿಸಲಾಗಿದೆ. ತಮ್ಮ ಪಠ್ಯದ ಈ ತರದ ಪಾತ್ರಗಳ ಮೂಲಕ ಬಸವಣ್ಣನನ್ನು ಅರ್ಥೈಸುವ ಕ್ರಮ ಇದರ ಹಿಂದೆ ನಡೆದಿರುತ್ತದೆ ಎಂಬುದು ಮುಖ್ಯವಾದುದು. ಇದನ್ನು ಗುರುತಿಸುವ ಈ ಅಧ್ಯಾಯ ಮಹತ್ವದ್ದಾಗಿದೆ.

ಎಂಟನೇ ಅಧ್ಯಾಯವಾದ ಸಮಾರೋಪದಲ್ಲಿ ನಾಟಕ ಪಠ್ಯಗಳು ಹಾಗೂ ಕಾದಂಬರಿಗಳು ಒಟ್ಟಾರೆಯಾಗಿ ಹೇಗೆ ಗ್ರಹಿಸಿವೆ ಹಾಗು ಏನನ್ನು ಹೇಳಲಿಕ್ಕೆ ಪ್ರಯತ್ನಿಸಿವೆ ಎನ್ನುವುದನ್ನು ವಿವರಿಸಲಾಗಿದೆ. ಜನಪ್ರಿಯ ಪಠ್ಯಗಳಿಗಿಂತ ಗಂಭೀರ ಪಠ್ಯಗಳು ಹೇಗೆ ಭಿನ್ನವಾಗುತ್ತವೆ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಮಹತ್ವದ್ದಾಗಿದೆ. ವೈವಿಧ್ಯಮಯವಾಗಿ ರಚನೆಗೊಂಡಿರುವ ಬಸವಣ್ಣನನ್ನು ಕುರಿತ ಕಾದಂಬರಿ ಹಾಗೂ ನಾಟಕ ಪಠ್ಯಗಳು ವಚನ ಚಳುವಳಿಯನ್ನು ಪ್ರತಿನಿಧಿಸುತ್ತವೆ. ಮುಖ್ಯವಾಗಿ ಇಲ್ಲಿ ಬಸವಣ್ಣನ ನಿಲುವುಗಳ ತಾರ್ಕಿಕ ಹುಡುಕಾಟ ನಡೆದಿದೆ. ಹೀಗಾಗಿ ಸಾಮಾಜಿಕ ಮತ್ತು ಸಾಹಿತ್ಯಿಕವಾಗಿ ನಡೆದ ಈ ಚಳುವಳಿ ತುಂಬಾ ಕುತೂಹಲಕರವಾದುದು.

ಇದು ಸಮಕಾಲೀನ ಮೌಲ್ಯಗಳ ಧ್ವನಿ ಎನಿಸಿದ್ದರಿಂದ ಈ ಕುರಿತು ಚರ್ಚೆ, ಸಂವಾದ, ವಿಮರ್ಶೆ, ರಚನೆಗಳು ಇಂದಿಗೂ ನಡೆಯುತ್ತಲೇ ಇವೆ. ಆಧುನಿಕ ಪಠ್ಯಗಳಲ್ಲಿ ಬಸವಣ್ಣ ನಿರೂಪಿತನಾದ ಬಗೆ ಹೇಗೆ? ಕೃತಿಗಳು ಪ್ರಸ್ತುತ ಸಂದರ್ಭದಲ್ಲಿ ಯಾವ ಪರಿಣಾಮವನ್ನು ಬೀರುತ್ತಿವೆ? ಎಂಬುದನ್ನು ಮುಖ್ಯವಾಗಿರಿಸಿಕೊಂಡು ಪ್ರಸ್ತುತ ಸಂದರ್ಭದಲ್ಲಿ ಕೃತಿಗಳು ಒಟ್ಟಾರೆ ಏನನ್ನು ಹೇಳಲಿಕ್ಕೆ ಪ್ರಯತ್ನಿಸಿವೆ ಎಂಬುದನ್ನು ಕಂಡುಕೊಳ್ಳುವ ನೆಲೆಯಲ್ಲಿ ಕೃತಿನಿಷ್ಠ ಓದಿನ ಅಧ್ಯಯನ ವಿಧಾನವನ್ನು ಹೆಚ್ಚು ಅನುಸರಿಸಿದ್ದೇನೆ. ಲೇಖಕನಿಗಿಂತ ಪಠ್ಯಗಳೇ ಮುಖ್ಯವಾಗಿ ಪಠ್ಯಕೇಂದ್ರಿತ ನೆಲೆಯಲ್ಲಿ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಹೀಗೆ ಆಧುನಿಕ ಸೃಜನಶೀಲ ಕಾದಂಬರಿಗಳು ಹಾಗೂ ನಾಟಕ ಪಠ್ಯಗಳನ್ನು ಆಧರಿಸಿ ಅವುಗಳಲ್ಲಿ ಲೇಖಕನು ತಾರ್ಕಿಕ ಹುಡುಕಾಟ ನಡೆಸಲು ಯತ್ನಿಸಿದ ಗ್ರಹಿಕೆಗಳನ್ನು ಶೋಧಿಸಲಾಗಿದೆ. ಆ ಗ್ರಹಿಕೆಗಳು ಲೇಖಕರು ಹೀಗೆ ಗ್ರಹಿಸಿದ್ದಾರೆ ಎಂದು ಹೇಳುವಲ್ಲಿ ಅವು ನನ್ನ ಗ್ರಹಿಕೆಗಳೇ ಆಗಿರುತ್ತವೆ. ಇದೊಂದು ವಿಶಿಷ್ಟವಾದ ಅಧ್ಯಯನವಾಗಿದೆ. ಇವುಗಳ ಮೂಲಕ ಸಮಕಾಲೀನ ಚಿಂತನೆಗಳನ್ನು ಕಾಣಲು ಪ್ರಯತ್ನಿಸಿರುವ ಲೇಖಕರ ಮನೋಧರ್ಮವನ್ನು ಒರೆಗಲ್ಲಿಗೆ ಹಚ್ಚಲಾಗಿದೆ.

❑❑❑

## ಅಧ್ಯಾಯ : ಎರಡು

# ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ಯಾವುದೇ ಒಂದು ಅಧ್ಯಯನವನ್ನು ಕೈಗೊಳ್ಳುವುದಕ್ಕಿಂತ ಮುಂಚೆ ಆ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಬಹಳ ಮುಖ್ಯವಾದುದು. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಸವಣ್ಣನನ್ನು ಕುರಿತ ಆಧುನಿಕ ನಾಟಕ ಹಾಗೂ ಕಾದಂಬರಿಗಳ ಕುರಿತು ವಿಮರ್ಶೆ ಲೇಖನಗಳು, ಅಧ್ಯಯನಗಳು ಹೊರಬಂದಿವೆ. ಒಟ್ಟು ಸಂಗ್ರಹಣ ಕಾರ್ಯವೇ ಅಧ್ಯಯನದ ಸಮೀಕ್ಷೆ ಎಂದು ಭಾವಿಸದೇ ವಿಶಿಷ್ಟವಾದ ನೆಲೆಯಲ್ಲಿ ರಚನೆಗೊಂಡಿರುವುದರಿಂದ ಅವುಗಳ ಕುರಿತು ನಡೆದ ಅಧ್ಯಯನಗಳ ವಿಮರ್ಶೆಯ ಸಮೀಕ್ಷೆ ಮಾಡಲಾಗಿದೆ.

ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯದ ಬಗ್ಗೆ ಪೂರಕವಾದ ಕೆಲವು ಮಾಹಿತಿಗಳನ್ನೊಳಗೊಂಡ ಪ್ರಕಟವಾಗಿರುವ ಪುಸ್ತಕ ಮತ್ತು ಲೇಖನಗಳನ್ನು ಈ ಅಧ್ಯಾಯದಲ್ಲಿ ಸಮೀಕ್ಷೆ ನಡೆಸಲಾಗಿದೆ. ಏಕೆಂದರೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಸವಣ್ಣನವರ ಪ್ರಭಾವದಿಂದ ಆಧುನಿಕ ಸಾಹಿತ್ಯದ ರೂಪದಲ್ಲಿ ಸ್ಪಷ್ಟವಾಗಿ ನಿಂತಿರುವುದನ್ನು ಅವರು ಗ್ರಹಿಸಿರುವ ಗ್ರಹಿಕೆಯನ್ನು ಬಸವಣ್ಣನವರ ಮನೋಭಿಲಾಶೆಯನ್ನು ಪರಂಪರೋಗತವಾಗಿ ಸಾಮಾಜಿಕ ಸನ್ನಿವೇಶದಲ್ಲಿ ಅರ್ಥಮಾಡಿಕೊಳ್ಳಬೇಕಾದಾಗ ಲೇಖಕನ ಮನೋಭಾವನೆ ಮುಖ್ಯವಾಗುತ್ತದೆ. ಅಂತಹ ಸಂದರ್ಭದಲ್ಲಿ ಸಂಶೋಧಕನಾಗಿರಬಹುದು, ವಿಮರ್ಶಕನಾಗಿರಬಹುದು. ತಾನು ತಾಳಿದ ಮೌಲ್ಯವನ್ನು ವಿವೇಚಿಸುವ ಮಾನದಂಡ ಇಲ್ಲಿ ಗಮನಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಆಧುನಿಕ ಕನ್ನಡ ಸಾಹಿತ್ಯ ರೂಪಗಳಾದ ನಾಟಕ ಮತ್ತು ಕಾದಂಬರಿಗಳಲ್ಲಿ ಬಸವಣ್ಣನವರನ್ನು ಕುರಿತು ಅನೇಕ ಗ್ರಂಥಗಳು ಹೊರಬಂದಿವೆ. ಹಾಗಂತ ಅಂತಹ ಕೃತಿಗಳ ಒಟ್ಟು ಸಂಗ್ರಹಣ ಕಾರ್ಯವೇ ಅಧ್ಯಯನದ ಸಮೀಕ್ಷೆ ಎಂದು ಭಾವಿಸದೇ ಇಲ್ಲಿಯವರೆಗೂ ಬಸವಣ್ಣನವರನ್ನು ಕುರಿತು ಬಂದಿರುವ ನಾಟಕ ಮತ್ತು ಕಾದಂಬರಿಗಳಲ್ಲಿ ಕೆಲವೇ ಕೆಲವು ವಿಶಿಷ್ಟವಾದ ನೆಲೆಯಲ್ಲಿ ನಡೆದ ಸಾಹಿತ್ಯ ಕೃತಿಯ ವಿಮರ್ಶೆಯನ್ನು ಮಾಡಲಾಗಿದೆ. ಈ ವಿಮರ್ಶೆಯ ಉದ್ದೇಶ ಏನೆಂದರೆ ನನ್ನ ಅಧ್ಯಯನದ ಉದ್ದೇಶಕ್ಕೆ ಸಂಬಂಧಿಸಿದಂತೆ ಹೀಗಾಗಲೇ ಚರ್ಚೆಗೆ ಒಳಪಟ್ಟ ವಿಷಯಗಳಿಗಿಂತಲೂ ಭಿನ್ನವಾದ ರೀತಿಯಲ್ಲಿ ಏನಾದರೂ ಹೇಳಬಹುದೇ ಎಂಬುದಕ್ಕೆ ಸಮೀಕ್ಷೆ ಸಹಕಾರವಾಗುತ್ತದೆ.

"ಆಧುನಿಕ ವಿಮರ್ಶಕ ಪರಂಪರೆಯು ರೂಢಿಗೆ ಬಂದ ಕಾಲದಿಂದ ಇಲ್ಲಿಯವರೆಗೆ ಕಾವ್ಯ, ಕಥೆ, ಸಂಪಾದನೆ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಹುಲುಸಾಗಿ ಬೆಳೆದ ವಿಮರ್ಶಾ ಪದ್ಧತಿಯು ಕಾದಂಬರಿ ಮತ್ತು ನಾಟಕ ಸಾಹಿತ್ಯದ ಮಟ್ಟಕ್ಕೆ ಹೇಳುವುದಾರೆ ಇತ್ತೀಚಿಗೆ ಅದು ಹೆಚ್ಚಿನ ಒಲವು ತೋರಿಸುತ್ತಿರುವುದು ಕಂಡುಬರುತ್ತದೆ"[೧]

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶರಣರನ್ನು ಕುರಿತು ರಚನೆಯಾದ ಕಾದಂಬರಿ ಮತ್ತು ನಾಟಕಗಳ ಬಗೆಗೆ ವಿಮರ್ಶಾ ಪ್ರವೃತ್ತಿ ಹೆಚ್ಚಾಗುತ್ತಿರುವುದು ಒಂದು ವಿಶೇಷವೇ ಸರಿ. ಹೀಗಾಗಿ ಶರಣರನ್ನು ಕುರಿತು ಹೊರಬಂದ ನಾಟಕ ಮತ್ತು ಕಾದಂಬರಿಗಳ ಮೇಲೆ ವಿಮರ್ಶೆಯ ಕಾರ್ಯವು ಹೆಚ್ಚಾಗಿ ಕಂಡು ಬರದಿದ್ದರೂ ಸ್ವಲ್ಪಮಟ್ಟಿಗೆಯಾದರು. ಹಲವು ವಿಮರ್ಶಕರು ಈ ಕೆಲಸ ಕೈಗೊಂಡಿರುವುದು. ಗಣನೀಯವಾಗಿದೆ. ಅಂಥವರಲ್ಲಿ ಎಸ್. ಜಯರಾಮ್, ಆರ್.ವಿ. ಭಂಡಾರಿ, ಎ.ಆರ್. ನಾಗಭೂಷಣ, ಜಿ.ಎಸ್. ಆಮೂರ, ಡಾ. ಡಿ. ಮಂಗಳ ಪ್ರಿಯದರ್ಶಿ, ಪ್ರೊ. ಆರ್. ರಾಚಪ್ಪ, ಪ್ರೊ. ಬಿ. ವಿರೂಪಾಕ್ಷಪ್ಪ, ಟಿ.ಪಿ. ಅಶೋಕ್, ಮಾಧವ ಕುಲಕರ್ಣಿ, ಪ್ರಸನ್ನ, ಡಾ. ಎಚ್.ಎಂ. ಮರಳುಸಿದ್ಧಯ್ಯ ಇನ್ನೂ ಅನೇಕರು ತಮ್ಮ ವಿಮರ್ಶಾ ಲೇಖನಗಳ ಮೂಲಕ ಶರಣರ ನಾಟಕ ಮತ್ತು ಕಾದಂಬರಿಗಳ ಬಗೆಗೆ ವಿಶೇಷವಾಗಿ ಚರ್ಚಿಸಿದ್ದಾರೆ.

ನನ್ನ ಅಧ್ಯಯನದ ವಿಷಯ ಬಸವಣ್ಣನವರೇ ಆಗಿರುವುದರಿಂದ ಅವರ ಜೀವನಕ್ಕೆ ಸಂಬಂಧಿಸಿದಂತೆ ರಚನೆಯಾಗಿರುವ ನಾಟಕ ಮತ್ತು ಕಾದಂಬರಿಗಳ ಸಂಖ್ಯೆ ಹೆಚ್ಚಾಗಿರುವುದು ಸಹಜ. ಆದರೆ ಅವರ ಕುರಿತು ಬಂದಿರುವ ಗ್ರಂಥಗಳ ಮೇಲೆ ವಿಮರ್ಶೆಗೆ ಒಳಪಟ್ಟ ಕೃತಿಗಳು ಬಹಳ ಕಡಿಮೆ.

ನಾಟಕವನ್ನು ಕುರಿತು ಹೇಳುವುದಾದರೆ, ಪಿ. ಲಂಕೇಶ್‌ರವರ 'ಸಂಕ್ರಾಂತಿ', ಎಚ್.ಎಸ್. ಶಿವಪ್ರಕಾಸ್‌ರವರು 'ಮಹಾಚೈತ್ರ'. ಗಿರೀಶ್ ಕಾರ್ನಾಡ್‌ರವರ 'ತಲೆದಂಡ', ಜಡಭರತರ 'ನಾನೇ ಬಿಜ್ಜಳ', ಡಾ. ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತ್ತು ಕಲ್ಯಾಣ', ಅ.ನ.ಕೃ.ರವರ 'ಜಗಜ್ಯೋತಿ ಬಸವೇಶ್ವರ', ವ್ಯಾಸ ದೇಶಪಾಂಡೆರವರ 'ಇವ ನಮ್ಮವ', ಚಂದ್ರಶೇಖರ ಕಂಬಾರರ 'ಶಿವರಾತ್ರಿ' ಮುಂತಾದ ನಾಟಕಗಳನ್ನು ಪಟ್ಟಿ ಮಾಡಬಹುದು.

ಹಾಗೆ ಕಾದಂಬರಿಗಳನ್ನು ಸಹ ನೋಡುವುದಾದರೆ ಬಿ. ಪುಟ್ಟಸ್ವಾಮಯ್ಯನವರ 'ಕಲ್ಯಾಣ ಕ್ರಾಂತಿ' ಎಂಬ ಆರು ಸಂಪುಟದ ಕಾದಂಬರಿಗಳಾದ ಉದಯರವಿ, ರಾಜ್ಯಪಾಲ, ಕಲ್ಯಾಣೇಶ್ವರ, ನಾಗಬಂಧ, ಮುಗಿಯದ ಕನಸು, ಕ್ರಾಂತಿ ಕಲ್ಯಾಣ, ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ', ಜಿ.ಎಚ್. ಹನ್ನೆರಡುಮಠರವರ ಕೂಗಿತ್ತು ಕೂಡಲಸಂಗಮ, ಯೋಗಿ ಕಂಡ ಯೌವ್ವನ, ಗುರುವೆಂದವರ್‍ಯಾರೋ ಹರವೆಂದವರ್‍ಯಾರೋ, ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ, ಭೃಂಗ ಬಂದಾವೋ ಲಿಂಗ ತುಂಬ್ಯಾವೋ, ಕಲ್ಯಾಣ ಕೂಗೈತೋ, ತೇರು ಸಾಗಿತಣ್ಣ ಬಸವನ ಪಾಜ ಬಂದಿತಣ್ಣ ಮತ್ತು ಉಳಿವಿಯಲ್ಲಿ ಓಂಕಾರ ಮುಂತಾದ ಕಾದಂಬರಿ ಗಳನ್ನು ಕಾಣಬಹುದಾಗಿದೆ.

ಗಿರೀಶ್ ಕಾರ್ನಾಡ್‌ರವರ ನಾಟಕಗಳ ವಿಮರ್ಶೆ ಎಂಬ ಸಂಕಲನವನ್ನು ಸಂಪಾದಿಸಿದ ಕೃಷ್ಣಚಂದಾರ್‌ರವರು ಬಸವಣ್ಣನವರ ಕೇಂದ್ರಬಿಂದುವಾಗಿ ವಿಷಯವನ್ನೊಳಗೊಂಡ ಪಿ.ಲಂಕೇಶ್‌ರವರ ಸಂಕ್ರಾಂತಿ, ಗಿರೀಶ್ ಕಾರ್ನಾಡ್‌ರವರ ತಲೆದಂಡ, ಎಚ್.ಎಸ್., ಶಿವಪ್ರಕಾಶ್‌ರವರ ಮಹಾಚೈತ್ರ ಈ ನಾಟಕಗಳ ಕುರಿತು ವಿವಿಧ ಲೇಖಕರಿಂದ ಚರ್ಚೆಯಾದ ಲೇಖನಗಳು ಇಲ್ಲಿ ಸೇರಿವೆ. ಅವೆಲ್ಲವೂ ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ನಾಟಕಗಳಾಗಿರುವುದರಿಂದ ಈ ಮೇಲಿನ ಶೀರ್ಷಿಕೆಯಡಿಯಲ್ಲಿಯೇ ಚರ್ಚಿಸಲಾಗಿದೆ.

"ಒಂದು ಉನ್ನತವಾದ ಪರಂಪರೆಯನ್ನು ಹೊಂದಿದ ವರ್ತಮಾನ ತನ್ನ ಬಲವರ್ಧನೆ ಗಾಗಿಯೇ ತನ್ನ ವೈಚಾರಿಕ ದೃಷ್ಟಿಯ ಪೀನಮಸೂರದ ಮುಖಾಂತರ ಹಿಂದೆ ನೋಡಲು ಬಯಸುತ್ತದೆ. ಆದರೆ ಇದು ಗತಕಾಲದ ಅಳುವಾಡವಾಗಿಲ್ಲ ಬದಲಾಗಿ ಒಂದು ಮತಿಯಲ್ಲಿ ವರ್ತಮಾನವನ್ನು ಇಂಜಿ ನೋಡಿದಂತಿದೆ."[೨] ಈ ಮಾತಿಗೆ ಇತ್ತೀಚೆಗೆ ರಚನೆಗೊಂಡ ಬಸವಣ್ಣ ಮತ್ತೆ 'ಶಿವೈಕ್ಯರಾದವರು' ಎಂಬ ನಾಟಕ ಸಾಕ್ಷಿಯಾಗಿ ನಿಲ್ಲುತ್ತದೆ.

ಸಂಕ್ರಾಂತಿ ನಾಟಕವನ್ನು ರಚನೆ ಮಾಡಿದ ಪಿ. ಲಂಕೇಶ್‌ರವರು ಈ ನಾಟಕದ ಆರಂಭದಲ್ಲಿ ಮುದಕನಾದ ಉಜ್ಜನ ಹಾಡು ಆರಂಭವಾಗಿ ನಾಟಕದ ಅನೇಕ ಘಟನೆಗಳು ಮೇಳೈಸಿಕೊಂಡು ಬಂದಿವೆ. ಹರಳಯ್ಯಾ ಮಧುವರಸರ ಮಕ್ಕಳ ಮದುವೆ ಉಜ್ಜನ ಮಗ ರುದ್ರನ ರಸಿಕತನ ರುದ್ರನಿಗೆ ಮಧುವರಸನೆಂಬ ಶರಣನ ಮಗಳಾದ ಉಷಾಳ ವಿಲೋಮ ವಿವಾಹ ಹಾಗೂ ರಾಜನಾದ ಬಿಜ್ಜಳನ ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ವಿಲೋಮ ವಿವಾಹವನ್ನು ತಡೆಯುವುದರೊಂದಿಗೆ ರುದ್ರನ ಹತ್ಯೆ ಮಾಡಿಸುತ್ತಾನೆ. ಇಲ್ಲಿಗೆ ನಾಟಕ ಮುಕ್ತಾಯವಾಗುತ್ತದೆ. ಮುಂದುವರೆದು ಆ ಕಾಲದ ಸಾಮಾಜಿಕ ವ್ಯವಸ್ಥೆಯ ತಾತ್ವಿಕ ನೆಲೆಯನ್ನು ನಾಟಕದ ಐದು ದೃಶ್ಯಗಳಲ್ಲಿ ನಡೆಯುವ ಘಟನೆಗಳ ಮೂಲಕ ಎಳೆ-ಎಳೆಯಾಗಿ ಬಿಡಿಸಿ ತೋರಿಸಿದ್ದಾರೆ.

ಈ ನಾಟಕವನ್ನು ಕುರಿತು 'ಎಸ್.ಜೆ.ಆರ್. ದೇಸಾಯಿ'ಯವರು ಅಭಿಪ್ರಾಯಪಡುವಂತೆ "ಎಷ್ಟರತನಕ ವಿವಿಧ ಶಾಸ್ತ್ರಗಳ ಸರ್ವಾಂಗೀಣವಾದ ಬೆಳವಣಿಗೆಯು ಆಗಿರುವುದಿಲ್ಲವೋ ಅಷ್ಟರತನಕ ಮಾನವನು ಯಾವ ಕ್ಷೇತ್ರದಲ್ಲಿಯೂ ಸಹ ಸಮಸ್ಯೆಗಳನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಶೀಲನೆ ಮಾಡುವ ಪ್ರವೃತ್ತಿಯು ಸಮಾಜದಲ್ಲಿ ದುರ್ಬಲವಾಗಿರುತ್ತದೆ. ಆಗ ಧರ್ಮ ಮತ್ತು ಧಾರ್ಮಿಕ ವಿಚಾರಗಳೇ ಸಮಾಜ ಸುಧಾರಣೆಯ ವೈಚಾರಿಕಾ ಪ್ರಣಾಳಗಳಾಗಿರುತ್ತವೆ. ಈ ಪರಿಸ್ಥಿತಿಯಲ್ಲಿ ಸಾಮಾಜಿಕ ಜೀವನದಲ್ಲಿ ಎಷ್ಟೇ ಮತ-ಭೇದಗಳು ತಲೆದೂಗಿದರೂ ಸಹ ಮಾನವನ ಮನಸ್ಸಿನಲ್ಲಿ ಅವುಗಳ ಧಾರ್ಮಿಕ ಭೇದಗಳು ಹಾಗೂ ಸಂಘರ್ಷಗಳ ಸ್ವರೂಪದಲ್ಲೇ ವ್ಯಕ್ತವಾಗುತ್ತವೆ. ಪ್ರತಿಗಾಮಿ ಪೂರ್ವಗಾಮಿ ನಿಲುವುಗಳ ನಡುವಿನ ತಿಕ್ಕಾಟವು ಪರಸ್ಪರ ವಿರೋಧಿಯಾದ ಧಾರ್ಮಿಕ ಹಾಗೂ ಮತೀಯ ವಾದ-ವಿವಾದ ಘರ್ಷಣೆಯ ಸ್ವರೂಪದಲ್ಲಿ ವ್ಯಕ್ತವಾಗುತ್ತದೆ. ತೊಳಲಾಡುವವರು ಸಹ ಮತದ ಧ್ವಜದ ಅಡಿಯಲ್ಲಿ ನಿಂತು ಕಾದಾಡುತ್ತಾರೆ."[೩]

ಈ ಬಗೆಯಾಗಿ ಸಂಕ್ರಾಂತಿ ನಾಟಕವು ತನ್ನ ಒಡಲಲ್ಲಿ ಆಧುನಿಕ ವೈಚಾರಿಕತೆಯನ್ನು ತುಂಬಿಕೊಂಡಿದ್ದರೂ ಅದು ಪ್ರತಿಗಾಮಿಯ ನೆಲೆಯಲ್ಲಿ ನಿಲ್ಲುತ್ತದೆ ಎಂದು ಹೇಳುತ್ತಾರೆ. ಅದೇ ರೀತಿಯಾಗಿ ತಲೆದಂಡ ನಾಟಕವನ್ನು ಕುರಿತು ಹೀಗೆ ಅಭಿಪ್ರಾಯಪಡುತ್ತಾರೆ. ಇದು ಹದಿನಾರು ದೃಶ್ಯವುಳ್ಳ ಮೂರು ಅಂಕಗಳಲ್ಲಿ ವಿಭಜನೆಗೊಂಡ ನಾಟಕವಾಗಿದೆ. ತಲೆದಂಡ ನಾಟಕವು ಸಂಕ್ರಾಂತಿಯಿಂದ ಪ್ರಭಾವಿತವಾಗಿದೆಯೆಂದು ನಮಗೆ ಅನಿಸಿದರೆ ಅದು ಲೇಖಕರ ವೈಚಾರಿಕತೆಯ ಸಾಮೀಪ್ಯದ ಪರಿಣಾಮದಿಂದ ಹೊರತು ಗಿರೀಶ್‌ರ ಸ್ವಂತಿಕೆಗೆ ಮತ್ತು ಕಲಾ ಪರಿಣತೆಗೆ ಚ್ಯುತಿ ಬಂದಿಲ್ಲ. ಈ ತಲೆದಂಡ ನಾಟಕದ ವಸ್ತು. ಕಲ್ಯಾಣದಲ್ಲಿಯ ರಾಜಕೀಯದ ದೊಂಬಿ ಬಿಜ್ಜಳ ಕೊಲೆ ವೃದ್ಧಿಕೆ ಪ್ರಭುತ್ವದ ಸ್ಥಾಪನೆವರೆಗೆ ಬೆಳೆಯುತ್ತದೆ. ಬಸವಣ್ಣ ಮತ್ತು ಬಿಜ್ಜಳ ಅರಮನೆಯಿಂದ ಹೊರಗಿರುವ ಸಂದರ್ಭದಲ್ಲಿ ಬಿಜ್ಜಳನ ಮಗನಾದ ಸೋವಿದೇವ ರಾಜ್ಯದ ಭಂಡಾರವನ್ನು ತಪಾಸಣೆ ಮಾಡುತ್ತಾನೆ. ಇದಕ್ಕೆ ಪೂರಕವಾದಂತೆ ಅಲ್ಲಿರುವ ಪುರೋಹಿತವರ್ಗ ಪ್ರೋತ್ಸಾಹ ನೀಡುತ್ತದೆ. ಆಗ ನಡೆದ ಘಟನೆ ಅದು ಬಸವಣ್ಣನವರನ್ನು ಪವಾಡ ಪುರುಷನನ್ನಾಗಿ ಮಾಡುತ್ತದೆ.

ಒಟ್ಟಾರೆಯಾಗಿ ಸೋವಿದೇವ ಪುರೋಹಿತರ ಕೈಗೊಂಬೆಯಾಗಿ ಕಾರ್ಯನಿರ್ವಹಿಸುತ್ತಾನೆ. ಹರಳಯ್ಯಾ ಮಧುವರಸರ ಮಕ್ಕಳ ಮದುವೆ ಅವರಿಗೆ ಬಸವಣ್ಣನವರ ಆಶೀರ್ವಾದ ಇದು. ವೈದ್ಯಕೀಯ ಧರ್ಮದ ವಿರುದ್ಧವಾಗಿರುವುದರಿಂದ ಪುರೋಹಿತರಿಗೆ ಅಸಮಾಧಾನ ಉಂಟಾಗುತ್ತದೆ. ಆದರೆ ಬಿಜ್ಜಳನು ಮದುವೆಗೆ ಅನುಮತಿಯನ್ನು ಕೊಡುತ್ತಾನೆ. ಹೀಗೆ ಘಟನೆಗಳು ಒಂದರ ಮೇಲೊಂದು ಘಟಿಸಿ, ರಾಜಕೀಯ ಪಿತೂರಿಯಾದ ಸೋವಿದೇವನಿಂದಾಗಿ ಕಲ್ಯಾಣದಲ್ಲಿ ಅರಾಜಕತೆ ತಲೆದೂರುತ್ತದೆ. ಇದರಿಂದಾಗಿ ಬಿಜ್ಜಳನ ಸೆರೆಯಾಗುತ್ತದೆ ಮತ್ತು ಅವನ್ನು ಒಬ್ಬ ಶರಣನಿಂದ ಕೊಲೆಯಾಗುತ್ತದೆ. ಮುಂದೆ ರಾಜಕೀಯ ಅಸಹಾಯಕತೆ ತಲೆದೂರುವ ಸೂಚನೆ ಯೊಂದಿಗೆ ನಾಟಕ ಮುಕ್ತಾಯವಾಗುತ್ತದೆ. ಸಂಕ್ರಾಂತಿ ಮತ್ತು ತಲೆದಂಡ ಎರಡು ನಾಟಕದಲ್ಲಿ ಪ್ರತಿಭಟನೆ ಒಂದೇ ರೀತಿಯಾಗಿದ್ದರು. ಅಲ್ಲಿ ದಲಿತರಿದ್ದರೆ ಇಲ್ಲಿ ಬ್ರಾಹ್ಮಣರಿದ್ದಾರೆ ಎಂಬುದು ವಿಮರ್ಶಕರ ಅನಿಸಿಕೆಯಾಗಿದೆ.

ಇನ್ನೊಂದು ನಾಟಕವಾದ ಎಚ್.ಎಸ್. ಶಿವಪ್ರಕಾಶರವರು ಬರೆದ 'ಮಹಾಚೈತ್ರ' ನಾಟಕದ ಕುರಿತು ಅವರು ಈ ರೀತಿ ಅಭಿಪ್ರಾಯಪಡುತ್ತಾರೆ. ಬಸವಣ್ಣನವರು ಬಿಜ್ಜಳನ ಆಸ್ಥಾನವನ್ನು ತೊರೆದು ಕಪ್ಪದ ಸಂಗಮನಾಥಕ್ಕೆ ಬಂದ ನಂತರ ಕಲ್ಯಾಣದಲ್ಲಿ ನಡೆಯುವ ಘಟನೆಗಳಿಗೆ ಹೆಚ್ಚಿನ ಒತ್ತು ದೊರಕಿರುವುದು ಕಾಣಬಹುದು. ಇದರಲ್ಲಿ ಕಲಿಕೆತಯ್ಯ, ಬಹುರೂಪಿ ಚೌಡಯ್ಯ ನಗೆ ಹಾರಿ ತಂದೆ ಮಾಚಿದೇವಾ ಮತ್ತು ಅಣ್ಣಪ್ಪ ಮುಂತಾದವರು ಬಸವಣ್ಣನವರು ಆರಂಬಿಸಿದ ಚಳುವಳಿಗೆ ತಮ್ಮನ್ನು ತಾವು ಅರ್ಪಿಸಿಕೊಂಡವರು.

ಈ ನಾಟಕದ ಇನ್ನೊಂದು ವಿಶೇಷ ಅಂಶವೆಂದರೆ ಮಧುವರಸ ಮತ್ತು ಹರಳಯ್ಯಾನವರ ಮಕ್ಕಳ ಮದುವೆಯನ್ನು ಬಸವಣ್ಣನವರೇ ಮುಂದೆ ನಿಂತು ಮಾಡಿಸುತ್ತಾರೆ. ಇದರಿಂದ

ಪುರೋಹಿತರ ಕೆಂಗಣ್ಣಿಗೆ ಗುರಿಯಾಗುತ್ತಾರೆ. ಬಸವಣ್ಣನನ್ನು ಅಧಿಕಾರದಿಂದ ದೂರ ಸರಿಯುತ್ತಾನೆ. ಮುಂದೆ ಸಂಗಮಕ್ಕೆ ಪ್ರಯಾಣ ಬೆಳೆಸುತ್ತಾರೆ. ಅಲ್ಲಿ ಬಸವಣ್ಣನವರು ಐಕ್ಯ ಹೊಂದುತ್ತಾರೆ. ಈ ಸುದ್ದಿಯನ್ನು ಬಸವಣ್ಣನವರ ಮಹಾಮನೆಗೆ ಮುಟ್ಟಿಸುತ್ತಾರೆ ಹಾಗೂ ಆ ಮನೆಯಲ್ಲಿ ಎರಡು ಸೈದ್ಧಾಂತಿಕ ತಾಕಲಾಟಗಳು ಉದ್ಭವಿಸುತ್ತವೆ. ಇದು ಚೆನ್ನಬಸವಣ್ಣ ಹಾಗೂ ಅವನ ಸಂಗಡಿಗರ ಉಳುವಿಗೆ ನಡೆದ ಚಳುವಳಿಯು ಆಧ್ಯಾತ್ಮಕ ರೂಪವನ್ನು ಪಡೆಯುತ್ತದೆ. ಆದರೆ ಹಡಪದ ಅಪ್ಪಣ್ಣ, ಮಾಚಿದೇವ ಮುಂತಾದವರು ಚಳುವಳಿಯನ್ನು ತೀವ್ರಗೊಳಿಸುತ್ತಾರೆ. ಮುಂದೆ ಇವರಿಬ್ಬರು ಸೆರೆಯಾಗುತ್ತಾರೆ. ಕಲಕೇತಯ್ಯ, ಚೌಡಯ್ಯ ಮುಂತಾದವರು ಯಜ್ಞಶಾಲೆಯನ್ನು ಹೊಕ್ಕು ಬಿಜ್ಜಳನನ್ನು ಕೊಲೆಗೈಯ್ಯುತ್ತಾರೆ. ಇದರಿಂದ ಹೊರಗೆ ಸಿಂಹಾಸನಕ್ಕಾಗಿ ಕದನ ಏರ್ಪಡುತ್ತದೆ. ಅದು ಈ ನಾಟಕದ ಕೊಂಡಿಯಾಗಿ ಜನಸಾಮಾನ್ಯರನ್ನು ಜೀವನಾಡಿಯಾಗಿ ಮಾಡಿಕೊಂಡು ಇದೊಂದು ಆಕಸ್ಮಿಕವಾಗಿ ನಡೆದ ಘಟನೆ ಎಂದು ಚಿತ್ರಿಸಿರುವುದನ್ನು ವಿಮರ್ಶಕರು ಗುರುತಿಸಿದ್ದಾರೆ.

ಹೀಗೆ ಬಸವಣ್ಣ ವೇದಿಕೆಗೆ ಬರದಿದ್ದರೂ ಚಳುವಳಿಯ ಎಲ್ಲಾ ಹಂತಗಳಲ್ಲಿ ಅವರ ಮಹತ್ವವನ್ನು ಸ್ಥಾಪಿಸಲಾಗಿದೆ. ಆದರೆ ಬಸವಣ್ಣ ಸಂಘಟಿಸಿದ ಸಂಘರ್ಷ ಲೌಕಿಕ ಅಪಾರ ಲೌಕಿಕವಾಗಿ ವಿಸ್ತರಿಸಿಕೊಳ್ಳುವ ಸಂಘರ್ಷದ ನಿರಂತರತೆಯನ್ನು ಕಾಯ್ದುಕೊಳ್ಳುವ ಆಶಯವನ್ನು ಪ್ರಸ್ತುತಪಡಿಸುತ್ತದೆ.[೯]

'ಗಿರೀಶ್ ಕಾರ್ನಾಡ್‌ರ ತಲೆದಂಡ' ಎಂಬ ವಿಮರ್ಶಾ ಲೇಖನದಲ್ಲಿ ಬಸವ ಬಿಜ್ಜಳರ ಯುಗವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹತ್ವಪೂರ್ಣ ಘಟ್ಟವಾಗಿ ಒಂದು ಕ್ರಾಂತಿಯನ್ನೇ ಉಂಟು ಮಾಡಿದ ಯುಗವಾಗಿದೆ. ಆ ಕಾಲದ ಸತ್ಯಕ್ಕಾಗಿ ಶೋಧಿಸುವ ಆ ಯುಗದ ತಲ್ಲಣಗಳಿಗೆ ಸಂಧಿಸುತ್ತಾ ಈ ಎರಡು ಪಾತ್ರಗಳು ರಕ್ತಮಾಂಸಗಳಿಂದ ಕೂಡಿದ ಮನುಷ್ಯರಿಂದ ಕೂಡಿ ಬರುತ್ತಾರೆ. ಈ ಎರಡು ಪಾತ್ರಗಳು ರಾಜನಾಗಿ ಅಥವಾ ಸಂತನಾಗಿ ವರ್ತಿಸುವುದಿಲ್ಲ. ಸಾಮಾನ್ಯ ಮನುಷ್ಯರಂತೆ ವರ್ತಿಸುತ್ತಾರೆ. ನಾಟಕಕಾರ ಬಳಸುವ ಭಾಷೆ ನೆಲದ ಭಾಷೆಯಾಗಿ ರುವುದರಿಂದ ವ್ಯಕ್ತಿಗಳನ್ನು ಅತ್ಯಂತ ಹತ್ತಿರದಿಂದ ನೋಡುವ ರೀತಿ ಚಿತ್ರಿಸುವುದನ್ನು ವಿಮರ್ಶಕರು ಗುರುತಿಸಿದ್ದಾರೆ. ನಾಟಕಕಾರರು ಬಳಸಿರುವ ಭಾಷೆ ಪ್ರಾದೇಶಿಕ ಸೊಗಡಿನಿಂದ ಕೂಡಿದೆ. ಅದು ಈ ನಾಟಕದ ಒಂದು ವೈಶಿಷ್ಟ್ಯತೆ ಎದ್ದು ಕಾಣುತ್ತದೆ. ಹಾಗೇನೆ ಐತಿಹಾಸಿಕ ಸಂದರ್ಭದಲ್ಲಿ ಸಮಕಾಲೀನತೆಯನ್ನು ಪ್ರತಿಬಿಂಬಿಸುವುದು ಈ ನಾಟಕದ ಇನ್ನೊಂದು ವೈಶಿಷ್ಟ್ಯವಾಗಿದೆ.

೧೨ನೇ ಶತಮಾನದ ಬಸವಣ್ಣನವರ ಪ್ರಗತಿಪರ ಆಶಯ ೨೦ನೆಯ ಶತಮಾನದ ಗಾಂಧೀಜಿಯ ನಿಲುವನ್ನು ಒಟ್ಟಿಗೆ ಸಂಧಿಸಿರುವುದನ್ನು ವಿಮರ್ಶಕರು ಉಲ್ಲೇಖಿಸಿದ್ದಾರೆ. ನಾಟಕದ ಒಟ್ಟು ಆಯಾಮವನ್ನು ಒಂದು ಪುಟ್ಟ ಪುಟದಲ್ಲಿ ಹಿಡಿದಿಟ್ಟಿರುವುದು ಕಾಣಬಹುದು.

ತಲೆದಂಡ ನಾಟಕವು ಹದಿನಾರು ದೃಶ್ಯಗಳ ಮೂರು ಹಂತಗಳಿಂದ ಕೂಡಿದೆ. ಬಸವಣ್ಣನವರ ಭಂಡಾರಿಯಾಗಿ ಎದುರಿಸಿದ ಸಮಸ್ಯೆಗಳು, ಅದರ ಪರಿಣಾಮಗಳು, ಮಧುವರಸ ಮತ್ತು ಹರಳಯ್ಯಾನವರ ಮಕ್ಕಳ ಮದುವೆ ಸಂದರ್ಭದಲ್ಲಿ ಸೋವಿದೇವನು ತಂದೆಯನ್ನು ಬಂಧಿಸಿ

ತಾನು ರಾಜಿಯಾಗುವ ಪ್ರಸಂಗ ಈ ಮುಂತಾದ ಅಂಶಗಳು ಒಂದು ಯುಗದ ದ್ವಂದ್ವಗಳನ್ನು ಅರ್ಥಪೂರ್ಣ ಧ್ವನಿಸಿರುವುದನ್ನು ಗುರುತಿಸಿದ್ದಾರೆ. ಜೈನಧರ್ಮದ ಅಸ್ತಿತ್ವ ಕುರಿತಾಗಿ ವೈದಿಕ ಧರ್ಮದ ಶರಣತ್ವದ ಬಗ್ಗೆ ಶರಣ ಚಳುವಳಿ ಉಗ್ರ ಪ್ರತಿಕ್ರಿಯೆ ನೀಡುವ ಇತ್ಯಾದಿ ಅಂಶಗಳನ್ನು ನಾಟಕ ಬೆಳವಣಿಗೆ ಹಿನ್ನೆಲೆಯಲ್ಲಿ ನಿರೂಪಿಸುತ್ತಾ ಸಾಗಿರುವುದು ನಾಟಕದ ವೈಶಿಷ್ಟ್ಯತೆಯಾಗಿದೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಬಸವಣ್ಣನ ಮಾತಿನಿಂದ ಪರಿವರ್ತನೆ ಹೊಂದಿದ ಬಿಜ್ಜಳ ಆಗಾಗ್ಗೆ ತನ್ನ ಮೂಲ ಅಸ್ತಿತ್ವದ ಬಗ್ಗೆ ತಾನೇ ಪ್ರಶ್ನಿಸಿ ತನ್ನ ಚಾರಿತ್ರಿಕ ನೆಲೆಯನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಅಲ್ಲದೆ ವಚನ ಚಳುವಳಿಯ ಮಹತ್ವ ಹಾಗೂ ಅದರ ಆಯಾಮಗಳಾದ ಜಾತಿಪದ್ಧತಿಯ ನಿರ್ಮೂಲನ, ವಿಲೋಮ ವಿವಾಹ, ಕಾಯಕವೇ ಕೈಲಾಸ, ದೇವರ ಅಸ್ತಿತ್ವ, ಸಮಾನತೆ ಇವುಗಳ ಬಗೆಗೆ ಆಶ್ಚರ್ಯ ಮತ್ತು ಆತಂಕಗಳನ್ನು ವ್ಯಕ್ತಪಡಿಸುವ ಬಿಜ್ಜಳನ ಸನ್ನಿವೇಶಗಳು ಸಮಕಾಲೀನ ಪ್ರಜ್ಞೆಯನ್ನು ಗುರುತಿಸುತ್ತದೆ.

ಜಿ.ಎಸ್. ಅಮೂರ್‌ರ 'ಗಿರೀಶ್ ಕಾರ್ನಾಡರ ತಲೆದಂಡ ಹಾಗೂ ಅಗ್ನಿ ಮತ್ತು ಮಳೆ' ಎಂಬ ಲೇಖನದಲ್ಲಿ 'ತಲೆದಂಡ' ಕುರಿತಾಗಿ ತಿಳಿಸಿರುವ ವಿಚಾರಗಳು ಸುಮಾರು ಎಂಟು ಪುಟಗಳ ಸವಿಸ್ತಾರವನ್ನು ಹೊಂದಿದೆ. ಪ್ರಾರಂಭದಲ್ಲಿ ನಾಟಕ ರಚನೆಗೆ, ಸಾಮಾಜಿಕ ಮತ್ತು ರಾಜಕೀಯ ಪ್ರೇರಣೆಯನ್ನು ತಿಳಿಸುತ್ತಾ, ವಚನ ಚಳವಳಿಯ ಬೆನ್ನ ಹಿಡಿದು ಒಳಪ್ರವೇಶಿಸಿ ಅದರಲ್ಲಿನ ಸಣ್ಣಾತಿ ಸಣ್ಣ ಘಟನೆಯನ್ನು ಸಹ ಬಿಡದೆ ಲೇಖಕರು ತಮ್ಮ ನಾಟಕದಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡಿರುವ ವಿಷಯಗಳತ್ತ ಗಮನಹರಿಸುವಲ್ಲಿ ವಿಮರ್ಶಕರು ಯಶಸ್ವಿಯಾಗಿದ್ದಾರೆ. ಜೊತೆಗೆ ಚಳುವಳಿಯ ಸಫಲತೆ ಮತ್ತು ವಿಫಲತೆಯ ಸ್ಥಿತಿಯನ್ನು ನಾಟಕದ ವಸ್ತುವಿನ ಹಿನ್ನೆಲೆಯಲ್ಲಿ ಸಾಕಷ್ಟು ವಿವರವಾಗಿ ಚರ್ಚಿಸಿದ್ದಾರೆ. ಆದರೆ, ಅದರ ಪೂರ್ಣ ವಿವರಣೆಗೆ ಕೈ ಹಾಕದೆ, ನಾಟಕದ ವಸ್ತು ಮತ್ತು ಆಶಯ ಕುರಿತಾಗಿ ವಿಮರ್ಶಕರು ಹೇಳಿರುವ ಮಾತನ್ನು ಇಲ್ಲಿ ಗಮನಿಸುವುದು ಸೂಕ್ತವೆಂದು ತಿಳಿದಿದ್ದೇನೆ.

'ತಲೆದಂಡ'ದ ನಿಜವಾದ ವಸ್ತು ಸಾಮಾಜಿಕ ಹಾಗೂ ರಾಜಕೀಯ ಕ್ರಾಂತಿ ಹಾಗೂ ಈ ಕ್ರಾಂತಿ ವೈಫಲ್ಯದ ಒಂದು ಸ್ಥಿತಿ. ನಿಜವಾದ ಕ್ರಾಂತಿ ಕೊನೆಯಿಲ್ಲದ ಒಂದು ಪ್ರಕ್ರಿಯೆಯಾಗಿ ರುವುದರಿಂದ ಹಾಗೂ ಅದರ ಪರಿಣಾಮಗಳು ದೂರಗಾಮಿಯಾಗಿರುವುದರಿಂದ ಸೋಲು ಅದರ ಒಂದು ಅವಸ್ಥೆಯನ್ನು ಮಾತ್ರ ಸೂಚಿಸುತ್ತದೆ. ಈ ಮಾತು ವೀರಶೈವರ ಕ್ರಾಂತಿಗೂ ಅನ್ವಯಿಸುತ್ತದೆ. ನಾಟಕದಲ್ಲಿಯ ಕ್ರಾಂತಿಯ ಸ್ವರೂಪ ಹಾಗೂ ಅದರ ಸೋಲು-ಗೆಲುವುಗಳಿಗೆ ಕಾರಣವಾದ ಸಾಮಾಜಿಕ ಹಾಗೂ ರಾಜಕೀಯ ಶಕ್ತಿಗಳ ಶೋಧವಾಗಿರುವುದರಿಂದ ಅದು ಸಾರ್ವತ್ರಿಕ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ ಎಂದು ತಿಳಿಸುತ್ತಾ 'ತಲೆದಂಡ'ದ ಐದನೆಯ ದೃಶ್ಯದ ಬಗೆಗೆ ಹೆಚ್ಚು ಮುತುವರ್ಜಿ ವಹಿಸಿ, ನಾಟಕ ರಚನೆಯ ದೃಷ್ಟಿಯಿಂದ ಗಿರೀಶ್‌ರ ಬಹುದೊಡ್ಡ ಸಾಧನೆಗಳಲ್ಲೊಂದು ಎಂದು ಹೇಳುತ್ತಾರೆ.

ಮೂರು ಮುಖ್ಯ ಕಾರಣಗಳಿಂದಾಗಿ ಗಿರೀಶರು ಇಂದಿನ ಭಾರತೀಯ ಸಂದರ್ಭದಲ್ಲಿ ಅತ್ಯಂತ ಮಹತ್ವದ ನಾಟಕಕಾರರಾಗುತ್ತಾರೆ. ಮೊದಲನೆಯದು ತಮ್ಮ ನಾಟಕಗಳ ವಸ್ತುವಿನ ಆಯ್ಕೆಯಲ್ಲಿ ಅವರು ತೋರುವ ಧೈರ್ಯ ಹಾಗೂ ಸಂವೇದನಾಶೀಲತೆ, ತಲೆಮಾರುಗಳ ವೈಚಾರಿಕ ಅಂತರ, ಧರ್ಮ ರಾಜಕೀಯಗಳ ಸಂಘರ್ಷ, ಲೈಂಗಿಕ ಸಮಸ್ಯೆಗಳು, ಕ್ರಾಂತಿಯ ಸೋಲು-ಗೆಲುವುಗಳು ಇಂಥ ಜೀವಾಳದ ಪ್ರಶ್ನೆಗಳಿಗೆ ಅವರು ತೋರುವ ಸ್ಪಂದನ ಸೂಕ್ಷ್ಮ ಹಾಗೂ ವಿವೇಕ ಪೂರ್ಣವಾಗಿರುವುದರಿಂದ ಹಲವಾರು ಒಳನೋಟಗಳನ್ನು ಕೊಡಲು ಅವರು ಶಕ್ತರಾಗುತ್ತಾರೆ. ಎರಡನೆಯದಾಗಿ ತಮ್ಮ ದರ್ಶನಗಳಿಗೆ ಅರ್ಥಪೂರ್ಣವಾದ ನಾಟ್ಯ ರೂಪಕಗಳನ್ನು ಸೃಷ್ಟಿಸುವುದರಲ್ಲಿ ಅವರು ದೊರಕಿಸುವ ಯಶಸ್ಸು. ಈ ರೂಪಕಗಳಿಗಾಗಿ ಅವರು ಇತಿಹಾಸ, ಪುರಾಣಗಳನ್ನು ಶೋಧಿಸುತ್ತಾರೆ. ಜಾನಪದ ಕಲೆಯನ್ನು ಓಲಾಡಿಸುತ್ತಾರೆ. ಅವರ ನಾಟಕಗಳಿಗೆ ವಸ್ತುನಿಷ್ಠತೆ ಹಾಗೂ ಸಾರ್ವತ್ರಿಕತೆಗಳು ಬರುವುದು ಈ ರೂಪಕಗಳಿಂದಲೇ. ಕೊನೆಯದು ಅವರ ರಂಗತಂತ್ರ ಪರಿಣತೆ. ರಂಗಭೂಮಿಯ ಹಲವಾರು ಪ್ರಕರಣಗಳ ಆಳವಾದ ಪರಿಚಯ, ವಿವಿಧ ಮಾಧ್ಯಮಗಳ ಸಾಧ್ಯತೆಗಳ ಅರಿವು, ನಟ-ನಿರ್ದೇಶಕರಾಗಿ ದೊರಕಿಸಿದ ಅಮೂಲ್ಯ ಅನುಭವ, ಪೌರ್ವಾತ್ಯ, ಪಾಶ್ಚಾತ್ಯ ಮಾದರಿಗಳ ಪರಿಜ್ಞಾನ ಇಂಥ ಹಲವಾರು ಕಾರಣಗಳು ಈ ಪರಿಣತಿಯ ಹಿಂದಿರುವುದನ್ನು ಗುರುತಿಸಬಹುದು"[೫] ಎಂದು ತಮ್ಮ ವಿಮರ್ಶಾ ಲೇಖನದ ಅಂತ್ಯದಲ್ಲಿ ತಿಳಿಸುತ್ತಾರೆ.

**ಕನ್ನಡ ನವ್ಯ ನಾಟಕ ಮತ್ತು ಪಾಶ್ಚಾತ್ಯ ಪ್ರಭಾವ**

ಡಾ. ದಿವ್ಯಸ್ಪತಿ ಹೆಗಡೆಯವರು ಆಧುನಿಕ ಕನ್ನಡ ವಿಮರ್ಶಾ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಅವರು ಬರೆದಿರುವ 'ಕನ್ನಡ ನವ್ಯನಾಟಕ ಮತ್ತು ಪಾಶ್ಚಾತ್ಯ ಪ್ರಭಾವ' ಎಂಬ ಕೃತಿಯಲ್ಲಿ ಸಂಕ್ರಾಂತಿ ಮತ್ತು ನಾನೇ ಬಿಜ್ಜಳ ಎಂಬ ನಾಟಕಗಳ ಕುರಿತು ಹೀಗೆ ಅಭಿಪ್ರಾಯ ಪಡುತ್ತಾರೆ.

ಸಂಕ್ರಾಂತಿ, ನಾನೇ ಬಿಜ್ಜಳ ಕೃತಿಗಳು ಬಸವಣ್ಣನ ಸಂಬಂಧದ ಐತಿಹಾಸಿಕ ಕತೆಯನ್ನು ತೆಗೆದುಕೊಂಡು ಒಂದು ಸಾಮಾಜಿಕ ಸಂಕ್ರಮಣ ಕಾಲದ ಚಿತ್ರ ಕೊಡುವಲ್ಲಿ ಲಂಕೇಶ್‌ರವರು ಯತ್ನಿಸಿದ್ದಾರೆ. ಹುಲಿಯ ಪಾತ್ರವನ್ನು ಸೂತ್ರದ ಸಂಕೇತವಾಗಿ ಬಳಸಿಕೊಂಡಿರುವುದರಿಂದ ನಾಟಕಕ್ಕೆ ತಾಂತ್ರಿಕವಾದ ನವ್ಯದ ತಿರುವು ಕೊಟ್ಟಿದ್ದಾರೆ. ಇಲ್ಲಿನ ವಸ್ತು, ಕಾರ್ಮಿಕ ಸಂಘರ್ಷ ವರ್ಗಕ್ರಾಂತಿ ಸಮಾಜವಾದ ಸಮತಾವಾದಗಳನ್ನೆಲ್ಲಾ ಕಂಡವರು ಮತ್ತು ಚರ್ಚಿಸಿದವರು ಹಾಡುವ ಮಾತಂತಿದೆ. ಉದಾಹರಣೆಗಾಗಿ "ನಾವು ಯಾವುದೋ, ನಾವು ಎದ್ದೆವೋ ಎಂದರೆ ಕೆಳಗಾಕಿ ಹಮ್ಮುಕಿತ್ತಿದಿ ನೀವೆಲ್ಲಾ ಎಂದು ಹೇಳುವಾ ರುದ್ರನ ಮಾತು".[೬] ಇಲ್ಲಿ ಶೋಷಣೆಗೊಳಗಾದ ಶೂದ್ರ ಜನರ ಏಳಿಗೆಯನ್ನು ಸಹಿಸದ ವೈದಿಕ ಸಂಪ್ರದಾಯದ ಸ್ಪಷ್ಟ ಚಿತ್ರಣವು ಗೋಚರಿಸುತ್ತದೆ.

ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಶೋಷಣೆಗೆ ಒಳಪಟ್ಟ ಅಂದಿನ ಜನರ ಅಂತರಂಗದ ನೋವನ್ನು ಹೊರಹಾಕುವುದರ ಮೂಲಕ ನಾವು ಮನುಷ್ಯರು

ನಮಗೂ ಮನುಷ್ಯತ್ವವಿದೆಯೆಂದು ನಾಟಕಕಾರರ ಅಂತರಧ್ವನಿಯನ್ನು ವಿಮರ್ಶಕರು ಒಳಮನದ ಹರಿದು ಹೋಗಿ ಗಮನಿಸಬಹುದಾಗಿದೆ.

ಪ್ರಯೋಗಶೀಲತೆಗಿಂತಲೂ ಹೆಚ್ಚಾಗಿ ಸಂಪ್ರದಾಯಕತೆಯನ್ನು ಅನುಸರಿಸಿರುವ ಜಿ.ಟಿ. ಜೋಷಿಯವರ ನಾಟಕಗಳು ಬದುಕಿನ ಸಂಕ್ರಮಣದ ಸ್ಥಿತಿಯ ಚಿತ್ರಣ ನೀಡುತ್ತವೆ.

ನಾನೇ ಬಿಜ್ಜಳ ಎಂಬ ನಾಟಕದಲ್ಲಿ ಬಿಜ್ಜಳನ ಪಾತ್ರವನ್ನು ವಹಿಸಿದ ಸುರೇಶ್ ದೇಸಾಯಿ ಅಗಾಧದ ಪರಿಣಾಮವಾಗಿ ತಾನು ನಿಜಕ್ಕೂ ಬಿಜ್ಜಳನೆಂದು ನಂಬಿ ವರ್ತಿಸಲು ತೊಡಗುತ್ತಾನೆ. ಒಟ್ಟಾರೆಯಾಗಿ ಈ ನಾಟಕವು ವಾಸ್ತವಿಕವಾಗಿ ನೆಲೆಗೊಂಡ ರಚನೆಯಾದದ್ದು. ಸಂಪ್ರದಾಯಿಕ ದೃಷ್ಟಿಯಿಂದ ಕೊನೆಗೊಳ್ಳುವಂತಹ ಕ್ರಿಯೆ ಈ ನಾಟಕದಲ್ಲಿ ಕಾಣಬಹುದು.

**ನಾಟಕ ಪ್ರವೇಶಿಕೆ**

ವಿಮರ್ಶಕ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡು ವಿಮರ್ಶೆಯ ಮೌಲ್ಯವನ್ನು ಮೈಗೂಡಿಸಿ ಕೊಂಡ ಎ.ಆರ್. ನಾಗಭೂಷಣರವರ 'ನಾಟಕ ಪ್ರವೇಶಿಕೆ' ಕೃತಿಯಲ್ಲಿ ಸಂಕ್ರಾಂತಿ ಮತ್ತು ತಲೆದಂಡ ನಾಟಕವನ್ನು ಕುರಿತು ಅವರ ಆಲೋಚನೆ ಲಹರಿಯ ಕೆಲವು ಅಂಶಗಳು ಮಹತ್ವ ವೆನಿಸುತ್ತವೆ. ಉಳಿದೆಲ್ಲ ನಾಟಕಗಳಿಗಿಂತಲೂ ಹೆಚ್ಚು ಮಹತ್ವವನ್ನು ಪಡೆದಿರುವ ಸಂಕ್ರಾಂತಿ ನಾಟಕದಲ್ಲಿ ಬಸವಣ್ಣ-ಬಿಜ್ಜಳನ ಕಾಲದ ಸ್ಥಿತಿಗತಿಗಳನ್ನು ಅವಲೋಕಿಸುತ್ತಾ ಮನುಷ್ಯ ಸಂಬಂಧಗಳನ್ನು ನಾಶ ಮಾಡಿಸುವ ಜಾತಿಪದ್ಧತಿ ಬಗ್ಗೆ ಆಕ್ರೋಶ ಇಲ್ಲಿ ಎದ್ದು ಕಾಣುತ್ತದೆ.

ಈ ನಾಟಕದಲ್ಲಿ ಬರುವ ಪ್ರಮುಖ ವಿಷಯವನ್ನು ಪ್ರತಿಪಾದಿಸುವ ಪಾತ್ರಗಳಿಂದ ಬ್ರಾಹ್ಮಣರ ಜಾತಿಯ ಉಷೆ ಮತ್ತು ಹೊಲೆಯ ಜಾತಿಯ ರುದ್ರರ ಮದುವೆ ಪ್ರಕರಣದಿಂದ ಅಲ್ಲಿಯ ವ್ಯವಸ್ಥೆಯನ್ನು ಪರಿಶೀಲಿಸುವಂತೆ ಕಾಣುತ್ತದೆ. ಎರಡು ಎಳೆಗಳನ್ನು ಪ್ರತಿನಿಧಿಸುವ ಬಸವಣ್ಣನವರನ್ನು ಸಂಘರ್ಷಸುವ ಚಿತ್ರ ಇಲ್ಲಿದೆ.

ಹೀಗಾಗಿ ವ್ಯಕ್ತಿಗಳು ಕೇವಲ ಸಂಕೇತಗಳಾಗದೆ ಪೂರ್ಣಪಾತ್ರಗಳಾಗಿದ್ದಾರೆ. ರುದ್ರನ ಶೂದ್ರತ್ವ ವನ್ನು ಪ್ರೀತಿಸುವ ಉಷಾ ಅವನು ಶರಣನಾದ ಕೂಡಲೇ ಭ್ರಮನಿರಸಳಾಗುತ್ತಾಳೆ. ಇದೇ ಕಾರಣವಾಗಿ ಇವಳ ಪ್ರೀತಿಯ ನಿಷ್ಠುರತೆ ಬಿರುಕು ಬಿಡುತ್ತದೆ. ಇದರ ಜೊತೆಗೆ ಯಥಾಸ್ಥಿತಿವಾದಿಗಳ ತಂತ್ರಗಳೂ ಸೇರಿ ರುದ್ರನ ಸಾವು ಸಂಭವಿಸುತ್ತದೆ. ಇದಕ್ಕೆ ಬಸವಣ್ಣನೂ ಪರೋಕ್ಷವಾಗಿ ಕಾರಣನಾಗಿ ಬಿಡುವ ದುರಂತದಲ್ಲಿ ನಾಟಕಕಾರರ ಒಂದು ನಿಲುವು ಪ್ರಕಟವಾಗುತ್ತದೆ. ಇದು ನಿರಾಶದಾಯಕವಾದ ಚಿಂತನೆ ಎಂದು ತಿಳಿದರೆ ತಪ್ಪಾದಿತು. ಈ ನಾಟಕ ವೇದನೆ, ದುರಂತಗಳೇ ಜಾತಿ ವ್ಯವಸ್ಥೆಯ ವಿರುದ್ಧ ಕಿಡಿ ಹಾರುವ ಪ್ರತಿಭಟನೆಯಾಗಿವೆ ಎಂಬುದು ಎ.ಆರ್. ನಾಗಭೂಷಣರ ವಿಚಾರವಾಗಿದೆ. ಮುಂದುವರೆದು 'ತಲೆದಂಡ'ದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹೀಗೆ ವ್ಯಕ್ತಪಡಿಸುತ್ತಾರೆ. ೧೨ನೇ ಶತಮಾನದ ಶರಣಕ್ರಾಂತಿ ಪರಿಸರದಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಬಿಕ್ಕಟ್ಟುಗಳನ್ನು ಪರಿಶೀಲಿಸುವ ನಾಟಕ 'ತಲೆದಂಡ' ಕಲ್ಯಾಣದಲ್ಲಿ

ಬಸವಣ್ಣ ಉಂಟು ಮಾಡಿದ ಅವಸ್ಥಾಂತರಗಳು ಮತ್ತು ಇದಕ್ಕೆ ಬಂದ ಪ್ರತಿಕ್ರಿಯೆಗಳು ನಾಟಕದ ಹೊರಮೈ. ಒಳಮೈಯಾಗಿ ಹೋರಾಟದ ಪ್ರತಿಭಟನೆಗಳ ಅನಿವಾರ್ಯ ಕೂಸಾದ ವೈರುಧ್ಯಗಳ ವಿನ್ಯಾಸವಿದೆ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ವ್ಯವಸ್ಥೆಯ ಬದಲಾವಣೆ ಮಾಡಬಯಸುವ ಕ್ರಿಯೆ ಕ್ರಮೇಣ ಪರಸ್ಪರ ವಿರುದ್ಧವಾದ ಎರಡು ಮುಖಗಳನ್ನು ಗಳಿಸಿಕೊಳ್ಳುವ ಪ್ರಕ್ರಿಯೆ ಈ ನಾಟಕದ ಜೀವವಾಗಿದೆ. ಏಕಮುಖಿಯಾಗಿ ಬಂದು ಆದರ್ಶವನ್ನು ವೈಭವೀಕರಿಸದೇ ಎರಡೂ ಮುಖಗಳನ್ನು ಸಂಯಮದಿಂದ ಅವಲೋಕಿಸಿ, ಸಮತೋಲನವನ್ನು ಕಾಯ್ದುಕೊಳ್ಳುವುದು. ಇಲ್ಲಿಯ ವೈಶಿಷ್ಟ್ಯವಾಗಿದೆ. ಹಣ ದುರುಪಯೋಗದ ಆಪಾದನೆಗಳಿಂದ ಮುಕ್ತವಾದ ಕೂಡಲೇ ಬಸವಣ್ಣನಿಗೆ ಪವಾಡ ಪುರುಷನ ಪ್ರಭಾವಳಿ ಬಂದು ಬಿಡುತ್ತದೆ. ಇದು ಅವನಲ್ಲಿ ಗಾಬರಿಯನ್ನು ಹುಟ್ಟಿಸುತ್ತದೆ. ಕಲಾವತಿ ಶೀಲವಂತರ ಮದುವೆಯ ಸಂದರ್ಭದಲ್ಲಿ ಇತರರಂತೆ ಅತ್ಯುತ್ಸಾಹಿಯಾಗದೆ ಇವನು ಎಚ್ಚರದಿಂದ ಇರುತ್ತಾನೆ.

ದುರಂತದ ವಿಷಯವೆಂದರೆ ಇವನಿಂದ ಹುಟ್ಟಿದ ಜಂಗಮ ವ್ಯವಸ್ಥೆ ಸ್ಥಾವರವಾಗುತ್ತಾ ಹೋಗುವುದು ಹಾಗೂ ಜಗದೇವನಂತಹವರು ಧರ್ಮದ ಹೆಸರಿನಲ್ಲಿ ಹಿಂಸಾ ಪ್ರೇಮಿಗಳಾಗುವುದು. ಹೀಗೆ ಒಂದು ಚಳುವಳಿ ತನಗೆ ತಾನೇ ವಿರುದ್ಧವಾಗಿ ಬಿಡುವುದನ್ನು 'ತಲೆದಂಡ' ತುಂಬ ಗಹನವಾಗಿ ಪ್ರಕಾಶಿಸುತ್ತದೆ. ಬಸವಣ್ಣ ಸೋತ ಹಾಗೆ ಬಿಜ್ಜಳನು ಸೋಲುತ್ತಾನೆ. ಸೂಕ್ಷ್ಮ ಮನಸ್ಸುಳ್ಳ ಇವನು ರಾಜಕೀಯ ಬಿಕ್ಕಟ್ಟನ್ನು ಎದುರಿಸಲಾಗಿದೆ. ಮಗ ಸೋವಿ ದೇವನಿಂದ, ಯಥಾಸ್ಥಿತಿವಾದಿಗಳಿಂದ ಸೋಲು ಅನುಭವಿಸುತ್ತಾರೆ. ಬಸವಣ್ಣ ಹಾಗೂ ಬಿಜ್ಜಳರ ಸೋಲು ಅರ್ಥಪೂರ್ಣವಾಗಿದ್ದು ನಮ್ಮ ಆಧುನಿಕ ಸಮಾಜಕ್ಕೆ ಪ್ರಸ್ತುತವಾಗಿದೆ ಎಂಬುದು ಎ.ಆರ್. ನಾಗಭೂಷಣರವರ ಅಭಿಪ್ರಾಯವಾಗಿದೆ.

ಹೀಗೆ 'ತಲೆದಂಡ' ನಾಟಕದ ಬಗ್ಗೆ ಹೆಚ್ಚು ಚರ್ಚೆ ನಡೆದಿರುವುದನ್ನು ಕಾಣುತ್ತೇವೆ. ಮಾಧವ ಕುಲಕರ್ಣಿ ಹಾಗೂ ಎಸ್. ಜಯರಾಮ ಮುಂತಾದ ಕವಿಗಳು ಆಧುನಿಕ ಯುಗದಲ್ಲಿ ನಿಂತು, ಐತಿಹಾಸಿಕ ವಿಷಯಗಳ ಮೇಲೆ ತಮ್ಮ ನೋಟ ಚೆಲ್ಲುವ ವರ್ತಮಾನ ಅದರ ವಾಸ್ತವಿಕತೆಯನ್ನು ಚಿತ್ರಿಸುತ್ತಿರುವ ಸಂಗತಿ ವಿಶೇಷವೇ ಸರಿ.

**ವಿದ್ಯಾಶ್ರೀ ಸ್ವರ್ಣ ಸಂಚಿಕೆ**

ಸಂಶೋಧಕರು ಹಾಗೂ ವಿಮರ್ಶಕರಾದ ಡಾ. ಬಸವರಾಜ ಮಲಶೆಟ್ಟಿಯವರು ಶರಣರನ್ನು ಕುರಿತು ಮತ್ತು ಶರಣ ಸಾಹಿತ್ಯವನ್ನು ಕುರಿತು ಅನೇಕ ವಿಮರ್ಶಾತ್ಮಕ ಲೇಖನವನ್ನು ಬರೆದಿದ್ದಾರೆ. ಅವರು ವಿದ್ಯಾಶ್ರೀ ಸ್ವರ್ಣಸಂಚಿಕೆಗೆ ಬರೆದ 'ಶರಣ ಕುರಿತು ನಾಟಕಗಳು' ಎಂಬ ಲೇಖನದಲ್ಲಿ ಕೆಟ್ಟಿತ್ತು ಕಲ್ಯಾಣ ಹಾಗೂ ಜಗಜ್ಯೋತಿ ಬಸವೇಶ್ವರ ನಾಟಕಗಳನ್ನು ಕುರಿತು ವಿಮರ್ಶಾತ್ಮಕ ವಿಚಾರಗಳು ಇಲ್ಲಿ ವ್ಯಕ್ತವಾಗಿವೆ. ಡಾ. ಎಂ.ಎಂ. ಕಲಬುರ್ಗಿಯವರು ಬರೆದ 'ಕೆಟ್ಟಿತ್ತು ಕಲ್ಯಾಣ' ಎಂಬ ನಾಟಕವನ್ನು ಕುರಿತು ಎಂ.ಎಂ. ಕಲಬುರ್ಗಿಯವರ ಸಂಶೋಧನೆಯ

ಒಡಲುಗಳು, ಕಲ್ಪನೆಗಳು, ಸನ್ನಿವೇಶಗಳು ಅವರ ನಾಟಕದಲ್ಲಿ ನಿಂತಿವೆ. ಕಲಬುರ್ಗಿಯವರು ಒಬ್ಬ ಪ್ರಬುದ್ಧ ಸಂಶೋಧಕರಾಗಿರುವುದರಿಂದ ಇತಿಹಾಸದ ಆಧಾರಗಳ ಮೇಲೆ ನಾಟಕ ರಚಿಸಿದಂತೆ ತೋರುತ್ತದೆ. ಈ ಕೃತಿಯನ್ನು ಕುರಿತು ಮಲಶೆಟ್ಟಿಯವರ ಅಭಿಪ್ರಾಯ ಈ ಕೆಳಗಿನಂತಿವೆ. ಸಮಕಾಲೀನ ಸಂಗತಿಗಳ ನೇರ ನೆರಳುಗಳು ನಾಟಕದ ತುಂಬ ವ್ಯಾಪಿಸಿರುವುದರಿಂದ ಒಟ್ಟಾರೆ ನಿರೂಪಣೆ ತೀರ ವ್ಯಾಜ್ಯವೆನಿಸುತ್ತದೆ. ಬಸವಣ್ಣನ ಪವಾಡವನ್ನು ವೈಭವೀಕರಿಸುವ ಭಾರದಲ್ಲಿ ಅವುಗಳನ್ನು ಹೊಸದಾಗಿ ಅರ್ಥೈಸುವುದರಲ್ಲಿ ಅಪಕ್ವ ಮತ್ತು ಅಪಾಯಕಾರಿ ವಿಚಾರಗಳನ್ನು ತುರುಕಲಾಗಿದೆ. ಭಂಡಾರ ರಕ್ಷಕನಾದ ಬಸವಣ್ಣನ ರಾಜ್ಯಭಂಡಾರ, ರಾಜ್ಯದಲ್ಲಿ ಪ್ರಜೆಗಳಿಂದ ನಿಮ್ಮದು ಅದನ್ನು ನೀವೇ ಬೆಳೆಸಿದ್ದೀರಿ ಎಂದು ಹೇಳುತ್ತಾನೆ. ಈ ವಿಚಾರ ಅಸಮಂಜಸ ಎಂಬುದು ವಿಮರ್ಶಕರ ಅಭಿಪ್ರಾಯವಾಗಿದೆ.

ಜಗಜ್ಯೋತಿ ಬಸವೇಶ್ವರ ಅ.ನ.ಕೃ.ರವರ ನಾಟಕದ ಮಾತಾಗಿದೆ. ಪುರಾಣಗಳಲ್ಲಿ ಚಿತ್ರಿತವಾಗಿರುವ ಮತೀಯವಾದ ಬಸವಣ್ಣನ ಚಿತ್ರವನ್ನು ಅಳಿಸಿ, ದಯೆ, ಶಾಂತಿ, ಸಹನೆ ಸೌಹಾರ್ದತೆಗಳ ವಿಶ್ವಧರ್ಮ ಬಸವಣ್ಣನ ಚಿತ್ರ ನೀಡುವುದು ಅ.ನ.ಕೃರವರ ಉದ್ದೇಶ.

ಬಸವ, ಬಿಜ್ಜಳರ ಸಂಬಂಧವನ್ನು ಅವರ ಕೌಟುಂಬಿಕವಾದ ಪ್ರೀತಿ ಸಂಬಂಧ ಬಿಜ್ಜಳನ ಹೆಂಡತಿ ಶಾಂತಮತಿ ಮತ್ತು ಕುಮಾರನೊಂದಿಗೆ ಬಸವಣ್ಣ ತುಂಬಾ ಹತ್ತಿರದಿಂದ ನಡೆದು ಕೊಳ್ಳುತ್ತಾರೆ. ಬಸವಣ್ಣನ ಕಲ್ಯಾಣವೆಂತಹದ್ದು ಒಬ್ಬ ಪೌರ ಹೇಳುತ್ತಾಳೆ. ಕಲ್ಯಾಣದಲ್ಲಿ ಸೈನ್ಯದ ಕಾಟವಿಲ್ಲ. ಶ್ರೀಮಂತರ ಬಾಧೆಯಿಲ್ಲ ಅಧಿಕಾರಿಗಳ ಸುಲಿಗೆಯಿಲ್ಲ. ಇಂತಹ ಸುಖ ನಗರ ರಾಜ್ಯವನ್ನು ರೂಢಿಗೆ ತಂದ ಬಸವಣ್ಣನ ಬಗೆಗೆ ಗೌರವ ಮೂಡಿದೆ ಎಂದು ಅಭಿಪ್ರಾಯ ಪಡುತ್ತಾರೆ. ಈ ಬಗೆಯ ವಸ್ತು ಪ್ರಸ್ತುತ ಸಂದರ್ಭದಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನಕ್ಕೆ ಸಮನ್ವಯಗೊಳಿಸಿರುವುದು ಬಹಳ ಅವಶ್ಯಕವೆನಿಸುತ್ತದೆ.

### ಮಾದರ ಚೆನ್ನಯ್ಯ

ಆಧುನಿಕ ಕನ್ನಡ ನಾಟಕಕಾರರಲ್ಲಿ ಒಬ್ಬರಾದ ತೊಟ್ಟವಾಡಿ ನಂಜುಂಡ ಸ್ವಾಮಿಯವರು ರಚಿಸಿರುವ 'ಮಾದರಚೆನ್ನಯ್ಯ' ಎಂಬ ನಾಟಕವನ್ನು ಕುರಿತು ಡಾ. ಕಾ.ವೆಂ. ಶ್ರೀನಿವಾಸಮೂರ್ತಿ ಯವರು ಹೇಳುವ ವಿಮರ್ಶಾತ್ಮಕ ವಿಚಾರವನ್ನು ಗಮನಿಸಬಹುದಾಗಿದೆ. ೧೨ನೇ ಶತಮಾನದಲ್ಲಿ ಅದು ಬೆರಗುಗೊಳಿಸಿದ ರೀತಿ ಅದೇ ಪರಂಪರೆಯಲ್ಲಿ ಮಾದರಚೆನ್ನಯ್ಯ ನಾಟಕ ನಿಲ್ಲುತ್ತದೆಂಬ ಅವರ ಅಭಿಪ್ರಾಯವು ಗಮನಿಸಬೇಕಾಗಿರುವಂತಹದ್ದು.

'ಯಾವುದೇ ಚಳುವಳಿಗೆ ಎರಡು ಮೂಲಗಳಿರುತ್ತದೆ. ಒಂದು ಹಸಿವಿನ ಮೂಲ, ಹಸಿವಿನ ಪರಿವಾರದ ಕಾಳಜಿಯ ಮೂಲ ಎದ್ದು ಕಾಣುತ್ತದೆ. ಮೊದಲನೆಯದಲ್ಲಿ ಹಸಿವಿನ ಮೂಲದಲ್ಲಿ ಪ್ರತ್ಯೇಕಗೊಳ್ಳುವ ಶೋಷಿತರ ಜಾಗೃತ ಪ್ರಜ್ಞೆ ಮತ್ತು ಕ್ರಿಯೆಯ ಯಾವುದೇ ಚಳುವಳಿಗೆ ಮುಖ್ಯ ಆಧಾರ'[೭] ಎಂದು ತಿಳಿಸುವುದರೊಂದಿಗೆ ಚಳುವಳಿಯ ಅರಿವಿನ ಮನೆ

ಕಾಯಕ ತತ್ವ ಆರ್ಥಿಕತೆ ರಾಜತ್ವ ಮುಂತಾದವುಗಳ ಬಗ್ಗೆ ಚೆನ್ನಯ್ಯನ ಅಭಿಪ್ರಾಯ ಸ್ಪಷ್ಟವಾಗಿ ಮೂಡಿ ಬಂದಿರುವುದನ್ನು ವಿಮರ್ಶಕರು ಗುರುತಿಸಿದ್ದಾರೆ.

"ಮಾದರ ಚೆನ್ನಯ್ಯಾ" ನಾಟಕವು ಗತಪ್ರಧಾನವಾಗಿರುವಂತಹದ್ದು ಬಸವಣ್ಣನವರ ಪವಾಡ ಮತ್ತು ಸಾಧನೆಯನ್ನು ಉಲ್ಲೇಖಿಸಿರುವ ಹಲವಾರು ಗ್ರಂಥವನ್ನು ಆಧಾರವಾಗಿಟ್ಟುಕೊಂಡು ರಚನೆ ಮಾಡಿರುವ ನಾಟಕದ ಕೃತಿ ಎಂದು ಅಭಿಪ್ರಾಯಪಟ್ಟಿದ್ದಾರೆ.

ಹಾಗೇನೇ ೧೨ನೇ ಶತಮಾನದಲ್ಲಿ ಬಾಳಿ ಬದುಕಿದ ಅನೇಕ ಶಿವಶರಣರ ಜೀವನ ಚರಿತ್ರೆಯನ್ನು ಕುರಿತು ಹಲವಾರು ನಾಟಕಗಳನ್ನು ಕಾಣುತ್ತೇವೆ. ಬಸವಣ್ಣ ಮತ್ತು ಅಕ್ಕಮಹಾದೇವಿಯ ಜೀವಕ್ಕೆ ಸಂಬಂಧಿಸಿದಂತೆ ಅನೇಕ ಮಹತ್ವದ ಅಂಶಗಳು ಉಲ್ಲೇಖಿತವಾಗಿರುವ ಅಂಶಗಳನ್ನು ಗುರುತಿಸಬಹುದಾಗಿದೆ.

ದಿಲ್‌ವಾಲ್‌ರಾಮ್ ದುರ್ಗರವರು 'ಮಾದರಚೆನ್ನಯ್ಯಾ' ನಾಟಕವನ್ನು ಕುರಿತು ಒಂದು ಲೇಖನವನ್ನು ಪ್ರಕಟಿಸಿದ್ದಾರೆ. ಇದು ಮಾದರಚೆನ್ನಯ್ಯಾ ಎಂಬ ವಿಮರ್ಶಾತ್ಮಕ ಲೇಖನವು ಕಾಯಕದ ಬಗ್ಗೆ ವ್ಯಕ್ತವಾದ ಪರಿಕಲ್ಪನೆಗಳನ್ನು ಪರಿಪೂರ್ಣವಾಗಿ ಬಿಚ್ಚಿಟ್ಟಿದ್ದಾರೆ.

ಬಸವಣ್ಣನವರು ಆರಂಭಿಸಿದ ಒಂದು ಕ್ರಾಂತಿಯಾಗಿ ಸಂಸ್ಕೃತಿಯ ಪರಂಪರೆಯನ್ನು ಮತ್ತು ಅದರ ಆಯಾಮ ನಿರ್ಮಾಣವಾಗಲೂ ಶರಣರಲ್ಲಿನ ವೈಚಾರಿಕತೆಯೇ ಕಾರಣ ವೆಂಬುವುದನ್ನು ಪತ್ತೆಹಚ್ಚಿದ್ದಾರೆ. ಚೆನ್ನಯ್ಯನಿಂದಲೇ ಕಾಯಕಕ್ಕೆ ಮಹತ್ವ ಬಂದಿದೆ ಎಂದು ಹೇಳುವ ವಿಮರ್ಶಕರ ಮಾತು ನಾವು ಆ ಪಾತ್ರದಲ್ಲಿನ ವ್ಯಕ್ತವಾಗುವ ಮೌಲ್ಯಗಳು ಎಂದು ತಿಳಿದುಕೊಳ್ಳಬೇಕು ಎಂಬುವುದೇ ವಿಮರ್ಶಕರ ಅಭಿಪ್ರಾಯವಾಗಿದೆ.

ವ್ಯಾಸ ದೇಶಪಾಂಡೆಯವರು ರಚಿಸಿರುವ 'ಇವ ನಮ್ಮವ' ನಾಟಕ ಕುರಿತು ಪ್ರಜಾವಾಣಿಯ ಸಾಪ್ತಾಹಿಕ 'ಪುಸ್ತಕ ಪ್ರಪಂಚ' - ವಿಚಾರಕ್ಕೆ ಬರೆದ ಕೃಷ್ಣಮೂರ್ತಿ ಹನೂರುರವರ ವಿಮರ್ಶಾ ಲೇಖನವು ಬಸವಣ್ಣನವರು ಬಾಗೇವಾಡಿ ಅಗ್ರಹಾರದಲ್ಲಿ ಜನಿವಾರ ಕಿತ್ತು ಹಾಕಿದ ಸಂದರ್ಭ ಮತ್ತು ಬಸವಣ್ಣನವರ ಅಂದಿನ ಮನೋಭಾವ ಕಲ್ಯಾಣದಲ್ಲಿ ಬಿಜ್ಜಳ ಅರಮನೆಯನ್ನು ಬಿಟ್ಟು ಅನುಭವಮಂಟಪಕ್ಕೆ ಬರಲು ಕಾರಣವಾಯಿತು. ಅನುಭವಮಂಟಪ ಮತ್ತು ಬಸವಣ್ಣನವರ ಜೀವನದಲ್ಲಿನ ಸಮಸ್ಯೆಗಳು ಈ ಅಂಶಗಳನ್ನು ವಿಮರ್ಶಕರು ಎಳೆ-ಎಳೆಯಾಗಿ ವಿವರಿಸಿದ್ದಾರೆ.

ಈ ನಾಟಕದ ಅಂತರದಲ್ಲಿ ಹುದುಗಿದ ಭಕ್ತಿ ಆಚರಣೆಯಲ್ಲಿ ಶಿವಶರಣರಿಗಿದ್ದ ಶ್ರದ್ಧೆಗೆ ಕೆಲವು ಸಮಸ್ಯೆಗಳಿದ್ದವು. ಸಂವಾದದಲ್ಲಿ ಶರಣರಲ್ಲಿ ವಿರೋಧ ತಾತ್ವಿಕ ಭಿನ್ನಾಭಿಪ್ರಾಯ ಮತ್ತು ಅಲ್ಲಮಪ್ರಭು ಶೂನ್ಯ ಸಿಂಹಾಸನವನ್ನೇರುವುದಕ್ಕೂ ಇವರ ವಚನಕಾರರಲ್ಲಿ ವಿರೋಧವಿತ್ತು ಎಂಬುವುದನ್ನು ಉಲ್ಲೇಖ ಮಾಡಿದ್ದಾರೆ.

ಈ ನಾಟಕದ ಆರಂಭದ ದೃಶ್ಯಗಳ ಅನುಭವಮಂಟಪದಲ್ಲಿ ಶರಣರು ಮತ್ತು ಗಂಗಾಂಬಿಕೆಯ ವಿವರಗಳು ಬರುತ್ತವೆ. ಕಳ್ಳನಾದ ಕನ್ನಮಾರಿಗಾಗಿ ಹುಡುಕಾಟ, ಗಂಗಾಂಬಿಕೆ, ಕನ್ನಮಾರಿ

ಮತ್ತು ಬಸವಣ್ಣನವರ ಸಂಭಾಷಣೆ ಮುಖ್ಯವಾಗಿ ಕಾಣಿಸಿಕೊಂಡಿದೆ. ಗಂಗಾಂಬಿಕೆಗೆ ಬಂದಿರುವ ಒಡವೆ, ವಸ್ತ್ರ, ಆಭರಣಗಳು ಯಾರು ಕೊಟ್ಟಿದ್ದು ಅವನ್ನು ಕದಿಯಲು ಪ್ರಯತ್ನಪಟ್ಟಿರುವುದು ಕನ್ನಮಾರನ ಕಳ್ಳತನವಲ್ಲ. ಸಂಪತ್ತು ಒಬ್ಬರಲ್ಲಿಯೇ ಶೇಖರಣೆಯಾಗಬಾರದು ಅದು ಸಮವಾಗಿ ಹಂಚಿ ಹೋದಾಗ ಮಾತ್ರ ಬಡತನ-ಶ್ರೀಮಂತಿಕೆಯ ನಡುವೆ ತಾರತಮ್ಯ ಇರಲಾರದು ಎಂಬುದು ಬಸವಣ್ಣನವರ ವಾದ. ಬಸವಣ್ಣನವರ ವ್ಯಕ್ತಿತ್ವದ ಔದಾರ್ಯವನ್ನು ಪ್ರತಿಬಿಂಬಿಸುವುದರೊಂದಿಗೆ ನಾಟಕ ಮುಕ್ತಾಯವಾಗುತ್ತದೆ.

ಸೃಜನಶೀಲತೆಗೆ ವಚನ ಸಾಹಿತ್ಯ ಒಂದು ಮಾದರಿ ಇದು ತನ್ನ ಗರ್ಭದಲ್ಲಿ ಅದೆಷ್ಟೋ ಸೃಜನಶೀಲ ಕೃತಿಗಳಿಗೆ ಆಗರವಾಗಿದೆ ಎಂಬುವುದಾಗಿ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಕೃಷ್ಣಮೂರ್ತಿ ಹನೂರುರವರು ಬಸವಣ್ಣನವರ ಜನನ ಕಾಲದ ಬಗ್ಗೆ ನಿಖರವಾಗಿ ಮಾಹಿತಿ ಇಲ್ಲದೆ ಅನೇಕ ಲೇಖಕರು ಬರೆ ಕಲ್ಪನೆ ಊಹೆ ಮೇಲೆ ಚಿತ್ರಿಸಿರುವ ರೀತಿಯು ಈ ನಾಟಕವು ಅದಕ್ಕೆ ಹೊರತಾಗಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಈ ನಾಟಕದಲ್ಲಿ ಇನ್ನೊಂದು ಮುಖ್ಯ ಬೆಳವಣಿಗೆ ಏನೆಂದರೆ ಕನ್ನಮಾರಿಯನ್ನು ಅವನ ಮೂಲವೃತ್ತಿಯಾದ ಕಳ್ಳತನವನ್ನು ಬಿಡಿಸಿ ಅವನ ಮನಸ್ಸನ್ನು ಪರಿಶುದ್ಧಗೊಳಿಸಿ ಶರಣನನ್ನಾಗಿ ಮಾಡಿರುವುದು ನಾಟಕದ ಮುಖ್ಯ ತಿರಳು. ಉರಿಲಿಂಗಪೆದ್ದಿ ನನ್ನಯ್ಯರು ಮನಸ್ಸನ್ನು ಬದಲಿಸಿ ಶ್ರೇಷ್ಠ ಶರಣರನ್ನಾಗಿ ಮಾಡಿದರು ಎನ್ನುವಲ್ಲಿ ಪರಿವರ್ತನಾ ಸಮಾಜದ ರೂಪುಗೊಳ್ಳುವಿಕೆ ಮಹತ್ತರವಾದುದು ಎಂದು ಅಭಿಪ್ರಾಯಪಡುತ್ತಾರೆ.

ವಚನ ಸಾಹಿತ್ಯವು ಕ್ರಾಂತಿಯಾಗಿ ಚಳುವಳಿಯಾಗಿ ತನ್ನ ವಿಸ್ತಾರವಾದ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಈ ಎಲ್ಲಾ ಕ್ಷೇತ್ರದಲ್ಲಿ ಜನಸಾಮಾನ್ಯರು ಸಮನತೆಯನ್ನು ಸಾಧಿಸಬೇಕೆಂದು ಪಟ್ಟ ಪ್ರಯತ್ನಗಳೆಲ್ಲವು ವಚನವಾಗಿ ರೂಪ ತಾಳಿ ಅದರ ಅಂತರಂಗ ರೂಢಿ-ಸಂಪ್ರದಾಯಗಳ ಬಲವಾಗಿ ಬೇರೂರಿದ ಸಂದರ್ಭ ಆ ಕಾಲವಾಗಿತ್ತು. ಅದರ ವಿರೋಧ ಧ್ವನಿ ಎತ್ತಿದೆ ವಚನ ಸಾಹಿತ್ಯ. ಹಾಗಾಗಿ ಇಂತಹ ಕಠಿಣವಾದ ವಸ್ತು ಹಲವಾರು ಲೇಖಕರಿಗೆ ಹೊಸತನ್ನದ ಸಾಹಿತ್ಯ ಸೃಷ್ಟಿಗೆ ಪ್ರೇರಣೆ ನೀಡಿತು. ಅದರಲ್ಲಿ ವಿಚಾರಗಳು ವಿಭಿನ್ನವಾಗಿ ಶೋಧನಾ ಕಾರ್ಯದಲ್ಲಿ ನಿಂತಿರುವುದು ಲೇಖಕರು ಗಮನಿಸಿರುವುದರಿಂದಲೇ ಈ ಸಾಹಿತ್ಯ ಭಾಗಕ್ಕೆ ಹೆಚ್ಚಿನ ಗಮನ ನೀಡಿದ್ದಾರೆ ಎಂಬುವುದು ಕಂಡುಬರುತ್ತವೆ. ಹೀಗಾಗಿ ಬಸವಣ್ಣನವರ ಜೀವನ ಕುರಿತು ಬಂದಿರುವ ಸಾಹಿತ್ಯ ಪ್ರಕಾರದ ಗಣನೆಗೆ ತೆಗೆದುಕೊಂಡರೆ ಇಷ್ಟೊಂದು ಪ್ರಮಾಣದಲ್ಲಿ ಯಾವುದೇ ವ್ಯಕ್ತಿಯ ಕುರಿತು ಮೂಡಿಬಂದಿಲ್ಲ ಎಂಬುದು ಮನಗಾಣಬಹುದು.

ಬಸವಣ್ಣನವರ ಪ್ರಭಾವದಿಂದ ಯಾವ ಆಧುನಿಕ ಕವಿ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಏಕೆಂದರೆ, ಅವರ ಜೀವನ, ಬದುಕಿದ ರೀತಿ, ನಡೆದುಕೊಂಡ ನಡೆ, ಅವರು ರಚಿಸಿದ

ಸಾಹಿತ್ಯ ಇವತ್ತಿಗೂ ಪ್ರೋತ್ಸಾಹಿತವಾಗಿದೆ. ಬಸವಣ್ಣನವರು ಬದುಕಿದ ಸಂದರ್ಭದಲ್ಲಿ ಸಾಂದರ್ಭಿಕ ಹಾಗೂ ಸಾರ್ವತ್ರಿಕ ಮೌಲ್ಯಗಳು ಪ್ರತಿಪಾದನೆ ಕೃಷಿ ಇತ್ತು. ಆದರೆ ಬಸವಣ್ಣನವರು ಹೊತ್ತು ಕೊಟ್ಟಿದ್ದು ಸಾರ್ವತ್ರಿಕ ಮೌಲ್ಯಗಳ ಕಡೆಗೆ, ಬಸವಣ್ಣನವರು ಒಂದು ಮಹಾನ್ ಸಂಸ್ಕೃತಿಗೆ ವಿರೋಧವನ್ನು ಸೂಚಿಸುತ್ತಾ ಜನಸಾಮಾನ್ಯರ ಆಶೋತ್ತರಗಳಿಗೆ ಸ್ಪಂದಿಸಿದರು. ವರ್ಣವ್ಯವಸ್ಥೆ, ವರ್ಗವ್ಯವಸ್ಥೆ ಹಾಗೂ ಲಿಂಗ ವ್ಯವಸ್ಥೆಗಳ ವಿರುದ್ಧ ಬಸವಣ್ಣನವರು ತಾಳಿದ ನಿಲುವು ಅತ್ಯಂತ ಮಹತ್ವದ್ದಾಗಿದೆ. ಶುದ್ಧಿಕ್ರಿಯೆ ವ್ಯಷ್ಠಿ ಹಾಗೂ ಸಮಷ್ಠಿಗಳೆರಡು ಏಕಕಾಲದಲ್ಲಿ ನಡೆಯಬೇಕೆಂಬುದು ಅವರ ಆಶಯವಾಗಿತ್ತು. ಆದ್ದರಿಂದ ಬಸವಣ್ಣನವರ ಒಟ್ಟಾರೆ ಜೀವನವನ್ನು ಸಾಧನೆಯನ್ನು ಸಾಮಾಜಿಕ, ಧಾರ್ಮಿಕ, ಚಾರಿತ್ರಿಕ ಮುಂತಾದ ಕ್ಷೇತ್ರಗಳಲ್ಲಿ ಅಧ್ಯಯನ ಮಾಡಬಹುದಾಗಿದೆ.

ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯದ ಕಾದಂಬರಿ ಪ್ರಕಾರದಲ್ಲಿ ಬಸವಣ್ಣನವರ ಕುರಿತು ಅವರ ಜೀವನಕ್ಕೆ ಸಂಬಂಧಪಟ್ಟ ಸಮಗ್ರ ಮಾಹಿತಿಯನ್ನು ನಡುಗನ್ನಡ ಸಾಹಿತ್ಯದ ಕೆಲವು ಲೇಖಕರು ಕಾವ್ಯರೂಪದಲ್ಲಿ ಹಿಡಿದಿಟ್ಟಿದ್ದಾರೆ. ಹರಿಹರನು 'ಬಸವರಾಜದೇವರಗಳೆ' ಭೀಮಕವಿಯ 'ಬಸವ ಪುರಾಣ' ಲಕ್ಕಣ್ಣ ದಂಡೇಶನ 'ಶಿವತತ್ವಚಿಂತಾಮಣಿ', ಷಡಕ್ಷರದೇವನ 'ಬಸವರಾಜ ವಿಜಯಂ' ಸಿಂಗರಾಜನ 'ಸಿಂಗರಾಯ ಪುರಾಣ' ಈ ಮೇಲಿನ ಎಲ್ಲಾ ಗ್ರಂಥಗಳು ಕಾವ್ಯ ರೂಪದಲ್ಲಿದೆ. ಈ ಗ್ರಂಥಗಳ ಕುರಿತು ಲೇಖನಗಳು, ಸಂಶೋಧನೆಗಳು ನಡೆದಿವೆ. ಆದರೆ ನನ್ನ ಪ್ರಬಂಧದ ವ್ಯಾಪ್ತಿಯ ಹಿನ್ನೆಲೆಯಲ್ಲಿ ಕಾದಂಬರಿ ಸಾಹಿತ್ಯದಲ್ಲಿ ರಚನೆಗೊಂಡ ಡಾ. ಪುಟ್ಟಸ್ವಾಮಯ್ಯ ನವರ 'ಕ್ರಾಂತಿಕಲ್ಯಾಣ' ಎಂಬ ಆರು ಸಂಪುಟಗಳು, ಎಚ್. ತಿಪ್ಪೇರುದ್ರಸ್ವಾಮಿಯವರ ಕರ್ತಾರನ ಕಮ್ಮಟ ಡಾ. ಹನ್ನೆರಡುಮಠರವರ ಎಂಟು ಸಂಪುಟಗಳಲ್ಲಿ ಕಾದಂಬರಿಗಳು ಮೂಡಿಬಂದಿದೆ. ಈ ಮೇಲಿನ ಎಲ್ಲಾ ಕಾದಂಬರಿಗಳ ವಿಷಯ ವಸ್ತುಗಳ ಕುರಿತು ಅಲ್ಪಸ್ವಲ್ಪ ಪ್ರಮಾಣದ ಬಿಡಿಲೇಖನಗಳ ವಿಮರ್ಶೆಗಳು ಅಲ್ಲಲ್ಲಿ ಮೂಡಿಬಂದಿವೆ. ಅವುಗಳನ್ನೆಲ್ಲಾ ಈ ಕೆಳಗಿನಂತೆ ಚರ್ಚಿಸಲಾಗಿದೆ.

ಮೊದಲಿಗೆ ಬಿ. ಪುಟ್ಟಸ್ವಾಮಯ್ಯನವರು ರಚಿಸಿದ 'ಕ್ರಾಂತಿಕಲ್ಯಾಣ ಎಂಬ ಕಾದಂಬರಿಯಲ್ಲಿ ಮೂಡಿಬಂದ ಬಸವಣ್ಣ' ಎಂಬ ವಿಮರ್ಶ ಗ್ರಂಥವನ್ನು ಬಸವತತ್ವ ಪ್ರಸಾದ ಹಾಗೂ ಸಂಶೋಧನ ಕೇಂದ್ರ ಹೊರತಂದಿರುವ ಈ ಗ್ರಂಥದ ಸಂಪಾದಕರಾದ ಡಾ. ಆರ್. ಶಿವಣ್ಣ ಹಾಗೂ ಡಾ. ಬಿ.ಎಸ್. ಸ್ವಾಮಿ ಇವರು ಈ ಆರು ಸಂಪುಟಗಳ ಕುರಿತು ವಿಮರ್ಶೆಯನ್ನು ಮಾಡುತ್ತಾ ಕಾದಂಬರಿಕಾರರು ಸೃಷ್ಟಿಸಿದ ಹೊಸ ಸನ್ನಿವೇಶಗಳು ದಾಖಲೆ ನೀಡಿದ ಸಾಕ್ಷಿಗಳು ಇವೆಲ್ಲವುಗಳನ್ನು ಕಾದಂಬರಿಕಾರರ ಶ್ರಮ ಮತ್ತು ಶ್ರದ್ಧೆ ಎದ್ದು ಕಾಣುತ್ತಿರುವುದನ್ನು ಗುರುತಿಸಿದ್ದಾರೆ. ಈ ಕಾದಂಬರಿಯ ಮೊದಲನೆಯ ಸಂಪುಟವಾದ "ಉದಯರವಿ" ಎಂಬ ಭಾಗದಲ್ಲಿ ಜ್ಞಾನ ವೈರಾಗ್ಯಗಳ ಅಪರಂಜಿಯಾದ ಬಸವಣ್ಣ ನೀಲಾಲೋಚನೆ, ಗಂಗಾಂಬಿಕೆ, ಲಾವಣ್ಯವತಿಯರ ನೃತ್ಯದರ್ಶನವು ಕಾದಂಬರಿ ಬೆಳವಣಿಗೆಗೆ ಪೂರಕ ಎಂದು ಹೇಳುತ್ತಾರೆ. "ನನ್ನನ್ನು ಈ ಬಂಧನದಲ್ಲಿ ಹಾಕಿ ಕಲ್ಯಾಣಕ್ಕೆ ಕಳಿಸುವಲ್ಲಿ ಗುರುಗಳ ಉದ್ದೇಶವೇನು"[೮] ಎಂದು ಜಾತವೇದ

ಮುನಿಗಳನ್ನು ಪ್ರಶ್ನಿಸುವ ಬಸವಣ್ಣನವರ ಮನೋಭಾವನೆಯನ್ನು ಗುರುತಿಸಿದ್ದಾರೆ. ತೈಲಪ ಚಕ್ರವರ್ತಿಯು ಗ್ರೀಕ್ ದೇಶದ ಮೆಸಡೋನಿಯ ರಾಜಕುಲದಲ್ಲಿ ಹುಟ್ಟಿದ ಅಫ್ರೊಡೈಟ್‌ಳ ಸಂಬಂಧ ಕಾಮೇಶ್ವರಿ ಮತ್ತು ಕೀರ್ತಿವರ್ಮನ ಸಂಬಂಧಗಳಲ್ಲಿ ಅಳಿಸಿರುವುದನ್ನು ಪತ್ತೆ ಹಚ್ಚಿದ್ದಾರೆ. ಬಲದೇವನ ಅಂತ್ಯಕ್ರಿಯೆಗಳು, ಬಲದೇವನ ಮಗಳಾದ ಗಂಗಾಂಬಿಕೆ-ಬಸವಣ್ಣನವರ ಮದುವೆ ಇವು ಕಲ್ಯಾಣದಲ್ಲಿ ನಿಲ್ಲಬಲ್ಲ ಬಸವಣ್ಣ ಮುಖ್ಯ ನೆಲೆಯಾಗುತ್ತವೆ. ಪ್ರಜಾಮಂಡಲದಲ್ಲಿ ನಿಧಿಯ ಬಗ್ಗೆ ಬಿಜ್ಜಳನು ನೀಡಿದ ವಿವರಣೆ ಬಸವಣ್ಣನವರ ಕಾಯಕದ ಶ್ರದ್ಧೆಯನ್ನು ಎತ್ತಿತೋರಿಸುತ್ತದೆ. ಬಿಜ್ಜಳನ ತಂಗಿಯಾದ ನೀಲಾಲೋಚನೆ, ಬಸವಣ್ಣನವರ ಮೇಲೆ ಪ್ರೇಮಾಂಕುರ ಮತ್ತು ಗಂಗಾಂಬಿಕೆ ಮತ್ತು ನಾಗಾಲಾಂಬಿಕೆಯರು ಕೂಡಿ ಬಸವಣ್ಣನವರನ್ನು ಮನಒಲ್ಯೆಸಿ ಮದುವೆಯಾಗಿಸುವ ಸಂದರ್ಭದೊಂದಿಗೆ ಈ ಮೊದಲನೆಯ ಸಂಪುಟದ ಮುಕ್ತಾಯವಾಗುತ್ತದೆ.

ಈ ಸಂಪುಟದ ಎರಡನೇ ಕಾದಂಬರಿಯಾದ 'ರಾಜ್ಯಪಾಲ' ಭಾಗದಲ್ಲಿ ತೈಲಪನು ವಿಶ್ರಾಂತಿಗಾಗಿ ಗೋಕರ್ಣದಲ್ಲಿರುವಾಗ ಅವನ ಪ್ರೇಯಸಿ ಅಫ್ರೊಡೆಟ್ ಸಮುದ್ರದಲ್ಲಿ ಸೆಳೆವಿಗೆ ಸಿಕ್ಕು ಒಬ್ಬ ಓರ್ವ ಸನ್ಯಾಸಿಯಿಂದ ರಕ್ಷಿತಳಾಗುತ್ತಾಳೆ ಮತ್ತು ತೈಲಪ ಮತ್ತು ಸಾಮಂತ ದೊರೆಗಳು ಕೂಡಿಕೊಂಡು ಬಿಜ್ಜಳನ ಮೇಲೆ ದಂಡೆತ್ತಿ ಹೋಗುವ ವಿಚಾರ ಇಲ್ಲಿ ಮೂಡಿಬಂದಿದೆ. ೬ನೇ ವಿಕ್ರಮಾದಿತ್ಯನ ನಿಧಿ ಪ್ರಸಂಗ, ಬಸವಣ್ಣನು ತೈಲಪನ ಭೇಟಿ ಇವು ಈ ಭಾಗದಲ್ಲಿ ರಾಜ್ಯ ತಾಂತ್ರಿಕ ರೂಪದಲ್ಲಿ ಎಣೆಯಲ್ಪಟ್ಟಿವೆ. ಬಸವಣ್ಣನು ಗೋಕರ್ಣಕ್ಕೆ ಬಂದಾಗ ತೈಲಪ ಇಲ್ಲದಿರುವುದು. ಹಂಪಿಯಲ್ಲಿ ಇರುವ ವಿಷಯವನ್ನು ತಿಳಿದು ಅಲ್ಲಿಗೆ ಅಣಿಯಾಗುವುದು ತೈಲಪನಿಗೆ ತಾನು ಬಂದ ವಿಷಯವನ್ನು ಮುಟ್ಟಿಸಿ, ರಾಯಭಾರಿಯ ಸಂಧಾನದ ಕಾರ್ಯ ಯಶಸ್ವಿಯಾಗಿ ನಿರ್ವಹಿಸುತ್ತಾರೆ. ಮುಂದೆ ಬಿಜ್ಜಳನು ಈ ಕಾರ್ಯದ ಗೌರವಾರ್ಥವಾಗಿ ಬಸವಣ್ಣನವರನ್ನು ಬನವಾಸಿಯ ರಾಜ್ಯಪಾಲನನ್ನಾಗಿ ಮಾಡುತ್ತಾನೆ. ಅಲ್ಲಿ ಬಸವಣ್ಣ ಕೈಗೊಂಡ ಜನಪ್ರಿಯ ಕಾರ್ಯಕ್ರಮಗಳಿಂದಾಗಿ ಆತನ ಹೆಸರು ಮತ್ತಷ್ಟು ಉತ್ತುಂಗ ಶಿಖರಕ್ಕೆ ಏರುತ್ತದೆ. ಮುಂದೆ ಆ ವೃತ್ತಿಗೆ ರಾಜೀನಾಮೆಯನ್ನು ಕೊಟ್ಟು ಹಿಂದಿರುಗುತ್ತಾನೆ. ಅಂತಹ ಸಂದರ್ಭದಲ್ಲಿ ನಾಗಲಾಂಬಿಕೆಯು ಬಸವಣ್ಣನವರನ್ನು ಪ್ರಶಂಸಿರುವುದು ಈ ರೀತಿಯಾಗಿದೆ. ಇದಕ್ಕೆ ಪ್ರತಿಭಟನೆ ಬಂದಿದ್ದು ಅನೀರಿಕ್ಷಿತ ಮೂಲದಿಂದ ಬಂದ ಬಸವೇಶ. ಇದು ತೈಲಪ ಆಶಯಕ್ಕೆ ವಿರುದ್ಧವಾದದ್ದೆಂದು ಪ್ರತಿಭಟಿಸಿ ರಾಜ್ಯಪಾಲ ಹುದ್ದೆಗೆ ರಾಜೀನಾಮೆ ನೀಡಿದನು. "ಅಧಿಕಾರ, ಒತ್ತಡ, ವಾತ್ಸಲ್ಯ ಹೇಗೆ ಯಾವ ಬಗೆಯಿಂದ ಪ್ರಯತ್ನಿಸಿದರು. ಬಿಜ್ಜಳನಿಗೆ ಬಸವಣ್ಣನವರನ್ನು ಒಪ್ಪಿಸಲು ಆಗಲಿಲ್ಲ. ರಾಜ್ಯ ಧೃವದ ಬೆದರಿಕೆಯ ಫಲ ನೀಡಲಿಲ್ಲ. ತಮ್ಮ ನಿರ್ಧಾರವನ್ನು ನಾಗಲಾಂಬಿಕೆ ಪ್ರಶ್ನೆ ಪ್ರಶಂಸಿಸಿದಳು. ಅವಳ ಕೈಯಲ್ಲಿರುವ ಜ್ಯೋತಿರ್ಮಯ ನಕ್ಷತ್ರದಂತೆ ಬೆಳಗಿತು"[೯] ಎಂದು ಅಭಿಪ್ರಾಯಪಡುತ್ತಾರೆ.

ಈ ಸಂಪುಟದ ಮೂರನೇ ಕಾದಂಬರಿಯಾದ 'ಕಲ್ಯಾಣೇಶ್ವರ'ದಲ್ಲಿ ತೈಲಪನ ಮರಣವಾದ ನಂತರ ಅವನ ಗಣಕೆಯರು ಕಾಶ್ಮೀರದ ರಾಜನಾದ ಮಾರಸಿಂಹನೊಂದಿಗೆ ಮದುವೆಯಾದದ್ದು

ಇದನ್ನು ಕಂಡು ರಾಜ್ಯಸಭೆಗೆ ದೂರನ್ನು ಕೊಟ್ಟದ್ದು ಬಸವಣ್ಣ ಮತ್ತು ಮಾದರಸವನ್ನೊಳಗೊಂಡ ಮಾಯ ಪೀಠ ರಚನೆ ಅಲ್ಲಿ ಬಸವಣ್ಣನವರಿಂದ ಮಾರಶಿವನ ತೀರ್ಪು. ಇದು ಬಸವಣ್ಣನವರು ಸಾಮಾಜಿಕ ಸುಧಾರಣೆಗೆ ಕಾರಣವಾದ ಈ ಅಂಶವನ್ನು ವಿಮರ್ಶಕರು ಗುರುತಿಸಿದ್ದಾರೆ.

ತದನಂತರ ಅವರ ಮಾಮನಿಗೆ ಬರುವಂತಹದ್ದು. ಪ್ರೇಮಾವತಿಯ ಸಾವಿನಿಂದ ಮನನೊಂದ ಪಾಟಲಿಕೆಯು ಅನಾವರಣವನ್ನು ತ್ಯಜಿಸಿ ಸಾವನ್ನು ಬರಮಾಡಿ ಕೊಡುವಂತಹ ಒಂದು ದೃಶ್ಯ ಅವರಿಬ್ಬರ ಸ್ನೇಹಿತರಲ್ಲಿರುವಂತಹ ನಿಸ್ವಾರ್ಥ ಸ್ನೇಹವೇ ಇದಕ್ಕೆ ಕಾರಣ. ಜಗದೇಕಮಲ್ಲರು ಸಿಂಹಸನಾಹರಣ ಕಾಮೇಶ್ವರಿಯು ತನ್ನ ಮೈದುನನಿಂದ ಕ್ಷೇತ್ರಜ ಪುತ್ರನನ್ನು ಪಡೆದ ವಿಚಾರ ಬಿಜ್ಜಳನು ಅದನ್ನು ತಿರಸ್ಕರಿಸಿದ್ದು ಜಗದೇಕ ಮಲ್ಲನಿಂದ ಕಾಮೇಶ್ವರಿ ಸಂದರ್ಶನ ಅಲ್ಲಿ ಹೊಸ ಸೇವಕಿಯಂತೆ ಕಾಮೇಶ್ವರಿಯು ನರ್ತಿಸಿದರೂ ಜಗದೇಕಮಲ್ಲ ಅವನನ್ನು ಗುರುತಿಸುವ ಬಗೆ ಒರೆಗಚ್ಚಿ ನೋಡಿದ್ದಾರೆ. ಕರ್ಣದೇವನು ಕುಸುಮಾವಳಿಯನ್ನು ಪಡೆಯಲು ಬಯಸಿದ ಸಂದರ್ಭದಲ್ಲಿ ಶೀಲವಂತನ ರಕ್ಷಣೆ. ನಮ್ಮ ಭಾರತದ ಸ್ತ್ರೀಯರಿಗಿಂತ ರಕ್ಷಣೆಯನ್ನು ಇಲ್ಲಿ ಪ್ರತಿಬಿಂಬಿಸುತ್ತದೆ.

ಈ ಕಾದಂಬರಿಯಲ್ಲಿ ಮತ್ತೊಂದು ಮುಖ್ಯವಾದಂತಹ ಅಂಶವನ್ನು ವಿಮರ್ಶಕರು ಗುರುತಿಸಿದ್ದಾರೆ. "ಸಂಗಮದೇವನ ಭಕ್ತಿಭಂಡಾರವನ್ನು ಸೂರೆ ಮಾಡಿದ ನೀನು ಕಳ್ಳನಾದರೆ ನಿನ್ನ ಮನೆಗೆ ಬಂದ ಬಿಲ್ಲಗಳನ್ನು ಮತ್ತೆ ಯಾರು ಅಲ್ಲ ಬಸವಣ್ಣ ಬೆಳ್ಳಗಾವಿಯ ಗುಣಗಳ್ಳಯೋಗಿ"[೧೦] ಎಂಬ ಮಾತುಗಳು ಅಲ್ಲಮಪ್ರಭುವಿನ ವ್ಯಕ್ತಿತ್ವ ಅವರ ದರ್ಶನದ ಅನಾವರಣವಾಗಿದೆ.

ಈ ಸಂಪುಟದ ನಾಲ್ಕನೇ ಕಾದಂಬರಿಯಾದ 'ನಾಗಬಂಧ'ದಲ್ಲಿ ಕಾಮೇಶ್ವರಿ ತನ್ನ ಮಗನಾದ ಕೀರ್ತಿವರ್ಮನು ಸಾವಿನಿಂದ ಹೊರಗಾಗಿ ಜಗದೇಕಮಲ್ಲನನ್ನು ಶರೀರದಿಂದ ಬಿಡಿಸಲು ಹಗ್ಗಳ ಮತ್ತು ಬ್ರಹ್ಮಶಿವನನ್ನು ಕಲ್ಯಾಣಕ್ಕೆ ಕಳುಹಿಸಿದ ಸಂದರ್ಭದಲ್ಲಿ ಅಲ್ಲಿ ನಡೆದ ಘಟನಾವಳಿಗಳನ್ನು ವಿವರಣೆಯನ್ನು ಅತ್ಯಂತ ವಸ್ತುನಿಷ್ಠವಾಗಿ ವಿಮರ್ಶಿಸಿದ್ದಾರೆ" ಈ ಸಂಪುಟದ ಐದನೇ ಕಾದಂಬರಿಯಾದ 'ಮುಗಿಯದ ಕನಸು' ಕಾದಂಬರಿಯಲ್ಲಿ ಬಿಜ್ಜಳ ತನ್ನ ಮಗನಾದ ಸೋಮೇಶ್ವರನಿಗೆ ರಾಜ್ಯ ಪಟ್ಟಾಭಿಷೇಕ ಮಾಡುತ್ತಾನೆ. ನಾರಾಯಣ ಕ್ರಮಿತನು ಕಾಮೇಶ್ವರಿ ಪಡೆದ ಕ್ಷಾತ್ರಪುತ್ರನ ವಿಚಾರ ಅದಕ್ಕೆ ಶರಣರ ಅಸಮ್ಮತಿ ಈ ಎಲ್ಲಾ ವಿಚಾರ ಗೊತ್ತಿದ್ದರು. ಬಿಜ್ಜಳನು ಕಾಮೇಶ್ವರಿಯನ್ನು ಆ ಕಾರ್ಯಕ್ರಮಕ್ಕೆ ಆಹ್ವಾನಿಸಿರುವುದು ಒಂದು ರಾಜಕೀಯ ಕುತಂತ್ರವೇ ಸರಿಯೆಂದು ವಿಮರ್ಶಕರೂ ಅಭಿಪ್ರಾಯಪಡುತ್ತಾರೆ. ಕರ್ಣದೇವನ ಅಸಹಾಯಕತೆ, ಹೊಗೆಯಾಗಿ ಹಬ್ಬಲು ಶೀಲವಂತ ಮತ್ತು ಅರಳಯ್ಯನ ಪ್ರಮುಖವಾಗಿ ಪ್ರಸ್ತಾಪಿಸಿದ್ದಾರೆ. ಇಲ್ಲಿ ಲಾವಣ್ಯವತಿ ಅರಳಯ್ಯನನ್ನು ಒಪ್ಪಿಸುವ ರೀತಿ ಅಂದಿನ ಹೆಣ್ಣು ಬಯಸುವ ಸಾಮಾಜಿಕ ಪರಿವರ್ತನೆ ಸಂಕೇತ ಎಂಬುವುದು ಉಲ್ಲೇಖಗೊಂಡಿದೆ. ಬಸವಣ್ಣನವರು ಕಲ್ಯಾಣವನ್ನು ತೊರೆಯುವ ಸಂದರ್ಭ ಅದಕ್ಕೆ ಕಾರಣವಾಗಿರುವ ಸಂಗತಿಗಳನ್ನು ಕಟ್ಟಿಕೊಡುತ್ತಾ ಸಮಾಜ ಸುಧಾರಣೆ ಮಾಡಿ ಹೊರಟ ಜನರಿಗೆ ಸಮಾಜದ ಉನ್ನತ ರೀತಿಯಲ್ಲಿ ಕೂಡುವ ರೀತಿ

ಭಿನ್ನವಾಗಿದೆ. ಈ ಸಂಪುಟದ ಆರನೇ ಕಾದಂಬರಿಯಾದ 'ಕ್ರಾಂತಿಕಲ್ಯಾಣ' ಬಿಜ್ಜಳನು ಬಸವಣ್ಣನವರ ಮನಪರಿವರ್ತಿಸುವ ರೀತಿ ಸೋಮೇಶ್ವರನ ಪಟ್ಟಾಭಿಷೇಕಕ್ಕೆ ಕಾಮೇಶ್ವರಿಯ ಮಗನ ಹಿಂದೆ ಬರುವ ದೃಶ್ಯ ವರ್ಣಸಂಕರಕ್ಕೆ ನೇಮಕವಾದ ಸಮಿತಿಯಿಂದ ಹರಳಯ್ಯ ಮಾದರಸ, ಶೀಲವಂತನಿಂದ, ಮಾಧವತಿಯ ಶಿರಚ್ಛೇದನ ಇವೆಲ್ಲವುಗಳು ಕಲ್ಯಾಣದಲ್ಲಿ ಕ್ರಾಂತಿ ನಡೆಯಲು ಮಂಚಣ್ಣ ಕ್ರಮಿತ ನಾರಾಯಣಭಟ್ಟರ ಮಾತಿಗೆ ತಕ್ಕಂತೆ ಕುಣಿಯುವ ಸೋಮೇಶ್ವರ ಶರಣನಿಂದ ಬಿಜ್ಜಳನ ಕೊಲೆ ಕಲ್ಯಾಣದಲ್ಲಿ ರಕ್ತಸಿಕ್ತವಾದ ವಾತಾವರಣ ಇವು ಓದುಗರನ್ನು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವಂತೆ ಮಾಡುತ್ತವೆ. ಒಟ್ಟಾರೆಯಾಗಿ ಸೋಮೇಶ್ವರನು ಚಕ್ರವರ್ತಿಯಾಗಿ ಕಲ್ಯಾಣ ಸುಧಾರಣೆರಾಗಿ ಕೈಗೊಂಡ ಸುಧಾರಣೆಗಳೆಲ್ಲಾ ಕೈಗೂಡದೇ ಇದ್ದಾಗ ಅನ್ಯ ಸಾಮಂತರು ಆಕ್ರಮಣ ಬಸವಣ್ಣನ ಮಗನಾದ ಸಂಗಮನಾಥ, ಪ್ರಾಪ್ತ ವಯಸ್ಕನಾಗುವವರೆಗೂ ಜೀವಿಸಿದ್ದ ಗಂಗಾಂಬಿಕೆ ಅದಕ್ಕಿಂತ ಹೆಚ್ಚು ಕಾಲ ಬಾಳಿದ ನೀಲಾಂಬಿಕೆ ಈ ಮುಂತಾದ ವಿಷಯಗಳು ಕಲ್ಯಾಣದಲ್ಲಿ ದುರ್ಘಟನೆ ಸಂಭವಿಸಿ ತಿಳಿಯಾಗುವ ಕಾಲ ಬರಲೇ ಇಲ್ಲ ಎಂಬ ಮಾತು ವಿಮರ್ಶಕರು ನೊಂದು ನುಡಿಯುತ್ತಾರೆ ಬಿ. ಪುಟ್ಟಸ್ವಾಮಯ್ಯನವರು ಬರೆದಿರುವ ಕಾದಂಬರಿ 'ಕ್ರಾಂತಿಕಲ್ಯಾಣ'ವನ್ನು ಕುರಿತು ವಿಮರ್ಶಕರಾದ ಡಾ. ಆರ್. ಶಿವಣ್ಣನವರು ಕ್ರಾಂತಿ ಮತ್ತು ಬಸವಣ್ಣನವರ ಸಾಮಾಜಿಕ ಬದಲಾವಣೆ ನಡೆದಾಗ ಸಮಾಜದಲ್ಲಿ ವರ್ಣಸಂಕರಗಳು ಏರುಪೇರಾಗುವುದಕ್ಕಿಂತ ಲಿಂಗಸಮಾನತೆ ಆಗಬೇಕಾಗಿರುವುದು ಮುಖ್ಯವಾಗುತ್ತದೆ ಎನ್ನುತ್ತಾರೆ. ವಿಮರ್ಶಕರ ಈ ಮಾತು ಗಮನಾರ್ಹವಾಗಿದೆ.

**ಕರ್ತಾರನ ಕಮ್ಮಟ ಕಾದಂಬರಿಯಲ್ಲಿ ಮೂಡಿಬಂದ ಬಸವಣ್ಣ**

ಕರ್ತಾರನ ಕಮ್ಮಟ ಎಂಬ ಕಾದಂಬರಿಯನ್ನು ಬರೆದ ಎಚ್. ತಿಪ್ಪೇರುದ್ರಸ್ವಾಮಿಯವರು ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ಹಾಗೂ ಅವರು ಮಾಡಿದ ಸಮಾಜದ ಸುಧಾರಣೆಗೆ ಹೇಗೆ ಜನರ ಮನಸ್ಸನ್ನು ಪರಿಣಮಿಸಿತು ಎಂಬುದಕ್ಕೆ ಹಲವಾರು ಕಾರಣಗಳನ್ನು ಕಾಣಬಹುದಾಗಿದೆ. ಈ ಕಾದಂಬರಿ ಆರಂಭವಾಗುವುದೇ ಇಂಗಳೇಶ್ವರ ಗ್ರಾಮದ ಸುತ್ತಮುತ್ತಲಿನ ಪರಿಸರದೊಂದಿಗೆ ನಾಗಮ್ಮ ಹುಟ್ಟಿದ ಮಾದಲಾಂಬೆ ಮತ್ತೆ ಗರ್ಭಧರಿಸುವ ಎಂಬ ಸಂದರ್ಭದಲ್ಲಿ ಆದ ಶುಭ, ಶಕುನಗಳನ್ನು ವಿಮರ್ಶಕರಾದ ಡಾ. ಆರ್. ಶಿವಣ್ಣನವರು ವಿಮರ್ಶಕವಾಗಿ ಗುರುತಿಸಿದ್ದಾರೆ. ಅಕ್ಕನಾಗಮ್ಮನು ಐದು ವರ್ಷದಲ್ಲಿದ್ದಾಗಲೇ ಶಿವಸ್ವಾಮಿಯನೊಡನೆ ಮದುವೆ. ಆ ಮದುವೆಗೆ ಬಲದೇವ ಬಂದಿದ್ದು ಉಪನಯನ ವಿಧಿಗಳಲ್ಲಿ ಲಿಂಗ ತೆಗೆಯಲು ನಿರಾಕರಿಸಿದ್ದು ಸ್ವಲ್ಪ ದಿನದಲ್ಲಿಯೇ ಶಿವಸ್ವಾಮಿ ಮಾವನವರ ದೇಹಸ್ಥಿತಿ ಕ್ಷೀಣಿಸುತ್ತ ಕೊನೆ ಉಸಿರೆಳೆದರು. ಈ ಅಂಶಗಳು ಬಸವಣ್ಣನವರನ್ನು ಚಿಂತಿಸುವಂತೆ ಮಾಡುತ್ತವೆ. ಮುಂದೆ ಬಸವಣ್ಣನ ವಿದ್ಯಾಭ್ಯಾಸ ಲಿಂಗ ತೆಗೆಯಬೇಕೆಂಬುವ ವಿರೋಧ ಅಗ್ನಿಪೂಜೆಯ ಬಗ್ಗೆ ಅಸಮಾಧಾನ ಈ ಮುಂತಾದ ವಿಷಯಗಳಿಂದ ಬಸವಣ್ಣನವರು ಬ್ರಾಹ್ಮಣ ಸಮುದಾಯಕ್ಕೆ ನುಂಗಲಾರದ ತುತ್ತಾದರು. ಮುಂದೆ ಬಸವಣ್ಣನವರು ಸಂಗಮೇಶ್ವರಕ್ಕೆ ಬಂದಂತಹ ಸಂದರ್ಭದಲ್ಲಿ ಸಂಗಮನಾಥ ಗುರುಗಳು ಹೇಳಿದ

ಮಾತುಗಳು ಇಲ್ಲಿ ಉಲ್ಲೇಖಿಸಲೇಬೇಕಾಗುತ್ತದೆ. "ದಿಟ್ಟತನದ ನಿರ್ಧಾರವನ್ನು ಕೈಗೊಳ್ಳುವುದು ಮುಖ್ಯವಲ್ಲ, ಎಲ್ಲಾ ಹಂತಗಳಲ್ಲಿ ಪ್ರತಿಭಟನೆಯನ್ನು ಎದುರಿಸಬೇಕಾಗಬಹುದು. ಇಲ್ಲಿಯೇ ಆ ಶಕ್ತಿಗಳು ಇಲ್ಲದಿಲ್ಲ. ಅದಕ್ಕೆ ಅಂಜದೆ, ಅಳುಕದೆ ನುಗ್ಗುವ ಸತತ ಸಾಧನೆಬೇಕು"[೧೧] ಎಂದು ಎಚ್ಚರಿಸಿದ ನೀಲಕಂಠಶಾಸ್ತ್ರಿಗಳನ್ನು ಅವರಿಂದ ಕಟ್ಟುಕಳಿಸಿ ಬಸವ ಧರಿಸಿದ ಲಿಂಗಕ್ಕೆ ಸಂಸ್ಕಾರ ನೀಡಿ ಜ್ಞಾನದ ದೀಕ್ಷೆಯನ್ನು ಕೊಟ್ಟರು.

ಬಸವಣ್ಣ ಸಂಗಮಕ್ಕೆ ಬಂದ ಮೇಲೆ ಒಂದು ಅಗಾಧ ಘಟನೆ ನಡೆಯುತ್ತದೆ. ಮಾದರಸ ಲಿಂಗೈಕ್ಯನಾಗುತ್ತಾನೆ. ಆಗ ಬಸವಣ್ಣನವರು ಇಂಗಳೇಶ್ವರಕ್ಕೆ ಬರದೆ ಸಂಗಮನಾಥನಲ್ಲಿದ್ದು ಶ್ರದ್ಧಾಂಜಲಿಯನ್ನು ಅರ್ಪಿಸುತ್ತಾರೆ. ದಿನದಿನಕ್ಕೆ ಬಸವಣ್ಣನವರ ಬೆಳವಣಿಗೆ ಸರ್ವತೋಮುಖವಾಗುತ್ತ ಅವರಿಗೆ ಅತ್ಯಂತ ಮುಖ್ಯವಾಗಿರುವಂತಹದ್ದು ಸಾಹಿತ್ಯ ಹಂಬಲವು ಅಂಕುಶವಾಗತೊಡಗುತ್ತದೆ. ಇದು ಸಂಗಮೇಶನಿಗೆ ಇಷ್ಟವಾಗಿರಲಿಲ್ಲ. ಏಕೆಂದರೆ ನಮ್ಮ ಸಾಧನೆ ಬೆಳೆದು ನಮ್ಮ ವ್ಯಕ್ತಿತ್ವ ಹಿರಿದಾದಷ್ಟು ಹೆಚ್ಚಿನ ಪ್ರಭಾವವನ್ನು ಬಿಡಲು ಸಾಧ್ಯವಾಗುತ್ತದೆ ಎಂದು ಎಚ್ಚರಿಸಿರುವುದನ್ನು ಲೇಖಕರು ಗಮನಿಸಿದ್ದಾರೆ. ಶಿವಸ್ವಾಮಿ ಬಡವರಿಗೆ ಅನುಕೂಲವಾಗಬಲ್ಲ. ವೈದ್ಯಶಾಲಾ ಆರಂಭಿಸಿ ಅವರ ಹೆಸರು ಎಲ್ಲೆಡೆ ಅರಳಿತು. ಆ ಸಂದರ್ಭದಲ್ಲಿ ನಾಗಮ್ಮಗೆ ಹುಟ್ಟಿದ ಮಗುವಿಗೆ ಚೆನ್ನಬಸವಣ್ಣ ಎಂದು ಹೆಸರಿಟ್ಟರು. ಮುಂದೆ ಅವನಿಗೆ ಬಸವಣ್ಣನ ಸ್ನೇಹಿತ ಹಾಗೂ ಗುರು ಎಲ್ಲವೂ ಆಗುತ್ತಾನೆ. ಚಾಲುಕ್ಯರ ಕಡೆ ಗೆಳೆಯರಿಂದ ಒಂದು ಓಲೆಗರೆಯಲ್ಲಿ ರಾಮನಾಥ ಎಂಬ ಗೆರೆಯಿತ್ತು. ಅದರಿಂದ ಪ್ರೇರಣೆಯಾದ ಸಂಗಮನಾಥ ಎಂಬ ಅಂಕಿತವನ್ನು ಕೊಟ್ಟು ಬರೆಯಲು ಆರಂಭಿಸಿದನು. ಚೆನ್ನಬಸವಣ್ಣ ಎಂಟು ವರ್ಷ ಆದ ಉಪನಯನ ಮಾಡುವ ಸಂದರ್ಭ ಚರ್ಚೆಗೆ ಗ್ರಾಸವಾಗುತ್ತದೆ. ಬಸವಣ್ಣ ಮತ್ತು ಕಾಳಮ್ಮ ಅರಸ ಇಬ್ಬರು ಪ್ರವಾಸಕ್ಕೆ ಹೊರಟ ಸಂದರ್ಭದಲ್ಲಿ ಬಾದಾಮಿ ಐಹೊಳೆ ಪಟ್ಟದಕಲ್ಲು ಅವುಗಳ ಸೌಂದರ್ಯವನ್ನು ಮಾತ್ರ ನೋಡದೆ ಅವು ಪ್ರತಿಬಿಂಬಿಸುವ ಜೀವನ ಅರ್ಥ ಮಾಡಿಕೊಂಡಿದ್ದರು. ಇಂತಹ ಸಂದರ್ಭದಲ್ಲಿಯೇ ಬಸವಣ್ಣನ ಕೀರ್ತಿ ದೆಸೆದಿಕ್ಕುಗಳಿಗೂ ಹಬ್ಬಿದಾಗ ಅವರ ಮಾವನಾದ ಬಲದೇವನಿಗೂ ಈ ವಿಷಯ ಮುಟ್ಟುತ್ತದೆ. ಅವಳು ತನ್ನ ಮಗಳಾದ ಗಂಗಾಂಬಿಕೆಯನ್ನು ಬಸವಣ್ಣನವರಿಗೆ ಕೊಡುವ ಇಚ್ಛೆಯಿಂದ ಗುರುಗಳ ಹತ್ತಿರ ತನ್ನ ಇಂಗಿತವನ್ನು ಹೇಳಿಕೊಳ್ಳುತ್ತಾನೆ. ಗುರುಗಳು ಮತ್ತು ನಾಗಮ್ಮಳ ಸಲಹೆಗಳ ಮೇರೆಗೆ ಗಂಗಾಂಬಿಕೆಯನ್ನು ಮದುವೆಯಾಗುತ್ತಾನೆ. ತದನಂತರ ಬಿಜ್ಜಳನ ತಂಗಿಯಾದ ನೀಲಾಂಬಿಕೆಯನ್ನು ಮದುವೆಯಾಗುವ ಸಂದರ್ಭ ಆ ಇಬ್ಬರ ಸ್ನೇಹಿತರಲ್ಲಿರುವ ಪರಸ್ಪರ ಅನ್ಯೂನ್ಯತೆಯನ್ನು ವಿವರವಾಗಿ ಬಿಚ್ಚಿಟ್ಟಿದ್ದಾರೆ.

ಕಲ್ಯಾಣದಲ್ಲಿ ಬಸವಣ್ಣ ಬಿಜ್ಜಳನ ಆಕರ್ಷಣೆಯಾದಗಿನಿಂದ ಬಿಜ್ಜಳನು ಸಾಮ್ರಾಜ್ಯದ ಕರುಣಿಕನಾಗಿ, ಮಹಾಮಂತ್ರಿಯಾಗಿ ಕಾರ್ಯನಿರ್ವಹಿಸಿ ಅರಸನ ಪ್ರೀತಿಗೆ ಪಾತ್ರನಾಗುತ್ತಾನೆ. ಇದನ್ನು ಸಹಿಸದ ಕೆಲವು ಅಸಂತುಷ್ಟ ಜನರು ಬಿಜ್ಜಳನ ಮತ್ತು ಬಸವಣ್ಣನ ನಡುವೆ ದ್ವೇಷವನ್ನು ಬಿತ್ತಲು ಪ್ರಯತ್ನಿಸಿರುವ ಸಂದರ್ಭ ಎಲ್ಲವನ್ನು ಅದಕ್ಕೆ ಕಾರಣ ಕೊಟ್ಟು ವಿಮರ್ಶಕರು ಉಲ್ಲೇಖಿಸಿದ್ದಾರೆ.

ಬಸವಣ್ಣನ ಬಗ್ಗೆ ಬಿಜ್ಜಳನಿಗೆ ಇದ್ದ ಪ್ರೀತಿ ಸಹಕಾರ ಸ್ನೇಹದ ಸಂಬಂಧದಲ್ಲಿ ನೆಲೆಗಳನ್ನು ಎಳೆ ಎಳೆಯಾಗಿ ವಿವರಿಸಿದ್ದಾರೆ. ಹಾಗೇನೇ ಅವರು ಮಂತ್ರಿ ಪದವಿಗೆ ರಾಜನಾಮೆಯನ್ನು ಕೊಟ್ಟಂತಹ ಸಂದರ್ಭದಲ್ಲಿ ಬಸವಣ್ಣ ನಿನ್ನಿಂದಲೇ ಬೆಳೆದು ಬೆಳಕಾಗಿದ್ದೇನೆ. ನನ್ನ ಬೆಳಕಿಗೆ ನೀನೇ ಕಾರಣವಾಗಿದ್ದೀಯಾ. ಆದ್ದರಿಂದ ಭಂಡಾರದ ಕೀಯನ್ನು ನೀವೇ ಇಟ್ಟುಕೊಳ್ಳಿ ಎಂದು ಹೇಳುವ ಸನ್ನಿವೇಶ ಸ್ನೇಹತ್ವದ ಪ್ರತೀಕವಾಗಿದೆ.

ಸೋಮದೇವ ಮತ್ತು ನಾರಾಯಣ ಕ್ರಮಿತರ ಸ್ನೇಹ ಸಂಬಂಧ ಅಧಿಕವಾದಂತಹ ಸಂದರ್ಭದಲ್ಲಿ ಬಸವಣ್ಣನನ್ನು ದೂರುವ ದ್ವೇಷಿಸುವ ಪ್ರಸಂಗಗಳು ದಿನದಿಂದ ದಿನಕ್ಕೆ ಅಧಿಕವಾಗುತ್ತಾ ಹೋಗುತ್ತವೆ. ಭಂಡಾರದ ಲೆಕ್ಕ ನಾಗದೇವನ ಮನೆಯಲ್ಲಿನ ಊಟ ಅಸಂಖ್ಯಾ ಶರಣರರು ಬಿಜ್ಜಳಕ್ಕೆ ಆಗಮನ ಅನುಭವಮಂಟಪದಲ್ಲಿ ಚರ್ಚೆ ವಿಚಾರ ಗೋಷ್ಠಿಗಳು ಸ್ತ್ರೀಪುರುಷ ಎಂಬ ಭೇದಭಾವವಿಲ್ಲದೆ ಪಾಲ್ಗೊಳ್ಳುವಿಕೆ ಈ ಎಲ್ಲಾ ಅಂಶಗಳಿಂದ ಬಸವಣ್ಣನವರು ರಾಜಪ್ರಭುತ್ವದ ತೋರಿದರು. ಸಾಮಾಜಿಕವಾಗಿ ಜನರಿಗೆ ಹತ್ತಿರವಾಗುತ್ತಾ ಹೋಗುತ್ತಾರೆ. ಬಸವಣ್ಣನವರನ್ನು ರಾಜ್ಯ ದ್ರೋಹದ ಮೇಲೆ ಹೊರಹಾಕುವ ಸಂದರ್ಭದಲ್ಲಿ ರಾಜ್ಯಪ್ರಭುತ್ವ ಮತ್ತು ಶರಣರ ಕ್ರಾಂತಿಕಲ್ಯಾಣದ ಕರಾಳವನ್ನೇ ಪ್ರತಿನಿಧಿಸುತ್ತದೆ. ಆದರೆ ಅಲ್ಲಮಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ, ಗಂಗಾಂಬಿಕೆ, ನೀಲಾಂಬಿಕೆ ಈ ಮುಂತಾದ ಪಾತ್ರಗಳು ಬಸವಣ್ಣನವರ ಪಾತ್ರದೊಂದಿಗೆ ಅಷ್ಟೇ ಎತ್ತರದಷ್ಟು ನಿಂತಿರುವುದನ್ನು ಕಾಣಬಹುದಾಗಿದೆ.

### ಶರಣರ ಕುರಿತು ಕನ್ನಡ ಕಾದಂಬರಿಗಳು

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಗ್ರಂಥವಾದ "ಶರಣರ ಕುರಿತ ಕನ್ನಡ ಕಾದಂಬರಿಗಳು" ಎಂಬ ಮಹಾಪ್ರಬಂಧವನ್ನು ಜೆ.ಪಿ. ದೊಡ್ಡಮನಿಯವರು ಪಿಎಚ್.ಡಿ. ಅಧ್ಯಯನಕ್ಕಾಗಿ ಸಾದರಪಡಿಸಿರುತ್ತಾರೆ. ಇದು ಉತ್ಕಷ್ಟ ಮಹಾಪ್ರಬಂಧವಾಗಿರುವುದರಿಂದ ಡಾ. ಜೆ.ಪಿ.ಯವರ ಮೌಲಿಕ ಸಂಶೋಧನೆ ಆಳವಾದ ಅಧ್ಯಯನ ಹಾಗೂ ಉತ್ತಮ ವಿಮರ್ಶಾ ಶಕ್ತಿಗಳು ಸಹ ಪ್ರಕಟವಾಗಿವೆ. ಕನ್ನಡದಲ್ಲಿ ಶರಣರನ್ನು ಕುರಿತು ಬಂದಿರುವ ಕಾದಂಬರಿಯನ್ನು ಕುರಿತು ನೋಡದೇ ಶರಣರನ್ನು ಕುರಿತು ಪ್ರಾಚೀನ ಕನ್ನಡ ಸಾಹಿತ್ಯವು ಅನಿವಾರ್ಯವಾಗಿ ಇದರ ವಿಷಯ ವ್ಯಾಪ್ತಿಗೆ ಒಳಪಟ್ಟಿದೆ. ಒಟ್ಟು ಎಂಟು ವಿಚಾರ ಅಧ್ಯಾಯಗಳುಳ್ಳ ಈ ಮಹಾಪ್ರಬಂಧದಲ್ಲಿ ತೌಲನಿಕ ವ್ಯಾಸಂಗವಾಗಲಿ, ಮೌಲ್ಯಮಾಪನವಾಗಲೀ ಎಚ್ಚರಿಕೆಯಿಂದ ಕೂಡಿದ್ದು ಸ್ಪಷ್ಟವಾದದ್ದು. ಬೇರೆ ಬೇರೆ ಲೇಖಕರ ಕಾದಂಬರಿಗಳನ್ನು ನಿಬಂಧಕಾರರು ಹೋಲಿಸಿ, ತೂಗಿ ನೋಡಿದ್ದಾರೆ. ಒಬ್ಬರೇ ಲೇಖಕರ ವಿಭಿನ್ನ ಕೃತಿಗಳು ಕೂಡ ಪರಸ್ಪರ ಹೋಲಿಸಿದ್ದಾರೆ. ಕಾದಂಬರಿಗಳ ಗುಣದೋಷಗಳನ್ನು ಅವಲೋಕಿಸುವಲ್ಲಿ ಪ್ರಬಂಧಕಾರರು ನಿಷ್ಪಕ್ಷಪಾತವಾದ ನಿರ್ಣಯದ ಅಭಿಪ್ರಾಯವನ್ನು ಮಂಡಿಸಿರುವುದು ಕಾಣಬಹುದಾಗಿದೆ. ಈ ಪ್ರಬಂಧದ ಎರಡನೆಯ ಅಧ್ಯಾಯವಾಗಿ ಬಸವಣ್ಣನವರ ಜೀವನಕ್ಕೆ ಸಂಬಂಧಪಟ್ಟಂತೆ. ಇಲ್ಲಿಯವರೆಗೂ ಪ್ರಕಟಗೊಂಡ

ಗ್ರಂಥವನ್ನು ಆಧಾರವಾಗಿ ಇಟ್ಟುಕೊಂಡು ವಿಶ್ಲೇಷಣೆ ಮಾಡಿದ್ದಾರೆ. ಬಸವಣ್ಣನವರ ಕುರಿತು ಸಮಗ್ರ ರೀತಿಯಲ್ಲಿ ನಿರೂಪಿಸಿದ ಕಾದಂಬರಿಕಾರರಾದ ಡಾ. ಬಿ. ಪುಟ್ಟಸ್ವಾಮಯ್ಯನವರು, ಡಾ. ಎಚ್. ತಿಪ್ಪೇರುದ್ರಸ್ವಾಮಿ ಮತ್ತು ಹನ್ನೆರಡುಮಠರ ಕಾದಂಬರಿಗಳನ್ನು ಕುರಿತು ಅವಲೋಕಿಸಿದ್ದಾರೆ. ಬಸವಣ್ಣನವರ ಜೀವನ ಚರಿತ್ರೆಯನ್ನು ಹೇಳುವಂತಹ ಕಾದಂಬರಿಗಳ ತೌಲನೀಕರಣ ಮತ್ತು ವಸ್ತುನಿಷ್ಠವಾಗಿ ನಿವೇಚಿಸಿದ್ದಾರೆ. ಒಟ್ಟಾರೆಯಾಗಿ ಕನ್ನಡ ಕಾದಂಬರಿಗಳಲ್ಲಿ ಬಸವಣ್ಣನವರ ಚಿತ್ರಣವನ್ನು ಕುರಿತು ಬಂದಿರುವ ಕೃತಿಗಳ ಅಧ್ಯಯನ ಸಮೀಕ್ಷೆ ಕಡಿಮೆ ಎಂದು ಹೇಳಬೇಕು. ನಾಟಕ ಮತ್ತು ಕಾವ್ಯ ಕಥೆಯಲ್ಲಿ ಮೂಡಿದ ಹೊಸತನವಾಗಲಿ, ವಿಭಿನ್ನ ಅಭಿವ್ಯಕ್ತಿಯ ವಿಚಾರ ವಾಗಲಿ ಮೂಡಿಬಂದಿಲ್ಲ ಎಂದು ಹೇಳುವುದಕ್ಕಿಂತಲೂ ಕಾದಂಬರಿಗಳ ಕುರಿತು ಬೃಹತ್ ಪ್ರಮಾಣದಲ್ಲಿ ವಿಮರ್ಶ ಗ್ರಂಥಗಳು ಬಂದಿಲ್ಲ ಹೇಳಿದರೆ ತಪ್ಪಾಗಲಿಕ್ಕಿಲ್ಲ.

**ಕೊನೆಟಿಪ್ಪಣಿಗಳು**

೧. ಡಾ. ಅಶೋಕಕುಮಾರ್ ರಂಜೇರೆ, ೨೦೦೨, **ಸಾಹಿತ್ಯ ಮತ್ತು ಇತಿಹಾಸ ಸಂಬಂಧಗಳು,** ಪುಟ ೨೨.

೨. ಕೃಷ್ಣಕುಮಾರ್ ಚಂದರ್, ೨೦೦೦, **ಗಿರೀಶ್ ಕಾರ್ನಾಡ್ ನಾಟಕಗಳು,** ಪುಟ ೧೩೮.

೩. **ಅದೇ** - ಪುಟ ೧೪೧.

೪. **ಅದೇ** - ಪುಟ ೧೫೦.

೫. **ಅದೇ** - ಪುಟ ೧೧೬.

೬. ಪಿ. ಲಂಕೇಶ್, ೨೦೦೨, **ಸಂಕ್ರಾಂತಿ,** ಪುಟ ೨೨.

೭. ಮಾದರ ಚೆನ್ನಯ್ಯ ೨೦೦೫, **ತೊಟ್ಟಿವಾಡಿ ನಂಜುಂಡಿಸ್ವಾಮಿ,** ಪುಟ ೧೦೭.

೮. ಡಾ. ಆರ್. ಶಿವಣ್ಣ ಹಾಗೂ ಡಾ. ಬಿ.ಎಸ್. ಸ್ವಾಮಿ, ೨೦೦೭, **ಕ್ರಾಂತಿ ಕಲ್ಯಾಣ ಕಾದಂಬರಿಯಲ್ಲಿ ಮೂಡಿಬಂದ ಬಸವಣ್ಣ,** ಪುಟ ೩.

೯. **ಅದೇ** - ಪುಟ ೩೪.

೧೦. **ಅದೇ** - ಪುಟ ೩೯.

೧೧. ಡಾ. ಆರ್. ಶಿವಣ್ಣ ಹಾಗೂ ಡಾ. ಬಿ.ಎಸ್. ಸ್ವಾಮಿ, ೨೦೦೬, **ಕ್ರಾಂತಿಕಲ್ಯಾಣ ಕಾದಂಬರಿಯಲ್ಲಿ ಮೂಡಿಬಂದ ಬಸವಣ್ಣ,** ಪುಟ ೫.

□□□

## ಅಧ್ಯಾಯ : ಮೂರು

# ಬಸವಣ್ಣನನ್ನು ಕುರಿತ ನಾಟಕಗಳು

---

೩.೧. ಧಾರ್ಮಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೩.೨. ಸಾಮಾಜಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೩.೩. ಆರ್ಥಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೩.೪. ರಾಜಕೀಯಕ್ಕೆ ಸಂಬಂಧಿಸಿ ಗ್ರಹಿಕೆಗಳು

## ಅಧ್ಯಾಯ : ಮೂರು

# ಬಸವಣ್ಣನನ್ನು ಕುರಿತ ನಾಟಕಗಳು

ನಾಟಕ ಎನ್ನುವುದು ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿದ್ದು, ಸಾಹಿತ್ಯದ ಎಲ್ಲ ಪ್ರಕಾರಗಳಿಗಿಂತ ವಿಶಿಷ್ಟ ಆಗಿರುವುದು ಗಮನೀಯವಾದುದು. ಏಕೆಂದರೆ ಕಾವ್ಯ, ಕತೆ, ಕಾದಂಬರಿಗಳು ಸೃಜನಶೀಲ ಪ್ರಕಾರಗಳು ಎನಿಸಿಕೊಂಡಂತೆ ನಾಟಕ ಪ್ರಕಾರವೂ ಸಹ ಈ ಕ್ಷೇತ್ರಕ್ಕೆ ಸಂಬಂಧಿಸಿದರೂ ಇವುಗಳಿಗಿಂತ ಭಿನ್ನವಾಗಿ ಗೋಚರಿಸುತ್ತದೆ. ಇದು ದೃಶ್ಯ ಹಾಗೂ ಶ್ರವ್ಯ ಮಾಧ್ಯಮದ ಮೂಲಕ ನಿರೂಪಣೆಯ ದೃಷ್ಟಿಯಿಂದ ವೈಭವೀಕರಿಸುವಲ್ಲಿ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಇಂತಹ ನಾಟಕ ಪ್ರಕಾರಕ್ಕೆ ಒಂದು ಶತಮಾನದ ಚರಿತ್ರೆ ಇರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಏಕೆಂದರೆ ಈ ನಾಟಕಗಳಿಗೆ ಮೂಲ ಗ್ರೀಕ್, ಸಂಸ್ಕೃತ ಹಾಗೂ ಪಾಶ್ಚಾತ್ಯ ಪ್ರಭಾವ ಸಾಕಷ್ಟಾಗಿರುವುದನ್ನು ಮನಗಾಣಬಹುದಾಗಿದೆ. ಇಂತಹ ನಾಟಕ ಪ್ರಕಾರವನ್ನು ಆಧುನಿಕ ಸಂದರ್ಭದಲ್ಲಿ ಕಾಲಕ್ಕೆ ತಕ್ಕಂತೆ ವಿಷಯ ವಸ್ತುವನ್ನು ಭಿನ್ನ ಭಿನ್ನವಾಗಿ ಆಲೋಚಿಸುವಂತಹ ಶಕ್ತಿಯನ್ನು ಪಡೆದುಕೊಂಡು ಮುನ್ನಡೆಯುತ್ತಿರುವುದಕ್ಕೆ ಕಾರಣ ಆಧುನಿಕ ನಾಟಕಗಳೇ ಸಾಕ್ಷಿಯಾಗಿವೆ.

ಆಧುನಿಕ ನಾಟಕ ಎಂದಾಕ್ಷಣ ನಮಗೆ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಎಂಬ ಘಟ್ಟಗಳಲ್ಲಿ ಮೈದಾಳಿರುವಂತಹ ವಸ್ತುವೇ ಪ್ರಧಾನವಾಗಿ ಗೋಚರಿಸುತ್ತದೆ. ಕೆಲವೊಂದು ಸಂದರ್ಭದಲ್ಲಿ ಗತಕಾಲದ ವಿಷಯವಸ್ತುವನ್ನು ಆಯ್ದುಕೊಂಡಂತಹ ಸಂದರ್ಭದಲ್ಲಿ ಚರಿತ್ರೆ ಹಲವು ರೂಪಗಳನ್ನು ಪಡೆದುಕೊಂಡಿರುತ್ತದೆ. ಆಧುನಿಕ ನಾಟಕಕಾರರನ್ನು ಪ್ರಮುಖವಾಗಿ ಅಧ್ಯಯನ ಮಾಡಿದಂತಹ ಸಂದರ್ಭದಲ್ಲಿ ನಾಟಕಕಾರರು ಚಿತ್ರಿಸಿರುವ ವಿಷಯವಸ್ತು ಭಿನ್ನವಾಗಿ ಆಲೋಚಿಸುವಂತಹ ನೆಲೆಯಲ್ಲಿ ರಚನೆಯಾಗಿವೆ. ಇಲ್ಲಿ ನಾಟಕದ ಕುರಿತು ಇತಿಹಾಸವನ್ನು ಹೇಳುವ ಉದ್ದೇಶ ಮುಖ್ಯವಲ್ಲ. ನನ್ನ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಆಧುನಿಕ ನಾಟಕಗಳಲ್ಲಿ ಬಸವಣ್ಣನ ಗ್ರಹಿಕೆಗಳು ಎಂಬ ವಿಷಯ ಕೇಂದ್ರಬಿಂದುವಾಗುತ್ತದೆ. ಈ ದೃಷ್ಟಿಯಿಂದಲೇ ಆಧುನಿಕ ನಾಟಕಗಳಲ್ಲಿ ವ್ಯಕ್ತಗೊಂಡಿರುವ ಬಸವಣ್ಣನ ಪೂರ್ವಪರ ಚರಿತ್ರೆಯನ್ನು ಹಲವಾರು ಮುಖಗಳಲ್ಲಿ ಅನಾವರಣಗೊಂಡಿರುವುದನ್ನು ಅವಲೋಕನ ಮಾಡಬೇಕಾಗುತ್ತದೆ.

೧೨ನೇ ಶತಮಾನದಲ್ಲಿದ್ದ ಬಸವಣ್ಣ ವಿಶ್ವಗುರು, ಧಾರ್ಮಿಕ ಪುರುಷ, ಸಾಮಾಜಿಕ ಸುಧಾರಕ ಹೀಗೆ ಹಲವಾರು ಹೆಸರುಗಳನ್ನು ಪಡೆದ ಈತನು ಸುಮಾರು ಶತಮಾನಗಳು ಕಳೆದರೂ ಮತ್ತೆ ಮತ್ತೆ ಪಠ್ಯಗಳ ಮೂಲಕ ಪ್ರಸ್ತುತನಾಗುತ್ತಲೇ ಬಂದಿದ್ದಾನೆ. ಇಂತಹ ಆಧುನಿಕ ಪಠ್ಯಗಳನ್ನು ಅಧ್ಯಯನದ ದೃಷ್ಟಿಯಿಂದ ಧಾರ್ಮಿಕ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಹಿತಾಸಕ್ತಿ ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ಈ ಕೆಳಗಿನಂತೆ ನೋಡಬಹುದು.

**೩.೧. ಧಾರ್ಮಿಕತೆಗೆ ಸಂಬಂಧಿಸಿ ಗ್ರಹಿಕೆಗಳು**

ಧರ್ಮ ಎನ್ನುವ ಪರಿಭಾಷೆ ೧೯ನೇ ಶತಮಾನದ ನಂತರದ ಅವಧಿಯಲ್ಲಿ ಹೆಚ್ಚು ಪ್ರಚಲಿತವಾಗಿ ಬಂದಿದೆ. ಚಾರಿತ್ರಿಕತೆಯನ್ನು ಅವಲೋಕಿಸಿದಾಗ ಧರ್ಮ ಎನ್ನುವ ಪದ ಬಳಕೆಯಾಗಿರುವುದು ಕಡಿಮೆ. ಬಳಕೆಯಾದರೂ ಅದು ಕರ್ತವ್ಯ ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ. ಆದರೆ ೧೯ನೇ ಶತಮಾನದ ನಂತರದ ಅವಧಿಯಲ್ಲಿ ಮತ ಎನ್ನುವ ಪದಕ್ಕೆ ಬದಲಾಗಿ 'ಧರ್ಮ' ಎನ್ನುವ ಪದವನ್ನು ಬಳಸಲಾಗುತ್ತದೆ. ನಮ್ಮ ಚರಿತ್ರೆಯನ್ನು ಅವಲೋಕಿಸಿದಾಗ ವೈದಿಕ ಪಂಥವು ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಅಂತೆಯೇ ಈ ಮತ ಅತ್ಯಂತ ಪುರಾತನ ಮತ್ತು ಪ್ರಬಲ ಮತವಾಗಿ ಕಾಣಿಸಿಕೊಳ್ಳುತ್ತದೆ. ಹೀಗೆಂದ ಮಾತ್ರಕ್ಕೆ ಈ ಧರ್ಮ ಎಲ್ಲಾ ಜಾತಿಗಳಿಗೆ ವರ್ಗಗಳಿಗೆ ಸರ್ವಸಮ್ಮತವಾಗಿರಲಿಲ್ಲ. ಹೀಗಾಗಿ ಈ ಧರ್ಮದ ಸಿದ್ಧಾಂತ ಮತ್ತು ಕಟ್ಟುಪಾಡುಗಳ ವಿರುದ್ಧ ಅನೇಕರು ಪ್ರಶ್ನೆಗಳನ್ನೆತ್ತಿದ್ದಾರೆ. ಅಂತೆಯೇ ಹಲವು ಹೊಸ ಮತಗಳ ಉದಯಕ್ಕೂ ಕಾರಣವಾಗಿವೆ. ಅಲ್ಲದೇ ಕೆಲವು ಸುಧಾರಕರ ಪ್ರಯತ್ನದಿಂದಾಗಿ ವೈದಿಕ ಧರ್ಮದೊಳಗಡೆಯೇ ಹಲವು ಪಂಥಗಳು ರೂಪುಗೊಳ್ಳಲು ಕಾರಣವಾಗಿವೆ. ಅವುಗಳೆಂದರೆ ವೈಷ್ಣವ, ಶೈವ, ವೀರಶೈವ ಮುಂತಾದವು. ವೀರಶೈವ ಪರಂಪರೆಯು ಹುಟ್ಟಿಕೊಳ್ಳುವ ಪೂರ್ವದಲ್ಲಿ ಪುರಾತನವಾದ ಹಿಂದೂ ಧರ್ಮದ ವಿಧಿ ವಿಧಾನಗಳು ಸಮಾಜ ಮತ್ತು ಧರ್ಮದಲ್ಲಿ ಬೇರೆ ಬೇರೆ ವ್ಯವಸ್ಥೆಯನ್ನು ಕಲ್ಪಿಸಿಕೊಡುವಲ್ಲಿ ಶ್ರಮಿಸಿದೆ. ಇಂತಹ ಒಂದು ಸಂದರ್ಭದಲ್ಲಿ ಈ ಧರ್ಮದ ಸಂಪ್ರದಾಯ ನೀತಿಗಳ ವಿರುದ್ಧ ಅನೇಕ ವಿಚಾರಗಳು ಬೇರೆ ಬೇರೆ ಧರ್ಮದ ಮೂಲಕ ವೈಚಾರಿಕತೆಗೆ ಎಡೆ ಮಾಡಿಕೊಟ್ಟವು. ಹೀಗಾಗಿ ವೈಚಾರಿಕತೆಯನ್ನು ಮೊಟ್ಟ ಮೊದಲಿಗೆ ರೂಢಿಸಿಕೊಂಡು ಸಮಾಜದಲ್ಲಿ ಶಾಂತಿ, ಕರುಣೆ ಮತ್ತು ಪ್ರಜ್ಞೆಯನ್ನು ತರುವಲ್ಲಿ ಬೌದ್ಧ ಧರ್ಮ ತನ್ನ ಹಿತವನ್ನು ಸಾಧಿಸಲು ಪ್ರಯತ್ನಿಸಿದೆ. ಈ ಧರ್ಮದ ನಂತರ ಜೈನ ಧರ್ಮ ಉದಯವಾಗುವುದರ ಮೂಲಕ ಅಹಿಂಸೆಗೆ ಹೆಚ್ಚು ಪ್ರಾಧಾನ್ಯತೆಯನ್ನು ಕಲ್ಪಿಸಿಕೊಟ್ಟಿತು. ಜೈನ ಮತ್ತು ವೀರಶೈವ ಧರ್ಮಗಳ ಮಧ್ಯೆ ಸುಮಾರು ವರ್ಷಗಳು ಗತಿಸಿದಂತಹ ಸಂದರ್ಭದಲ್ಲಿ ಹಿಂದೂ ಧರ್ಮ ತನ್ನ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿತ್ತು. ಇಂತಹ ಸಂದರ್ಭದಲ್ಲಿ ೧೨ನೇ ಶತಮಾನದ ಹೊತ್ತಿಗೆ ವೀರಶೈವ ಧರ್ಮ ಪುನರ್ ಸ್ಥಾಪನೆಯಾಗುವುದರ ಮೂಲಕ ಸಮಾಜ ಮತ್ತು ಧಾರ್ಮಿಕವಾಗಿ ಸುಧಾರಣೆಯನ್ನು ತರುವಲ್ಲಿ ಪ್ರಮುಖವಾಗಿ ಶ್ರಮಿಸಿತು. ಆದರೆ ಮೂಲಭೂತವಾದಿಗಳ ವಿರೋಧದ ಹಿನ್ನೆಲೆಯಲ್ಲಿ ಶರಣ ಚಳುವಳಿಗೆ ಸೋಲುಂಟಾಯಿತು.

ಕಾರಣ ಈ ಧರ್ಮ ಸಮಾಜಮುಖಿಯಾಗಿ ನಿಂತು ಹಲವಾರು ಬದಲಾವಣೆಗಳನ್ನು ತರುವಲ್ಲಿ ಪ್ರಯತ್ನಪಟ್ಟಾಗ ಮೂಲಭೂತವಾದಿಗಳು ಈ ಧರ್ಮದ ಅವನತಿಗೆ ಪ್ರಯತ್ನಿಸಿದರು. ಆದರೂ ೧೨ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಅಂದರೆ ಸುಮಾರು ೨೦೦ ವರ್ಷಗಳ ಕಾಲ ಸುದೀರ್ಘವಾಗಿ ಶರಣ ಪರಂಪರೆಯನ್ನು ಹೊಂದುವುದರ ಮೂಲಕ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿತು.

ಏಕೆಂದರೆ ಯಾವುದೇ ಧರ್ಮ ಒಳ್ಳೆಯ ಸಮಾಜವನ್ನು ನಿರ್ಮಾಣ ಮಾಡಲು ಪ್ರಯತ್ನಿಸಿದರೆ ಧರ್ಮ ಅಷ್ಟೆ ಅಲ್ಲ, ವ್ಯಕ್ತಿಗಳು ಸಹ ತಮ್ಮ ಅವನತಿಗೆ ತಾವೇ ಕಾರಣರಾಗುತ್ತಾರೆ ಎಂಬುದಕ್ಕೆ ಹಲವಾರು ಧರ್ಮಗಳು ನಿದರ್ಶನವಾಗಿವೆ. ಅಂತಹ ಧರ್ಮಗಳಲ್ಲಿ ವೀರಶೈವ ಧರ್ಮವೂ ಒಂದು. ಈ ಧರ್ಮವನ್ನು ಕೇಂದ್ರವಾಗಿಟ್ಟುಕೊಂಡು ಬಸವಣ್ಣನನ್ನು ಮೊದಲುಗೊಂಡು ಉಳಿದ ಸುಮಾರು ೬೩ ಜಾತಿಯ ಸಕಲ ಪುರಾತನರೂ ಶರಣರು ಮಾಡಿದಂತಹ ಕ್ರಾಂತಿ ಇಡೀ ವಿಶ್ವವನ್ನೇ ಪಸರಿಸಿತು. ಅವರು ಕೈಗೊಂಡ ಸಮಾಜೋಧಾರ್ಮಿಕ ಕ್ರಾಂತಿ ಆಧುನಿಕ ಸಂದರ್ಭದಲ್ಲಿ ನಿದರ್ಶನವಾಗುವುದರ ಮೂಲಕ ಮತ್ತೆ ಮತ್ತೆ ಸಮಾಜಮುಖಿಯಾಗಿ ನಿಂತು ತಾತ್ವಿಕ ಮಹಾ ಅವಲೋಕನ ಮಾಡುವಲ್ಲಿ ಶ್ರಮಿಸಿರುವ ವಿಚಾರಗಳು ಮತ್ತೆ ಮತ್ತೆ ಪುನರ್ ಉಚ್ಚರಿಸುತ್ತವೆ. ಈ ಹಿನ್ನೆಲೆಯಲ್ಲಿ ಶರಣ ಚಳುವಳಿಯನ್ನು ಆಧರಿಸಿ ರೂಪುಗೊಂಡ ಆಧುನಿಕ ನಾಟಕಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗುವುದು.

ನಾಡಿನ ಜನಜೀವನದಲ್ಲಿ ಧರ್ಮವು ಪ್ರಬಲವಾಗಿ ನೆಲೆಯೂರಿದೆ. ವೈದಿಕ ಧರ್ಮದಲ್ಲಿ ದೇವಾಲಯಗಳು ಪ್ರಮುಖ ಪಾತ್ರವಾಗಿದ್ದವು. ಆದರೆ ಅವು ಆಧ್ಯಾತ್ಮಿಕ ಕೇಂದ್ರಗಳಾಗುವ ಬದಲು ಸಂಪತ್ತಿನ ಕೇಂದ್ರವಾಗಿ, ಸುಲಿಗೆಯ ಸಾಧನಗಳಾಗಿದ್ದವು. ಇದಕ್ಕೆ ಪೂರಕವಾಗಿ ಪೂಜಾ ವಿಧಾನಗಳು ವಿಶಿಷ್ಟವಾಗಿ ಬೆಳೆದವು. ಇಲ್ಲಿ ಭಕ್ತಿಗಿಂತ ಆಡಂಬರವೇ ಹೆಚ್ಚು ಮಹತ್ವ ಪಡೆಯಿತು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ದೇವರ ಅರ್ಚನೆಯ ವೇಳೆಯಲ್ಲಿ ಸಂಗೀತ, ನೃತ್ಯ, ಕಲಾ ವೈವಿಧ್ಯತೆಗಳು ಶಿವನಿಗೆ ಅರ್ಪಿತವಾಗಲಿ ಎಂದು ಉಗಮವಾದ ಕ್ರಮಗಳು ಅರ್ಚಕರ ಮತ್ತು ಇತರರ ನೈತಿಕ ಜೀವನ ಹಾಳಾಗುವುದಕ್ಕೆ ಕಾರಣವಾಗಹತ್ತಿದವು.

ಹೀಗೆ ಧರ್ಮದ ಹೆಸರಿನಲ್ಲಿ ಜನತೆಯು ನಿರಂತರವಾಗಿ ಅಂದಿನಿಂದಲೂ ಶೋಷಣೆಯಾಗ ತೊಡಗಿದರು. ಇವುಗಳನ್ನು ಪ್ರತಿಭಟಿಸಿ ನಿಲ್ಲುವ ಸಾಮರ್ಥ್ಯ ಜನಸಾಮಾನ್ಯರಿಗೆ ಇರಲಿಲ್ಲ. ಅಸಹಾಯಕರಾದ ಅವರು ಅಪಮಾನದ ಸ್ಥಿತಿಗೆ ಒಳಗಾಗಹತ್ತಿದರು. ನಮ್ಮ ಕರ್ಮದ ಫಲ ಎಂದು ನಂಬಿ ಜೀವಿಸುತ್ತಿದ್ದರು. ಇಂತಹ ಧಾರ್ಮಿಕ ಅಸಮಾನತೆಯನ್ನು ತೊಡೆದು ಹಾಕಲು ಬಸವಣ್ಣನವರು ದೇವಾಲಯಗಳನ್ನು ನಿರಾಕರಿಸಿ ಇಷ್ಟಲಿಂಗದ ಪರಿಕಲ್ಪನೆಯನ್ನು ಜಾರಿಗೆ ತಂದರು. ಆ ಮೂಲಕ ಸಾಮಾನ್ಯ ಜನರು ಪುರೋಹಿತರಿಂದ ದೇವಾಲಯಗಳಿಂದ ಆಗುತ್ತಿರುವ ಅನ್ಯಾಯವನ್ನು ತಡೆಯಲು ಪ್ರಯತ್ನಿಸಿದರು.

"ಮಲ್ಲವ್ವ : ಅಣ್ಣನೋರೇ ಕಡೆ ಮಾತು ನಾನೂ ಕೂಡ ಲಿಂಗವಂತಳಾಗಬಹುದೇ (ಬಸವಣ್ಣನವರು ನೇತಾಡುತ್ತಿರುವ ತಮ್ಮ ಹೆಗಲ ಚೀಲದಿಂದ ಲಿಂಗ ಹಾಗೂ ವಸ್ತ್ರದ ತುಂಡೊಂದನ್ನು ಹೊರತೆಗೆಯುತ್ತಾ)

ಬಸವಣ್ಣ: ಶಿವಭಕ್ತರೆಲ್ಲ ಒಂದೇ ಕುಲದವರವ್ವ ಇಕೋ, ನಿರಾಕಾರನಾದ ಶಿವ ಇಷ್ಟಲಿಂಗವಾಗಿ ನಿನ್ನ ಕರಸ್ಥಳಕ್ಕೆ ಬಂದ. ಈ ಗಳಿಗೆಯಿಂದಲೇ ನೀನು ಶಿವಭಕ್ತರ ಕುಲವನ್ನು ಸೇರಿದೆ."[೧]

ಎನ್ನುವ ಮಾತು ಶತಶತಮಾನಗಳಿಂದ ಧಾರ್ಮಿಕ ಪೂಜಾ ವಿಧಿವಿಧಾನಗಳ ಅವಕಾಶಗಳಿಂದ ವಂಚಿತರಾದ ಕೆಳಸಮುದಾಯಗಳ ಸ್ತ್ರೀಯರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿ ಅವಳಿಗೂ ಆತ್ಮಸ್ಥೈರ್ಯ ತುಂಬುವ, ಸಮಾಜದಲ್ಲಿ ಸಮಾನವಾದ ಅವಕಾಶಗಳನ್ನು ಇಷ್ಟಲಿಂಗ ಪರಿಕಲ್ಪನೆಯ ಮೂಲಕ ಕಲ್ಪಿಸುವಂತಹ ವ್ಯವಸ್ಥೆಯನ್ನು ರೂಪುಗೊಳಿಸಿದರು.

"ಭಾರತೀಯ ಧಾರ್ಮಿಕ ಜೀವನದಲ್ಲಿ ಕಾಲಗತಿಯಿಂದ ಉಂಟಾಗಿದ್ದ ಸಾಂಪ್ರದಾಯಿಕ ಜಡತೆಯ ವಿರುದ್ಧ ಪ್ರತಿಭಟಿಸಿ ಅದನ್ನು ವಿವೇಕಪೂರ್ಣವಾದ, ಅನುಭವ ಪ್ರಾಮಾಣ್ಯದ, ಗತಿಶೀಲ ನೆಲೆಯಲ್ಲಿ ನಿಲ್ಲಿಸಿದುದು ಅವರ ಮೊದಲನೇ ಸಾಧನೆ"[೨] ಎಂಬ ಹೇಳಿಕೆಯನ್ನು ಗಮನಿಸಿದಾಗ ಬಸವಣ್ಣನವರು ಕೈಗೊಂಡ ವಿಚಾರಗಳು ಸ್ಪಷ್ಟವಾಗುತ್ತವೆ.

ಈ ಮೇಲಿನ ನಿದರ್ಶನಗಳನ್ನೇ ವ್ಯಕ್ತಪಡಿಸುವ ನಾಟಕ 'ಜಗಜ್ಯೋತಿ ಬಸವೇಶ್ವರ' ಇದನ್ನು ಶ್ರೀಕಂಠಶಾಸ್ತ್ರಿ ನಲವಡಿ ರಚಿಸಿದ್ದಾರೆ. ಈ ನಾಟಕದ ೧೪ನೇ ದೃಶ್ಯದಲ್ಲಿ ಬಿಜ್ಜಳ, ಮಂಚಣ್ಣ, ಪೆದ್ದರಸ, ಕಲ್ಯಾಣಶೆಟ್ಟಿ, ಮತ್ತು ಬಸವಣ್ಣನ ಪಾತ್ರಗಳ ಮೂಲಕ ಸನಾತನ ಧರ್ಮವಾದ ಹಿಂದೂಧರ್ಮ ಅವನತಿ ಆಗುವಂತಹ ಸಂದರ್ಭವನ್ನು ವ್ಯಕ್ತಪಡಿಸುವ ರೀತಿ ಗಮನಾರ್ಹವಾಗಿದೆ. ಏಕೆಂದರೆ ಕಲ್ಯಾಣನಗರದಲ್ಲಿ ಬಸವಣ್ಣನಿಂದಾಗಿ ಅಥವಾ ಆತನ ವಿಚಾರದಿಂದಾಗಿ ಹಿಂದೂ ಧರ್ಮವು ವಿನಾಶದತ್ತ ಸಾಗುತ್ತದೆ ಎಂಬ ಅಪನಂಬಿಕೆಯನ್ನು ಮಂಚಣ್ಣ ವ್ಯಕ್ತಪಡಿಸುವ ರೀತಿ ವರ್ಣಾಶ್ರಮವನ್ನು ಮುಂದುವರೆಸುವ ತಂತ್ರ ವ್ಯಕ್ತವಾಗಿದೆ. ಪೆದ್ದರಸ ಎಂಬ ಪಾತ್ರದ ಮೂಲಕ ಕಲ್ಯಾಣಕ್ರಾಂತಿಯಿಂದ ಕಲ್ಯಾಣವು ಹೊಲಗೇರಿಯಾಗಿ ಬಿಟ್ಟಿದೆ ಎಂಬ ಮಾತನ್ನು ವ್ಯಕ್ತಪಡಿಸುತ್ತಾನೆ. ಬಸವಣ್ಣನವರ ಲೋಕೋದ್ಧಾರದ ಚಿಂತನೆಗಳನ್ನು ಸಾಮಾನ್ಯ ವ್ಯಕ್ತಿಯಾದ ಮಂಚಣ್ಣನಿಗೆ ಅರಗಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ.

೧೨ನೇ ಶತಮಾನದಲ್ಲಿ ನಡೆದ ಸಮಾಜೋಧಾರ್ಮಿಕ ಕ್ರಾಂತಿ ಇಡೀ ಜಗತ್ತನ್ನೇ ಪಸರಿಸಿತು. ಇಲ್ಲಿ ಪ್ರಮುಖವಾಗಿ ಕಂಡುಬರುವ ಅಂಶವೆಂದರೆ ಧರ್ಮ ಮಾನವನ ಜೀವನವನ್ನು ರೂಪಿಸುವಲ್ಲಿ, ಆತನ ಜೀವನವನ್ನು ಪುನರ್‌ಸೃಷ್ಟಿಸುವಲ್ಲಿ ಯಶಸ್ವಿಯನ್ನು ಕಂಡಿತು ಎಂಬುದು ಹಲವರ ಅಭಿಪ್ರಾಯ. ಇಲ್ಲಿ ಬಸವಣ್ಣನವರ ಮುಂಚೆ ಹಲವು ಧರ್ಮಗಳು ಹುಟ್ಟಿ ತಮ್ಮದೇ ಆದ ಸಿದ್ಧಾಂತಗಳನ್ನು ಪ್ರತಿಪಾದಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಬಸವಣ್ಣ ಬದುಕಿದ್ದು ೧೨ನೇ

ಶತಮಾನ. ಇಂತಹ ಬಸವಣ್ಣನ ಕುರಿತ ರಚನೆಯಾಗಿರುವ ನಾಟಕಗಳಲ್ಲಿ ವಿಭಿನ್ನವಾಗಿ ಕಟ್ಟಿಕೊಟ್ಟಿರುವ ಚರಿತ್ರೆಯನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ನಾಟಕಕಾರರು ಬಸವಣ್ಣನ ಹುಟ್ಟಿನಲ್ಲಿ ಧಾರ್ಮಿಕತೆಯೊಂದಿಗೆ ಸಮೀಕರಿಸಿ ನೋಡಿದ್ದಾರೆ. ಈತನ ಹುಟ್ಟು ಸಹಜವಾದುದ್ದಲ್ಲ. ಭೂಮಿಯ ಮೇಲೆ ಆತ ಅವತರಿಸಲು ಮುಖ್ಯ ಕಾರಣವೆಂದರೆ ಭೂಲೋಕದಲ್ಲಿ ನೈತಿಕ ಮತ್ತು ಧಾರ್ಮಿಕ ಅಧಃಪತನ ಉಂಟಾಗಿದ್ದವು. ಇಂತಹ ಸಂದಿಗ್ಧ ಸಂದರ್ಭದಲ್ಲಿ ಅವುಗಳನ್ನು ನಿರ್ಮೂಲನೆ ಮಾಡುವ ಸಲುವಾಗಿ ಶಿವ ಪಾರ್ವತಿಯರೇ ನಂದಿಗೆ ಬಸವನ ಅವತಾರದಲ್ಲಿ ಮಾದರಸ ಮತ್ತು ಮಾದಲಾಂಬಿಕೆಯ ಉದರದಲ್ಲಿ ಜನಿಸುವಂತೆ ಹೇಳುತ್ತಾರೆ.

"**ಶಿವ** : ಲೋಕಸೇವೆಯಲ್ಲಿ ನಾವೆಲ್ಲರೂ ಕಿಂಕರರೇ ಸರಿ. ಆದರೆ ಈಗೊದಗಿದ ಆಪತ್ತನ್ನು ನಂದಿಯೊಬ್ಬನೇ ನೀಗಿಸಬಲ್ಲ. ವತ್ಸಾ, ನೀನೀಗ ಭೂಲೋಕದಲ್ಲಿ ಜನ್ಮ ತಾಳಬೇಕಾಗಿದೆ.

**ನಂದಿ** : ಶಿವ ಶಿವಾ, ತಮ್ಮ ಅಗಲುವಿಕೆಯನ್ನು ನಾನೆಂತು ಸಹಿಸಲಿ ದೇವಾ?

**ಶಿವ** : ಅನ್ಯರಿಂದ ನೀಗಲಾರದ ಕಾರ್ಯಬಾಹುಳ್ಯವಿದು. ವಚನಾಮೃತಸಾರವೆಂಬ ಸುಜ್ಞಾನದ ಬೆಳಕನ್ನು ನೀಡುತ್ತಾ ವಿಶ್ವಪ್ರೇಮ, ವಿಶ್ವಶಾಂತಿ ಸ್ಥಾಪನೆಗಾಗಿ 'ಬಸವ'ನೆಂಬ ನಾಮದಿಂದ ನೀನು ಭೂಲೋಕದಲ್ಲಿ ಜನ್ಮ ತಾಳಲೇಬೇಕು. ಮಗೂ ವೇಳೆಗಳೆಯಬೇಡ. ನೀನಿನ್ನು ಹೊರಡು."[೨]

ಹೀಗೆ ಶಿವ-ಪಾರ್ವತಿಯರ ಆಜ್ಞೆಯಂತೆ ಭೂಮಿಯ ಮೇಲೆ ಅವತರಿಸಿದನೆಂದು ನಾಟಕಕಾರರು ವ್ಯಕ್ತಪಡಿಸುತ್ತಾರೆ. ಆದರೆ ಮತ್ತೊಂದು ನಾಟಕದಲ್ಲಿ ಇದಕ್ಕೆ ವಿರುದ್ಧವಾದ ಅಭಿಪ್ರಾಯಗಳು ಕಾಣಸಿಗುತ್ತವೆ. ಬಸವಣ್ಣನಾಗಿ ಹುಟ್ಟಲು ಕಾರಣ ಕೈಲಾಸದಲ್ಲಿ ಹುಸಿ ನುಡಿದ ಪ್ರಾಯಶ್ಚಿತ್ತಕ್ಕಾಗಿ ಭೂಮಿಯ ಮೇಲೆ ಜನಿಸಿದನೆಂದು ಅಭಿಪ್ರಾಯ ವ್ಯಕ್ತವಾಗಿದೆ.

"**ಶಿವ** : ದೇವಿ ಏನಿದು ನಿನ್ನ ಈ ವರ್ತನೆ. ದುಡುಕಿ ದೈವಭಕ್ತನ ದೇಹವ ದಹಿಸಲೆಣಿಸಿ ಭಕ್ತನ ಭಾವನೆಯ ಭಗ್ನಗೊಳಿಸದಿರು ದೇವಿ.... ಶಾಂತಳಾಗು, ವೃಷಭ ನಮ್ಮ ಅಗತ್ಯದ ಅನುಚರನೆಂಬುದ ಮರೆಯದಿರು.

**ಪಾರ್ವತಿ** : ಅಗತ್ಯದ ಅನುಚರನೆಂದು ಅಂತರಂಗದಲ್ಲೂ ಸಲಿಗೆ ಕೊಟ್ಟಿದ್ದರಿಂದಲೇ ಇಂದಿನ ಪ್ರಕರಣ ಪ್ರಕೋಪವನ್ನು ತಾಳುವಂತಾಗಿದ್ದು ತಾಳ್ಮೆ ಧೃತಿಗೆಡಿಸಿತು... (ಕೋಪದಿಂದ) ವೃಷಭಾ ತೆರಳು ತನ್ನ ಸ್ಥಾನಮಾನಗಳ ಅರಿವಿಲ್ಲದೆ ತಾನು ಮಾಡಿದ್ದೇ ನ್ಯಾಯವೆಂದು ವಾದಿಸುವ ನೀನು ಮರ್ತ್ಯಲೋಕದಲ್ಲಿ ಮಾನವನಾಗಿ ಜೀವಿಸು, ತಾನು ಮಾಡಿದ್ದೇ ನ್ಯಾಯವೆಂದು ವಾದಿಸುವ ಓರ್ವ ಅರಸನ ಅನುಚರನಾಗಿ ಬಾಳು. ನನ್ನ ಕುಮಾರನನ್ನೇ ನಿಂದನೆಗೆ ಒಳಪಡಿಸಿದ ನೀನು ಮರ್ತ್ಯಲೋಕದಲ್ಲಿ ಅದೇ ರೀತಿ

ಸಾಧನೆಗೈಯಲು ಹೋಗಿ ತನ್ನವರಿಂದಲೇ ಅಪವಾದ ನಿಂದನೆಗಳಿಗೆ ಕಾರಣನಾಗು. ಇದೇ ನಿನಗೆ ಶಿಕ್ಷೆ, ತೊಲಗು ಇಲ್ಲಿಂದ."[9]

ಹೀಗೆ ಶಿವ ಪಾರ್ವತಿಯರು ವ್ಯಕ್ತಪಡಿಸಿದಾಗ ವೃಷಭನು ಭೂಮಿಯಲ್ಲಿ ಅವತರಿಸಲು ನಿರಾಕರಿಸುತ್ತಾನೆ. ತಾನು ಮಾಡಿದ ತಪ್ಪನ್ನು ಇಲ್ಲಿಯೇ ಶಿಕ್ಷೆ ವಿಧಿಸಿ ಎಂದು ಗೋಗರೆಯುತ್ತಾನೆ. ಆಗ ಶಿವನು ಭೂಮಿಯ ಮೇಲೆ ಅವತರಿಸುವ ಅಗತ್ಯವನ್ನು ಕುರಿತು ವಿವರಿಸುತ್ತಾನೆ. ಆಗ

"ಶಿವ : (ಸಮಾಧಾನಪಡಿಸುತ್ತಾ) ವೃಷಭಾ! ದೇವಿಯ ನುಡಿಯಲ್ಲಿ ಬಂದ ಶಾಪ ಹಿಂದಿರುಗಿಸಿಕೊಳ್ಳಲು ಯಾರಿಂದಲೂ ಅಸಾಧ್ಯವಾದುದೇ ಸರಿ. ಯಾವುದೋ ಕಾರಣೀಭೂತವಾದ ಸಮಸ್ಯೆಯ ಪರಿಹಾರದ ಆಲೋಚನೆಯೇ ಇಂದಿನ ಪ್ರಕರಣಕ್ಕೆ ನಾಂದಿಯಾಗಿ ದೇವಿಯ ಬಾಯಿಂದ ಈ ಶಾಪದ ತಾಪ ಹೊರ ಬಂದಿದೆ. ಸಂತೋಷದಿಂದ ಸ್ವೀಕರಿಸು ಹೋಗು. ಭೂಲೋಕದಲ್ಲಿ ದೈವಭಕ್ತಿಯಿಲ್ಲದೆ ಮಾನವರು ದಾನವರಾಗುತ್ತಿದ್ದಾರೆ. ಶ್ಲೀಲ ಅಶ್ಲೀಲ, ಸ್ಪೃಶ್ಯ, ಅಸ್ಪೃಶ್ಯ ಎಂಬ ಅಂಧಕಾರ ಕವಿದು, ಅತ್ಯಾಚಾರ, ಅನಾಚಾರ, ಅಧರ್ಮಗಳಿಂದ ಮರ್ತ್ಯಲೋಕದ ಮಾನವ ಮರುಗುತ್ತಿದ್ದಾನೆ. ಅಸ್ಪೃಶ್ಯತೆಯ ಅನಿಷ್ಟತೆಯಲ್ಲಿ ಅಲ್ಲೋಲ ಕಲ್ಲೋಲವಾಗುತ್ತಿದೆ. ಈಗ ನಿನ್ನಿಂದ ಮಹತ್ತರವಾದ ಕಾರ್ಯವೇ ಆಗಬೇಕಾಗಿದೆ. ನೀನು ಭೂಲೋಕದಲ್ಲಿ ಬಾಗೇವಾಡಿ ಗ್ರಾಮದಲ್ಲಿ ಮಾದರಸ ಮಾದಲಾಂಬಿಕೆಯರೆಂಬ ಶೈವ ಬ್ರಾಹ್ಮಣ ದಂಪತಿಗಳಿಗೆ ಮಗನಾಗಿ ಜನಿಸಿ ಮರ್ತ್ಯಲೋಕದಲ್ಲಿ ಧರ್ಮವನ್ನು ಸಾರುತ್ತಾ ಜನರಲ್ಲಿ ದೈವ ಭಕ್ತಿಯನ್ನು ಮೂಡಿಸುತ್ತಾ ಜನತೆಯ ಸೇವೆಗಾಗಿ ಶ್ರಮಿಸು ನಿನಗೆ ಮರ್ತ್ಯಲೋಕ ಬೇಸತ್ತಾಗ ನನ್ನ ನೆರವು ಸದಾ ಸಿದ್ಧ ತಥಾಸ್ತು."[3]

ಹೀಗೆ ಶಿವ ಪಾರ್ವತಿಯರ ಅಪ್ಪಣೆಯ ಮೇರೆಗೆ ಭೂಲೋಕದಲ್ಲಿ ಜನಿಸಿದನೆಂದು ಸ್ಪಷ್ಟವಾಗುತ್ತದೆ. ಜನಪ್ರಿಯ ನಾಟಕ ಆರಂಭವಾಗುವುದು ಪ್ರಾರ್ಥನೆಯಿಂದ. ಈ ಪ್ರಾರ್ಥನೆಯನ್ನು ನಾಟಕಕಾರರು ವಿಶಿಷ್ಟತೆಯಿಂದ ಬಳಸಿಕೊಂಡಿದ್ದಾರೆ. ಅಂದರೆ ಮಾದಲಾಂಬಿಕೆಯು ನಾಟಕದ ಆರಂಭದ ಪ್ರಾರ್ಥನೆಯಲ್ಲಿ ತನಗೆ ಮಕ್ಕಳಿಲ್ಲ ಎಂಬುದಕ್ಕಾಗಿ ಮಕ್ಕಳ ಫಲಕ್ಕಾಗಿ ನಂದೀಶ್ವರನಲ್ಲಿ ಕೇಳಿಕೊಳ್ಳುವುದರಿಂದಲೇ ನಾಟಕ ಪ್ರಾರಂಭವಾಗುತ್ತದೆ. ಮರುವರ್ಷ ಕೈಗೊಂಡ ವ್ರತದ ಫಲವಾಗಿ ನಂದಿಯೇ ಬಸವಣ್ಣನಾಗಿ ಮಾದಲಾಂಬಿಕೆಯ ಉದರದಲ್ಲಿ ಜನಿಸಿದನೆಂಬ ಅಂಶ ಈ ನಾಟಕದಿಂದ ತಿಳಿದುಬರುತ್ತದೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಬಸವಣ್ಣನ ಹುಟ್ಟಿನ ಬಗ್ಗೆ ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದುಂಟು. ಒಂದು ಕಡೆ ಬಸವಣ್ಣ ಧರ್ಮದ ಉದ್ಧಾರಕ್ಕಾಗಿ ಜನಿಸಿದನೆಂದು. ಅದು ಶಿವ-ಪಾರ್ವತಿಯರ ಆಜ್ಞೆಯ ಮೇರೆಗೆ ಭೂಲೋಕಕ್ಕೆ ಬಂದನೆಂದು ಅಲ್ಲದೇ ಶೈವ ಬ್ರಾಹ್ಮಣರಾದ ಮಾದರಸ ಮಾದಲಾಂಬಿಕೆಯರ ಉದರದಲ್ಲಿ ಜನಿಸಿದನೆಂದು

ಹೀಗೆ ಅಭಿಪ್ರಾಯಗಳು ಗಮನಾರ್ಹವಾಗಿವೆ. ಆದರೆ ಬಸವಣ್ಣನ ಹುಟ್ಟು ಸಾಮಾನ್ಯ ಮನುಷ್ಯನಂತೆ ಆಗಿಲ್ಲ. ಆತ ಏನಿದ್ದರೂ ದೈವ ಸ್ವರೂಪಿಯಾಗಿ ಸಮಾಜ ಹಾಗೂ ಧರ್ಮದ ಉದ್ಧಾರಕ್ಕಾಗಿ ಜನಿಸಿದವನೆಂಬ ಅಂಶಗಳು ಕಾಣಸಿಗುತ್ತವೆ. ಮುಂದುವರೆದು ಬಸವಣ್ಣ ಭೂಲೋಕದಲ್ಲಿ ಅದರಲ್ಲೂ ಬಸವನಬಾಗೇವಾಡಿಯಲ್ಲಿ ನೆಲೆಸಿದ್ದ ಮಾದರಸ ಮಾದಲಾಂಬಿಕೆಯರ ಮಗನಾಗಿ ಜನಿಸಿದ ನಂತರದಲ್ಲಿ ಈ ಮಗುವಿಗೆ ನಾಮಕರಣ ಮಾಡುವ ಸಂದರ್ಭ ಬೇರೆ ಬೇರೆ ನಾಟಕಗಳಲ್ಲಿ ವ್ಯಕ್ತವಾಗಿರುವಂತೆ ಧಾರ್ಮಿಕ ನೆಲೆಗಳನ್ನು ವ್ಯವಸ್ಥಿತ ರೂಪದಲ್ಲಿ ಕಟ್ಟಿಕೊಡಲಾಗಿದೆ.

ಶ್ರೀಕಂಠಶಾಸ್ತ್ರಿ ನಲವಡಿ ವಿರಚಿತ 'ಜಗಜ್ಯೋತಿ ಬಸವೇಶ್ವರ' ನಾಟಕದಲ್ಲಿ ವ್ಯಕ್ತವಾಗಿರುವಂತೆ ಬಸವಣ್ಣನ ನಾಮಕರಣದ ಬಗೆಗೆ ಕೂಡಲಸಂಗಮದಲ್ಲಿ ನೆಲೆಸಿರುವ ಜಾತವೇದಮುನಿ ಹಾಗೂ ವಾಮದೇವರ ನಡುವೆ ನಡೆಯುವ ಸಂಭಾಷಣೆಯನ್ನು ಗಮನಿಸಿದಾಗ ನಾಮಕರಣವೇ ಒಂದು ದೈವಿ ಸ್ವರೂಪಿಯಾಗಿ ಅಭಿವ್ಯಕ್ತಗೊಂಡಿದೆ. ಜಾತವೇದಮುನಿಗಳು ಬಾಗೆವಾಡಿಗೆ ಹೋಗಬೇಕು ಎಂಬ ಅಂಶದಿಂದಲೇ ಈ ನಾಟಕದ ೩ನೇ ದೃಶ್ಯ ಪ್ರಾರಂಭವಾಗುತ್ತದೆ. ಇಲ್ಲಿ ವಾಮದೇವ ಹಾಗೂ ಜಾತವೇದ ಮುನಿಗಳು ಮಾತನಾಡುವ ರೀತಿ ವಿಭಿನ್ನವಾಗಿ ವೈಶಿಷ್ಟ್ಯತೆಯನ್ನು ಪಡೆದುಕೊಳ್ಳುತ್ತದೆ. ಇದನ್ನೇ ಅವರ ಸಂಭಾಷಣೆಯಲ್ಲಿ ಗಮನಿಸಬಹುದು.

"**ಜಾತವೇದ** : ಮಗೂ, ನಿನ್ನೆ ರಾತ್ರಿ ಹಾಗೆ ನನಗೆ ಸ್ವಪ್ನ ಬಿದ್ದಿತ್ತು.

**ವಾಮದೇವ** : ಗುರುದೇವಾ ಸ್ವಪ್ನ ಬಿದ್ದಿತ್ತು?

**ಜಾತವೇದ** : ಆ ಸ್ವಪ್ನದಲ್ಲಿ ಕೂಡಲ ಸಂಗಮನಾಥನೇ ಬಂದು, ಕೂಸಿಗೆ ಬಸವೇಶ್ವರನೆಂಬ ನಾಮಕರಣ ಮಾಡುವುದಕ್ಕಾಗಿ ಬಾಗೇವಾಡಿಗೆ ಹೋಗಬೇಕು, ಇಂದಿಗೆ ಆ ಕೂಸು ಹುಟ್ಟಿ ಹದಿಮೂರು ದಿವಸಗಳಾದವು. ಈ ದಿನ ಮಾದರಸನ ಮನೆಯಲ್ಲಿ ಮಹಾಸಂಭ್ರಮ ನಾಮಕರಣ ಮಹೋತ್ಸವ ಬಂಧುಬಳಗ ಕೂಡಿದೆ, ಸುವಾಸಿನಿಯರು ನೆರೆದಿದ್ದಾರೆ ನಡೆ ನಾವೂ ಹೋಗಿ ಆ ಉತ್ಸವದಲ್ಲಿ ಭಾಗಿಗಳಾಗುವ."[೬]

ಹೀಗೆ ಜಾತವೇದ ಮುನಿಗಳು ವಾಮದೇವನೊಂದಿಗೆ ಬಾಗೆವಾಡಿಯ ಮಾದರಸ ಮಾದಲಾಂಬಿಕೆಯರ ಮನೆಗೆ ಬರುತ್ತಾರೆ. ಆಗ ಈ ದಂಪತಿಗಳು ಮುನಿಗಳನ್ನು ತಾವು ಯಾರೆಂದು ವಿಚಾರಿಸಿದಾಗ ಆಗ ಮುನಿಗಳು ತಮ್ಮ ಮೂಲಸ್ಥಾನದ ಪರಿಚಯವೆಲ್ಲವನ್ನು ಹೇಳಿ ನಿಮ್ಮ ಮಗುವಿಗೆ ನಾಮಕರಣ ಮಾಡುವ ಸಲುವಾಗಿಯೇ ಬಂದಿದ್ದೇವೆ ಎಂದು ತಮ್ಮ ಮನದಾಳದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಆಗ ಮಾದಲಾಂಬಿಕೆಯು ಮಗುವಿಗೆ ಏನೆಂದು ಹೆಸರಿಡಬೇಕು ಎಂದು ಕೇಳಿದಾಗ ಜಾತವೇದ ಮುನಿಗಳು ಹೇಳುವ ಮಾತು ಬಸವಣ್ಣನ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುವುದಲ್ಲದೆ ಧಾರ್ಮಿಕ ತಳಹದಿಯ ಸ್ವರೂಪವನ್ನು ಕಟ್ಟಿಕೊಡುತ್ತದೆ. ಅಂದ ಹಾಗೆ ಮುನಿಗಳು 'ಈ ಕೂಸು ಶಿವನ ಧರ್ಮಾವತಾರಿ ನೋಡಿ ಈ

ತೇಜಸ್ಸು ಹೇಗಿದೆ ತಾಯಿ, ನಂದೀಶ್ವರನೇ ನಿನ್ನ ಹೊಟ್ಟೆಯಲ್ಲಿ ಹುಟ್ಟಿಬಂದಿದ್ದಾನೆ' ಎಂದಾಗ ಮಾದಲಾಂಬಿಕೆ ನಮ್ಮ ಮನೆಯ ದೇವರು ನಂದೀಶ್ವರ. ಆತನ ವ್ರತದಿಂದಲೇ ಈ ಮಗುವನ್ನು ಪಡೆದಿದ್ದೇನೆ ಎಂದು ತಿಳಿಸಿದಾಗ ಜಾತವೇದ ಮುನಿಗಳು ಈ ಮಗುವಿಗೆ 'ಬಸವೇಶ್ವರ'ನೆಂದು ನಾಮಕರಣ ಮಾಡಿ ಎಂದು ತಿಳಿಸುತ್ತಾರೆ. ಈ ವಿಷಯವನ್ನೇ ಕೆಲವು ನಾಟಕಗಳು ಅಭಿವ್ಯಕ್ತಿಸುತ್ತವೆ. ಆದರೆ ಅ.ನ.ಕೃ. ರಚಿಸಿರುವ 'ಜಗಜ್ಯೋತಿ ಬಸವೇಶ್ವರ' ನಾಟಕದಲ್ಲಿ ಸ್ವಲ್ಪ ಭಿನ್ನವಾಗಿ ಆಲೋಚನಾಲಹರಿ ವ್ಯಕ್ತವಾಗಿದೆ. ಅದೇ ಜಾತವೇದ ಮುನಿಗಳು ಮಾದರಸರ ಮನೆಗೆ ಬಂದಂತಹ ಸಂದರ್ಭದಲ್ಲಿ ಮಗುವಿನ ಚಲನವಲನವಿಲ್ಲದ್ದು ಕಂಡ ಮಾದರಸ ತಮ್ಮ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಆಗ ಮುನಿಗಳು

"ಜಾತವೇದ : (ನಗುತ್ತಾ) ಹೆಗ್ಗಡೆ, ಏಕೆ ಚಿಂತಿಸುವೆ? ನಿನ್ನ ಮಗ ಅಳಲಿಲ್ಲ, ನಗಲಿಲ್ಲ, ಕೈಕಾಲು ಅಲುಗಾಡಿಸಲಿಲ್ಲ ಎಂದು ದುಃಖಿಸುವೆಯಾ? ಲೋಕ ಕಲ್ಯಾಣದ ಧ್ಯಾನದಲ್ಲಿ ಶಿವಪುತ್ರ ತಲ್ಲೀನನಾಗಿದ್ದಾನೆ. ತನ್ನ ಕರ್ತವ್ಯಭಾರವನ್ನು ನೆನೆಯುತ್ತಾ ಶಾಂತನಾಗಿದ್ದಾನೆ. ಜಗತ್ತಿನ ಅಳುವನ್ನು ಪರಿಹರಿಸಿ ನಗೆಯ ಹೊನಲು ಹರಿಸಲು ಬಂದಿರುವ ಕಾರಣಿಕನವನು. ಅವನ ಆಟಪಾಟ ಮಾತಾ ಪಿತೃಗಳಾದ ನಿಮ್ಮನ್ನು ಮಾತ್ರವೇ ಅಲ್ಲ, ಲೋಕವನ್ನೇ ತಣಿಸುವುದು (ಜೋಳಿಗೆಯಿಂದ ವಿಭೂತಿ ತೆಗೆದು ಮಗುವಿನ ಮುಖಕ್ಕೆ ಹಚ್ಚಿ) ಏಳು ಶಿವಕುಮಾರ, ನಿದ್ದೆ ಸಾಕು. ಹಗಲು ಹರಿದಿದೆ. ಏಳು! ದುಃಖಿತ ಜಗತ್ತಿನ ಕೋಟಲೆ ನೀಗು. ಏಳು! ಶಿವಭಕ್ತಿ ಸಾಮರ್ಥ್ಯವನ್ನು ಬೀರು. ಏಳು ಬಸವರಾಜ! (ಮಗು ಅಳುವುದು, ಕೈಕಾಲು ಆಡಿಸುವುದು.)."[೭]

ಆಗ ಮಾದರಸ ಮುನಿಗಳ ಪಾದಕ್ಕೆರಗಿ ತನ್ನ ಇಂಗಿತವನ್ನು ವ್ಯಕ್ತಪಡಿಸಿದಾಗ ಮುನಿಗಳು ಈ ಮಗುವಿಗೆ ಬಸವನೆಂದು ನಾಮಕರಣ ಮಾಡಿಸಿದರು. ನಂತರ ಆದರೆ ಇನ್ನೊಂದು ಮಾತು ಎಂದಾಗ ಮಾದರಸ ಆಶ್ಚರ್ಯಚಕಿತನಾಗುತ್ತಾನೆ. ಆಗ ಮುನಿಗಳು ಈ ಮಗು ಎಂಟು ವರ್ಷ ತುಂಬುವ ತನಕ ನಿಮ್ಮವನು ನಂತರ ನನ್ನವನು ಎಂಬ ವಿಷಯವನ್ನು ಪ್ರಸ್ತಾಪಿಸುತ್ತಾನೆ.

ಪ್ರತಿಯೊಬ್ಬ ವ್ಯಕ್ತಿ ಹುಟ್ಟಿದ ಮೇಲೆ ಅವನು ಬಾಲ್ಯವನ್ನು ಅನುಭವಿಸಿಯೇ ಬಂದಿರುತ್ತಾನೆ. ಅದು ಅವರವರ ಮನೆತನ ಸಂಸ್ಕೃತಿ ಮತ್ತು ಸಮಾಜ ಅವರ ಮೇಲೆ ದಟ್ಟವಾದ ಪ್ರಭಾವ ಹಾಗೂ ಪ್ರಚೋದನೆ ನೀಡಿರುತ್ತದೆ. ನಾವು ದೈವಿ ಸಂಭೂತನಾದ ಬಸವಣ್ಣನ ಬಾಲ್ಯ ಜೀವನವನ್ನು ಕುರಿತು ಆಲೋಚಿಸುವಂತಹ ಸಂದರ್ಭದಲ್ಲಿ ಈತನ ಮೇಲೆ ರಚನೆಯಾಗಿರುವ ಆಧುನಿಕ ಪಠ್ಯಗಳು ಬಹುಮುಖಿ ನೆಲೆಯಲ್ಲಿ ಚಿಂತನೆ ಮಾಡುತ್ತವೆ. ಬಹುತೇಕ ನಾಟಕಗಳಲ್ಲಿ ಈತನ ಬಾಲ್ಯ ಜೀವನದ ಪ್ರಸ್ತಾಪ ಕಂಡುಬರದಿದ್ದರೂ ಬಸವಣ್ಣನನ್ನು ಪವಾಡಪುರುಷನೆಂತಲೂ ಚಿತ್ರಿಸಿರುವುದು ಗಮನಾರ್ಹ ಸಂಗತಿ.

ಎಂ.ಸಿ. ರಾಮಲಿಂಗಯ್ಯನವರು ರಚಿಸಿದ 'ಕ್ರಾಂತಿಯೋಗಿ ಬಸವಣ್ಣ' ಎಂಬ ನಾಟಕವು ಪ್ರತ್ಯೇಕವಾದ ವಿಷಯದೊಂದಿಗೆ ಬಸವಣ್ಣನೊಬ್ಬ ಧಾರ್ಮಿಕ ಪುರುಷನೆಂದು ಎಲ್ಲ ನಾಟಕಕಾರರು ಒಪ್ಪಿಕೊಂಡಂತೆ ಒಪ್ಪಿಕೊಂಡರೂ ಆತನ ಬಾಲ್ಯದ ಜೀವನದ ಬಗೆಗೆ ವಿಶಿಷ್ಟವಾಗಿ ಗುರುತಿಸುವ ನಾಟಕ ಇದಾಗಿದೆ. ಬಸವಣ್ಣನ ಬಗೆಗೆ ಹೊಸ ಸಂಗತಿಯನ್ನು ಈ ನಾಟಕದಲ್ಲಿ ಬಿತ್ತರಿಸುವುದ ರೊಂದಿಗೆ ಆತನ ಬಾಲ್ಯದಲ್ಲಿರುವ ವಿಶೇಷತೆಯನ್ನು ಕುರಿತು ಚಿತ್ರಿಸುತ್ತಾರೆ. ಕೈಲಾಸ ದೃಶ್ಯದಿಂದ ಈ ನಾಟಕ ಪ್ರಾರಂಭವಾಗುತ್ತದೆ. ಇದೇ ದೃಶ್ಯ ಪ್ರಥಮಾಂಕದೊಳಗೆ ಒಂದನೆಯ ದೃಶ್ಯದಲ್ಲಿ ಬೀದಿಯ ಪ್ರವೇಶ ಪ್ರಾರಂಭವಾಗುತ್ತದೆ. ಈ ದೃಶ್ಯದಲ್ಲಿ ನಾಟಕಕಾರರು ಬಸವಣ್ಣನ ಜೊತೆಗೆ ಇನ್ನು ಕೆಲವು ಪಾತ್ರಗಳನ್ನು ಸೃಷ್ಟಿಸಿ ಬಾಲ್ಯಸ್ನೇಹಿತರೊಂದಿಗೆ ಬಸವಣ್ಣನ ಪವಾಡ ಸಾದೃಶ್ಯವನ್ನು ಎತ್ತಿತೋರಿಸುವಲ್ಲಿ ಪ್ರಾಮುಖ್ಯತೆಯನ್ನು ಮೆರೆದಿದ್ದಾರೆ. ಒಂದು ಆಶ್ಚರ್ಯದ ಸಂಗತಿ ಎಂದರೆ ಈ ನಾಟಕಕಾರರು ಸೃಷ್ಟಿಸಿರುವ ಪಾತ್ರಗಳು ಕಾಲ್ಪನಿಕವಾಗಿ ಅಭಿವ್ಯಕ್ತಿಗೊಂಡರೂ ಈ ದೃಶ್ಯದ ಮೂಲಕ ಬಸವಣ್ಣನ ಬಾಲ್ಯದ ಪವಾಡವನ್ನು ಚಿತ್ರಿಸಿರುವುದು ವಿಶೇಷ ಸಂಗತಿಯಾಗಿದೆ.

ಟೊಣಪ, ಬೆನಕ ಮತ್ತು ಕನಕ ಎಂಬ ಮೂರು ಪಾತ್ರಗಳೊಂದಿಗೆ ಬೆರೆಯುವ ಬಸವಣ್ಣ ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತಾನೆ. ಅಂತೆಯೇ ನಾಟಕಕಾರರು ಒಂದು ಕತೆಯ ಸ್ವರೂಪದ ಮೂಲಕ ಬಸವಣ್ಣನ ವ್ಯಕ್ತಿತ್ವವನ್ನು ಬಹುಮುಖಿಯಾಗಿಸಿದ್ದಾರೆ. ಬಸವಣ್ಣನನ್ನು ಮೊದಲಗೊಂಡು ಈ ಮೂರು ಪಾತ್ರಗಳು ಬಾಲ್ಯದ ಆಟಗಳನ್ನು ಆಡುವುದರೊಂದಿಗೆ ಪ್ರಾರಂಭವಾಗುತ್ತದೆ. ಆದರೆ ಈ ಸ್ನೇಹಿತರೊಂದಿಗೆ ಆಟವಾಡಲು ನಿರಾಕರಿಸಿದ ಬಸವಣ್ಣ ದೇವರಾಟ ಆಡೋಣವೆಂದು ತಿಳಿಸುವಲ್ಲಿ ಆತನ ಮನದಾಳದ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ನಾಟಕಕಾರರು ಬಸವಣ್ಣನು ಬಾಲ್ಯದಲ್ಲಿಯೇ ದೈವಿ ಸ್ವರೂಪಿಯಾಗಿದ್ದ ಎಂಬುದನ್ನು ತಿಳಿಸಲು ಹೊರಟಿರುವುದನ್ನು ಕಾಣುತ್ತೇವೆ.

ಕೊನೆಗೆ ಬಾಲ್ಯ ಸ್ನೇಹಿತರು ನೀರಿಗೆ ಈಜಾಡಲು ಹೋಗುತ್ತಾರೆ. ಬಸವಣ್ಣ ದೇವರ ಗುಡಿಯಲ್ಲಿಯೇ ಭಕ್ತಿಯನ್ನು ಮೆರೆಯುತ್ತಾ ತಲ್ಲೀನನಾಗಿರುತ್ತಾನೆ. ಈಜಾಡಲು ಹೋದವರಲ್ಲಿ ಬೆನಕ ನೀರಿನಲ್ಲಿ ಮುಳುಗುತ್ತಾನೆ. ಆಗ ಟೊಣಪ ಮತ್ತು ಕನಕ ಹೆದರಿ ಬೆನಕನನ್ನು ನೀರಿಗೆ ಮುಳುಗಿಸಿದ್ದು ಬಸವಣ್ಣನೆಂದು ಬೆನಕನ ತಂದೆಯ ಮುಂದೆ ಪ್ರಸ್ತಾಪಿಸುತ್ತಾರೆ. ಆಗ ಬೆನಕನ ತಂದೆಯು ಮಗನನ್ನು ಕಳೆದುಕೊಂಡು ನಿಸ್ಸಂದೇಹವಾಗಿ ಮಕ್ಕಳೊಂದಿಗೆ ಸೇರಿ ಬಸವಣ್ಣನಿದ್ದಲ್ಲಿಗೆ ಬರುತ್ತಾನೆ. ಹೀಗೆ ಚರ್ಚೆ ಪ್ರಾರಂಭವಾಗಿ ನಂತರದಲ್ಲಿ ಬಸವಣ್ಣ ನೀರಿಗೆ ಇಳಿದು ಬೆನಕನನ್ನು ಮೇಲೆತ್ತಿ ತಂದು ಶಿವದೇವಾಲಯದ ಮುಂದೆ ಇಡುತ್ತಾನೆ. ಇಲ್ಲಿ ನಾಟಕ ಅದ್ಭುತವಾದ ವಿಚಾರಗಳನ್ನು ಮುಂದಿಡುತ್ತದೆ. ಅಷ್ಟೇ ಅಲ್ಲದೆ ಸಂಭಾಷಣೆ ವಿವಿಧ ಮುಖಗಳನ್ನು ಅನಾವರಣ ಮಾಡುತ್ತದೆ. ಬಸವಣ್ಣನ ತಂದೆ ಮಾದರಸ, ಬೆನಕನ ತಂದೆ ಶಂಕರನಾರಾಯಣಪ್ಪರ ನಡುವೆ ಸಂಭಾಷಣೆಯ ಏರ್ಪಟ್ಟಾಗ ಮಾದರಸ ನನ್ನ ಮಗ ಎಂದಿಗೂ, ಯಾರಲ್ಲೂ ಸುಳ್ಳು ಹೇಳಿದವನಲ್ಲ ನನ್ನ ನಂಬಿ ಎಂದು ತಿಳಿಸುತ್ತಾನೆ. ಆಗ ಶಂಕರನಾರಾಯಣಪ್ಪನು ನಿನ್ನ ಮಗ

ಅಪರಾಧಿ. ಈ ತಪ್ಪಿಗೆ ಶಿಕ್ಷೆಯಾಗಲೇಬೇಕು ಎಂದು ಹೇಳಿದಾಗ ಬಸವಣ್ಣ ಬೆನಕನ ಶವವನ್ನು ಶಿವನ ವಾಲಿಂದೆ ಇಟ್ಟು ತನ್ನ ಇಂಗಿತವನ್ನು ವ್ಯಕ್ತಪಡಿಸುತ್ತಾನೆ. ಆಗ ತಂದೆ ಮಾದರಸ ಸಾಕ್ಷಿ ಇಲ್ಲದ ಮೇಲೆ ನಿರಪರಾಧಿ ಅಪರಾಧಿಯಾಗಲೇಬೇಕಲ್ಲವೇ ಎಂದು ಪ್ರಸ್ತಾಪಿಸುತ್ತಾನೆ. ಆಗ ಬಸವಣ್ಣ ನಾನು ಕೊಲೆಗಡುಕನಲ್ಲ, ಅಪರಾಧಿಯಲ್ಲ. ಆದರೂ ನಾನು ಈ ಶಿಕ್ಷೆಗೆ ಗುರಿಯಾಗ ಬೇಕೆಂದು ಶಿವನ ಮೊರೆ ಹೋಗುತ್ತಾನೆ.

**(ಹಾಡು)**

"ಶಿವನೇ ಏನಿದು ಅನ್ಯಾಯಾ
ಭವಹರನೇ ಸರಿಯೇ ಈ ನ್ಯಾಯಾ
ತಪ್ಪನೇನ ಎಸಗದಿದ್ದರೂ
ಅಪರಾಧವನೇಕೆ ಹೊರಿಸಿದೆ
ಮೋಸವೆಂಬುದು ಮನದಲ್ಲೂ ಮೂಡಿಲ್ಲಾ
ಕಣ್ಣು ತಪ್ಪಿಯೂ ಕುಟಿಲತೆಯ ಕಂಡಿಲ್ಲಾ
ಸುಳ್ಳು ಎಂಬುದೆ ಶರೀರದೊಳು ಸುಳಿದಿಲ್ಲಾ
ಈ ಬಾಲನ ಬವಣೆಯ ಬಗೆಹರಿಸೋ ಭವಹರಾ."[೮]

ಎಂದು ಹಾಡನ್ನು ಹೇಳುತ್ತಾ, ಮುಗಿಯುತ್ತಿದ್ದಂತೆಯೇ ಬೆನಕನನ್ನು ಬೋರಲಾಗಿ ಮಲಗಿಸಿ ಹೊಟ್ಟೆಯಲ್ಲಿ ತುಂಬಿದ್ದ ನೀರನ್ನು ವಾಂತಿ ಮಾಡಿಸಿ ಶಿವನನ್ನು ಧ್ಯಾನಿಸುತ್ತಾನೆ. ಆಗ ಬೆನಕ ಎಚ್ಚರವಾಗಿ ತನ್ನನ್ನು ಯಾರು ನೀರಿಗೆ ತಳ್ಳಿಲ್ಲ. ಬಸವಣ್ಣನು ನಮ್ಮ ಜೊತೆ ಬಂದವನಲ್ಲ ಎಂದು ತಿಳಿಸಿದಾಗ ಎಲ್ಲರೂ ದಿಗ್ಭ್ರಾಂತರಾಗಿ ಬಸವಣ್ಣನ ಬಾಲ್ಯಪವಾಡವನ್ನು ಮೆಚ್ಚಿ ಹೊಗಳುತ್ತಾರೆ. ಇದು ನಾಟಕಕಾರರ ಕಲ್ಪನೆಯಾದರೂ, ಅಂತರಂಗದಲ್ಲಿ ಬಸವಣ್ಣ ಯಾವತ್ತೂ ಹುಸಿ ನುಡಿದವನಲ್ಲ ಎಂಬ ವಿಚಾರವನ್ನು ಹೊರಹಾಕಿ ಸತ್ಯಕ್ಕೆ ಸಾವಿಲ್ಲ ಎಂಬ ಸಿದ್ಧಾಂತವನ್ನು ಪ್ರಸ್ತಾಪಿಸಿದ್ದಾರೆ.

**ಬಸವಣ್ಣನ ಬಾಲ್ಯದಲ್ಲಿಯ ಜನಿವಾರದ ಪ್ರಸಂಗ**

ನಮ್ಮ ದೇಶ ವರ್ಣವ್ಯವಸ್ಥೆಯನ್ನು ಅನುಸರಿಸಿಕೊಂಡು ಸಂಪ್ರದಾಯವನ್ನು ಆಚರಿಸುತ್ತಾ ಬಂದಿರುವಂತಹದ್ದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳನ್ನು ಸೃಷ್ಟಿಸಿ ಒಂದರ ಕೆಳಗೊಂದು ಎಂಬ ನಂಬಿಕೆಯನ್ನು ಬಿತ್ತುತ್ತಲೇ ಬಂದಿರುವುದು ಗಮನಾರ್ಹ ಸಂಗತಿ. ಏಕೆಂದರೆ ೧೨ನೇ ಶತಮಾನದಲ್ಲಿ ಬದುಕಿ ಬಾಳಿದ ಬಸವಣ್ಣನಿಗೂ ಇದು ವಿಧಿಯಂತೆ ಆಟವಾಡುತ್ತಲೇ ಬಂದಿರುವ ವಿಚಾರಗಳನ್ನು ಅನೇಕ ನಾಟಕಗಳು ಅಭಿವ್ಯಕ್ತಿಸುತ್ತವೆಯಾದರೂ ಕೆಲವು ನಾಟಕಗಳು ಬಸವಣ್ಣನ ಪ್ರಜ್ಞೆಯನ್ನು ಹಲವು ಮುಖಗಳಲ್ಲಿ ಅನಾವರಣ ಮಾಡಿರುವುದು ವಿಶೇಷ ಸಂಗತಿಯಾಗಿದೆ.

ಶ್ರೀಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿಯವರ 'ಜಂಗಮದೆಡೆಗೆ', ಎಂ.ಸಿ.ರಾಮಲಿಂಗಯ್ಯ ನವರ 'ಕ್ರಾಂತಿಯೋಗಿ ಬಸವಣ್ಣ' ಹಾಗೂ ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತು ಕಲ್ಯಾಣ' ಈ ಮೂರು ನಾಟಕಗಳು ಈ ಹಿನ್ನೆಲೆಯಲ್ಲಿ ಗಮನಾರ್ಹವಾಗಿ ಮೂಡಿಬಂದಿವೆ. ಬಾಗೆವಾಡಿಯ ಅಗ್ರಹಾರದ ಪುರಾಧೀಶ್ವರನಾದ ಮಾದರಸ ಬಸವಣ್ಣನ ತಂದೆ. ತನ್ನ ಮಗನಿಗೆ ತಮ್ಮ ಕುಟುಂಬ ಮತ್ತು ಜಾತಿಯ ಸಂಪ್ರದಾಯದಂತೆ ನೂಲು ಹುಣ್ಣಿಮೆಯ ದಿನ ಅಗ್ರಹಾರದ ಹಿರಿಯ ಪುರೋಹಿತರನ್ನು ಕರೆಸಿ ಜನಿವಾರ ತೊಡಿಸುವ ಸಂಸ್ಕಾರವನ್ನು ಕೈಗೆತ್ತಿಕೊಳ್ಳುವಲ್ಲಿ ಮುಂದಾಗುತ್ತಾರೆ. ಶಾಸ್ತ್ರ ಸಂಪ್ರದಾಯಗಳ ಹಿನ್ನೆಲೆಯಲ್ಲಿಯೇ ಬಸವಣ್ಣನಿಗೆ ಉಪನಯನ ನೀಡಬೇಕೆಂಬ ಅಭಿಲಾಷೆಯನ್ನು ಹೊತ್ತ ಸಂಪ್ರದಾಯ ಶಾಸ್ತ್ರಿಗಳು ಮಾತನಾಡುವ ಸಂಭಾಷಣೆ ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತದೆ. ರಾಮಲಿಂಗಶಾಸ್ತ್ರೀ ಮತ್ತು ಭೀಮಣ್ಣ ಪುರೋಹಿತರಿಬ್ಬರು ಮಾತನಾಡುತ್ತಾ ಮಾದರಸನಿಗೆ ನಿನ್ನ ಮಗ ಎಲ್ಲಾ ಹುಡುಗರ ಹಾಗಲ್ಲ. ಇವನು ಬೇರೆ. ಒಂದು ವೇಳೆ ಉಪನಯನ ಬೇಡ ಎಂದು ನಿರಾಕರಿಸಿದರೆ ಕಷ್ಟ ಅಲ್ಲವೆ ಎಂದು ಪ್ರಸ್ತಾಪಿಸುತ್ತಾರೆ. ಆಗ

"**ಭೀಮಣ್ಣ ಪುರೋಹಿತ** : ಅದೇ ನನಗೂ ಯೋಚನೆ ಆ ಹುಡುಗನಿಗೆ ಹುಟ್ಟುತ್ತಿದ್ದ ಹಾಗೇನೆ ತೊಟ್ಟಿಲಲ್ಲಿ ಜಾತವಾದ ಮುನಿಗಳು ಒಂದು ಲಿಂಗದೀಕ್ಷೆ ಮಾಡಿ ಹತ್ತು ವರ್ಷ ತುಂಬುತ್ತಿದ್ದ ಹಾಗೆ ನನ್ನ ಆಶ್ರಮಕ್ಕೆ ಬಿಡೀಂತ ಆಶೀರ್ವಾದ ಮಾಡಿ ಹೋಗಿದ್ದಾರಂತಲ್ಲಾ.

**ರಾಮಲಿಂಗಶಾಸ್ತ್ರಿ** : ಪುರೋಹಿತರೇ ನಮಗೇನ್ರಿ ಆಗಬೇಕು. ಆಹ್ವಾನ ಕೊಟ್ಟಿದ್ದಾರೆ ತಾನೇ? ಬಿಡಿ ಪೌರೋಹಿತ್ಯದ ದಕ್ಷಿಣೆ ಬರೋದು ಗಟ್ಟಿ ಬಸವಣ್ಣ ಲಿಂಗದೀಕ್ಷೆನಾದ್ರೂ ತಕ್ಕೊಳ್ಳಲಿ, ಗಾಯಿತ್ರಿ ದೀಕ್ಷೆನಾದ್ರೂ ತಕ್ಕೊಳ್ಳಲಿ, ಎಲ್ಲಾ ತಿರಸ್ಕರಿಸಿ ಆಶ್ರಮಕ್ಕೋಗಿ ಸನ್ಯಾಸಿಯೇ ಆಗಲಿ ನಮಗೇನಂತೆ ಬರೋದು ಬಂದರಾಯಿತು ಅಲ್ವೆ?"[44]

ಎಂಬಲ್ಲಿ ಒಂದು ಕಡೆ ಶಾಸ್ತ್ರೀಯ ಸ್ಥಾನಮಾನವನ್ನು ಪ್ರದರ್ಶಿಸಿದಂತೆ ಕಂಡುಬರುತ್ತದೆ. ಎಲ್ಲರೂ ಮಾದರಸನ ಮನೆಯಲ್ಲಿ ಸೇರಿದ್ದಾರೆ. ಅಕ್ಕ ನಾಗಲಾಂಬಿಕೆ ಮತ್ತು ಬಸವಣ್ಣನ ಬರುವಿಕೆಗಾಗಿ ಕಾದಿದ್ದಾರೆ. ಆಗ ಬಸವಣ್ಣನೊಡಗೂಡಿ ನಾಗಲಾಂಬಿಕೆ ಬಂದಾಗ ಸಂಭಾಷಣೆ ಮತ್ತೊಂದು ತಿರುವನ್ನು ಪಡೆದುಕೊಂಡು ಮುಂದೆ ಸಾಗುತ್ತದೆ. ಮಾದರಸನು ನಮ್ಮ ಧರ್ಮದ ಪ್ರಕಾರ ಬಸವಣ್ಣನಿಗೆ ಉಪನಯನವಾಗಬೇಕಲ್ಲ ಎಂದು ಪ್ರಸ್ತಾಪಿಸಿದಾಗ ಬಸವಣ್ಣನು ನನ್ನ ಹುಟ್ಟಿದ ದಿನದಿಂದಲೇ ಲಿಂಗದೀಕ್ಷೆಯಾಗಿದೆ ಎಂದು ತಿಳಿಸಿದ್ದೀರಿ. ಮತ್ತೆ ಇನ್ನೊಂದು ಧರ್ಮದ ಉಪನಯನ ಬೇಕಾಗಿಲ್ಲ ಎಂದು ಉತ್ತರಿಸುತ್ತಾನೆ. ಅಷ್ಟೇ ಅಲ್ಲದೆ ಶಿವದೀಕ್ಷೆಗಿಂತ ದೊಡ್ಡ ದೀಕ್ಷೆ ಮತ್ತೊಂದಿಲ್ಲ. ಅದು ಶಿವನಾಣೆ ಎಂದು ತನ್ನ ಮನದಾಳದ ಇಂಗಿತವನ್ನು ವ್ಯಕ್ತಪಡಿಸಿದ

ಬಸವಣ್ಣನಿಗೆ ಶಾಸ್ತ್ರಿಗಳು ಪುರೋಹಿತರು ತಂದೆ ಮಾದರಸ ಏನೆಲ್ಲಾ ವಿಚಾರಗಳನ್ನು ಮುಂದಿಡುತ್ತಾರೆ.

ಈ ಮಾತಿಗೆ ತಾಯಿ ಮಾದಲಾಂಬಿಕೆಯು ಬಸವಣ್ಣನಿಗೆ ತಿಳಿ ಹೇಳಿದಾಗ ಬಸವಣ್ಣನು ನಿಮಗೆ ಯಾವ ರೀತಿಯಲ್ಲಿ ಸಮಾಧಾನಿಸಬೇಕೆಂಬುದೇ ತಿಳಿಯದಾಗಿದೆ ಎನ್ನುತ್ತಾನೆ. ಆಗ ಅಕ್ಕ ನಾಗಲಾಂಬಿಕೆ ಬಸವಣ್ಣ ನೆಪಮಾತ್ರಕ್ಕೆ ನಿಮ್ಮ ಮಗ ಅಷ್ಟೆ. ನಿಮ್ಮ ಧರ್ಮವನ್ನೇ ಅವಲಂಬಿಸಬೇಕೆಂಬುದರಲ್ಲಿ ಅರ್ಥವಿಲ್ಲ ಎನ್ನುತ್ತಾಳೆ. ಇದಕ್ಕೆ ಓಗೊಟ್ಟು ಬಸವಣ್ಣ ಎಲ್ಲವನ್ನು ತಿರಸ್ಕರಿಸುತ್ತಾನೆ. ಪುರೋಹಿತರು ನಂತರ ಮರಳಿ ತಾವೇ ಗಂಟು ಹೊತ್ತುಕೊಂಡು ಚರ್ಚೆ ಮಾಡುವುದರಲ್ಲಿಯೇ ಇರುವಾಗ ನಾಟಕ ಮತ್ತೊಂದು ದೃಶ್ಯದ ಮೂಲಕ ಹೊಸ ನೈತಿಕ ವಿಚಾರವನ್ನು ವ್ಯಕ್ತಪಡಿಸುತ್ತದೆ.

ಬಸವಣ್ಣ ಜನಿವಾರದ ಉಪನಯನವನ್ನು ಏಕೆ ವಿರೋಧಿಸುತ್ತಾನೆ ಎಂಬ ವಿಚಾರಗಳನ್ನು 'ಜಂಗಮದೆಡೆಗೆ' ಎಂಬ ನಾಟಕ ಚರ್ಚೆಯನ್ನು ಮುಂದುವರಿಸುತ್ತದೆ. ಪುರೋಹಿತರು ಮಂತ್ರ ಹೇಳುವುದು ಅನ್ನಕ್ಕೆ ತುಪ್ಪವನ್ನು ಸುರಿಯುವುದು ಮುಂತಾದವುಗಳನ್ನು ವೀಕ್ಷಿಸಿದ ಬಾಲಕ ಬಸವಣ್ಣನ ಮನಸ್ಸಿನಲ್ಲಿ ವೈಚಾರಿಕತೆಯ ವಿಚಾರಕ್ರಾಂತಿಗೆ ಪ್ರೇರಕಶಕ್ತಿಯಾಗುತ್ತದೆ.

"ಯಜ್ಞೋಪವೀತಂ ಪರಮಂ ಪವಿತ್ರಂ
ಪ್ರಜಾಪತೇರ್ಯತ್ಸಹಜಂ ಪುರಸ್ತಾತ್
ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ
ಯಜ್ಞೋಪವೀತಂ ಬಲಮಸ್ತು ತೇಜಃ".[೧೦]

ಈ ಮಂತ್ರ ಜಪಿಸುವುದನ್ನು ನೋಡುತ್ತಾ ಆಲೋಚಿಸಿದ ಬಸವಣ್ಣ ವೈಜ್ಞಾನಿಕ ವಿಚಾರಕ್ಕೆ ತಿರುವನ್ನು ಕೊಡುತ್ತಾನೆ. ಮಾದರಸನನ್ನು ತುಪ್ಪ, ಬಟ್ಟೆ ದವಸಗಳನ್ನೇಕೆ ಬೆಂಕಿಗೆ ಹಾಕುವರು ಎಂದು ಕೇಳಿದಾಗ ಮಾದರಸ ಅದೆಲ್ಲಾ ದೇವರ ತೃಪ್ತಿಗಾಗಿ ಎನ್ನುತ್ತಿದ್ದಂತೆಯೇ ಹಾಗಾದರೆ ಅಗ್ನಿ ದೇವರೇ? ಎಂದು ಪ್ರಶ್ನಿಸುತ್ತಾನೆ. ಹೌದು ಎಂದ ತಂದೆಗೆ

"**ಬಸವ** : ಹಾಗಾದರೆ ಅಂದು ಈ ಪುರೋಹಿತರ ಮನೆಗೆ ಬೆಂಕಿ ಬಿದ್ದಾಗ ಅದನ್ನು ಆರಿಸಲು ಬಳಸಿದ್ದು ಬಚ್ಚಲ ನೀರು, ಬೀದಿಯ ಧೂಳು

**ಪುರೋಹಿತ೧** : ಏ ತೆಪ್ಪಗೆ ಬಾಯಿಮುಚ್ಚಿಕೊಂಡು ಕೂರು.[೧೧]

ಎನ್ನುವಲ್ಲಿ ಪುರೋಹಿತರು ತಮ್ಮತನವನ್ನು ಶ್ರೇಷ್ಠವೆಂದು ಹೇಳಿಕೊಳ್ಳುವಲ್ಲಿ, ಅದಕ್ಕೆ ಪ್ರತಿಯಾಗಿ ಬಸವಣ್ಣ ವೈಚಾರಿಕತೆಗೆ ದೀವಿಗೆಯಾಗುವ ವಿಚಾರಗಳನ್ನು ಮಂಡಿಸುತ್ತಾನೆ. ಮುಂದುವರೆದು ಮಾದರಸನ ಮನೆಯ ಆಳು ದುರಗಪ್ಪನನ್ನು ಕುರಿತು ಬಸವಣ್ಣ ಈತನಿಗೇಕೆ ಈ ಸಂಸ್ಕಾರ ಮಾಡಿಲ್ಲ ಎಂದು ಪ್ರಶ್ನಿಸುತ್ತಾನೆ. ಈ ಮಾತಿಗೆ ಬ್ರಾಹ್ಮಣರೆಲ್ಲರೂ ವಿರೋಧಿಸಿದರೂ, ಬಸವಣ್ಣ

ಎದೆಗುಂದದೆ ಮರಳಿ ಅದೇ ಪ್ರಶ್ನೆಯನ್ನು ಮುಂದಿಡುತ್ತಾನೆ. ಮನುಷ್ಯ ಮನುಷ್ಯರ ನಡುವೆ ಅಡ್ಡಗೋಡೆಯಾಗಿರುವ ಈ ಯಜ್ಞೋಪವಿತ ನನಗಾದರೂ ಏಕೆ ಬೇಕು? ಎಂದು ಕೊರಳಲ್ಲಿರುವ ಜನಿವಾರವನ್ನು ಕಿತ್ತು ಅಗ್ನಿಕುಂಡಕ್ಕೆ ಎಸೆಯುತ್ತಾನೆ. ಆಗ ಪುರೋಹಿತರು ಬಸವಣ್ಣನನ್ನು ಕುಲಕಂಟಕನೆಂದು ಹಿಯ್ಯಾಳಿಸುವರು. ಇದರಿಂದ ಬಸವಣ್ಣನು ತಂದೆ, ತಾಯಿ ಹಾಗೂ ಅಕ್ಕ ನಾಗಲಾಂಬಿಕೆಗೆ ಉತ್ತರಿಸುತ್ತಾ ಜಗತ್ತು ವಿಶಾಲವಾಗಿದೆ ಎಂದು ಮನೆಯಿಂದ ಹೊರನಡೆಯುವ ಸಂದರ್ಭದಲ್ಲಿ ತಾಯಿ ಮಾದಲಾಂಬಿಕೆ ಬೇಡ ಕಂದ ಎಂದು ತಾಯಿಯ ವಾತ್ಸಲ್ಯ ತಬ್ಬಿಕೊಂಡರೂ ಬಿಡಿಸಿಕೊಂಡು ಹೊರನಡೆಯುತ್ತಾನೆ. ಇಲ್ಲಿಂದ ಬಸವಣ್ಣ ಕೂಡಲಸಂಗಮಕ್ಕೆ ತೆರಳುವ ದೃಶ್ಯ ಪ್ರಾರಂಭವಾಗುತ್ತದೆ.

ಇದೇ ಜನಿವಾರದ ಚರ್ಚೆಯನ್ನು ಎತ್ತಿತೋರಿಸುವ ನಾಟಕ ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತ್ತು ಕಲ್ಯಾಣ'. ಇದು ವೈಚಾರಿಕತೆಯಡಿಯಲ್ಲಿ ರಚನೆಗೊಂಡು ವೈಜ್ಞಾನಿಕ ವಿಚಾರಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಬಸವಣ್ಣ ಈಗಾಗಲೇ ಸಂಪ್ರದಾಯದ ಉಪನಯನವಾದ ಜನಿವಾರವನ್ನು ತನ್ನ ಕೊರಳಿನಿಂದ ಕಿತ್ತುಹಾಕಿದ್ದಾನೆ. ಅದು ಆತನ ಮೈಮೇಲೆ ನೇತಾಡುತ್ತಿದೆ ಎಂಬುದರಿಂದಲೇ ಶುರುವಾದ ನಾಟಕ ಬಸವಣ್ಣನ ಸಮಾಜಿಮುಖಿ ಚಿಂತನೆಯನ್ನು ಮುಂದಿಟ್ಟುಕೊಂಡು ವಿವಿಧ ವಿಚಾರಗಳನ್ನು ಅನಾವರಣ ಮಾಡುತ್ತದೆ. ಮಾನವನಾಗಬೇಕಾಗಿರುವ ನನ್ನನ್ನು ಬ್ರಾಹ್ಮಣನನ್ನಾಗಿಸುವ ಈ ಜನಿವಾರ ಬೇಡ. ಧರ್ಮಮಾರ್ಗದಲ್ಲಿ ನಡೆಯಬೇಕೆಂದಿರುವ ನನ್ನನ್ನು ಕರ್ಮದ ಕೆಸರಿಗೆ ತಳ್ಳುವ ಈ ದಾರ ಬೇಡ. ಬೇಡವೇ ಬೇಡ ಎಂದು ಬಸವಣ್ಣ ಹೊರನಡೆದಾಗ ಮನೆಯಲ್ಲಿ ಗದ್ದಲ ಏರ್ಪಡುತ್ತದೆ. ಆಗ ಪುರೋಹಿತರು ಇಂದು ನೂಲ ಹುಣ್ಣಿಮೆ ಹೊಸ ಜನಿವಾರ ಹಾಕಿಕೊಳ್ಳುವುದು ಸಂಪ್ರದಾಯ ಎಂದಾಗ ಬಸವಣ್ಣ ಸಂಪ್ರದಾಯದ ಗೆರೆಯನ್ನು ದಾಟುತ್ತಾನೆ. ಆಗ ನಡೆಯುವ ಸಂಭಾಷಣೆ ಹೀಗಿದೆ.

"**ಬಸವಣ್ಣ** : ದಾಟುತ್ತೇನೆ (ಎನ್ನುತ್ತ ಹೊಸ್ತಿಲ ದಾಟಿ, ಇಬ್ಬರನ್ನು ಎಳೆದುಕೊಂಡು ಹೊರ ಬರುತ್ತಾನೆ) ಕಳೆದ ಆರು ವರ್ಷಗಳಿಂದ ಈ ಜನಿವಾರವನ್ನು ಅರ್ಥಮಾಡಿ ಕೊಂಡಿದ್ದೇನೆ. ಇದು ನನ್ನನ್ನು ಅಗ್ರಹಾರ ಸಂಸ್ಕೃತಿಗೆ ಬಂಧಿಸುವ ದಾರವೆನಿಸಿದೆ. ಇದನ್ನು ಕಟ್ಟಿಕೊಂಡಾಗಿನಿಂದ ಉಸಿರು ಕಟ್ಟಿದಂತಾಗಿ ನನ್ನ ಬೆಳವಣಿಗೆಯೇ ನಿಂತುಹೋಗಿದೆ.

**ಪುರೋಹಿತ ೨** : ಇಲ್ಲ ಇದು ನಮ್ಮ ಜ್ಞಾನವನ್ನು ಬೆಳೆಸುತ್ತದೆ.

**ಬಸವಣ್ಣ** : ಸಾಧ್ಯವೇ ಇಲ್ಲ, ಈ ಹಿಂಸೆ, ಈ ಮಡಿ, ಮೈಲಿಗೆ, ಈ ಸ್ವಸ್ತಿವಾಚನ, ಈ ಮಂತ್ರಪಠಣ–ಮೊದಲಾದ ನಿತ್ಯ ಕರ್ಮಗಳನ್ನು ಕುರುಡನಂತೆ ಅನುಸರಿಸಿ, ನನ್ನ ಜ್ಞಾನ ಬೆಳೆಯುವುದಿರಲಿ, ನನ್ನ ಸೃಜನಶೀಲತೆಯನ್ನೇ ಕಳೆದುಕೊಂಡಿದ್ದೇನೆ.

**ಪುರೋಹಿತ ೧** : ಇಲ್ಲ. ಇವುಗಳಿಂದ ಏನನ್ನೂ ಕಳೆದುಕೊಳ್ಳುವುದಿಲ್ಲ. ಎಲ್ಲವನ್ನೂ ಗಳಿಸಿ ಕೊಳ್ಳುತ್ತೇವೆ. ಭೂಮಿಯ ಮೇಲಿನ ದೇವತೆಗಳೆಂಬ ಪ್ರತಿಷ್ಠೆಯನ್ನೂ ಕೂಡ."[೨]

ಹೀಗೆ ಮಾತನಾಡುತ್ತಿರಬೇಕಾದರೆ ಬಸವಣ್ಣ ಎಲ್ಲವನ್ನು ನಿರಾಕರಿಸಿ ಜನಿವಾರವನ್ನು ಕಿತ್ತು ಪುರೋಹಿತರ ಕೈಗಿತ್ತು ನಾನು ಸತ್ತು ಸತ್ಯವನ್ನು ಬದುಕಿಸಬೇಕಾಗಿದೆ. ಕೈ ಬಿಡಿರಿ ಬಿಡಿರಿ ಎಂದು ತಿರಸ್ಕರಿಸಿ ಹೊರಹೋಗುತ್ತಾನೆ.

ಅಗ್ರಹಾರ ಸಂಸ್ಕೃತಿಯನ್ನು ಧಿಕ್ಕರಿಸಿದ ಬಸವಣ್ಣ ದೇವಾಲಯ ಸಂಸ್ಕೃತಿ ಉದಾರವೆಂದು ತಿಳಿದು ಮನೆಯಲ್ಲಿರುವ ತನ್ನ ಗಂಟನ್ನು ಹೊತ್ತುಕೊಂಡು ಮನೆಯನ್ನು ಬಿಟ್ಟು ಹೋಗಲು ನಿರ್ಧರಿಸುತ್ತಾನೆ. ಆಗ ಬಲದೇವ, ಮಾದಲಾಂಬೆ, ಮಾದರಸ ಮತ್ತು ಮಾದಿರಾಜ ಎಲ್ಲರೂ ಸೇರಿ ಏನೆಲ್ಲಾ ಹೇಳಿದರೂ ಕೇಳದ ಬಸವಣ್ಣ ತನ್ನ ವೈಚಾರಿಕತೆಯನ್ನು ಮುಂದಿಡುತ್ತಾನೆ. ಇದೇ ನೆಪವೊಡ್ಡಿದ ಪುರೋಹಿತರು ಡಂಗುರವನ್ನು ಸಾರಿ ಬಸವಣ್ಣನ ಕುಟುಂಬವನ್ನು ಬಹಿಷ್ಕಾರ ಹಾಕುತ್ತಾರೆ. ಅಷ್ಟೇ ಅಲ್ಲದೇ ಮಾದರಸನ ಕುಟುಂಬದೊಂದಿಗೆ ಯಾವುದೇ ಸಂಪರ್ಕ ಇಟ್ಟುಕೊಳ್ಳಕೂಡದು ಇದು ದೇವದ್ವಿಜರ ಅಂತಿಮ ತೀರ್ಪು ಎಂದು ವೇದಭಟ್ಟ ನುಡಿದಾಗ ಪುರೋಹಿತ ೧ ಎಂಬುವನು ಇದು ಮನುಸ್ಮೃತಿಯ ತೀರ್ಪು ಎಂದು ನುಡಿಯುತ್ತಾನೆ. ಆಗ ಬಸವಣ್ಣ ಈ ಮನುಸ್ಮೃತಿಯನ್ನು ಮನ್ನಿಸುವುದಿಲ್ಲ. ಧಿಕ್ಕರಿಸುತ್ತೇನೆ ಎಂದು ಹೇಳುತ್ತಾ ತಂದೆಗೆ ನಾನು ಕೂಡಲಸಂಗಮಕ್ಕೆ ಹೋಗುತ್ತೇನೆ ಆಶೀರ್ವದಿಸಿ ಎಂದು ಹೊರಹೋಗುತ್ತಾನೆ.

ಈ ಮೇಲಿನ ಎಲ್ಲಾ ನಾಟಕಗಳನ್ನು ಗಮನಿಸಿದಾಗ ಅಗ್ರಹಾರದ ಸಂಸ್ಕೃತಿಯನ್ನು, ಬ್ರಾಹ್ಮಣರ ಸಂಸ್ಕಾರವನ್ನು ನಿರಾಕರಿಸುತ್ತಾನೆಯೇ ಹೊರತು, ಎಲ್ಲಾ ಸಂಸ್ಕಾರವನ್ನು ನಿರಾಕರಿಸುವುದಿಲ್ಲ, ಏಕೆಂದರೆ ಒಂದು ವೇಳೆ ಎಲ್ಲ ಸಂಸ್ಕಾರವನ್ನು ನಿರಾಕರಿಸುವಂತಿದ್ದರೆ ಲಿಂಗದೀಕ್ಷೆ ಎಂಬುದು ಕೂಡ ಸಂಸ್ಕಾರವಾಗಿತ್ತು ಎಂಬುದೇ ಮೂಲ ಉದ್ದೇಶವಾಗಿ ನಿಲ್ಲುತ್ತದೆ. ಆದರೆ ಪುರೋಹಿತಶಾಹಿವರ್ಗ ತಮ್ಮ ಸಂಸ್ಕಾರವನ್ನು ಶ್ರೇಷ್ಠವೆಂದು ತಿಳಿದು ಅದಕ್ಕೆ ಮುಂದಾದಾಗ ಬಸವಣ್ಣ ಸಂಸ್ಕಾರಕ್ಕೆ ಪರ್ಯಾಯ ಮಾರ್ಗವನ್ನು ಕಂಡುಕೊಳ್ಳುತ್ತಾನೆಂಬುದೇ ಗಮನಾರ್ಹ ಸಂಗತಿ.

**ಬಾಗೇವಾಡಿಯಿಂದ ಕೂಡಲ ಸಂಗಮಕ್ಕೆ**

ಬ್ರಾಹ್ಮಣರ ತವರು ಮನೆಯಾಗಿದ್ದ ಬಾಗೇವಾಡಿಯನ್ನು ಬಿಟ್ಟು ಕೂಡಲಸಂಗಮಕ್ಕೆ ಬರಲು ಹಲವಾರು ಕಾರಣಗಳು ಈಗಾಗಲೇ ಗಮನಿಸಿದಂತೆ ಕಂಡುಬರುತ್ತವೆ. ಬಾಗೇವಾಡಿಯ ಪುರಾವರಾಧೀಶ್ವರನಾದ ಮಾದರಸನ ಮಗ ಬಸವಣ್ಣ ತಮ್ಮ ಶೈವಬ್ರಾಹ್ಮಣರ ಜನಿವಾರ ಉಪನಯನ ಸಂಸ್ಕಾರವನ್ನು ತ್ಯಜಿಸಿದ ಕಾರಣವಾದರೆ ಇನ್ನೊಂದೆಡೆ ಈತನಿಂದಲೇ ಮಾದರಸನ ಕುಟುಂಬಕ್ಕೆ ಅಲ್ಲಿ ಬಹಿಷ್ಕಾರ ಹಾಕುವುದಾಗಿದೆ. ಬಸವಣ್ಣ ಸಂಗಮನಾಥನ ಅವತಾರ ಪುರುಷನಾಗಿದ್ದರಿಂದಲೇ ಅನ್ಯಾಯ, ಅಧರ್ಮ, ಅಸತ್ಯ ಹಾಗೂ ಕಟಿಬದ್ಧ ನೈತಿಕ ಮೌಲ್ಯಗಳನ್ನು ಧಿಕ್ಕರಿಸುವಷ್ಟು ಹಿರಿಮೆ ಬಸವಣ್ಣನ ಬಾಲ್ಯದಲ್ಲಿಯೇ ಇತ್ತು ಎಂಬುದಕ್ಕೆ ಇಲ್ಲಿಯವರೆಗೆ ಗ್ರಹಿಸಿದ ವಿಚಾರಗಳೇ ಸಾಕ್ಷಿಯಾಗಿವೆ.

ಸಾಮಾಜಿಕ ಸಮಸ್ಯೆ ಹಾಗೂ ಧಾರ್ಮಿಕ ಕಟಿಬದ್ಧ ವಿಧಿವಿಧಾನಗಳ ವಿರುದ್ಧ ಕಾಲ-ಕಾಲಕ್ಕೆ ಒಬ್ಬೊಬ್ಬ ಮಹಾಪುರುಷರು ಜನಿಸಿ ಲೋಕೋದ್ಧಾರಕ್ಕಾಗಿ ಅವತರಿಸಿ ಲೋಕಕಲ್ಯಾಣವನ್ನು

ಬಯಸುವಲ್ಲಿ ಶ್ರಮಿಸಿದ್ದಾರೆ. ಭಗವಾನ್ ಬುದ್ಧನನ್ನು ಬಿಟ್ಟರೆ ೧೨ನೇ ಶತಮಾನದಲ್ಲಿ ಜನ್ಮ ತಾಳಿದ ಬಸವಣ್ಣನೇ ಸಮಾಜೋಧಾರ್ಮಿಕ ಕ್ರಾಂತಿಯ ಅವತಾರ ಪುರುಷನಾಗಿ ಕಾಣಿಸಿಕೊಂಡು ಜನರ ಮನದಾಳದಲ್ಲಿ ಅಚ್ಚಳಿಯದೆ ಉಳಿದಿದ್ದಾನೆ. ಇಂತಹ ಬಸವಣ್ಣನು ಎಂಟು ವರ್ಷದವನಿರುವಾಗಲೇ ತಮ್ಮ ಸಂಸ್ಕೃತಿಯ ವಿಚಾರಗಳಿಗೆ ಕೊಡಲಿಪೆಟ್ಟು ನೀಡಿ ವಿದ್ಯಾಭ್ಯಾಸಕ್ಕಾಗಿ ಹಾಗೂ ಜಗತ್ತಿನ ಉದ್ಧಾರಕ್ಕಾಗಿ ಬಾಗೆವಾಡಿಯಿಂದ ಕೂಡಲಸಂಗಮಕ್ಕೆ ಬರುವ ವಿಚಾರಗಳನ್ನು ಶ್ರೀಕಂಠಶಾಸ್ತ್ರಿ ನಲವಡಿ ಅವರ 'ಜಗಜ್ಯೋತಿ ಬಸವೇಶ್ವರ', ಎಂ.ಸಿ. ರಾಮಲಿಂಗಯ್ಯನವರ 'ಕ್ರಾಂತಿಯೋಗಿ ಬಸವಣ್ಣ' ಹಾಗೂ ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತ್ತು ಕಲ್ಯಾಣ' ಎಂಬ ನಾಟಕಗಳು ಬಹುಮುಖಿ ಚಿಂತನೆಯನ್ನು ತಮ್ಮದಾಗಿಸಿಕೊಂಡಿವೆ.

ಬಸವಣ್ಣ ಈಗಾಗಲೇ ಕೂಡಲಸಂಗಮಕ್ಕೆ ಬಂದು ಎರಡು ವರ್ಷಗಳು ಗತಿಸಿವೆ. ಜಾತವೇದ ಮುನಿ ಹಾಗೂ ವಾಮದೇವರ ನಡುವೆ ನಡೆಯುವ ಸಂಭಾಷಣೆ ಬಸವಣ್ಣನ ಬುದ್ಧಿವಂತಿಕೆಯನ್ನು ಹೊಗಳುವುದರೊಂದಿಗೆ ಪ್ರಾರಂಭವಾಗುತ್ತದೆ. ಜಾತವೇದಮುನಿಗಳು ಜಗತ್ತಿನ ಅನ್ಯಾಯ ಅಧರ್ಮಗಳನ್ನು ಹೊಡೆದೋಡಿಸಲು ಸಂಗಮನಾಥನೇ ಬಸವಣ್ಣನಾಗಿ ಜನಿಸಿದ್ದಾನೆ. ಹತ್ತು ವರ್ಷ ಇರುವಾಗಲೇ ವ್ಯಾಕರಣ, ಮಂತ್ರ ಹಾಗೂ ವೇದಗಳನ್ನು ಕಲಿತಿದ್ದಾನೆ ಎಂದಾಗ ವಾಮದೇವರು ಅವನು ಓದುವಲ್ಲಿ ಬರೆಯುವಲ್ಲಿ ಎಲ್ಲರಿಗಿಂತಲೂ ಮೇಲು ಎಂದು ಪ್ರಶಂಸೆಯ ಮಾತುಗಳನ್ನಾಡುತ್ತಾರೆ. ದೇವರಲ್ಲಿ ಭಕ್ತಿ, ವಿಷಯದಲ್ಲಿ ವಿರಕ್ತಿಗಳನ್ನು ನಂಬಿದ್ದ ಬಸವಣ್ಣನು ಜಾತವೇದಮುನಿಗಳ ಆಶ್ರಮಕ್ಕೆ ಬರುತ್ತಾನೆ. ವಾಮದೇವ, ಶಂಕರ ಮೊದಲಾದವರಲ್ಲಿ ಒಬ್ಬನಾದ ಬಸವಣ್ಣ ಸಣ್ಣವಯಸ್ಸಿನವನು.

ಜಾತವೇದ ಮುನಿಗಳು ಪ್ರತಿಯೊಂದು ಮಂತ್ರ ಹೇಳಿದಾಗ ಬಸವಣ್ಣ ಅದರ ಅರ್ಥವನ್ನು ವಿವರಿಸಿ ಹೇಳುತ್ತಾ ನಾವೆಲ್ಲರೂ ಪರಮಾತ್ಮನನ್ನು ಕಾಣುವುದೇ ಬಿಡುಗಡೆಯ ಹಾದಿ ಎನ್ನುತ್ತಾನೆ. ಬಸವಣ್ಣ ಅಷ್ಟು ಬುದ್ಧಿವಂತನಾದರೂ ಗುರುವಿಗೆ ತಲೆಬಾಗಿ ತನ್ನತ್ವವನ್ನು ಪ್ರತಿಪಾದಿಸುತ್ತಾನೆ. ಆಗ ಜಾತವೇದಮುನಿಗಳು ನಾನು ನಿಮಿತ್ತಮಾತ್ರನಾದ ಗುರುವು ಅಂದಾಗ ಬಸವಣ್ಣ ಗುರುದೇವಾ ಹಾಗೆ ಅನ್ನುವುದುಂಟೆ? ನಾನು ಭೂಮಿಗೆ ಬಿದ್ದ ಮರವು, ನೀವೆನ್ನ ಅಜ್ಞಾನ ಕಳೆದ ಗುರುವು ಎಂದು ತನ್ನ ಶಿಷ್ಯತ್ವವನ್ನು ಮೆರೆಯುತ್ತಾನೆ. ನೀನೀಗ ಗುರುಕುಲ ವಾಸಮಾಡಿ ಹದಿನೆಂಟು ವರ್ಷ ಕಳೆದೆ. ಮುಂದೆ ನೀನು ದೀನದಲಿತರ ದುಃಖ ದೂರ ಮಾಡಬೇಕು. ಆ ಶಕ್ತಿಯನ್ನು ಸಂಗಮನಾಥನು ನಿನಗೆ ಕರುಣಿಸಿದ್ದಾನೆ. ಅಷ್ಟೇ ಅಲ್ಲದೇ ಗೃಹಸ್ಥನಾದವನೇ ಉತ್ತಮ ಗುರುವಾಗಬಲ್ಲನು. ಆದುದರಿಂದ ನೀನು ಮೊದಲು ಸಂಸಾರಿಯಾಗಬೇಕೆಂದು ಹೇಳುತ್ತಾನೆ. ಎಲ್ಲಾ ವಿದ್ಯಾರ್ಜನೆಯನ್ನು ಪೂರೈಸಿದ ಬಸವಣ್ಣ ಗಂಗಾಂಬಿಕೆಯೊಂದಿಗೆ ವಿವಾಹವಾಗಿ ಸಂಗಮನಾಥನ ಇಚ್ಛೆಯಂತೆ ಹಾಗೂ ಜಾತವೇದಮುನಿ(ಗುರು)ಗಳ ಅಪ್ಪಣೆಯಂತೆ ಕಲ್ಯಾಣಕ್ಕೆ ಹೋಗುವ ವಿಚಾರಗಳು ಈ ನಾಟಕದಲ್ಲಿ ವ್ಯಕ್ತಗೊಂಡಿವೆ.

ಎಂ.ಸಿ. ರಾಮಲಿಂಗಯ್ಯನವರ 'ಕ್ರಾಂತಿಯೋಗಿ ಬಸವಣ್ಣ' ನಾಟಕದಲ್ಲಿ ಇದೇ ವಿಚಾರ ವ್ಯಕ್ತಗೊಂಡಿದೆ. ನಾವು ಅನಿವಾರ್ಯವಾಗಿ ಇಲ್ಲಿ ಬಿತ್ತರಗೊಂಡಿರುವ ಸಂಭಾಷಣೆಯನ್ನು ಗಮನಿಸಬಹುದು.

"ಜಾತವೇದಮುನಿ : ಬಸವಣ್ಣ, ಈಗ ನೀನು ಅಷ್ಟಮ ವಸಂತಗಳನ್ನು ಕಳೆದು, ಕಲಿತದ್ದು ಪೂರ್ಣಗೊಂಡಂತಾಯಿತು. ಷಡಕ್ಷರ ಮಂತ್ರದಲ್ಲಿ ಸಕಲ ವೇದ ಆಗಮ, ಉಪನಿಷತ್ ಪುರಾಣಗಳ ಹಾಗೂ ತರ್ಕ ವ್ಯಾಕರಣಗಳ ಛಂದಸ್ಸು ಅಲಂಕಾರಾದಿಗಳ ಮೂಲ ತತ್ವಸಾರವನ್ನೇ ಕಂಡುಕೊಂಡೆ. ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗಗಳನ್ನು ನಾವು ಹೇಳಿಕೊಟ್ಟಿದ್ದಕ್ಕಿಂತಲೂ ಮಿಗಿಲಾಗಿಯೇ ಅರಿತುಕೊಂಡಿರುವೆ, ಇಂದಿಗೆ ನಿನ್ನ ವಿದ್ಯೆಯು ಸಂಪೂರ್ಣಗೊಂಡಂತಾಯಿತು. ಇನ್ನು ಮುಂದೆ ನಿನ್ನ ಜೀವನೋಪಾಯ ವನ್ನು ಹರಸುತ್ತಾ ಮುಂದಿನ ಮಾರ್ಗದ ಆಲೋಚನೆ ಮಾಡುವುದು ಒಳ್ಳೆಯದು ಬಸವಣ್ಣಾ,

ಬಸವಣ್ಣ : (ಬೆಚ್ಚಿ) ಗುರುವರ್ಯಾ, ನನ್ನ ನಡೆಯಲೇನಾದರೂ ನೋವಾಯಿತೆ? ನನ್ನ ನುಡಿಯಲೇನಾದರೂ ನೀತಿ ಬಾಹಿರವಾಯಿತೇ? ಮೇಣ್ ಆಶ್ರಮದ ಆಸ್ತಿಗೆ ನನ್ನ ಅಂಗಾಂಗಳು ಅತಿಯಾಯಿತೆ?[೧೩]

ಹೀಗೆ ಸಂಭಾಷಣೆಯ ಮೂಲಕ ವ್ಯಕ್ತಗೊಂಡ ನಾಟಕ ಜಾತವೇದಮುನಿಯ ಮೂಲಕ ಬಸವಣ್ಣನನ್ನು ಲೋಕಕಲ್ಯಾಣಕ್ಕಾಗಿ ಕಳುಹಿಸುವ ಉದ್ದೇಶದೊಂದಿಗೆ ದೃಶ್ಯ ಮುಗಿಯುತ್ತದೆ. ಈ ಎರಡು ನಾಟಕಗಳಲ್ಲಿ ಜಾತವೇದಮುನಿಯ ಆಶ್ರಮದಲ್ಲಿ ವಿದ್ಯೆಯನ್ನು ಕಲಿತ ವಿಚಾರಗಳು ಕಂಡುಬರುತ್ತವೆ. ಆದರೆ ಆಶ್ರಮದ ಇತರೆ ವಿವರಗಳು ಇಲ್ಲಿ ಕಾಣಸಿಗಲಾರದು. ಬಸವಣ್ಣ ಇತರ ಶಿಷ್ಯರೊಂದಿಗೆ ಉತ್ತಮ ಬಾಂದವ್ಯವನ್ನು ಹೊಂದಿದ್ದಾನೆ. ಅಲ್ಲದೆ ಗುರುಶಿಷ್ಯರಲ್ಲಿ ಯಾವುದೇ ತೊಡಕು ಕಂಡುಬರುವುದಿಲ್ಲ. ಇಲ್ಲಿ ಬಿತ್ತರಗೊಂಡ ವಿಚಾರಧಾರೆಗಳು ವೈಭವದ ನೆಲೆಯನ್ನು ಹೊಂದಿವೆ. ಬಸವಣ್ಣನು ಸಂಗಮದಿಂದ ಹೊರ ನಡೆಯಲು ಕಾರಣಗಳನ್ನು ನಾಟಕಕಾರರು ಈ ರೀತಿ ನಿರೂಪಿಸಿದ್ದಾರೆ.

"ಜಾತವೇದಮುನಿ : ಬತ್ತಿ ಉರಿದು ಮನೆಯ ಬೆಳಕಾಗುವಂತೆ ನಿನ್ನಲ್ಲಡಕವಾಗಿರುವ ಮಹತ್ಸಾಧನೆಯ ಆಕಾಂಕ್ಷಾ ಜ್ಯೋತಿಯನ್ನು ಬೆಳಗಿಸಿ ಲೋಕದ ಜನತೆಯಲ್ಲಿ ಕವಿದಿರುವ ಮೂಡಾಂಧಕಾರವನ್ನು ತೊಲಗಿಸಿ ಅವರ ಹೃದಯದ ಬೆಳಕಾಗಬೇಕು ಬಸವಣ್ಣ, ನೀನು ಕೇವಲ ಒಬ್ಬ ಗುರುವಿನ ಸೇವೆಯಲ್ಲಿಯೇ ಕಾಲ ಕಳೆದರೆ ಲೋಕದ ಸೇವೆ ಮಾಡುವುದು ಯಾವಾಗ? ನೀನು ಲೋಕ ಸೇವಕನೆಂಬುದು ಮರೆಯದಿರು."[೧೪]

ಈ ಹಿನ್ನೆಲೆಯಲ್ಲಿ ಗಮನಿಸಿದರೆ 'ಕೆಟ್ಟಿತ್ತು ಕಲ್ಯಾಣ' ಎಂಬ ನಾಟಕ ಬಹಳ ವಿಶಿಷ್ಟವಾಗಿ ಮೂಡಿಬಂದಿದೆ. ಏಕೆಂದರೆ ಈಗಾಗಲೇ ನೋಡಿರುವ ಬಸವಣ್ಣನ ವಿಚಾರಗಳು ಮೊದಲೆರಡು ನಾಟಕಗಳಲ್ಲಿ ಏಕಮುಖವಾಗಿ ಗೋಚರಿಸಿದರೆ ಈ ನಾಟಕದಲ್ಲಿ ವಿಭಿನ್ನವಾಗಿ, ಅಂತರಂಗದ

ಅಭಿವ್ಯಕ್ತಿಯಾಗಿ ಬಸವಣ್ಣ ಕಾಣಿಸಿಕೊಂಡಿದ್ದಾನೆ. ಸ್ವತಃ ನಾಟಕಕಾರರೇ ತಮ್ಮ ಅರಿಕೆಯಲ್ಲಿ "ಬಸವಣ್ಣನವರ ಜೀವನ ಮೂರು ಪರಿಸರಗಳಲ್ಲಿ ಸಾಗಿ ಬಂದಿದೆ. ಬಾಗೇವಾಡಿಯ ಅಗ್ರಹಾರ ಸಂಸ್ಕೃತಿ, ಕೂಡಲಸಂಗಮದ ದೇವಾಲಯ ಸಂಸ್ಕೃತಿ, ಮತ್ತು ಕಲ್ಯಾಣದ ರಾಜಸಂಸ್ಕೃತಿ ಇಲ್ಲೆಲ್ಲ ಆತ ಸ್ಥಾವರದಿಂದ ಜಂಗಮವಾಗುತ್ತ, ಸ್ಥಾವರವನ್ನು ಜಂಗಮಗೊಳಿಸುತ್ತ ಸಾಗಿ ಬಂದಿದ್ದಾನೆ. ಬಾಗೇವಾಡಿಯಲ್ಲಿ ಕರ್ಮದಿಂದ ಧರ್ಮಕ್ಕೆ, ಸಂಗಮದಲ್ಲಿ ಅಂಗದಿಂದ ಲಿಂಗಕ್ಕೆ, ಕಲ್ಯಾಣದಲ್ಲಿ ಲಿಂಗದಿಂದ ಜಂಗಮಕ್ಕೆ ಆತನು ಹೆಜ್ಜೆ ಹಾಕಿದ್ದಾನೆ. ಮೊದಲಿನ ಎರಡು ಪರಿಸರಗಳಲ್ಲಿ ಉದ್ಭವಿಸಿದ ಸಮಸ್ಯೆಗಳನ್ನು ಹರಿದುಕೊಂಡ ಬಸವಣ್ಣ, ಮೂರನೆಯ ಪರಿಸರಕ್ಕೆ ಬರುವಲ್ಲಿ ಈ ಮೂರೂ ಒಂದುಗೂಡಿ ಅವನನ್ನು ದಂಡಿಸಿದವು"[೧೫] ಎಂದು ಅಭಿಪ್ರಾಯಪಟ್ಟಿದ್ದಾರೆ.

ಇವರ ಅಭಿಪ್ರಾಯವನ್ನು ಗಮನಿಸಿದರೆ ನಾಟಕದ ಹೆಸರೇ ಸೂಚಿಸುವಂತೆ ಇತಿಹಾಸದ ಕುರುಹುಗಳನ್ನು ಮೆಲುಕು ಹಾಕುತ್ತಾ ಶರಣರ ಸಂಸ್ಕೃತಿಯನ್ನು ಬಿತ್ತರಿಸುತ್ತಾ ವಿವೇಕಪರ ಚಿಂತನೆಗಳನ್ನು ಬಹುಮುಖಿಯಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ಬಾಗೇವಾಡಿಯನ್ನು ಬಿಟ್ಟು ಕೂಡಲಸಂಗಮಕ್ಕೆ ಬಂದಾಗ ಬಸವಣ್ಣನಿಗೆ ಕೂಡಲಸಂಗಮದ ಶೈವಮತ ಸಂಸ್ಕೃತಿ ಹೇಗೆ ನಡೆಸಿಕೊಂಡಿತು ಎಂಬ ವಿಚಾರಗಳು ಕುತೂಹಲವನ್ನು ಹುಟ್ಟಿಸಿ ಬಹುಮುಖಿ ಆಲೋಚನೆಯಲ್ಲಿ ತೊಡುಗುವಂತೆ ರಚನೆಯಾಗಿದೆ. ಈಗಾಗಲೇ ಬ್ರಹ್ಮಪುರಿ ಬಹಿಷ್ಕಾರದಿಂದ ಹಾಗೂ ಧರ್ಮದ ದುರಾಡಳಿತದಿಂದ ಬೇಸತ್ತ ಬಸವಣ್ಣ ಕೂಡಲಸಂಗಮಕ್ಕೆ ಬಂದಿದ್ದಾನೆ. ವಿದ್ಯಾರ್ಜನೆಗಾಗಿ ಗುರುಗಳಾದ ಜಾತವೇದಮುನಿಗಳ ಹತ್ತಿರ ಅಭ್ಯಾಸ ನಿರತನಾಗಿದ್ದಾನೆ. ಇಲ್ಲಿ ನಾಟಕಕಾರರು ಜಾತವೇದ ಮುನಿಗಳನ್ನೇ 'ಈಶಾನ್ಯ ಗುರು' ಎಂಬ ಹೆಸರಿನಿಂದ ಚಿತ್ರಿಸಿ ಬಸವಣ್ಣನ ಬುದ್ಧಿವಂತಿಕೆಯನ್ನು ಮೆಚ್ಚಿ ಆತನ ಚಿಂತನೆಗಳನ್ನು ಆಲಿಸುತ್ತಾರೆ. ಈಶಾನ್ಯಗುರು ಶಿಷ್ಯ ಸಮೂಹಕ್ಕೆ ವಿದ್ಯೆಯನ್ನು ಬೋಧಿಸುವಂತಹ ಸಂದರ್ಭದಲ್ಲಿ ಬಸವಣ್ಣನ ಆಗಮನವಾಗುತ್ತದೆ. ಆಗ ಪ್ರವೇಶಿಸಿದ ಬಸವಣ್ಣ ಈಶಾನ್ಯಗುರು ಕೇಳಿದ ಪ್ರಶ್ನೆಗೆ ಉತ್ತರಿಸಿದ ಕ್ಷಣದಲ್ಲಿಯೇ ಯಾರು ನೀನು? ಎಂದು ಕೇಳಿದಾಗ ಬಸವಣ್ಣ ತನ್ನ ಹಿನ್ನೆಲೆಯನ್ನು ತಿಳಿಸುತ್ತಾನೆ. ಇದರಿಂದಾಗಿ ಗುರು ಬಸವಣ್ಣನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ವಿದ್ಯಾದಾನ ಮಾಡಲು ಒಪ್ಪಿಗೆ ಸೂಚಿಸುತ್ತಾನೆ. ಆಗ ಗುರುಗಳು ಬಸವ ನೀನು ಬಂದು ಒಂದು ವರ್ಷ ಗತಿಸಿತು. ಅಭ್ಯಾಸ ಅರ್ಥವಾಗುತ್ತಿದೆಯೇ ಎಂದು ಕೇಳಿದಾಗ ಬಸವ ಮೌನನಾಗುತ್ತಾನೆ. ನಂತರದಲ್ಲಿ ಎರಡನೆ ಸಲ ಕೇಳಿದಾಗ ಅರ್ಥವಾಗಿದೆ ಎಂದಾಗ ಗುರು ಏನು ಅರ್ಥವಾಗಿದೆ ಎಂದು ಕೇಳುತ್ತಾರೆ. ಆಗ ಬಸವಣ್ಣ ವ್ಯರ್ಥವೆಂದು ಅರ್ಥವಾಗಿದೆ ಎನ್ನುತ್ತಾನೆ. ಅಲ್ಲಿ ಇದ್ದ ವಿದ್ಯಾರ್ಥಿಗಳು ಆಶ್ಚರ್ಯಚಕಿತರಾಗುತ್ತಾರೆ. ಆಗ ಗುರು ಹೀಗೇಕೆ ಮಗು ಎಂದಾಗ

"ಬಸವಣ್ಣ : ಏನು ಹೇಳಲಿ ಗುರುದೇವಾ, ದೇವಾಲಯ ಸಂಸ್ಕೃತಿಯ ಜನಪರ ತತ್ವಗಳಿಗೆ ಆಕರ್ಷಿತನಾಗಿ ಇಲ್ಲಿಗೆ ಬಂದೆ. ಆದರೆ ಇಲ್ಲಿಯೂ ಪುರೋಹಿತ ಸಂಸ್ಕೃತಿ ಹೆಪ್ಪುಗಟ್ಟಿದೆ. ಈ ರುದ್ರವಾಚನ, ಈ ಮಂತ್ರಪಠನ, ಈ ಸಹಸ್ರ ಬಿಲ್ವಾರ್ಚನ

ಇತ್ಯಾದಿಗಳು ನಮ್ಮ ಬುದ್ಧಿಯನ್ನು ಅರಳಿಸುತ್ತಿಲ್ಲ. ಹೋಮದ ಹೊಗೆಯಿಂದ ಕಪ್ಪಾಗಿರುವ ಬ್ರಾಹ್ಮಣರ ಬುದ್ಧಿಯಂತೆ ಈ ಶೈವರ ಬುದ್ಧಿಯೂ ಇಂದು ಕಪ್ಪಾಗಿ ಹೋಗಿದೆ.

**ಈಶಾನ್ಯಗುರು :** ಆ ಕರ್ಮಾಚರಣೆಗಳನ್ನು ಬಿಡು, ಗ್ರಂಥಗಳನ್ನಾದರೂ ಓದು.

**ಬಸವಣ್ಣ :** ಇವುಗಳನ್ನು ಓದುವಾಗಲೆಲ್ಲ ಹಾಲಹಳ್ಳವನ್ನು ತೊರೆದು, ಉಪ್ಪು ನೀರನ್ನು ಕುಡಿದ ಅನುಭವವಾಗುತ್ತದೆ. ಓದುವುದಕ್ಕಾಗಿ ಓದುವುದು, ಓದಬಾರದ್ದನ್ನು ಓದುವುದು ಹೀಗೆಯೇ ಎಷ್ಟುದಿನಗಳನ್ನು ವ್ಯರ್ಥವಾಗಿ ಕಳೆಯಲಿ? ಪಂಡಿತನಾಗಲು, ಪುರೋಹಿತನಾಗಲು ಓದುವ ಈ ಅಭ್ಯಾಸ, ನನಗೆ ರುಚಿಸುತ್ತಿಲ್ಲ."[೧೬]

ಈ ಸಂಭಾಷಣೆ ಹೀಗೆ ಮುಂದುವರೆಯುತ್ತಾ ಗುರುವಿನ ಪ್ರತಿಯೊಂದು ಪ್ರಶ್ನೆಗೆ ಉತ್ತರಿಸಿದ ಬಸವಣ್ಣ ಮಠಗಳ ಸಂಸ್ಕೃತಿಯನ್ನು ಧಿಕ್ಕರಿಸುವ ವ್ಯವಸ್ಥೆಗೆ ಬದ್ಧನಾಗುತ್ತಾನೆ. ಈ ಬಾಲಕನ ವಿಚಾರವನ್ನು ತಿಳಿದ ಈಶಾನ್ಯಗುರು ಈ ಮಗುವನ್ನು ಸರಿಯಾದ ದಾರಿಯಲ್ಲಿ ನಡೆಸಬೇಕು. ಸಸಿಯನ್ನು ಸಲುಹಬೇಕು, ದೀಪ ಗಾಳಿಗೆ ಆರದಂತೆ ನೋಡಿಕೊಳ್ಳಬೇಕು ಎಂದು ಮನದಲ್ಲಿಯೇ ಅಂದುಕೊಳ್ಳುತ್ತಾನೆ. ಇಲ್ಲಿ ಗುರುವನ್ನು ಮೀರಿಸುವಷ್ಟರಮಟ್ಟಿಗೆ ಬಸವಣ್ಣನ ವೈಚಾರಿಕತೆ ಎದ್ದುಕಾಣುತ್ತದೆ. ಹೀಗೆ ಗುರು ಶಿಷ್ಯರ ಮಧ್ಯೆ ಸಂಭಾಷಣೆ ಏರ್ಪಟ್ಟಂತಹ ಸಂದರ್ಭದಲ್ಲಿ ಪ್ರತಿಕ್ಷಣದಲ್ಲಿಯೂ ಬಸವಣ್ಣನ ನೈತಿಕ ವಿಚಾರಗಳನ್ನು ಗಮನಿಸಿದ ಗುರುಗಳು ಆತನ ವೈಚಾರಿಕ ಕ್ರಾಂತಿಗೆ ಏಳಿಗೆಯನ್ನು ಬಯಸುತ್ತನಾದರೂ ತಾನು ಮಠದ ಅಧ್ಯಾಪಕ ಅಥವಾ ಗುರುವಾಗಿದ್ದರಿಂದಲೇ ನಿಧಾನವಾಗಿ ವಿಚಾರಿಸುತ್ತಾ ಹೋಗುತ್ತಾನೆ. ಒಂದು ದಿನ ಬಸವಣ್ಣ ಬೆಳಗಿನ ಸಮಯ ನಂದಿಕೇಶನೊಂದಿಗೆ ನದಿಗೆ ಸ್ನಾನಕ್ಕೆಂದು ಹೋದಾಗ ಬಸವಣ್ಣ ಅಂತರ್ಮುಖಿ ಯಾಗಿರುವುದನ್ನು ಕಂಡ ನಂದಿಕೇಶ ನಿನಗೆ ಅಪ್ಪ ಅಮ್ಮನ ಸ್ಮರಣೆಯೇ? ಎಂದು ಕೇಳುತ್ತಾನೆ. ಆಗ ಬಸವಣ್ಣ ಇಲ್ಲ. ಅಪ್ಪ ಅಮ್ಮನ ಸ್ಮರಣೆಗಿಂತ ನನಗೆ ಆತ್ಮಸ್ಮರಣೆ ಮುಖ್ಯವಾಗಿದೆ. ಮಲಿನವಾಗಿರುವ ಮನದಲ್ಲಿ ಹುದುಗಿರುವ ಆತ್ಮ ಶುದ್ಧವಾಗಬೇಕಾಗಿದೆ ಎಂದು ಹರ್ಷಭರಿತನಾಗಿ ಮುಂದುವರೆದು

**"ಬಸವಣ್ಣ :** ಹಾಂ, ಆತ್ಮ ಶುದ್ಧವಾಗಬೇಕು. ಆತ್ಮ ಶುದ್ಧವಾಗಬೇಕು. ಈ ನೀರಿನಂತೆ, ಈ ನೀರಿನಂತೆ. ಅಶುದ್ಧವಾಗಿರುವ ನೀರಿನಲ್ಲಿಯೇ ಶುದ್ಧವಾಗುವ ಗುಣವಿದೆ. ಶುದ್ಧವಾಗಬೇಕಾದರೆ ನೀರು ನಿಲ್ಲಬಾರದು, ಹರಿಯುತ್ತಿರಬೇಕು. ನಿಂತರೆ ಅಶುದ್ಧ, ಹರಿದರೆ ಶುದ್ಧ. 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಹೋ, ಹೊಳೆಯಿತು, ಹೊಳೆಯಿತು, ಹೊಳೆಯಿತು, ಹೊ ಹೋ, ಇದು ನೀರಲ್ಲ, ಗುರು ನನ್ನ ಗುರು(ಎನ್ನುತ್ತಾ ಕುಣಿಯುತ್ತಾನೆ)."[೧೭]

ಇಲ್ಲಿ ನೀರು ಎಂಬುದು ರೂಪಕ ಮತ್ತು ಸಾಂಕೇತಿಕವಾಗಿ ಕಾಣಿಸಿಕೊಳ್ಳುತ್ತಿದೆ. ಹರಿಯುವ ನೀರು ಎಷ್ಟು ಶುದ್ಧವಿರುತ್ತದೆಯೋ, ಅದರಂತೆ ಒಂದು ಕಡೆ ನೆಲೆ ನಿಲ್ಲದೇ ಹರಿಯುತ್ತಾ

ಹೋದರೆ ಶುದ್ಧ. ಅದು ಅಂತರಂಗಕ್ಕೆ ಸಂಬಂಧಿಸಿದಂತೆ ಬಸವಣ್ಣ ನುಡಿಯುವ ವಿಚಾರ ಸ್ಪಷ್ಟವಾಗುತ್ತದೆ. ಅಂದರೆ ಧರ್ಮ ಎನ್ನುವುದು ಕಾಲ-ಕಾಲಕ್ಕೆ ಬದಲಾಗುವ ಸನ್ನಿವೇಶಗಳಿಗೆ ಹೊಂದಿಕೊಳ್ಳುತ್ತಾ ಹೋಗಬೇಕೇ ಹೊರತು, ಅದು ಪರಂಪರೆ ಎನ್ನುವ ಹೆಸರಲ್ಲಿ ನಿಂತ ನೀರಾಗದೇ ಹರಿಯುವ ನೀರಿನಂತೆ ತನ್ನನ್ನು ತಾನು ಶುದ್ಧೀಕರಿಸಿಕೊಂಡು ಮುನ್ನಡೆಯಬೇಕೆಂಬ ಆಶಾಮನೋಭಾವನೆ ಇಲ್ಲಿ ವ್ಯಕ್ತವಾಗುತ್ತದೆ.

ದೇವಾಲಯಗಳು ಹಾಗೂ ಮಠಗಳು ಧರ್ಮದ ಕೇಂದ್ರಸ್ಥಾನಗಳಾಗಿವೆ. ಮಠಮಾನ್ಯಗಳಲ್ಲಿ ನಡೆಯುವ ಅನೈತಿಕ ವಿಚಾರಗಳನ್ನು ಬಸವಣ್ಣ ತನ್ನ ವೈಚಾರಿಕತೆಯಿಂದ ಪ್ರಶ್ನಿಸುವ ವಿಚಾರ ಬಹುಮುಖಿ ಚಿಂತನೆಯನ್ನು ಮುಂದಿಡುತ್ತದೆ. ಒಂದು ಕಡೆ ಬಸವಣ್ಣನ ಇಷ್ಟಲಿಂಗಪೂಜೆ, ಇನ್ನೊಂದೆಡೆ ಕೂಡಲಸಂಗಮೇಶ್ವರ ದೇವಾಲಯದಲ್ಲಿ ನಡೆಯುವ ಅನೈತಿಕತೆ ಇವೆರಡು ಪ್ರಮುಖ ಪ್ರಶ್ನೆಗಳಾಗಿ ನಿಲ್ಲುತ್ತವೆ. ಬಸವಣ್ಣನು ಮಠಮಾನ್ಯಗಳ ಸಂಸ್ಕೃತಿಯ ವಿಭಿನ್ನ ಪರದೆಗಳನ್ನು ನೇರವಾಗಿ ವಿರೋಧಿಸಲಾರದೆ ತನ್ನ ಅಂತರಂಗದ ಶುದ್ಧಿಗಾಗಿ ಪ್ರತ್ಯೇಕವಾದ ಇಷ್ಟಲಿಂಗಧಾರಣವನ್ನು ಕೈಗೊಳ್ಳುವುದರ ಮೂಲಕ ಅಂತರಂಗದ ಶುದ್ಧಿಯನ್ನು ಕೈಗೊಳ್ಳಲು ಮುಂದಾಗುತ್ತಾನೆ. ಆಗ ಈಶಾನ್ಯ ಗುರು, ದೇವರ ಕಡೆಗೆ ಬೆನ್ನು ಮಾಡಿ ಕುಳಿತು ಇಷ್ಟಲಿಂಗ ಪೂಜೆಯಲ್ಲಿ ವಿಮುಖನಾಗಿರುವ ಬಸವಣ್ಣನನ್ನು ಕಂಡು ಆಶ್ಚರ್ಯನಾಗುತ್ತಾನೆ. ಮುಂದುವರೆದು ಏನು ವಿಚಿತ್ರ ಬಾಲಕ ಎಂದು ಆಲೋಚಿಸುತ್ತಾನೆ. ಆಗ

"ಬಸವಣ್ಣ : ಹೊರಗೆ ಪೂಜಿಸಿ ಏನ ಮಾಡುವೆನಯ್ಯಾ,
ಒಳಗೆ ಶುದ್ಧವಾಗದನ್ನಕ್ಕ?
ಒಳಗೆ ಶುದ್ಧವಾಗದನ್ನಕ್ಕ?
ಒಳಗೆ... ಶುದ್ಧವಾಗದನ್ನಕ್ಕ?"[೧೮]

ಎಂದು ಗಂಭೀರವಾಗಿ ಹೇಳುತ್ತಾ ಕಣ್ಣು ತೆರೆಯುತ್ತಾನೆ. ಆಗ ಈಶಾನ್ಯಗುರು ಇದಕ್ಕೆ ಸಮ್ಮತಿಸಿ ಹೌದು ಒಳಗೆ ಶುದ್ಧವಾಗದಿದ್ದರೆ ಹೊರಗೆ ಮಾಡಿದ ಪೂಜೆ ವ್ಯರ್ಥ. ಆದರೆ ಒಳಗೆ ಶುದ್ಧವಾಗಬೇಕಾದರೆ ಹೊರಗಿನ ಪೂಜೆ ಅಗತ್ಯ ಎಂದಾಗ ಬಸವಣ್ಣ ಮನುಷ್ಯನಿಗೆ ಮುಖ್ಯವಾದದ್ದು ಆತ್ಮಶುದ್ಧಿ. ಅದಕ್ಕೆ ಅಗತ್ಯವಾದದ್ದು ಆತ್ಮಧ್ಯಾನ ಎನ್ನುತ್ತಾನೆ. ಇಲ್ಲಿ ಮುಖ್ಯವಾಗಿ ಗೋಚರವಾಗುವ ಸಂಗತಿಯೆಂದರೆ ಬಸವಣ್ಣನ ತುಡಿತದ ವಿಚಾರ ಅಂತರಂಗಕ್ಕೆ ಸಂಬಂಧಿಸಿದೆಯೇ ಹೊರತು ಬಹಿರಂಗದ ವಿಚಾರಗಳಿಗಲ್ಲ ಎಂಬ ನೈತಿಕತೆ ಎದ್ದುಕಾಣುತ್ತದೆ. ಬಸವಣ್ಣನ ನೈತಿಕತೆಗೆ ಸಂಬಂಧಿಸಿದ ವಿಚಾರಗಳು ಧರ್ಮದ ತಳಹದಿಯನ್ನೇ ಪ್ರಶ್ನಿಸುತ್ತವೆ. ಏಕೆಂದರೆ ಶೈವಸಂಸ್ಕೃತಿ ಬಿತ್ತರಿಸುವ ಲಿಂಗಧಾರಣ ಸಂಪ್ರದಾಯಕ್ಕೂ ಈ ನಾಟಕದಲ್ಲಿ ವ್ಯಕ್ತವಾದ ತರ್ಕಬದ್ಧವಾದ ವಿಚಾರಗಳಿಗೂ ಸೂಕ್ಷ್ಮ ವಿಚಾರಗಳು ತಲೆಎತ್ತುತ್ತವೆ. ಆತ್ಮಲಿಂಗವೇ ಇಷ್ಟಲಿಂಗ ಆದುದರಿಂದಲೆ ಆತ್ಮಲಿಂಗಕ್ಕೆ ಹೆಚ್ಚು ಪ್ರಾಧಾನ್ಯತೆ ಕೊಡಬೇಕೆಂಬುದೇ ಬಸವಣ್ಣನವರ ವಾದವಾಗಿದೆ. ಈಶಾನ್ಯಗುರು ಶೈವ ಆಚಾರ್ಯರು ದೇವರ ಜಗುಲಿಯ ಮೇಲಿಟ್ಟು ಪೂಜಿಸುವುದು ಇಷ್ಟಲಿಂಗವಲ್ಲವೇ ಎಂದಾಗ

ಬಸವಣ್ಣ ಅದು ಹೊರಗಿನ ಸ್ಥಾವರದ ಲಿಂಗದ ಪ್ರತೀಕವಾಗಿದೆ. ಇದು ಒಳಗಿನ ಆತ್ಮಲಿಂಗದ ಕುರುಹಾಗಿದೆ ಎನ್ನುತ್ತಾನೆ. ಆಗ ಗುರು ಆತ್ಮವನ್ನೇ ಲಿಂಗವೆಂದು ಭಾವಿಸಿದ ಬಳಿಕ ಈ ಕುರುಹು ಮತ್ತೇಕೆ ಎಂದಾಗ ಇದೊಂದು ಸುಲಭ ಸಾಧನ ಎನ್ನುತ್ತಿದ್ದಂತೆಯೇ ಗುರು ಇದು ಜನಿವಾರದ ಇನ್ನೊಂದು ರೂಪವಲ್ಲವೆ ಎನ್ನುತ್ತಾರೆ. ಆಗ ಬಸವಣ್ಣ ಹೇಳುವ ವಿಚಾರ ಹೀಗಿದೆ.

"ಬಸವಣ್ಣ : ಅಲ್ಲ, ಅಲ್ಲ, ಕೊರಳಲ್ಲಿ ಕಟ್ಟಿಕೊಂಡ ಮಾತ್ರಕ್ಕೆ ಎರಡೂ ಒಂದೇ ಅಲ್ಲ. ಜನಿವಾರ ಧರಿಸುತ್ತಲೇ ವ್ಯಕ್ತಿ ಬ್ರಾಹ್ಮಣನಾಗುತ್ತಾನೆ. ಆ ಹಂತದಿಂದಲೇ ಸಮಾಜವನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂದು ವರ್ಗೀಕರಿಸಿ ಬಾಳಲು ಅವನು ಪ್ರಾರಂಭಿಸುತ್ತಾನೆ. ಇದಕ್ಕೆ ವಿರುದ್ಧವೆನ್ನುವಂತೆ ಲಿಂಗವು ವೈದಿಕರು ಸೃಷ್ಟಿಸಿರುವ ವರ್ಣಭೇದವನ್ನು ಅಳಿಸಿ ಹಾಕುತ್ತದೆ. ಅಂದರೆ ಜನಿವಾರ ಸಮಾಜವನ್ನು ಒಡೆದರೆ, ಶಿವದಾರ ಸಮಾಜವನ್ನು ಒಂದುಗೂಡಿಸುತ್ತದೆ. ಅವರನ್ನು ಭಕ್ತರೆಂದು ಮನ್ನಿಸುತ್ತದೆ. ಮಿಕ್ಕವರನ್ನು ಭವಿಗಳೆಂದು ಗುರುತಿಸುತ್ತದೆ."[೧೯]



ಅಂದರೆ ಜನಿವಾರ ನಾಲ್ಕು ವರ್ಗ ಸೃಷ್ಟಿ ಮಾಡಿದರೆ, ಶಿವದಾರ ಎರಡು ವರ್ಗಗಳನ್ನು ಸೃಷ್ಟಿಸಿದಂತಾಯಿತು ಎಂದು ಗುರು ಹೇಳಿದ ಮಾತಿಗೆ ಬಸವಣ್ಣ ಜನಿವಾರ ಜನರನ್ನು ಜನನ ನಿಷ್ಠವಾಗಿ ವರ್ಗೀಕರಿಸಿದರೆ ಇಷ್ಟಲಿಂಗ ಗುಣನಿಷ್ಟವಾಗಿ ವರ್ಗೀಕರಿಸುತ್ತದೆ ಎಂದು ಹೇಳಿದ ಬಸವಣ್ಣ ಆತ್ಮಶುದ್ಧಿ ಮನದ ಆತ್ಮಾವಲೋಕನವಾಗಿದೆ. ಇದೇ ಧರ್ಮದ ತಿರುಳಾಗಬೇಕು ಎಂಬ ಆಶಾಮನೋಭಾವನೆ ಈ ನಾಟಕದಲ್ಲಿ ಎದ್ದುಕಾಣುತ್ತದೆ. ಮುಂದುವರೆದು ನಾಟಕ ಕೂಡಲಸಂಗಮ ಮಠದ ಪೀಠಾಧಿಪತಿ ಪಶುಪತಿ ಸ್ಥಾನಾಚಾರ್ಯರ ಮೂಲಕ ಧರ್ಮದ ಹಿನ್ನಲೆಯಲ್ಲಿ ಮಠದ ನಿರ್ಬಂಧನೆಗಳಿಗೆ ಪ್ರತಿಯೊಬ್ಬರು ಒಳಗಾಗಬೇಕು ಎಂಬ ನಿಯಮಗಳನ್ನು ರೂಪಿಸುವ ತಂತ್ರ ಬಸವಣ್ಣನ ವಿಚಾರದಿಂದ ದ್ವಿಮುಖವಾಗುತ್ತ ಸಾಗುತ್ತದೆ. ಶಿವಶರಣ ಚೆನ್ನಬಸವಣ್ಣ ಹೇಳುವ ಹಾಗೆ ಇಷ್ಟಲಿಂಗ ಕನ್ನಡಿ ಇದ್ದಂತೆ. ಅಂಗದ ಮೇಲೆ ಲಿಂಗವುಳ್ಳವರೆಲ್ಲರು ಸಂಗಮನಾಥರೆ. ಲಿಂಗವಿದ್ದಲ್ಲಿ ಹೊಲೆಯಿಲ್ಲ ಎಂಬ ಮಾತನ್ನು 'ಜಂಗಮದೆಡೆಗೆ' ಎಂಬ ನಾಟಕ ಪ್ರಸ್ತಾಪಿಸುತ್ತದೆ. ಬಸವಣ್ಣ ಲಿಂಗಸಂಸ್ಕಾರದಿಂದ ಅನಾಚಾರಗಳು ದೂರಾಗುತ್ತವೆ. ಇಂತಹ ಲಿಂಗವನ್ನು ದೋಣಿ ನಡೆಸುವ ಅಂಬಿಗರ ಚೌಡಯ್ಯನವರು ಕಟ್ಟಲಿಲ್ಲವೆ ಎನ್ನುತ್ತಾನೆ. ಈ ಮಾತನ್ನು ಇಟ್ಟುಕೊಂಡು ಅಂಬಿಗರ ಚೌಡಯ್ಯ ಚನ್ನಬಸವಣ್ಣ, ಅಲ್ಲಮಪ್ರಭು, ನಾಗಿದೇವ, ಗಂಗಾಂಬಿಕೆ ಮತ್ತು ಶೀಲನನ್ನು ಒಳಗೊಂಡು ಚರ್ಚೆಯಾಗುತ್ತಾ ಹೋಗುತ್ತದೆ. ಅಲ್ಲಮಪ್ರಭುಗಳು ಕಲ್ಲುಕುಟಿಗನಿಂದ ನಿರ್ಮಾಣಗೊಂಡ ಮೂರ್ತಿಮಂತ್ರಕ್ಕೆ ಲಿಂಗವಾಗಲಿಲ್ಲವೆ ಎಂದಾಗ ಅಲ್ಲಿ ನೆರೆದ ಜನಸಮೂಹ ಆಶ್ಚರ್ಯಚಕಿತರಾಗುತ್ತಾರೆ. ಆಗ ಚನ್ನಬಸವಣ್ಣ ಇಷ್ಟಲಿಂಗವೆಂಬುದು ಜ್ಯೋತಿ ಇದ್ದಂತೆ. ಅದನ್ನು ಧರಿಸಿದವರು ಬೆಳಕಿನಲ್ಲಿ ಮುಂದೆ ಸಾಗುತ್ತಾರೆ. ಆಗ ನಾಗಿದೇವ ಲಿಂಗವನ್ನು ಯಾರಿಂದ ಪಡೆಯಬೇಕು ಎಂಬ ವಿಚಾರವನ್ನು ಮುಂದಿಡುತ್ತಾನೆ.

"ಚನ್ನಬಸವಣ್ಣ : ಅರಿವು-ಆಚಾರ ಒಂದಾಗಿರುವವರಿಂದ ಪಡೆಯಬೇಕು.

ನಾಗಿದೇವ : ಲಿಂಗ ಸಂಸ್ಕಾರದ ವಿಧಿ-ವಿಧಾನಗಳೇನಾದರೂ ಇವೆಯೇ?

ಚನ್ನಬಸವಣ್ಣ : ಅರಿವು-ಆಚಾರವನ್ನು ಒಂದಾಗಿಸಿಕೊಂಡ ಸದ್ಗುರುವು ಹೆಣ್ಣು-ಗಂಡುಗಳ ಜಾತಿ, ಕುಲ, ಗೋತ್ರ ನೋಡದೆ ಭಕ್ತನ ಮಸ್ತಕದ ಮೇಲೆ ಹಸ್ತವಿರಿಸಿ, ಲಿಂಗಾಂಗ ಸಾಮರಸ್ಯದ ಗುಟ್ಟನ್ನು ತಿಳಿಸಿ, ಭಕ್ತನ ಅಂಗಕ್ಕೆ ಲಿಂಗದ ಸಂಬಂಧ ಕಲ್ಪಿಸುವರು. ಹೀಗೆ ಪಡೆದ ಲಿಂಗವನ್ನು ನಾದ, ಬಿಂದು, ಕಳಾಯುಕ್ತವಾಗಿ ಪೂಜಿಸಬೇಕು."[೨೦]

ಈ ಮೇಲಿನ ಮಾತನ್ನು ಗಮನಿಸಿದಾಗ ಶರಣರು ಹೇಳುವ ಹಾಗೆ ಲಿಂಗಸಂಸ್ಕಾರ ಪಡೆದವರಿಗೆ ಕುಲ ಜಾತಿ ಮೇಲು ಕೀಳು ಎಂಬ ತಾರತಮ್ಯ ಭಾವನೆ ಇಲ್ಲ. ಲಿಂಗ ಧರಿಸಿದವರೆಲ್ಲರೂ ಸಮಾನರು. ಅವರೇ ಶರಣರು, ಶಿವಕುಲಜರು ಎಂದು ಕರೆಯುವುದರ ಮೂಲಕ ಲಿಂಗ ತಾರತಮ್ಯವನ್ನು ವಿರೋಧಿಸಿದ್ದಾರೆ. ಅಲ್ಲದೆ ಲಿಂಗವೆಂಬುದು ಜಾತಿಯ ಸಂಕೇತವಲ್ಲ. ಧರ್ಮದ ಸಂಕೇತ. ಜಾತಿಯು ಸಮಾಜವನ್ನು ಒಡೆಯುತ್ತದೆ. ಧರ್ಮವು ಸಮಾಜವನ್ನು ಒಂದುಗೂಡಿಸುತ್ತದೆ. ಒಂದು ವೇಳೆ ಲಿಂಗವು ಜಾತಿಯನ್ನು ನಿರ್ದೇಶಿಸುವಂತಿದ್ದರೆ ಲಿಂಗವಿದ್ದಡೆಯಲ್ಲಿ ಹೊಲೆ ಇರುತ್ತಿರಲಿಲ್ಲ ಎಂಬ ವಿಚಾರಗಳನ್ನು ಎತ್ತಿಹಿಡಿಯುತ್ತಾ ದೇವರು ಧರ್ಮ ಎಲ್ಲರ ಸ್ವತ್ತು. ಲಿಂಗಧರಿಸಿದವರು ಯಾರೇ ಇರಲಿ ಇಲ್ಲಿ ಭೇದಭಾವವಿಲ್ಲದೆ ನಡೆಯಬೇಕು ಎಂಬ ವಿಚಾರವನ್ನು ಮುಂದಿಡುತ್ತದೆ.

ಶರಣಸತಿ ಲಿಂಗಪತಿ ಎಂಬ ತತ್ವವನ್ನು ಸಾರಿದ ಶಿವಶರಣರು ಲಿಂಗಪೂಜೆಗೆ ಮಹತ್ವ ನೀಡಿದ್ದಾರೆ. ಮುಖ್ಯವಾಗಿ ಶಿವಶರಣರಲ್ಲಿ ನೆಲೆಯೂರಿದ ಪರಿಕಲ್ಪನೆ ಎಂದರೆ ಇಷ್ಟಲಿಂಗ ಪೂಜೆ. ಇದು ಒಂದರ್ಥದಲ್ಲಿ ಆತ್ಮಲಿಂಗವಾಗಿ ಮಾರ್ಪಡುತ್ತದೆ. ಅಂತೆಯೇ ಅಂತರಂಗದ ನೈತಿಕ ಮಾನವೀಯ ಮೌಲ್ಯಗಳಿಗೆ ಜೀವ ತುಂಬುತ್ತಾ ಧರ್ಮವನ್ನು, ಅದರ ವಿಧಿ-ವಿಧಾನಗಳನ್ನು ಮುಂದಿಟ್ಟುಕೊಂಡು ಸಮಾಜದಲ್ಲಿ ಲಿಂಗತಾರತಮ್ಯ ಮಾಡುವ ವಿವೇಕ ಇಲ್ಲದವರಿಗೆ ಈ ನಾಟಕಗಳ ಮೂಲಕ ಪ್ರತಿಯೊಬ್ಬ ಮನುಷ್ಯನಿಗೆ ಇಷ್ಟಲಿಂಗದ ಪೂಜೆಯು ಅವಶ್ಯಕವಾಗಿದೆ. ಇದರಿಂದ ಆತನ ಅಂತರಂಗವು ಆತ್ಮಶುದ್ಧಿ ಆಗಬೇಕೆಂಬ ನಿಲುವುಗಳನ್ನು ಈ ಮೇಲಿನ ವಿಚಾರಗಳಿಂದ ಗಮನಿಸಬಹುದಾಗಿದೆ.

ಬಸವಣ್ಣ ವಿದ್ಯಾರ್ಜನೆಗಾಗಿ ಬಾಗೆವಾಡಿಯನ್ನು ಬಿಟ್ಟು ಕೂಡಲ ಸಂಗಮಕ್ಕೆ ಬಂದನೋ ಅದು ಕೂಡ ಒಂದು ಧಾರ್ಮಿಕ ಮಠವಾಗಿರುವುದನ್ನು ಕಂಡು ಪರೋಕ್ಷವಾಗಿ ವಿರೋಧಿಸುತ್ತಾನೆ. ಇದನ್ನು ಕಂಡ ಮಠಾಧಿಪತಿಗಳು ಬಸವಣ್ಣನನ್ನು ಮಠ ಬಿಟ್ಟು ಓಡಿಸಲು ಪ್ರಯತ್ನಿಸುತ್ತಾರೆ. ಇದಕ್ಕೆ ಅಗಾಧವಾದ ಒಂದು ಕಾರಣವಿದೆ. ಅದೇನೆಂದರೆ ಬಸವಣ್ಣನ ವಿಚಾರಗಳನ್ನು ಉಳಿದಂತ ಮಠದಲ್ಲಿ ಇರುವವರೆಲ್ಲರೂ ಅನುಸರಿಸಿದರೆ ಮಠದ ನಿರ್ಬಂಧನೆಗಳಿಗೆ ತೊಂದರೆಯಾಗುತ್ತದೆಂಬ

ಭಯ ಅವರನ್ನು ಕಾಡಿದ್ದರಿಂದಲೇ ಬಸವನಿಗೆ ಹಲವಾರು ರೀತಿಯಲ್ಲಿ ಪ್ರಶ್ನಿಸುತ್ತಾರೆ. ಛೇಡಿಸುತ್ತಾರೆ. ಅಂತೆಯೇ ನಿರಾಕರಿಸುತ್ತಾರೆ ಎಂಬುದನ್ನು ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತ್ತು ಕಲ್ಯಾಣ' ನಾಟಕ ಅಭಿವ್ಯಕ್ತಿಸುತ್ತದೆ.

ಬಸವಣ್ಣ ಕೂಡಲಸಂಗಮಕ್ಕೆ ಬಂದದ್ದು ವಿದ್ಯಾರ್ಜನೆಗಾಗಿ, ವಿದ್ಯೆ ಎಂಬುದು ಅಂದು ಮಠಗಳಲ್ಲಿ ಸರ್ವೇಸಾಮಾನ್ಯವಾಗಿತ್ತು. ಅಲ್ಲದೇ ಪಂಡಿತ ಸಮ್ಮುಖವಾಗಿತ್ತು. ಬಸವಣ್ಣ ತಾನು ಹತ್ತು ವರ್ಷದವನಿರುವಾಗಲೇ ಲೋಕದ ಅನೈತಿಕ ವಿಚಾರಗಳ ಬಗೆಗೆ ತಿಳಿದುಕೊಂಡವನಾಗಿದ್ದಲ್ಲದೇ ಪ್ರಶ್ನಿಸುವಷ್ಟರ ಮಟ್ಟಿಗೆ ಬೆಳೆದವನಾಗಿದ್ದನು. ಈ ಹಿನ್ನಲೆಯಲ್ಲಿಯೇ ಬಹುಬೇಗನೇ ಮಠದಲ್ಲಿ ನಡೆಯುವ ಅನೈತಿಕತೆಯನ್ನು ಗುರುತಿಸುತ್ತಾನೆ. ಈ ವಿಷಯವನ್ನು ತನ್ನ ಗುರುವಿನೊಂದಿಗೆ ಚರ್ಚಿಸುತ್ತಾನೆ. ಆಗ ಗುರುಗಳು ಬಸವಣ್ಣನ ಜ್ಞಾನವನ್ನು ಕಂಡು ಈ ಬಾಲಕ ಸಾಮಾನ್ಯದವನಲ್ಲ. ಇವನಿಂದ ಲೋಕಕಲ್ಯಾಣವಾಗುತ್ತದೆಂಬ ವಿಚಾರವನ್ನು ತಿಳಿದು ಆತನ ಪ್ರಶ್ನೆಗೆ ಉತ್ತರಿಸುತ್ತಾ ಹೋಗುತ್ತಾರೆ. ಇದನ್ನೇ ಉಳಿದ ಶಿಷ್ಯವೃಂದದಿಂದ ತಿಳಿದ ಮಠದ ಪೀಠಾಧಿಪತಿಗಳು ಬಸವಣ್ಣನನ್ನು ಕರೆಯಿಸಿ ವಿಚಾರಣೆಗೆ ಒಳಪಡಿಸುತ್ತಾರೆ. ಅಲ್ಲದೆ ಈಶಾನ್ಯಗುರುಗಳನ್ನು ಕೇಳಿದ ಪೀಠಾಧಿಪತಿಗಳು ಬಸವಣ್ಣನ ಬಗ್ಗೆ ಕೆಲವು ಆರೋಪಗಳು ಕೇಳಿಬರುತ್ತವೆ ನಿಜವೇ ಎಂದಾಗ ಗುರುಗಳು ಹಾಗೇನೂ ಇಲ್ಲ. ನನ್ನ ದೃಷ್ಟಿಯಲ್ಲಿ ಅವನೊಬ್ಬ ವಿಶಿಷ್ಟ ವಿದ್ಯಾರ್ಥಿ. ಸ್ವತಂತ್ರ ವಿಚಾರವಾದಿ ಎನ್ನುತ್ತಾರೆ. ಆಗ ಮಠಾಧಿಪತಿಗಳು ಇಂತಹವರು ನಮಗೆ ಬೇಕಿಲ್ಲ. ಈತನಿಂದ ಉಳಿದ ವಿದ್ಯಾರ್ಥಿಗಳ ಮೇಲೆ ಪರಿಣಾಮವಾಗುತ್ತದೆ. ಆಗ ಮಾರ್ಜಾಲಪ್ಪನು ಬಸವಣ್ಣನ ಇತಿಹಾಸ ದೊಡ್ಡದಿದೆ. ಈ ರೀತಿ ಸಂಪ್ರದಾಯವನ್ನು ಪ್ರಶ್ನಿಸಿದ ಕಾರಣಕ್ಕಾಗಿ ಬ್ರಾಹ್ಮಣರು ಬಾಗೇವಾಡಿಯಿಂದ ಹೊರದೂಡಿದರೆಂದು ಹೇಳುತ್ತಾನೆ. ಇದನ್ನರಿತ ಪಶುಪತಿ ಸ್ಥಾನಾಚಾರ್ಯರು ಬಸವಣ್ಣನನ್ನು ಕರೆಕಳುಹಿಸುತ್ತಾರೆ. ಅಲ್ಲದೆ ಇನ್ನು ಮೇಲಾದರೂ ತಪ್ಪನ್ನು ತಿದ್ದಿಕೊಳ್ಳಲಿ ಎನ್ನುತ್ತಾರೆ. ಅದಕ್ಕೆ ತಲೆಬಾಗದ ಬಸವಣ್ಣನನ್ನು ಕಂಡು ಮುಂದುವರೆದ ಪಶುಪತಿಗಳು ಹಾಗಾದರೆ ಈ ಸುಕ್ಷೇತ್ರದಲ್ಲಿ ತಪ್ಪುಗಳಾಗುತ್ತಿವೆಯೇ? ಎನ್ನುತ್ತಾರೆ. ಆಗ

"**ಬಸವಣ್ಣ** : ಆಗದೆ ಮತ್ತೇನು? ತಪ್ಪಿನ ಕಡೆಗೆ ದೇವಾಲಯ, ಮಠಗಳನ್ನು ಎಳೆದುಕೊಂಡು ಹೊರಟಿದ್ದೀರಿ. ಜಾತಿಭೇದವಿಲ್ಲದೆ ಎಲ್ಲ ಜನರನ್ನು ಒಳಗೊಳ್ಳುತ್ತಲಿದ್ದ ದೇವಾಲಯದಲ್ಲಿ, ಮಠದಲ್ಲಿ ಸಮೂಹ ಸಂಸ್ಕೃತಿ ನಾಶವಾಗುತ್ತಲಿದೆ. ನಿಮ್ಮ ಕಾಲಾವಧಿಯಲ್ಲಿ ಇನ್ನೂ...

**ಪಶುಪತಿ** : ಏನೂ? (ಎದ್ದು ಬಂದು ಬೆತ್ತದಿಂದ ಥಳಿಸುತ್ತಾ) ಇವನನ್ನು ಮಠದಿಂದ ಹೊರಗೆ ಹಾಕಿರಿ. (ಬೀಸಿದ ಬೆತ್ತ ತಾಗಿ ಉರಿಯುತ್ತಿದ್ದ ತೂಗುದೀಪ ಹೊಯ್ದಾಡಿ ಹರಿದು ಬೀಳುತ್ತದೆ.)"[೨೦]

ಆಗ ಗುರು ಮಧ್ಯೆ ಪ್ರವೇಶಿಸಿ ಈ ಮಗುವನ್ನು ಮಠದ ಶಾಲೆಯಿಂದ ಹೊರದೂಡಬೇಡಿರಿ. ಇವನನ್ನು ತಿದ್ದುತ್ತೇನೆ. ಶಿವಸಂಸ್ಕೃತಿಯ ವ್ಯಕ್ತಿಯನ್ನಾಗಿ ಬೆಳೆಸುತ್ತೇನೆ ಎಂದು ಕರೆದುಕೊಂಡು

ಹೊರಗೆ ಹೋಗುತ್ತಾನೆ. ಇದರಿಂದ ಎಚ್ಚೆತ್ತ ಬಸವಣ್ಣ ಓದಲು ಮಠಕ್ಕೆ ಹೋಗುವುದನ್ನು ನಿರಾಕರಿಸುತ್ತಾನೆ. ಏಕೆಂದರೆ ಸ್ವತಃ ಬಸವಣ್ಣ ಹೇಳುವ "ಅಗ್ರಹಾರ ಸಂಸ್ಕೃತಿಗೆ ಬೇಸತ್ತು, ದೇವಾಲಯ ಸಂಸ್ಕೃತಿಗೆ ಬಂದರೆ ಇಲ್ಲಿ ಧರ್ಮವೆಂದರೆ ದೇವಾಲಯ, ದೇವಾಲಯವೆಂದರೆ ಧರ್ಮವೆಂಬ ವಿಷಯವನ್ನೇ ಬೋಧಿಸಲಾಗುತ್ತದೆ. ಅಗ್ರಹಾರದ ವಿಧಿ ಕರ್ಮಗಳು ಇಲ್ಲಿಯೂ ದಟ್ಟವಾಗಿ ಪ್ರವೇಶಿಸಿವೆ. ಅಲ್ಲದೆ ದಾನ ದಕ್ಷಿಣೆಯ ಮೂಲಕ ಮೇಲು ವರ್ಣದವರನ್ನು ಮೇಲು ವರ್ಗದವರು ಪೋಷಿಸುವುದು ನಿರಂತರ ನಡೆದಿದೆ. ಬಡವರು ಶ್ರೀಮಂತರಲ್ಲಿ ಸಾಲ ಮಾಡಿ ಭಕ್ತಿ ಸಲ್ಲಿಸುವ ಸ್ಥಿತಿ ನಿರ್ಮಾಣವಾಗಿದೆ."[೨೨] ಎಂಬ ಅಂಶವನ್ನೇ ಮುಂದಿಟ್ಟುಕೊಂಡ ಬಸವಣ್ಣ ದೇವಾಲಯ ಹಾಗೂ ಮಠಮಾನ್ಯಗಳ ಸಂಸ್ಕೃತಿಯನ್ನು ಧಿಕ್ಕರಿಸುತ್ತಾನೆ. ಈ ವಿಷಯವನ್ನು ಪ್ರಸ್ತಾಪಿಸಿದ್ದರಿಂದಲೇ ಮಠದ ಪೀಠಾಧಿಪತಿಗಳಿಂದ ಹೊಡೆತಗಳನ್ನು ತಿನ್ನಬೇಕಾಗುತ್ತದೆ.

ದೇವರ ದುರುಪಯೋಗದ ಕೇಂದ್ರವಾಗಿರುವ ದೇವಾಲಯಗಳನ್ನು ಅರ್ಚಕರನ್ನು ಆಡಂಬರದ ಭಕ್ತಿಯನ್ನು ವಿರೋಧಿಸಬೇಕೆಂಬ ನಿಲುವಿಗೆ ಸಂಪ್ರದಾಯ ಬದ್ಧವಾದ ವಿಚಾರಗಳು ಮೇಲಿಂದ ಮೇಲೆ ಬಸವಣ್ಣನು ಮಠಾಧಿಪತಿಗಳ ನಿರ್ಬಂಧಕ್ಕೆ ಒಳಗಾಗುತ್ತಾನೆ. ಆದರೂ ತಾನು ಯಾವುದೇ ತಪ್ಪು ಮಾಡಿಲ್ಲವೆಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ. ಇದರಿಂದ ಕುಪಿತರಾದ ಮಠಾಧಿಪತಿಗಳು ಈತನಿಂದ ತಪ್ಪೊಪ್ಪಿಗೆ ಬರೆಯಿಸಿಕೊಂಡು ಮಠದಿಂದ ಹೊರಗೆ ಹಾಕಬೇಕೆಂದು ಬಸವಣ್ಣನನ್ನು ಕರೆತರಲು ಮಾರ್ಜಾಲಪ್ಪನನ್ನು ಕಳುಹಿಸುತ್ತಾರೆ. ಆಗ ಬಸವಣ್ಣ ಬರಲು ನಿರಾಕರಿಸಿ ನನ್ನ ದೃಷ್ಟಿಯಲ್ಲಿ ಅದು ಮಠವಲ್ಲ. ಅವರು ಮಠಾಧಿಪತಿಗಳಲ್ಲ, ಅಲ್ಲಿಗೆ ನಾನು ಬರುವುದಿಲ್ಲ ಎನ್ನುತ್ತಾನೆ. ಆಗ ಪಶುಪತಿಗಳು ಜಗತ್ತೇ ನನ್ನನ್ನು ಜಗದ್ಗುರು ಎಂದು ಒಪ್ಪಿಕೊಂಡಿರುವಾಗ ಇವನು ನನ್ನನ್ನು ನಿರಾಕರಿಸಿದ್ದಾನೆಯೇ ಹಾಗಾದರೆ ಅವನನ್ನು ಎಳೆದುಕೊಂಡು ಬನ್ನಿರಿ ಎಂದು ಅಪ್ಪಣೆ ನೀಡುತ್ತಾನೆ. ಆಗ

"**ಸದ್ಯೋಜಾತ** : ಪ್ರಭೂ, ಬಸವಣ್ಣ ವಾದದಲ್ಲಿ ತುಂಬ ಗಟ್ಟಿಗ. ಈ ಹುಡುಗನೊಂದಿಗೆ ವಾದ ಬೆಳೆಸಬೇಡಿರಿ. ಕೆಸರಿನಲ್ಲಿ ಕಲ್ಲು ಎಸೆಯಬೇಡಿರಿ.

**ಪಶುಪತಿ** : ಕೆಸರನ್ನು ಒಣಗಿಸಿ ಮಣ್ಣು ಮಾಡುವುದು ನನಗೆ ಗೊತ್ತು. (ಆಗ ಕೆಲವು ಜನ ಬಸವಣ್ಣನನ್ನು ಎಳೆದುಕೊಂಡು ಬರುತ್ತಾರೆ.)

**ಪಶುಪತಿ** : ಬಸವಣ್ಣಾ ನಿನ್ನಿಂದ ಇಲ್ಲಿಯ ಪವಿತ್ರ ವಾತಾವರಣ ಹಾಳಾಗುತ್ತಲಿದೆ.

**ಬಸವಣ್ಣ** : ಹಾಳಾಗುತ್ತಿರುವುದು ನನ್ನಿಂದ ಅಲ್ಲ, ನಿಮ್ಮಿಂದ. ಅದಕ್ಕೆ ನಾನೂ ಭಾಗಿಯಾಗದಂತೆ ದೂರ ಉಳಿಯುತ್ತಿದ್ದೇನೆ. ಅಷ್ಟೇ

**ಪಶುಪತಿ** : ಹಾಗೆ ದೂರ ಉಳಿಯುವುದರಿಂದ ನೀನು ವ್ಯವಸ್ಥೆಯನ್ನು ಬಹಿಷ್ಕರಿಸಿದಂತಾಗುತ್ತದೆ. ನಾವು ಅಪರಾಧಿಯೆಂದು ಅಪ್ರತ್ಯಕ್ಷವಾಗಿ ಸೂಚಿಸಿದ ಹಾಗಾಗುತ್ತದೆ. ನೀನೆ ಅಪರಾಧಿಯೆಂದು ನಮ್ಮ ಅಭಿಪ್ರಾಯ. ಅದನ್ನು ಬರೆದುಕೊಟ್ಟು ಮಠವನ್ನು ಬಿಟ್ಟು ಹೋಗು."[೨೩]

ಎಂದಾಗ ನಾನು ಅಪರಾಧಿಯಲ್ಲ. ನಾನೇಕೆ ಬರೆದುಕೊಡಬೇಕು ಎಂದು ಬಸವಣ್ಣ ನುಡಿಯುತ್ತಾನೆ. ಆಗ ಪಶುಪತಿಗಳು ನಾವು ಅಪರಾಧಿಗಳಲ್ಲ ಎಂದು ಜನಕ್ಕೆ ತೋರಿಸಿಕೊಡಲಿಕ್ಕೆ ಎಂದಾಗ ಬಸವಣ್ಣ ನಿಮ್ಮ ರಕ್ಷಣೆಗೋಸ್ಕರ ನಾನೇಕೆ ಬರೆದುಕೊಡಬೇಕೆಂದು ವಾದಿಸುತ್ತಾನೆ. ಹೀಗೆ ವಾದ-ವಿವಾದಗಳು ಮುಂದುವರೆದಾಗ ತನ್ನ ಬೆತ್ತಳಿಕೆಯಿಂದ ಬಸವಣ್ಣನಿಗೆ ಥಳಿಸುತ್ತಾರೆ. ಒತ್ತಾಯದಿಂದ ಕೈಹಿಡಿದು ಬರೆಯಿಸಿಕೊಳ್ಳುತ್ತಾರೆ. ಬಸವಣ್ಣ ಕಸಿದುಕೊಳ್ಳುವಷ್ಟರಲ್ಲಿ ಪತ್ರ ನೆಲಕ್ಕೆ ಬೀಳುತ್ತದೆ. ಕೊನೆಯಲ್ಲಿ ಪಶುಪತಿ ಹಾಗೂ ವಟುಗಳ ಏಟಿನಿಂದಾಗಿ ಬಸವಣ್ಣನ ಮೈಯಿಂದ ರಕ್ತ ಸೋರುತ್ತದೆ. ಅಯ್ಯೋ ಅಯ್ಯೋ ಎಂದು ನರಳುವ ಈತನನ್ನ ಎತ್ತಿಕೊಂಡು ಹೋಗುತ್ತಾರೆ.

ಇಲ್ಲಿ ಮುಖ್ಯವಾಗಿ ಗೋಚರವಾಗುವ ಸಂಗತಿಯೆಂದರೆ ಬಸವಣ್ಣನ ಕ್ರಾಂತಿಕಾರಕ ವಿಚಾರಗಳು ಮತ್ತು ಆತನ ನೈತಿಕತೆ ಮಠಮಾನ್ಯಗಳ ಮೇಲೆ ಪರಿಣಾಮಕಾರಿಯಾದ ರೀತಿಯಲ್ಲಿ ಪರಿಣಾಮ ಬೀರಬಹುದೆಂಬ ಸಂಶಯದಿಂದ ಪೀಠಾಧಿಪತಿಗಳು ಮಠದಿಂದ ಬಿಡಿಸುವ ಸಂಚಕಾರವನ್ನು ಕೈಗೊಳ್ಳುತ್ತಾರೆ. ಕೇವಲ ಕೂಡಲಸಂಗಮದ ಒಂದು ಮಠವನ್ನೇ ಅಷ್ಟೇ ಅಲ್ಲ, ಇವತ್ತಿನ ಪ್ರಮುಖ ಮಠಗಳೆಲ್ಲವೂ ಇಂದು ಒಂದು ಜಾತಿಯ ಕೇಂದ್ರಗಳಾಗಿ ಮಾರ್ಪಾಡುತ್ತಿರುವುದನ್ನು ವಿವರಿಸಿ ಹೇಳುವ ನಾಟಕವು ವಿಶಿಷ್ಟವಾಗಿ ಮೂಡಿಬಂದಿದೆ.

ಮಠಾಧಿಪತಿಗಳಿಂದ ನೋವನ್ನು ಅನುಭವಿಸಿದ ಬಸವಣ್ಣನ ಆರೋಗ್ಯದ ಬಗ್ಗೆ ಈಶಾನ್ಯ ಗುರುಗಳು ಚರ್ಚಿಸುವಂತಹ ಸಂದರ್ಭದಲ್ಲಿ ಬಸವಣ್ಣ ಯಾವುದೋ ವಿಶಿಷ್ಟ ಶಕ್ತಿ ನಿನ್ನಲ್ಲಿ ಇದೆ. ಅದು ಕ್ರಮೇಣ ಜಾಗೃತವಾಗುತ್ತಿರುವುದನ್ನು ನಾನು ಕಂಡುಕೊಂಡಿದ್ದೇನೆ. ಅದಕ್ಕಾಗಿ ಇಷ್ಟು ವರ್ಷ ಗುರುಕುಲದ ಯಾವ ನಿರ್ಬಂಧವನ್ನೇ ನಿನಗೆ ನಾನು ಹಾಕಿಲ್ಲ. ಈಗ ನಿನಗೆ ಕಾಡುವ ಪ್ರಶ್ನೆ ಯಾವುದು ಎಂದಾಗ ಬಸವಣ್ಣ ಜಗದ್ಗುರುಗಳ ಪಾಪಗಳನ್ನು ತಿಳಿಸಿಕೊಡುತ್ತಾ ಹೋಗುತ್ತಾನೆ. ಅಲ್ಲದೆ ಮಠದಲ್ಲಿ ನಡೆಯುವ ಬಡ್ಡಿ ವ್ಯವಹಾರ, ಬಡವರ ಹೊಲ ಮುಂತಾದವುಗಳೆಲ್ಲ ಈ ಮಠಗಳ ಪಾಲಾಗುತ್ತಾ ಇರುವುದನ್ನು ಬಸವಣ್ಣ ವಿರೋಧಿಸುತ್ತಾನೆ. ಅಷ್ಟೇ ಅಲ್ಲದೆ ಈ ಮಠಗಳು ಕಳ್ಳ ವ್ಯಾಪಾರಕ್ಕಾಗಿ ಬಡ್ಡಿಯ ರೂಪದಲ್ಲಿ ಹಣ ನೀಡುವ ಕೇಂದ್ರಗಳಾಗಿವೆ ಎಂದಾಗ

**"ಈಶಾನ್ಯಗುರು** : ಬಳ್ಳಿಗಾವಿ ಕೇದಾರೇಶ್ವರ ಮಠದ ಬಡ್ಡಿ ವ್ಯವಹಾರದ ಕತೆ ಕೇಳಿಲ್ಲವೇ

**ಬಸವಣ್ಣ** : ಕೇಳಿದ್ದೇನೆ. ಮಾಂಡಲಿಕರಾದ ಬನವಾಸಿ ಕದಂಬರ ಕಿರೀಟವನ್ನೇ ಕೇದಾರೇಶ್ವರ ಮಠ ಒತ್ತೆ ಇಟ್ಟುಕೊಂಡು ಸಾಲಕೊಟ್ಟುದು, ಇಂದು ಗುಟ್ಟಿನ ವಿಷಯವಾಗಿ ಉಳಿದಿಲ್ಲ."[೨೪]

ಮುಂದುವರೆದು ಈಶಾನ್ಯ ಗುರುಗಳು ಸಾಲ ತೀರಿಸಿದರು. ಆ ಮಠದ ಸ್ವಾಮಿಗಳು ಕಿರೀಟವನ್ನು ಹಿಂದುರಿಗಿಸಲು ಹಿಂದು-ಮುಂದು ನೋಡಿದಾಗ ಕೋಪಗೊಂಡ ಮಾಂಡಲಿಕರು ಅವರನ್ನು ಬಹಿರಂಗವಾಗಿ ಬಂಧಿಸಿದರು. ಹೀಗೆ ಈ ನಾಟಕ ಚರ್ಚೆ ಮಾಡುತ್ತಾ ಗುರು ಶಿಷ್ಯರ

ಸಂಭಾಷಣೆಗಳ ಮೂಲಕ ಇಂದಿನ ಮಠ–ಮಾನ್ಯಗಳು ಜಾತ್ಯಾತೀತ ಸಂಸ್ಕೃತಿಯನ್ನು ಕಳೆದುಕೊಂಡ ವಿಷಯವನ್ನು ಬಡಭಕ್ತರ ಮೂಲಕ ದಾನದ ರೂಪದಲ್ಲಿ ಹಣ ಸಂಗ್ರಹಿಸುವ ವ್ಯವಸ್ಥೆಯನ್ನು ಅಲ್ಲದೆ ಮಠಾಧಿಪತಿಗಳು ಸಣ್ಣ ಪುಟ್ಟ ಮಠದ ಅಧಿಕಾರಿಗಳನ್ನು ನಿಯಮಿಸುವಾಗ ತಮ್ಮ ಸಂಬಂಧಿಕರನ್ನು ನೇಮಿಸುವ ಕುತಂತ್ರ ನೀತಿಯನ್ನು ಬಯಲಿಗೆಳೆಯುತ್ತದೆ. ಒಂದು ವೇಳೆ ಈ ಸಂಪ್ರದಾಯವನ್ನು ಮಠಾಧೀಶರು ಮುಂದುವರಿಸಿದರೆ ಸಾರ್ವಜನಿಕ ಸ್ವತ್ತಾದ ಮಠಗಳು ಒಂದು ಜಾತಿಯವರ, ಒಂದು ಕುಟುಂಬದವರ ಆಸ್ತಿಯಾಗುವ ಭಯವನ್ನು ವ್ಯಕ್ತಪಡಿಸುತ್ತದೆ. ಇಂತಹ ವ್ಯವಸ್ಥೆಯನ್ನು ಶುದ್ಧಿಕರಿಸಬೇಕಾದರೆ ಪ್ರತಿಯೊಬ್ಬರು ಆತ್ಮಾವಲೋಕನ ಮಾಡಿಕೊಳ್ಳ ಬೇಕಾಗುತ್ತದೆ. ಇಂತಹ ಆತ್ಮಾವಲೋಕನ ನಿನ್ನಿಂದ ಮಾತ್ರ ಸಾಧ್ಯವೆಂದು ಈಶಾನ್ಯಗುರು ಬಸವಣ್ಣನಿಗೆ ಹೇಳುವಲ್ಲಿ ಬಸವಣ್ಣನ ತತ್ವವನ್ನು ಪ್ರತಿಯೊಬ್ಬರು ಪಾಲಿಸಬೇಕು ಅಂದಾಗ ಮಾತ್ರ ಧರ್ಮದ ಕ್ರೂರವ್ಯವಸ್ಥೆಯನ್ನು ಹುಟ್ಟು ಹಾಕಿದ ಮಠಗಳು, ದೇವಾಲಯಗಳು ಸಾರ್ವಜನಿಕರ ಆಸ್ತಿಯಾಗುವಲ್ಲಿ ಸಂದೇಹವಿಲ್ಲ ಎಂಬ ವಿಚಾರ ಮಹತ್ತರವಾಗಿ ಈ ನಾಟಕದಲ್ಲಿ ಮೂಡಿಬಂದಿದೆ.

ಸಮಾಜ ಮತ್ತು ಧರ್ಮ ಇವು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಸಮಾಜದ ಒಂದು ಭಾಗವಾದ ಜಾತಿ ಜನರನ್ನು ಅಗಲಿಸಿದರೆ ಧರ್ಮ ಜನರನ್ನು ಒಂದುಗೂಡಿಸುತ್ತದೆ ಎಂಬ ವಿಚಾರವನ್ನು ಮುಂದಿಟ್ಟುಕೊಂಡು ಧರ್ಮದ ತಳಹದಿಯಾಗಿರುವ ಮಠ–ಮಂದಿರಗಳ ಬಗ್ಗೆ ತಿಳಿಸುವ ನಾಟಕ ಮರಣವೇ ಮಹಾನವಮಿ. ಈ ನಾಟಕದಲ್ಲಿ ಬರುವ ವೀರಣ್ಣ ಮತ್ತು ರುದ್ರಣ್ಣನೆಂಬ ಪಾತ್ರಗಳ ಮೂಲಕ ೨೬ನೆಯ ದೃಶ್ಯದಲ್ಲಿ ಚರ್ಚೆಯಾಗಿರುವುದು ಉಲ್ಲೇಖನೀಯ. ವೀರಶೈವ ಧರ್ಮದ ಬಗ್ಗೆ ಬಲ್ಲವರು ಬಹಳ ರೀತಿಯಲ್ಲಿ ಹೇಳಿದರೆ ಬಸವಣ್ಣ ದಯವೇ ಧರ್ಮದ ಮೂಲವಯ್ಯ ಎನ್ನುತ್ತಾನೆ. ಆಗ ರುದ್ರಣ್ಣ ಮರುಗುವುದೇ ಧರ್ಮ ಎಂದಾಯಿತು. ಹೀಗೆ ಈ ಇಬ್ಬರ ಸಂಭಾಷಣೆಯ ಮೂಲಕ ಧಾರ್ಮಿಕ ದಾಸ್ಯವನ್ನು ಪೋಷಿಸುವ ಕೇಂದ್ರಗಳಾಗಿರುವ ಮಠ–ಮಾನ್ಯಗಳನ್ನು ತಿರಸ್ಕರಿಸಿ ಉಳ್ಳವರು ಶಿವಾಲಯ ಮಾಡುವರು, ನಾನೇನು ಮಾಡಲಿ ಬಡವನಯ್ಯಾ, ಎನ್ನ ಕಾಲೇ ಕಂಬ, ಎನ್ನ ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ, ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ ಎಂದು ಧಾರ್ಮಿಕ ದಾಸ್ಯ ವಿಮೋಚನೆಗಳಾಗಿ ತಮ್ಮನ್ನೇ ತಾವು ಅರ್ಪಿಸಿದ್ದಾರೆ ಎಂಬ ವಿಷಯವನ್ನು ಮೂಲವಾಗಿ ಇಟ್ಟುಕೊಂಡು ಈ ನಾಟಕ ಮಠದ ಪೀಠಾಧಿಪತಿಗಳನ್ನು, ಪುರೋಹಿತರನ್ನು ಹಾಗೂ ಎಲ್ಲಿಯವರೆಗೆ ಧರ್ಮ ದೇವರುಗಳು ಮಠ–ಮಂದಿರಗಳ ಅಧೀನದಲ್ಲಿ ಇರುತ್ತವೆಯೋ, ಅಲ್ಲಿಯವರೆಗೆ ಜನಸಾಮಾನ್ಯರಿಗೆ ಧಾರ್ಮಿಕ ಅಜ್ಞಾನ ತಪ್ಪಿದ್ದಲ್ಲ ಎಂಬ ವಿಷಯವನ್ನು ಚರ್ಚಿಸುತ್ತಾ ಹೋಗುತ್ತದೆ.

**ಕೂಡಲ ಸಂಗಮದಿಂದ ಪ್ರಯಾಣ**

ಬಸವಣ್ಣ ಹುಟ್ಟೂರಾದ ಬಾಗೇವಾಡಿ ಅಗ್ರಹಾರದಲ್ಲಿ ಜನಿವಾರ ಧರಿಸುವುದನ್ನು ನಿರಾಕರಿಸಿದ್ದರಿಂದ ಮನುಸ್ಮೃತಿಗೆ ಅಪಮಾನ ಮಾಡಿದ ಎಂಬ ಕಾರಣಕ್ಕಾಗಿ ಅಗ್ರಹಾರದಿಂದ ಬಹಿಷ್ಕರಿಸಲಾಯಿತು. ಅಲ್ಲದೆ ಆತನನ್ನು ದೈಹಿಕವಾಗಿ ದಂಡಿಸಲಾಯಿತು. ಹೀಗೆ ಮಾನಸಿಕ

ಮತ್ತು ದೈಹಿಕ ನೋವುಗಳನ್ನು ಅನುಭವಿಸಿದ ಬಸವಣ್ಣ ಅಲ್ಲಿಂದ ಕೂಡಲಸಂಗಮಕ್ಕೆ ಪ್ರಯಾಣ ಮಾಡಿದನು. ಆದರೆ ಅಲ್ಲಿಯು ಕೂಡ ಅಗ್ರಹಾರದಂತೆ ಅನೇಕ ಕ್ರೂರವಾದ ಆಚರಣೆ ಮತ್ತು ಶೋಷಣೆಯನ್ನು ಮಠದಲ್ಲಿ ನಡೆಯುವುದು ಕಂಡುಕೊಂಡ. ಅವುಗಳ ವಿರುದ್ಧ ಮಾತನಾಡಿ ಅಗ್ರಹಾರಕ್ಕಿಂತ ಕ್ರೂರವಾದ ಹಿಂಸೆಯನ್ನು ಅನುಭವಿಸಬೇಕಾದ ಪ್ರಸಂಗಗಳು ಒದಗಿದವು. ಮಠದ ಕ್ರೂರವಾದ ಹಿಂಸೆಯನ್ನು ಅನುಭವಿಸಿದರು. ತನ್ನ ತತ್ವ ಸಿದ್ಧಾಂತಗಳನ್ನು ಕೈ ಬಿಡದೆ ಅವುಗಳನ್ನು ಮುಂದುವರೆಸಲು ಪ್ರಯತ್ನಿಸುತ್ತಾನೆ. ತಾನು ನಂಬಿರುವ ತತ್ವ ಸಿದ್ಧಾಂತಗಳನ್ನು ಜಾರಿಗೊಳಿಸಲು ಅಲ್ಲಿಂದ ಹೊರನಡೆಯಲು ಯೋಚಿಸುತ್ತಾನೆ. ತಾನು ಇಹಲೋಕ ಯಾತ್ರೆ ಮಾಡಿದರು ಚಿಂತೆಯಿಲ್ಲ ಸತ್ಯ ಉಳಿಯಬೇಕು ಎಂಬ ಆತನ ನಂಬಿಕೆ ಸ್ಮರಣೀಯವಾದದ್ದು. ಇಂತಹ ಸಂದರ್ಭದಲ್ಲಿ ಆತನಿಗೆ ಪ್ರೇರಣೆ ಒದಗಿಸಿದ್ದ ತನ್ನ ನೆಚ್ಚಿನ ಗುರುಗಳಾದ ಈಶಾನ್ಯಗುರುಗಳ ಮಾತು, ನಿನ್ನೀ ಧ್ಯೇಯ ಸಾಧನೆಗೆ ಈ ಮಠಗಳು ಯೋಗ್ಯವಾದ ಪರಿಸರವಲ್ಲ ಏಕೆಂದರೆ ಭ್ರಷ್ಟಾಚಾರಗಳಿಂದ ತುಂಬಿರುವ ಈ ಮಠಗಳು ನಿನ್ನ ವಿಚಾರಗಳನ್ನು ತತ್ವಗಳನ್ನು ನಾಶಮಾಡುತ್ತವೆ. ಕೂಡಲಸಂಗಮವು ಒಂದು ಸಣ್ಣ ಗ್ರಾಮ. ಇಲ್ಲಿ ಅವಕಾಶಗಳು ತುಂಬ ಸೀಮಿತವಾದವು. ಆದ್ದರಿಂದ ನೀನು ಸಾಧ್ಯವಾದರೆ ನಿನ್ನ ಸೋದರಮಾವನಾದ ಬಲದೇವ ಮಂತ್ರಿಗಳ ರಾಜಧಾನಿಯಾದ ಕಲ್ಯಾಣವನ್ನು ಕೇಂದ್ರವಾಗಿ ಮಾಡಿಕೊಂಡು ಅಲ್ಲಿಯೇ ಲೋಕಕಲ್ಯಾಣ ಕಾರ್ಯಕ್ಕೆ ತೊಡಗು ಎನ್ನುವ ಮಾತುಗಳು ಬಸವಣ್ಣನಿಗೆ ಸಂಗಮವನ್ನು ತ್ಯಜಿಸಲು ಪ್ರೇರಣೆಯನ್ನು ನೀಡಿದವು. ಹೀಗೆ ವಿದ್ಯಾರ್ಥಿ ಜೀವನದಲ್ಲಿಯೇ ಅನೇಕ ನೋವು ನಲಿವುಗಳನ್ನು ಕಂಡ ಬಸವಣ್ಣ ಮುಂದಿನ ಜೀವನನಿರ್ವಹಣೆಗಾಗಿ ತನ್ನ ಸೋದರ ಮಾವನ ಆಶ್ರಯ ಪಡೆದು ಮಂಗಳವೇಡೆಗೆ ಬಂದು ನೆಲೆಸಿದನು. ಅಲ್ಲಿ ತನಗೆ ನೀಡಿದ ಕೆಲಸಕಾರ್ಯಗಳನ್ನು ಶ್ರದ್ಧೆಯಿಂದ ನಿರ್ವಹಿಸಿ, ದೊರೆ ಬಿಜ್ಜಳನ ವಿಶ್ವಾಸವನ್ನು ಗಳಿಸಿ ಕಲ್ಯಾಣದ ಮಹಾಮಂತ್ರಿಯ ಪದವಿ ಗಳಿಸಿದನು. ರಾಜ್ಯದ ಕೆಲಸಕಾರ್ಯಗಳೊಂದಿಗೆ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳ ನಿರ್ವಹಣೆಗಾಗಿ ಮಹಾಮನೆಯನ್ನು ಸ್ಥಾಪಿಸಿ ಅನೇಕ ಸುಧಾರಣೆಗಳನ್ನು ತರಲು ಪ್ರಯತ್ನಿಸಿದನು.

**೩.೨. ಸಾಮಾಜಿಕತೆಗೆ ಸಂಬಂಧಿಸಿ ಗ್ರಹಿಕೆಗಳು**

ಸಮಾಜ ಗತಿಶೀಲವಾದುದು, ಅಂತೆಯೇ ಪಾಶ್ಚಾತ್ಯ ವಿದ್ವಾಂಸ ಅರಿಸ್ಟಾಟಲ್ ಹೇಳುವಂತೆ ಮಾನವ ಮೊದಲು ಸಮಾಜ ಜೀವಿ, ಅನಂತರ ರಾಜಕೀಯ ಪ್ರವೇಶ. ಪ್ರಾಚೀನ ಮಾನವನ ಇತಿಹಾಸವನ್ನು ಅವಲೋಕಿಸಿದಾಗ ಸಾಮಾಜಿಕ ಜೀವನದ ಆರಂಭ ಗೋಚರವಾಗುತ್ತದೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ವಿಶಿಷ್ಟವಾದ ಆಚರಣೆಗಳು, ಸಂಪ್ರದಾಯಗಳು, ರೂಢಿಗತವಾದ ನೀತಿ ನಿಯಮಗಳು ಮಾನವನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂತಹ ಕೆಲಸಕ್ಕೆ ಕೈಹಾಕಿದವು. ಇಂತಹ ಸಂದರ್ಭದಲ್ಲಿ ಸಮಾಜವನ್ನು ಸುಧಾರಿಸಲು ಕಾಲ-ಕಾಲಕ್ಕೆ ಒಬ್ಬೊಬ್ಬ ಮಹಾಪುರುಷರು ಹುಟ್ಟಿಕೊಂಡು ಇಂದಿಗೂ ಜೀವಂತವಾಗಿ ಉಳಿದುಕೊಂಡಿದ್ದಾರೆ. ಅಂತಹ ಮಹಾಪುರುಷರಲ್ಲಿ ಒಬ್ಬರಾದ ಬಸವಣ್ಣ ೧೨ನೇ ಶತಮಾನದಲ್ಲಿ ಜನಿಸಿ ಸಾಮಾಜಿಕ ಆಂದೋಲನವನ್ನು ಕೈಗೊಂಡು

ವಿಶ್ವದಾದ್ಯಂತ ತನ್ನ ಪ್ರಖರತೆಯನ್ನು ಬೆಳಗಿಸಿದ್ದಾನೆ. ಇಂತಹ ಬಸವಣ್ಣನ ಸಾಮಾಜಿಕ ವಿಚಾರಗಳನ್ನು ಆಧುನಿಕ ನಾಟಕಗಳು ಕಂಡುಕೊಂಡ ಅಂಶಗಳನ್ನು ಈ ಕೆಳಗಿನಂತೆ ಗಮನಿಸಬಹುದು.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ತಾಯಿಯೇ ಮೊದಲ ಗುರು, ಮನೆಯೇ ಮೊದಲ ಪಾಠಶಾಲೆ ಎಂಬ ಮಾತಿದೆ. ಅದರಂತೆ ಬಸವಣ್ಣನಿಗೆ ತನ್ನ ತಾಯಿಯಾದ ಮಾದಲಾಂಬಿಕೆಯೇ ಮೊದಲ ಗುರುವಾಗಿದ್ದಾಳೆ. ಬಸವ ಚಿಕ್ಕವನಿರುವಾಗ ಆತನಿಗೆ ಹಿಂಸೆಯೆಂಬುದು ಇಷ್ಟವಾಗುತ್ತಿರಲಿಲ್ಲ. ಆತನ ವಿಚಾರಗಳು ಧಾರ್ಮಿಕತೆಗೆ ಹೆಚ್ಚಿನ ಒಲವನ್ನು ಹೊಂದಿದ್ದ ಎಂಬುದನ್ನು ಆತನು ತನ್ನ ತಾಯಿಯೊಂದಿಗಿನ ಸಂಭಾಷಣೆಗಳೇ ನಿದರ್ಶನಗಳಾಗಿವೆ. ಶಿವನು ತಪಸ್ಸಿಗೆ ಕುಳಿತ ಕಥೆಯನ್ನು ಕೇಳಿದ ಬಸವಣ್ಣ ಹೀಗೆ ಪ್ರತಿಕ್ರಿಯಿಸುತ್ತಾನೆ.

"**ಬಸವಣ್ಣ** : ಶಿವನ ತಪಸ್ಸು ಭಂಗವಾದದ್ದು ನನ್ನ ಮನಸ್ಸಿಗೆ ಬರಲಿಲ್ಲ.

**ಮಾದರಸ** : ಏನು ಬಸವಣ್ಣ ನಿನ್ನ ಮನಸ್ಸಿಗೆ ಬಾರದ ವಿಷಯ.

**ಬಸವಣ್ಣ** : ಮನ್ಮಥ ಶಿವನ ತಪಸ್ಸನ್ನು ಭಂಗ ಮಾಡಿದನಂತೆ ಅಪ್ಪಾಜಿ.

**ಮಾದರಸ** : ಹೌದಪ್ಪಾ ಪುರಾಣಗಳಲ್ಲಿರುವುದೇ ಹಾಗೆ.

**ಬಸವಣ್ಣ** : ಪುರಾಣಗಳು ಸುಳ್ಳು ಹೇಳುತ್ತವೆ.

**ಮಾದರಸ** : ಹಾಗಾದರೇ ನಿಜ ಹೇಳುವವರು ಯಾರು.

**ಬಸವಣ್ಣ** : ನಮ್ಮ ಮನಸ್ಸು."[೨೫]

ಈ ಮೇಲಿನ ಮಾತುಗಳನ್ನು ಗಮನಿಸಿದಾಗ ಬಸವ ತನ್ನ ಬಾಲ್ಯದಲ್ಲಿ ಸಮಾಜ ವ್ಯವಸ್ಥೆಯನ್ನು ಪ್ರಶ್ನಿಸುವ ಕಾರ್ಯಕ್ಕೆ ಮುಂದಾಗಿದ್ದನು ಎಂಬುದನ್ನು ಹೇಳುವ ನಾಟಕಕಾರರು ಆತನ ಬಾಲ್ಯ ಜೀವನ ಸಂಗತಿಗಳನ್ನು ವೈಭವದ ನೆಲೆಯಲ್ಲಿ ಚಿತ್ರಿಸಿದ್ದಾರೆ. ತಂದೆ ತಾಯಿಗಳ ಅಕ್ಕರೆಯಲ್ಲಿ ಬೆಳೆದ ಬಸವಣ್ಣ ವಿದ್ಯಾಭ್ಯಾಸಕ್ಕಾಗಿ ಸಂಗಮದ ಕಡೆ ನಡೆದಾಗ ತಾಯಿಯಾದ ಮಾದಲಾಂಬಿಕೆಯ ಸಂಕಟವನ್ನು ನಾಟಕಕಾರ ಚಿತ್ರಿಸುತ್ತಾರೆ. ಆದರೆ ಬೇರೆ ಬೇರೆ ನಾಟಕಗಳಲ್ಲಿ ಬಸವಣ್ಣ ವಿದ್ಯಾಭ್ಯಾಸಕ್ಕೆಂದು ಸಂಗಮಕ್ಕೆ ಬರಲಿಲ್ಲ. ಜನಿವಾರ ನಿರಾಕರಣೆಯ ಶಿಕ್ಷೆಗಾಗಿ ಕೂಡಲಸಂಗಮಕ್ಕೆ ಬರುತ್ತಾನೆ ಎನ್ನುವುದನ್ನು ಒತ್ತಿ ಹೇಳಿವೆ. ಅದು ಏನೇ ಇರಲಿ ಅದು ಇಲ್ಲಿ ಮುಖ್ಯವಾಗುವುದಿಲ್ಲ. ಆದರೆ ಬಸವಣ್ಣನು ಜನಿವಾರವನ್ನು ನಿರಾಕರಿಸಿ ಕೂಡಲಸಂಗಮಕ್ಕೆ ಬಂದ ನಂತರ ಅವರ ಕುಟುಂಬದ ಪರಿಸ್ಥಿತಿ ಯಾವ ಸ್ವರೂಪ ಪಡೆದುಕೊಂಡಿತು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಬಸವಣ್ಣನ ತಂದೆಯಾದ ಮಾದರಸರು ಸೋದರಮಾವನಾದ ಬಲದೇವ ಮಹಾಮಂತ್ರಿ ಆದರೂ ಅಗ್ರಹಾರ ನಿಯಮಗಳನ್ನು ಮೀರುವಂತಿಲ್ಲ. ಬಸವಣ್ಣ ಜನಿವಾರ ನಿರಾಕರಿಸಿದ ಕಾರಣ ಅವರ ಕುಟುಂಬವನ್ನು ಬಹಿಷ್ಕಾರ ಮಾಡಲಾಗುತ್ತದೆ. ಮಾದಲಾಂಬಿಕೆ ಮತ್ತು ಮಾದರಸರು ಮಗನ ಅಗಲುವಿಕೆಯ ನೋವು ಒಂದೆಡೆಯಾದರೆ ಮತ್ತೊಂದು ಕಡೆಗೆ

ತಾವು ಅಗ್ರಹಾರದಿಂದ ಬಹಿಷ್ಕಾರಕ್ಕೆ ಒಳಗಾದ ದುಃಖ ಅವರನ್ನು ಆವರಿಸಿದೆ ಎಂಬುದನ್ನು ನಾಟಕ ಎಂತಹ ಕಠೋರ ಹೃದಯವಾದರೂ ಮಿಡಿಯುವಂತೆ ಚಿತ್ರಿಸಿದ್ದಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಜಾತಿ ವ್ಯವಸ್ಥೆಯು ತನ್ನ ಆಂತರ್ಯದಲ್ಲಿ ಎಂತಹ ಕ್ರೂರತೆಯನ್ನು ಹೊಂದಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯಲ್ಲಿ ನ್ಯಾಯ ಕೇಳುವುದು, ನ್ಯಾಯ ಪರವಾಗಿ ನಿಲ್ಲುವುದು ಕೂಡ ಅಪಾಯ ಎಂಬಂತೆ ಹೇಳಲಾಗುತ್ತದೆ. ಇದಕ್ಕೆ ಮೇಲಿನ ಸಂಗತಿಗಳೇ ನಿದರ್ಶನವೆಂದು ಹೇಳಬಹುದಾಗಿದೆ.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯನ ಹುಟ್ಟಿನಿಂದ ಸಾಯುವ ತನಕ ಜೀವಿತಾವಧಿಯನ್ನು ನಾಲ್ಕು ರೀತಿಯಲ್ಲಿ ವಿಭಾಗಿಸಿ ಕೊಡಲಾಗಿದೆ. ಗೃಹಸ್ಥ, ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸನ್ಯಾಸಿ, ಇವುಗಳನ್ನು ಮನುಷ್ಯನ ವಯಸ್ಸಿನ ಆಧಾರದ ಮೇಲೆ ವಿಂಗಡಿಸಲಾಗಿದೆ. ಬಾಲ್ಯದಿಂದ ಪ್ರೌಢ ವ್ಯವಸ್ಥೆಗೆ ಬರುವವರೆಗೂ ಬ್ರಹ್ಮಚರ್ಯ ಕಡ್ಡಾಯವೆಂದು ಧರ್ಮಗ್ರಂಥಗಳು ಉಲ್ಲೇಖಿಸುತ್ತವೆ. ಬಸವಣ್ಣನ ಬದುಕು ಇದಕ್ಕೆ ಹೊರತಾಗಿಲ್ಲ. ಆತ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿ, ಜನಿವಾರವನ್ನು ನಿರಾಕರಿಸಿ, ಲಿಂಗದೀಕ್ಷೆಯನ್ನು ಮನ್ನಿಸಿ ವಿದ್ಯಾಭ್ಯಾಸ ಪಡೆಯುತ್ತಾನೆ. ವಿದ್ಯಾಭ್ಯಾಸ ಮುಗಿದ ನಂತರ ತನ್ನ ಗುರುಗಳ ಆಜ್ಞೆಯಂತೆ ಬ್ರಹ್ಮಚರ್ಯ ಜೀವನವನ್ನು ಮುಗಿಸಿ ಗೃಹಸ್ಥಾಶ್ರಮಕ್ಕೆ ಪ್ರವೇಶಿಸುತ್ತಾನೆ.

ಬಸವಣ್ಣನ ಮದುವೆಯ ಕುರಿತು ಎಂ.ಎಂ. ಕಲಬುರ್ಗಿಯವರ 'ಕೆಟ್ಟಿತ್ತು ಕಲ್ಯಾಣ' ನಾಟಕದಲ್ಲಿ ಆತನಿಗೆ ಬಾಲ್ಯವಿವಾಹವಾಗಿತ್ತು ಎಂಬ ಸುಳಿವುಗಳು ಸಿಗುತ್ತವೆ. ಆದರೆ ಇತರೆ ನಾಟಕಗಳಲ್ಲಿ ಈ ವಿವರಗಳು ಕಾಣಸಿಗುವುದಿಲ್ಲ. ಬಸವಣ್ಣ ತನ್ನ ಪ್ರೌಢವ್ಯವಸ್ಥೆಯಲ್ಲಿಯೇ ಮದುವೆಯಾದ ಎಂಬ ಸಂಗತಿಗಳು ಕಾಣಿಸುತ್ತವೆ. ಇಲ್ಲಿ ಗಮನಿಸಬೇಕಾದ ಸಂಗತಿಗಳೆಂದರೆ ಬಸವಣ್ಣ ಯಾವಾಗ ಮದುವೆಯಾದ ಎನ್ನುವುದಕ್ಕಿಂತ ಯಾರನ್ನು ಮದುವೆಯಾದ ಎನ್ನುವ ವಿಚಾರ ಬಹಳ ಮುಖ್ಯವಾಗುತ್ತದೆ. ಏಕೆಂದರೆ ಬಸವಣ್ಣ ಬ್ರಾಹ್ಮಣತ್ವವನ್ನು ನಿರಾಕರಿಸಿದರೂ ಮದುವೆಯಾಗುವ ಸಂದರ್ಭದಲ್ಲಿ ಸ್ವಜಾತಿಯ ಮದುವೆಯನ್ನು ಒಪ್ಪಿಕೊಳ್ಳುತ್ತಾನೆ. ಇಲ್ಲಿ ಗುರುವಾಜ್ಞೆ ಅನಿವಾರ್ಯವಾದಾಗ ಅದನ್ನು ಧಿಕ್ಕರಿಸಿದ ಬಸವಣ್ಣ ಹೀಗೆ

"ಬಸವಣ್ಣ : ಮಾವನವರೇ! ದಿಕ್ಕೆಟ್ಟು ಅಲೆಯುವವನ ಮೇಲೇಕೆ ಅಳಿಯನನ್ನಾಗಿಸಿಕೊಳ್ಳುವ ಮೋಹ. ನನ್ನಂತವನಿಗೆ ತಮ್ಮ ಪುತ್ರಿಯನ್ನು ಕೊಟ್ಟು ಪಾಣಿಗ್ರಹಣ ಮಾಡಿದರೆ ತಮ್ಮ ಮಗಳ ಅಶ್ರುಧಾರೆಯ ತಾವೇ ನೋಡಿ ಕರಗಬೇಕಾಗುತ್ತದೆ ಎಂಬುದು ತಮಗೆ ತಿಳಿದಿಲ್ಲವೆ?

ಬಲದೇವ : ಬಸವಣ್ಣಾ ನನಗಿರುವವಳು ಒಬ್ಬಳೇ ಮಗಳು ಅವಳೇ ನನ್ನ ಸರ್ವಸ್ವವೂ ನನ್ನ ಆಸ್ತಿಯ ಹಕ್ಕುದಾರರೇ ನೀವಾಗಬೇಕು.

ಬಸವಣ್ಣ : ನಿರಾಯಾಸವಾಗಿ ಬರುವ ಪರರ ಆಸ್ತಿಯ ನಾನೊಲ್ಲೆ, ಬಲದೇವ ಮಂತ್ರಿಗಳೇ ತಾವು ನಡೆಯಿರಿ ಕೆಲವೇ ದಿನಗಳಲ್ಲಿ ನಾವು ಬಂದು ಮಂಗಳವೇಡೆಯನ್ನು

ಸೇರಿ ತಮ್ಮನ್ನು ಕಾಣುವೆವು. ಗುರುವಿನ ಆಜ್ಞೆಯನ್ನು ಮೀರಲು ಮನವುಬಾರದು. ಆಡಂಬರದ ವಿವಾಹ, ಆಡಂಬರ ಜೀವನ ನಮಗೆ ಸಲ್ಲದು ಸಕಲವೂ ಸರಳವಾಗಿರಲಿ".[೨೬]

ಈ ಸಂಭಾಷಣೆಯನ್ನು ಗಮನಿಸಿದಾಗ ಬಸವಣ್ಣ ಸರಳ ಜೀವನದ ಕಡೆಗೆ ವಾಲಿದಂತಿದೆ. ಅಲ್ಲದೆ ಆಸ್ತಿಯ ನಿರಾಕರಣೆಯಂತಹ ಪ್ರಶ್ನೆಗಳು ಇಂದಿನ ಯುವ ಪೀಳಿಗೆಗೆ ದಾರಿದೀಪ ವಾಗಬೇಕೆನ್ನುವ ಆಶಯ ಇಲ್ಲಿ ವ್ಯಕ್ತವಾಗಿದೆ. ಆದರೆ ಈ ಮದುವೆ ನಿಶ್ಚಯಿಸುವ ಸಂದರ್ಭದಲ್ಲಿ ಜಾತವೇದಮುನಿಗಳು, ಬಲದೇವ ಹಾಗೂ ಬಸವಣ್ಣ ಮೂವರು ವೈಚಾರಿಕ ನೆಲೆಯಲ್ಲಿ ಇದ್ದರೂ ಸಹ ಮದುವೆಯಾಗುವ ಗಂಗಾಂಬಿಕೆಯ ಒಪ್ಪಿಗೆಯ ಯಾವ ಸೂಚನೆಗಳು ಕಾಣಸಿಗುವುದಿಲ್ಲ.

ಗಂಗಾಂಬಿಕೆ ಹಾಗೂ ಬಸವಣ್ಣನವರ ಮದುವೆ ಎಲ್ಲಿ ಜರುಗಿತು ಎಂಬ ಆಧಾರಗಳಿಗೆ ಕೆಲವು ನಾಟಕಗಳಲ್ಲಿ ಮಂಗಳವೇಡಿ ಎಂತಲೂ, ಕೆಲವು ನಾಟಕಗಳಲ್ಲಿ ಕಲ್ಯಾಣವೆಂತಲೂ ವ್ಯಕ್ತವಾಗಿವೆ. ಆದರೆ ಈ ಮದುವೆ ಸಂಪ್ರದಾಯದ ರೀತಿಯಲ್ಲಿಯೇ ನಡೆಯುತ್ತದೆಂಬ ಅಂಶವನ್ನು ಪ್ರತಿಪಾದಿಸುತ್ತವೆ. ಅಲ್ಲದೆ ಮದುವೆಯಾದ ನಂತರ ಬಸವಣ್ಣ ಲೋಕರೂಢಿಯಂತೆ ತನ್ನ ಮಾವನ ಮನೆಯಲ್ಲಿರದೇ ಸ್ವತಂತ್ರವಾಗಿ ಇರುವ ವಿಚಾರವನ್ನು ವ್ಯಕ್ತಪಡಿಸುತ್ತಾನೆ.

**"ಬಲದೇವ** : ಆದರೆ... ನಾನು ಪರಕೀಯನಲ್ಲವಲ್ಲ ನೀವಲ್ಲದೇ ನನಗೆ ಯಾರು ದಿಕ್ಕು... ನನ್ನ ವೃದ್ಧಾಪ್ಯದಲ್ಲಿ ನನಗೆ ನೆರವಾಗುವವರು ಯಾರು?.

**ಬಸವಣ್ಣ** : ನಾವು ಬೇರೆ ಮನೆಯಲ್ಲಿದ್ದರೆ ನಿಮ್ಮ ಯೋಗಕ್ಷೇಮ ವಿಚಾರಿಸಬಾರದೇನು? ದುಃಖ, ಪರಪೀಡನೆ, ನಿರ್ಮಮತೆ ತುಂಬಿರುವ ಈ ಲೋಕದಲ್ಲಿ ನಿಮ್ಮಂತೆ ನನ್ನಿ ನುಡಿಯುವರಾರು? ಆದರೆ ತಂದೆ, ಬಸವನನ್ನು ಅವನ ದಾರಿಗೆ ಬಿಡಿ. ಕಾಡುಮೇಡಿನಲ್ಲಿ ಬೆಳೆದು, ಋಷ್ಯಾಶ್ರಮದ ಜೀವನವನ್ನು ಹದಿನೆಂಟು ವರ್ಷ ಅನುಭವಿಸಿದ ಈ ಜೀವಕ್ಕೆ ಅರಮನೆಯ ವಾಸ ಸಲ್ಲದು. ಸುಪ್ಪತ್ತಿಗೆ ನನ್ನ ಮುಳ್ಳಿನ ಹಾಸಿಗೆಯಾಗುತ್ತದೆ. ಸುತ್ತ ನೋಡಿದಾಗ ಭೂಮಿತಾಯಿ ತೊಡೆಯ ಮೇಲೆ ದಿಗಂಬರವನ್ನೇ ಹೊದಿಕೆ ಮಾಡಿಕೊಂಡು ಮಲಗುವ ಲಕ್ಷಾಂತರ ಜನರನ್ನು ಕಂಡಾಗ ಸುಖ ಜೀವನ ನಡೆಸುವುದು ಮಹಾಪಾಪವೆಂದು ನನಗೆ ಭಾಸವಾಗುತ್ತದೆ. ನಿಮ್ಮ ಮಗಳು ನನ್ನ ಬಾಳ ರಥಕ್ಕೆ ತನ್ನ ಜೀವಾಶ್ವವನ್ನು ಕಟ್ಟಿ ಎಳೆಯಲು ಕರುಣಿಸಿದ್ದಾಳೆ. ಆ ಮಹಾಭಾಗ್ಯಕ್ಕಿಂತ ನಾನು ಹೆಚ್ಚೇನು ಬಯಸಲಿ."[೨೭]

ಅಲ್ಲದೆ ಸಾಮಾಜಿಕಪರ ಚಿಂತನೆಯನ್ನು ವ್ಯಕ್ತಪಡಿಸುವ ಅಂಶ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ. ಬಸವಣ್ಣನ ಜೀವಪರ ಚಿಂತನೆ ಲೋಕದ ಜನತೆಯ ಪರವಾಗಿ ನಿಂತು ವಿವಿಧ ಪರ ಆಲೋಚನೆಯನ್ನು ಗೈಯ್ಯುವಲ್ಲಿ ಪ್ರಮುಖ ಪಾತ್ರ ವಹಿಸಿಕೊಂಡಿದೆ. ಒಂದು ಕಡೆ ಮಾವನ

ಮನೆಯ ಹಂಗು ಎಂದು ವಿಚಾರಿಸಿದರೆ ಇನ್ನೊಂದಡೆ ಸ್ವತಂತ್ರವಾಗಿ ಇರಲು ತವಕಿಸುವ ಬಸವಣ್ಣನ ಮನದಲ್ಲಿ ಲೋಕೋಕ್ತಿ ಚಿಂತನೆ ಮೈದಾಳಿದೆ.

ಏಕಪತ್ನಿತ್ವ ಎಂಬುದು ಹಿಂದೂ ಸಂಪ್ರದಾಯವಾದ. ಆದರೆ ಬಸವಣ್ಣ ಮೊದಲನೆಯ ಮದುವೆಯ ಸಂದರ್ಭದಲ್ಲಿ ತನ್ನ ಸಂಸಾರಿಕ ಜೀವನ ತನ್ನ ತತ್ವ ಸಿದ್ಧಾಂತಗಳಿಗೆ ಅಡ್ಡಿಯುಂಟು ಆಗಬಹುದೆಂಬ ಅಳುಕಿನಲ್ಲಿದ್ದು ಬಸವಣ್ಣ ಹಿರಿಯರ ಒತ್ತಾಯಕ್ಕೆ ಮಣಿದು ಮದುವೆಗೆ ಒಪ್ಪಿಕೊಳ್ಳುತ್ತಾನೆ. ಇದೆಲ್ಲವನ್ನು ಓದುಗರು ಸುಲಭವಾಗಿ ಒಪ್ಪಬಹುದು. ಆದರೆ ಬಸವಣ್ಣ ಎರಡನೆ ಮದುವೆಯನ್ನು ಏಕೆ ಒಪ್ಪಿಕೊಳ್ಳುತ್ತಾನೆ ಎಂಬ ಪ್ರಶ್ನೆ ಸಹಜವಾಗಿ ಸಹೃದಯರನ್ನು ಕಾಡದೇ ಇರದು. ಈ ಕುರಿತು ನಾಟಕದಲ್ಲಿ ಅನೇಕ ವಿವರಗಳು ದಾಖಲಾಗಿವೆ. ಬಸವಣ್ಣ ಈಗಾಗಲೇ ಮದುವೆಯಾಗಿದ್ದಾನೆ. ಕಲ್ಯಾಣಕ್ಕೆ ಬಂದು ಬಿಜ್ಜಳನ ಆಸ್ಥಾನದಲ್ಲಿ ಭಂಡಾರದ ಮಂತ್ರಿಯಾಗಿ ಕಾಯಕದಲ್ಲಿ ನಿರತನಾಗಿದ್ದಾನೆ. ಈತನ ಎಲ್ಲಾ ಭಾವನೆಗಳನ್ನು ಅರಿತ ಬಿಜ್ಜಳನ ತಂಗಿ ನೀಲಾಂಬಿಕೆ ಮೋಹಗೊಳ್ಳುತ್ತಾಳೆ. ಈ ವಿಷಯವನ್ನು ತನ್ನ ಗೆಳತಿಯೊಂದಿಗೆ ಮಾತನಾಡುವ ಸಂದರ್ಭದಲ್ಲಿ ಬಿಜ್ಜಳ ಎಲ್ಲಾ ವಿಚಾರವನ್ನು ಕೇಳಿಸಿಕೊಂಡು ಆತ ನಮ್ಮ ಕಲ್ಯಾಣಕ್ಕೆ ಬಂದದ್ದು ನಮ್ಮೆಲ್ಲರ ಸುದೈವ. ಅಂತಹ ವ್ಯಕ್ತಿ ಈಗಾಗಲೇ ಇನ್ನೊಬ್ಬರ ವಶವಾಗಿದ್ದಾನೆ ಎಂದು ತಂಗಿಗೆ ತಿಳಿಹೇಳಿದರೂ ಆಗ ತಂಗಿ ನೀಲಾಂಬಿಕೆ ನನಗೆ ಆತನ ಸೇವೆ ಮಾಡುವ ಭಾಗ್ಯ ದೊರೆತರೂ ಸಾಕು ಎಂದು ತನ್ನ ಮನದಾಳದ ಪ್ರೀತಿಯ ನುಡಿಗಳನ್ನು ಅಣ್ಣನಾದ ಬಿಜ್ಜಳನ ಮುಂದೆ ವ್ಯಕ್ತಪಡಿಸುತ್ತಾಳೆ. ಇದನ್ನರಿತ ಬಿಜ್ಜಳ ಸಾರಥ್ಯವನ್ನು ವಹಿಸುವ ವಿಚಾರವನ್ನು ಆಲೋಚಿಸುತ್ತಾನೆ.

ಆಗ ಬಿಜ್ಜಳ ಬಸವಣ್ಣನ ತಂಗಿ ನಾಗಲಾಂಬಿಕೆಯನ್ನು ಕರೆಯಿಸಿ ತನ್ನ ತಂಗಿಯ ಭಾವನೆಗಳ ವಿಚಾರಗಳನ್ನು ವ್ಯಕ್ತಪಡಿಸುತ್ತಾನೆ. ಆಗ ನಾಗಲಾಂಬಿಕೆ ಬಸವಣ್ಣನೊಂದಿಗೆ ಈ ವಿಷಯವನ್ನು ಅಭಿವ್ಯಕ್ತಿಸಿದಾಗ ಈತನಿಗೆ ಒಗಟಾಗಿ ಕಾಣಿಸಿಕೊಳ್ಳುತ್ತದೆ. ಹೀಗೆ ಇವರೀರ್ವರ ಸಂಭಾಷಣೆ ನಡೆದಂತಹ ಸಂದರ್ಭದಲ್ಲಿ ಬಸವಣ್ಣನ ಹೆಂಡತಿ ಗಂಗಾಂಬಿಕೆ ಬಂದು ನಾಗಲಾಂಬಿಕೆಯ ಪಕ್ಕದಲ್ಲಿ ಕುಳಿತುಕೊಳ್ಳುತ್ತಾಳೆ. ಕೊನೆಯಲ್ಲಿ ನಾಗಲಾಂಬಿಕೆ ನೀಲಾಂಬಿಕೆ ನಿನ್ನನ್ನು ಮನದಿಚ್ಚೆಯಂತೆ ಪ್ರೀತಿಸಿದ್ದಾಳೆ. ಹೀಗಾಗಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ ಎಂದಾಗ ಬಸವಣ್ಣ ನೀಲಾಂಬಿಕೆ ನನ್ನ ಗೆಳತಿ ಎಂಬುದಾಗಿ ತಿಳಿಸುತ್ತಾನೆ. ಈಗಾಗಲೇ ಗಂಗಾಂಬಿಕೆ, ನಾಗಲಾಂಬಿಕೆ ಈ ಮದುವೆಗೆ ಒಪ್ಪಿಕೊಂಡಂತೆ ಸೂಚಿಸಿದಾಗ ಬಸವಣ್ಣ ವಿವಾಹವೆಂಬುದು ಮಕ್ಕಳಾಟವಲ್ಲ. ಯಾವುದಕ್ಕೂ ಒಂದು ಇತಿ–ಮಿತಿ ಇದೆ ನದಿ ಉಕ್ಕಿ ಹರಿದರೆ ಜಲಪ್ರಳಯ. ಸಂಸಾರವೆಂಬುದು ಒಂದು ಸಾಗರವಿದ್ದ ಹಾಗೆ. ಸಾಗರ ಉಕ್ಕಿ ಹರಿದರೆ ಜೀವಿಸಿರುವ ಜೀವಕೋಟಿ ಬದುಕುವುದೇ? ಎಂದು ಅಭಿವ್ಯಕ್ತಿಸುತ್ತಾನೆ. ಆದರೆ ಗಂಗಾಂಬಿಕೆ ನೀಲಾಂಬಿಕೆಯನ್ನು ಈಗಾಗಲೇ ಅಕ್ಕ ಎಂಬುದಾಗಿ ಒಪ್ಪಿಕೊಂಡಿರುವ ವಿವರಗಳು ಸಹ ನಾಟಕಗಳಲ್ಲಿ ವ್ಯಕ್ತವಾಗಿವೆ.

"**ನಾಗಲಾಂಬಿಕೆ :** ನೀಲಾಂಬಿಕೆಯನ್ನು ಮನೆ ತುಂಬಿಸಿಕೊಳ್ಳುವುದರಿಂದ ಯಾವ ತೊಂದರೆಯೂ ಆಗಲಾರದು.

**ಗಂಗಾಂಬಿಕೆ** : ಹೌದೂಂದ್ರ.

**ಬಸವಣ್ಣ** : ಸಂಗಮೇಶ್ವರ ಚಿತ್ತದಲ್ಲಿ ನನ್ನ ವಿಧಿ ಲಿಖಿತವೇನಿದೆ ಎಂಬುದು ಆತನಿಗೇ ಬಿಟ್ಟಿದ್ದು".[೨೮]

ಇಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಲ್ಲಿ ಕಂಡುಬರುವ ಸಂಗತಿಗಳೆಂದರೆ ಈ ಮದುವೆಗೆ ಎರಡು ಕುಟುಂಬಗಳಿಗೂ ಒಪ್ಪಿಗೆಯಿದೆ. ಆದರೆ ಬಸವಣ್ಣನನ್ನು ಒಪ್ಪಿಸುವ ಸಂದರ್ಭದಲ್ಲಿ ಇವರ ಮಾತಿಗೆ ಬಸವಣ್ಣ ಒಪ್ಪಿಗೆ ಸೂಚಿಸುತ್ತಾನೆ. ಹಿರಿಯರ ಮಾತುಗಳಿಗೆ ತಲೆಬಾಗಿದ ಎಂಬ ಔದಾರ್ಯ ಎದ್ದು ಕಾಣಬಹುದು. ಮುಖ್ಯ ಪ್ರಶ್ನೆಯೆಂದರೆ ಆತ ತನ್ನ ಆತ್ಮಸಾಕ್ಷಿಯ ವಿರುದ್ಧ ನಡೆದುಕೊಂಡವನಲ್ಲ. ಈ ಹಿನ್ನೆಲೆಯಲ್ಲಿ ನೋಡಿದಾಗ ಬಸವಣ್ಣನಿಗೂ ಈ ಮದುವೆ ಒಪ್ಪಿಗೆ ಇತ್ತು ಎಂಬ ಸುಳಿವು ಕಾಣಸಿಗುತ್ತದೆ. ಎದುರಾಗುವ ಪ್ರಶ್ನೆಯೆಂದರೆ ವಿಧಿಲಿಖಿತ ಎಂಬುದನ್ನು ತಿರಸ್ಕರಿಸಿದವನು. ಆದರೆ ನಾಟಕಕಾರರು ಯಾವುದೋ ಒತ್ತಾಯಕ್ಕೆ ಮಣಿದು ಈ ಸಂಗತಿಯನ್ನು ಬಿತ್ತರಿಸಿದ್ದಾರೆ ಎನ್ನಿಸುತ್ತದೆ. ಈ ವಿಷಯ ಕುರಿತು ಉಳಿದ ನಾಟಕಕಾರರು ಪ್ರಸ್ತಾಪಿಸಿಲ್ಲ. ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಆಧಾರಿತ ಗೋತ್ರ ಆಧಾರಿತ ಮದುವೆಗಳು ಇವೆ. ಇಲ್ಲಿ ಜಾತಿ ಪ್ರಶ್ನೆ ಮುಖ್ಯವಾದದ್ದು. ಬಸವಣ್ಣ ಮೇಲು ಜಾತಿಯ ಬ್ರಾಹ್ಮಣ್ಯತ್ವವನ್ನು ನಿರಾಕರಿಸಿದರೂ ಈ ಮದುವೆ ನಿರಾಕರಿಸಿಲ್ಲವೆಂಬುದನ್ನು ಸಾಬೀತುಪಡಿಸುತ್ತದೆ. ಹೀಗೆ ಬಸವಣ್ಣ ಮದುವೆಯಾಗಿ ಕಲ್ಯಾಣದ ಮಹಾಮಂಡಲದ ಮಂತ್ರಿಯಾಗಿ ಸಮಾಜ ಸುಧಾರಣೆಯಲ್ಲಿ ತೊಡಗುವ ಕೆಲಸಕ್ಕೆ ಅಣಿಯಾಗುವ ವಿಚಾರಗಳು ಎಲ್ಲ ನಾಟಕಗಳಲ್ಲಿ ಬಿತ್ತರಗೊಂಡಿವೆ.

ಬಸವಣ್ಣ ತನ್ನ ತತ್ವ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಸಮಾಜೋ-ಧಾರ್ಮಿಕ ಸುಧಾರಣಾ ಕಾರ್ಯಗಳನ್ನು ಕೇವಲ ಮಹಾಮಂತ್ರಿಯಾಗಿ ಅರಮನೆಯ ಮೂಲಕ ಈ ಕೆಲಸಗಳನ್ನು ಕೈಗೊಳ್ಳುತ್ತಿಲ್ಲ. ಬದಲಾಗಿ ತನ್ನ ಧೈರ್ಯ ಸಾಧನೆಗೆ ಬೇರೊಂದು ಮಹಾಮನೆಯನ್ನು ಕಟ್ಟಿ ಅದರ ಮೂಲಕ ಸಮಾಜ ಸುಧಾರಣೆಗೆ ಮುಂದಾಗುತ್ತಾನೆ.

### ಅಸ್ಪೃಶ್ಯತೆ ಹಾಗೂ ಜಾತಿ ನಿರ್ಮೂಲನೆ

ಅಸ್ಪೃಶ್ಯತೆ ಹಾಗೂ ಜಾತಿಪದ್ಧತಿ ಸಾಮಾಜಿಕ ಸಮಸ್ಯೆಗಳು ಪ್ರಮುಖವಾದವುಗಳು. ಇವು ಮನುಷ್ಯ-ಮನುಷ್ಯರಲ್ಲಿ ಕಂದಕವನ್ನು ನಿರ್ಮಿಸಿ ವರ್ಣಸಂಕರವನ್ನು ಸೃಷ್ಟಿಸುವಲ್ಲಿ ಯಶಸ್ವಿಯಾಗಿವೆ. ಒಂದು ಕಡೆ ಇವುಗಳಿಗೆ ಮೂಲ ಧಾರ್ಮಿಕ ವಿಧಿ-ವಿಧಾನಗಳಾಗಿವೆ. ಧರ್ಮದ ಮೂಲಕ ಸಮಾಜವನ್ನು ತಿದ್ದಬೇಕೆಂಬ ನಿಲುವನ್ನು ತಾಳಿದ ಸಮಾಜ ಸುಧಾರಕರಿಗೆ ಎದುರಾದ ಮೊದಲ ಪ್ರಶ್ನೆ ಎಂದರೆ ಇವೆರಡು. ಇವು ಇಡೀ ಮಾನವ ಸಮಾಜವನ್ನೇ ಒಡೆಯುತ್ತಿರುವ ಕೆಲಸ ಕಾರ್ಯಕ್ಕೆ ಅಣಿಯಾಗಿವೆ. ಇಂತಹ ಮಡಿವಂತಿಕೆಯ ವಿರುದ್ಧ ಕಾಲ ಕಾಲಕ್ಕೆ ಒಬ್ಬೊಬ್ಬ ಸಮಾಜ ಸುಧಾರಕರು ಹುಟ್ಟಿ ಇವುಗಳ ನಿರ್ಮೂಲನೆಗಾಗಿ ಶ್ರಮಿಸಿದ್ದಾರೆ. ಅಂತಹವರಲ್ಲಿ ಬಸವಣ್ಣನವರು ಒಬ್ಬರು. ಇವರು ಸಮಾಜವನ್ನು ಸುಧಾರಣೆಗೆ ತರಬೇಕೆಂಬ ಅಭಿಲಾಷೆಯನ್ನು

ಹೊತ್ತು ಜಾತ್ಯಾತೀತ ಸಮಾಜವನ್ನಾಗಿಸಲು ಪಣತೊಟ್ಟಿರುವ ನೆಲೆಗಳನ್ನು ಇದಕ್ಕೆ ಸಂಬಂಧಿಸಿದ ನಾಟಕಗಳೆಲ್ಲವೂ ವಿವರಿಸುತ್ತವೆ.

ಜಾತಿ ಎಂಬ ಪೆಡಂಭೂತ ಸಮಾಜದ ಏಳಿಗೆಗೆ ಮಾರಕವಾಗಿದೆ. ಅಂದರೆ ಜಾತಿ ಎನ್ನುವುದು ಮನುಷ್ಯ ನಿರ್ಮಿತವೋ? ದೇವ ನಿರ್ಮಿತವೋ? ಎಂಬ ಪ್ರಶ್ನೆ ಎದುರಾದಾಗ ಶರಣರು ಕೊಡುವ ಉತ್ತರವೆಂದರೆ ಜಾತಿ ಎಂಬುದು ಮನುಷ್ಯ ನಿರ್ಮಿತ ಕೊಳೆ ಎನ್ನುತ್ತಾರೆ. ಹೀಗಾಗಿ ಬಸವಣ್ಣ ನೆಲನೊಂದೆ ಹೊಲೆಗೇರಿ ಶಿವಾಲಯಕ್ಕೆ, ಕುಲವೊಂದೆ ತನ್ನ ತಾನರಿದವಂಗೆ ಎಂದು ಹೇಳಿದ್ದು ವಾಸ್ತವತೆಗೆ ಹಿಡಿದ ಕೈಗನ್ನಡಿಯಾಗಿದೆ. ಬಸವಾದಿ ಪ್ರಮಥರು ಹೆಚ್ಚು ಕಡಿಮೆ ಎಲ್ಲಾ ಜಾತಿಯಿಂದಲೂ ಬಂದವರಾಗಿದ್ದರು. ಜಾತಿಯನ್ನು ಮರೆತು ಮನುಷ್ಯತ್ವಕ್ಕೆ ಬೆಲೆ ಕೊಟ್ಟವರು. ಯಾವುದೇ ಮನುಷ್ಯ ಅವನ ಹುಟ್ಟಿನಿಂದ ಕುಲ, ಹೊಲೆ ಸೂತಕವಿರಲಾರದು. ಅವನು ಹುಟ್ಟಿನ ಬೆಳವಣಿಗೆ ಅವನನ್ನು ಜಾತಿಯನ್ನಾಗಿ ನಿರ್ಮಿಸುತ್ತದೆ. ಮಾದರ ಚೆನ್ನಯ್ಯ, ನೀಲಾ, ಪ್ರಭುದೇವ, ಅಂಬಿಗರ ಚೌಡಯ್ಯ, ಸಿದ್ಧರಾಮಣ್ಣ, ಸತ್ಯಕ್ಕ ಮುಂತಾದ ಶರಣರಲ್ಲಿ ಸಂಭಾಷಣೆ ಜರುಗಿದಾಗ ವಿಶಿಷ್ಟವಾಗಿ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಈ ರೀತಿಯಾಗಿ ವಿಪ್ರ, ಅಂತ್ಯಜರೆಲ್ಲರೂ ಒಂದೇ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ ಬಸವಣ್ಣನಿಗೆ ಸತ್ಯಕ್ಕ ಹೀಗೆ

**"ಸತ್ಯಕ್ಕ :** ತಾವು ಬ್ರಾಹ್ಮಣ ತಂದೆ-ತಾಯಿಯ ಉದರದಲ್ಲಿ ಜನಿಸಿರುವಾಗ
ವಿಪ್ರರೆನ್ನುವುದು ಸುಳ್ಳೆ?

**ಬಸವಣ್ಣ :** ಅಪ್ಪನು ನಮ್ಮ ಮಾದಾರ ಚನ್ನಯ್ಯ,
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,
ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ,
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ,
ಎನ್ನನೇತಕ್ಕರಿಯಿರಿ, ಕೂಡಲಸಂಗಮದೇವಾ".[೨೯]

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ, ನಾನು ಹಾರವನೆಂದರೆ ಕೂಡಲಸಂಗಯ್ಯ ನಗುವನಯ್ಯ, ಹುಟ್ಟಿನಿಂದ ಕುಲದ ನಿರ್ಣಯವಾಗುವುದಿಲ್ಲ. ಅವರವರ ನಡೆ ನುಡಿಗಳಿಂದ ಕುಲ ಜಾತಿ ನಿರ್ಣಯಾಗುತ್ತದೆಂಬ ಅಂಶವನ್ನು ವ್ಯಕ್ತಪಡಿಸುತ್ತಾನೆ. ಆಗ ಶೀಲ ಎನ್ನುವವನು ಪ್ರವೇಶಿಸಿ ಧರ್ಮ, ದೇವರು, ಗುಡಿಯ ಹೆಸರಿನಲ್ಲಿ ಉಚ್ಛ, ನೀಚ ಎನ್ನುವ ಜಾತಿಯನ್ನು ಸೃಷ್ಟಿಸಿದವರು ಪೂಜಾರಿ-ಪುರೋಹಿತರು ಎಂದು ವಿಡಂಬಿಸುತ್ತಾನೆ.

ಇಡೀ ಕಲ್ಯಾಣವನ್ನು ಆಳಿದ ಅರಸ ಬಿಜ್ಜಳನಿಗೂ ಜಾತಿಯ ಸಮಸ್ಯೆ ಬಿಟ್ಟಿಲ್ಲವೆಂದರೆ ಇನ್ನು ಸಾಮಾನ್ಯ ಜನತೆಯ ಸ್ಥಿತಿಗತಿ ದೂರವೇ ಉಳಿಯುತ್ತದೆ. ಬಿಜ್ಜಳ ಹೇಳುವ ಮಾತು ನಾನು ಕ್ಷೌರಿಕ. ಹತ್ತು ತಲೆ ಪಾಳೇಗಾರರಾಗಿ ಆಳಿದ್ವಿ, ಐದು ತಲೆ ಮಂಗಳವಾಡದ

ಮಹಾಮಂಡಲೇಶ್ವರರಾಗಿ ಆಳಿದ್ವಿ, ಚಾಲುಕ್ಯರಿಂದ ಹೆಣ್ಣು ತಂದಿವಿ. ಹೊಯ್ಸಳರಿಂದ ಹೆಣ್ಣು ತಂದಿವಿ. ಬ್ರಾಹ್ಮಣರಿಗೆ ಲಕ್ಷಾಂತರ ಗೋವು ದಾನ ಮಾಡಿ ನಾವು ಕ್ಷತ್ರಿಯರು ಅನ್ನೋ ಹಣೆಪಟ್ಟಿ ಕಟ್ಟಿಸಿಕೊಂಡಿವಿ. ಆದರೂ ನನ್ನ ಜಾತಿ ಕ್ಷೌರಿಕ, ಹಡಪದ ಎಂದು ಪ್ರತಿಯೊಂದು ಹುಡುಗನ ಬಾಯಿಯಲ್ಲಿ ಬರುತ್ತದೆ ಎನ್ನುತ್ತಾನೆ. ಹೀಗೆ ಹೆಂಡತಿ ರಂಭಾವತಿಯೊಂದಿಗೆ ಸಂಭಾಷಣೆಗಿಳಿದಾಗ ಕ್ಷತ್ರಿಯಳಾದ ರಂಭಾವತಿ ಕಳಚೂರ್ಯನಾದ ಬಿಜ್ಜಳರ ನಡುವೆ ಜಾತಿ ತಲೆದೋರುತ್ತದೆ. ಆಗ ಬಿಜ್ಜಳ ಮುಂದುವರೆದು ರಂಭಾವತಿಗೆ.

"ಬಿಜ್ಜಳ : ನಡಕ ಬಾಯಿ ಹಾಕಬ್ಯಾಡ. ನಾ ಮಾತಾಡಕ ಹತ್ತೀನಿ, ಕೇಳು. ಜಾತಿ ಅಂದರ ಮೈ ತೊಗಲಿದ್ಧಾಂಗ. ಅದನ್ನು ಸುಲಿದು ಕಿತ್ತು ಒಕ್ಕೊಟ್ಟರೂ, ಹೊಸ ತೊಗಲು ಬಂದ ಗಳಿಗ್ಗೆ ಎಲ್ಲರ ಕಣ್ಣಿಗೆ ಬೀಳೋದು ಅದ.... ಅದ ಹಳೇ ಜಾತಿ. ಇವ ಹೊಲೆಯ. ಇವ ಕ್ಷತ್ರಿಯ. ಇವ ಕುರುಬ. ಇದು ಈ ನಾಡಿನ ಗುಣ. ಈ ನೀರಿನ ಗುಣ!"[೨೦]

ಎಂಬ ಬಿಜ್ಜಳನ ಮಾತಿನಲ್ಲಿ ಜಾತಿ ಎಂಬ ಎರಡಕ್ಷರ ಎಷ್ಟು ರೀತಿಯಲ್ಲಿ ಮಡಿ ಮೈಲಿಗೆಯನ್ನು ತಂದೊಡ್ಡುತ್ತದೆಂಬ ಅಂಶ ಸ್ಪಷ್ಟವಾಗುತ್ತದೆ. ಇಂತಹ ಕಾಲದಲ್ಲಿ ಬಸವಣ್ಣ ಜಾತಿಯನ್ನು ಬುಡಸಮೇತ ಕಿತ್ತು ಹಾಕಬೇಕೆಂಬ ಹಂಬಲದಿಂದ ತಾನು ಉಚ್ಛ ಕುಲದಲ್ಲಿ ಹುಟ್ಟಿದರೂ ಇದರ ವಿರುದ್ಧ ಬಂಡಾಯವೇಳುವಂತಹ ವಿಚಾರಗಳು ಸಮಾಜದ ಉನ್ನತಿಗೆ ನಿದರ್ಶನವಾಗಿವೆ.

ಜಾತಿ ಎಂಬ ನೀಚತನದಿಂದಾಗಿಯೇ ಅಸ್ಪೃಶ್ಯತೆ ಸಮಾಜದಲ್ಲಿ ರುದ್ರನರ್ತನೆಯನ್ನು ಮಾಡುತ್ತಲೇ ಸಾಗಿದೆ. ಇದರಿಂದಾಗಿ ಅಸ್ಪೃಶ್ಯರಾಗಿ ಜನ್ಮ ತಾಳಿದ ಸಾಮಾನ್ಯ ಜನತೆ ಕೀಳುಕುಲದವರಾಗಿ ಊರ ಹೊರಗೆ ವಾಸಿಸುತ್ತಾ, ಮೇಲ್ವರ್ಗದವರ ಸೇವೆಗೈಯುತ್ತಾ ತಮ್ಮ ಜೀವನವನ್ನು ಸವೆಸಿದ್ದಾರೆ. ಅಷ್ಟೇ ಅಲ್ಲದೆ ಸಾರ್ವಜನಿಕ ಸ್ಥಳಗಳಾದ ದೇವಾಲಯ, ಬಾವಿ, ಹೋಟಲ್ ಮುಂತಾದವುಗಳಿಂದ ನಿರ್ಬಂಧನಕ್ಕೆ ಒಳಗಾಗಿದ್ದಾರೆ. ಇಂತಹ ವ್ಯವಸ್ಥೆಯನ್ನು ಕಂಡ ಬಸವಣ್ಣ ವೈದಿಕ ಧರ್ಮದ ಕಟ್ಟುಪಾಡುಗಳ ವಿರುದ್ಧ ಸಿಡಿದೇಳುತ್ತಾನೆ. ಮಾನವರೆಲ್ಲರೂ ಒಂದೇ. ಯಾರು ಮೇಲಲ್ಲ, ಯಾರು ಕೀಳಲ್ಲ ಎಂಬುದನ್ನು ಸಮಾಜಕ್ಕೆ ತಿಳಿಸಿಕೊಡುವ ಕಾರ್ಯಕ್ಕೆ ಅಣಿಯಾಗುತ್ತಾನೆ. ಈ ಹಿನ್ನಲೆಯಲ್ಲಿ ಸಂಬಂಧಿಸಿದ ನಾಟಕದಲ್ಲಿನ ವಿವರಗಳು ಅಭಿವ್ಯಕ್ತಿಸುತ್ತವೆ.

ಬಸವಣ್ಣ ಸಾರ್ವಜನಿಕ ಸ್ಥಳಗಳಾದ ದೇವಾಲಯದ ಪ್ರವೇಶಕ್ಕಾಗಿ ಕೆಳಗಿನ ಜಾತಿಯ ಜನರಿಗೆ ಅವಕಾಶವಿದೆ ಎಂದು ತಾನೊಬ್ಬ ಮಂತ್ರಿಯಾಗಿ ತಿಳಿಸುತ್ತಾನೆ. ಆಗ ಲಿಂಗಧಾರಣ ಹಾಗೂ ಈತನ ವೈಚಾರಿಕತೆಯಿಂದಾಗಿ ದೇವಾಲಯದ ಪ್ರವೇಶ ಮಾಡಿದ ಕೆಳಗಿನ ಜಾತಿಯ ಜನರಿಗೆ ಮೇಲ್ವರ್ಗದ ಜನತೆ ವಿರೋಧಿಸಿ ಥಳಿಸುವಂತಹ ಕೆಲಸಕ್ಕೆ ಮುಂದಾಗುತ್ತಾರೆ. ಅಷ್ಟೇ ಅಲ್ಲದೇ ಇದಕ್ಕೆ ಕಾರಣನಾದ ಬಸವಣ್ಣನನ್ನು ಕರ್ಮಭ್ರಷ್ಟ ಎಂದು ನಿರ್ದಾಕ್ಷಿಣ್ಯವಾಗಿ ಹಿಯ್ಯಾಳಿಸಿ

ಅವನಿಗೆ ಶಿವಧರ್ಮ ಪ್ರಸಾರವೇ ಮುಖ್ಯವಾಗಿದೆಯೇ ಹೊರತು, ಭೇದವನ್ನು ಅಳಿಸಿ ಹಾಕಲು ಪ್ರಯತ್ನಿಸಿ ಊರೆಲ್ಲಾ ಕೆಡಿಸುತ್ತಿದ್ದಾನೆ ಎಂದು ಮೇಲ್ವರ್ಗದ ಜನತೆ ಮಾತನಾಡಲು ಪ್ರಾರಂಭಿಸುತ್ತಾರೆ. ಅಷ್ಟೇ ಅಲ್ಲದೇ ಬಸವಣ್ಣನ ಹಿಂದೆ ಲಕ್ಷಾಂತರ ಜನ ಇದ್ದಾರೆ. ಊರು ಊರಿಂದ ಜನ ಕರೆಸಿಕೊಂಡು ಅನ್ನ ಹಾಕಿ ಸಾಕ್ತಾ ಇದ್ದಾನೆ ಎಂದು ಮಾತನಾಡಿಕೊಳ್ಳುತ್ತಾ ದೊರೆಯಲ್ಲಿಗೆ ಈ ವಿಷಯವನ್ನು ಪ್ರಸ್ತಾಪಿಸಲು ಸಿದ್ಧರಾಗುತ್ತಾರೆ.

ಇನ್ನೊಂದೆಡೆ ದೇವತೆಗಳಲ್ಲಿಯೇ ಮೇಲುದೇವತೆಗಳು, ಕೆಳದೇವತೆಗಳು ಎಂಬುದಾಗಿ ಚಿತ್ರಿಸಿ ಪಂಡಿತರಿಂದ ಕೆಳಗಿನ ದೇವತೆಯ ಪೂಜಾರಿಗಳನ್ನು ವಿರೋಧಿಸುವ ಉಚ್ಛಕುಲದವರ ನೀಚತನವನ್ನು ಬಯಲಿಗೆಳೆಯುವ ನಾಟಕ ಬಸವಣ್ಣನ ಪ್ರಜ್ಞೆಯಿಂದ ಪೂಜಾರಿಯು ಬದಲಾವಣೆ ಆಗಿದ್ದಾನೆ ಎಂಬ ಅಂಶ ಸ್ಪಷ್ಟವಾಗುತ್ತದೆ. ಹೀಗೆ ಪೂಜಾರಿ ವಿರುಪಾಕ್ಷಪಂಡಿತನ ನಡುವೆ ಘರ್ಷಣೆ ಏರ್ಪಟ್ಟಾಗ ಹರಳಯ್ಯ ಪ್ರವೇಶಿಸಿ ಬಸವಣ್ಣನ ತತ್ವಗಳನ್ನು ತಿಳಿಸುತ್ತಾನೆ. ಆಗ

"**ವಿರುಪಾಕ್ಷ** : (ಕೆರಳಿ) ಧರ್ಮೋಪದೇಶ ಮಾಡ್ತಿಯೇನೋ ಮೊಚ್ಚೆ ಮಾಡುವ ಮಾದಿಗ! (ಹೊಡೆಯುವರು)"[೨೧]

ಈ ರೀತಿ ಹಿಯ್ಯಾಳಿಸಿಕೊಂಡಿದ್ದಷ್ಟಲ್ಲದೆ ಹರಳಯ್ಯ ಈತನಿಂದ ಮೈಯಲ್ಲಿ ರಕ್ತ ಸೋರುವಂತೆ ಹೊಡೆತವನ್ನು ತಿನ್ನುತ್ತಾನೆ. ಇಲ್ಲಿ ಬಹಳ ಪ್ರಜ್ಞಾಪೂರ್ವಕ ವಿಚಾರವೆಂದರೆ ಕುಲ ಜಾತಿ ಎಂಬ ಕಾರಣಕ್ಕಾಗಿಯೇ ಶಿವಭಕ್ತ ಹರಳಯ್ಯ ತನ್ನ ನೋವುಗಳನ್ನು ಅನುಭವಿಸಬೇಕಾಗಿ ಬರುತ್ತದೆ. ಇಂತಹ ಕ್ರೂರವಾದ ವ್ಯವಸ್ಥೆ ಒಂದೆಡೆಯಾದರೆ ಇನ್ನೊಂದೆಡೆ ದಲಿತರು ಅಥವಾ ಅಸ್ಪೃಶ್ಯರು ಊರುಗಳಲ್ಲಿ ಮೇಲ್ವರ್ಗದವರ ಓಣಿಯಲ್ಲಿ ಕೆರ (ಚಪ್ಪಲಿ)ಯನ್ನು ಹಾಕಿಕೊಂಡು ಬರಬಾರದೆಂಬ ನಿರ್ಬಂಧನೆಗಳಿಗೆ ಒಳಗಾಗುತ್ತಾರೆ. ಚಪ್ಪಲಿ ತೊಡುವುದೇ ಅಪರಾಧ ಎಂಬ ನೀಚತನಕ್ಕೆ ಉಚ್ಚಕುಲದವರು ಕೈ ಹಾಕುತ್ತಾರೆ.

ಚಪ್ಪಲಿಯನ್ನು ಮೆಟ್ಟಿಕೊಂಡು ಹೊರಟಿದ್ದ ಶೀಲವಂತನಿಗೆ ಉಚ್ಚ ವರ್ಣಿಯರು ಹೊಡೆಯುತ್ತಾರೆ. ಅಷ್ಟೇ ಅಲ್ಲದೇ ಏಲೋ ಮಗನೇ ನಿನ್ನ ಈ ಕಳ್ಳವೇಷ ಗೊತ್ತು ಮೈ ಮೆತ್ತಗಾದಿತು ಎಂದಾಗ

"**ಶೀಲ** : (ರಕ್ತವನ್ನು ಚಿಮ್ಮದಂತೆ ಒತ್ತಿ ಹಿಡಿದು ಏಳುತ್ತಾ) ನನ್ನದೇನು ಅಪರಾಧ ತಂದೇ? ನನ್ನನ್ನೇಕೆ ಹೊಡೆಯುತ್ತೀರಿ?

**ಮಹಂತ** : ಏನೂ ಅಪರಾಧವಿಲ್ಲವೇ?

**ಲಲಾಟ** : ಉತ್ತಮರ ಕೇರಿಯಲ್ಲಿ ಕೆರ ಮೆಟ್ಕೊಂಡು ಹೊಲೆಯ ನಡೆಯುವುದು ಅಪರಾಧವಲ್ಲವೆ?

**ಶೀಲ** : ಹೊಲೆಯನಾರು? ಹಿಂಸಿಸುವವ ಹೊಲೆಯ. ನಿಂದಿಸುವವ ಹೊಲೆಯ. ದೇವರನ್ನು ಧರ್ಮವನ್ನು ಮರೆತವ ಹೊಲೆಯ."[೨೨]

ಹೀಗೆ ಮುಂದುವರೆದು ಬಸವಣ್ಣನ ಆದರ್ಶದಿಂದಾಗಿ ಶೀಲವಂತನಂತಹ ಹೊಲೆಯರಿಗೆ ಪ್ರಜ್ಞೆ ಬಂದಿದೆ ಎಂಬ ವಿಚಾರ ನಾಟಕ ತಿಳಿಸುತ್ತದೆ. ಅಲ್ಲದೇ ಪ್ರಶ್ನಿಸುವ, ವಿಚಾರಿಸುವ, ವೈಚಾರಿಕತೆಯನ್ನು ತುಂಬುವ ರೀತಿಯಲ್ಲಿ ಅಭಿವ್ಯಕ್ತಗೊಂಡಿವೆ.

ಸನಾತನ ಸಂಪ್ರದಾಯದ ತುಳಿತಕ್ಕೆ ಸಿಕ್ಕ ಕೆಳಜಾತಿಯವರು ಯಾತನಾಮಯ ಬದುಕನ್ನು ಸವೆಸಿದ್ದಾರೆ. ಏಕೆಂದರೆ ಕೆಳಕುಲದವರು ಊರೊಳಗೆ ಪ್ರವೇಶಿಸಬೇಕಾದರೆ ಚಪ್ಪಲಿ ಒಂದು ಕಡೆ ಇರಲಿ ಬೆನ್ನಿನ ಹಿಂದೆ ಕಸಪರಿಕೆಯನ್ನು ಹೆಜ್ಜೆಗಳನ್ನು ಅಳಿಸುವ ಸಲುವಾಗಿ, ಬಾಯಿಂದ ಸಂಬೋಳಿ ಸಂಬೋಳಿ ಎಂದು ಕೂಗೂತ್ತಾ ಹೋಗಬೇಕು. ಅಲ್ಲದೇ ವೇದಗಳನ್ನು ಕಲಿಯಬಾರದು. ಕಲಿತಿದ್ದೇ ಆದರೆ ನಾಲಿಗೆಯನ್ನು ಕತ್ತರಿಸುವಂತಹ ಹೀನಾಯವಾದ ಹಿಂಸೆಗೆ ಗುರಿಯಾಗಿದ್ದರು. ಈ ರೀತಿಯಾಗಿರುವ ವ್ಯವಸ್ಥೆ ಅಮಾನವೀಯವಾದುದು ಎಂಬ ಬಸವಣ್ಣನ ತತ್ವ ಗೋಚರವಾಗುತ್ತದೆ. ವೃದ್ಧ ಮತ್ತು ಬಸವಣ್ಣ ಹೋಗುವಂತಹ ಸಂದರ್ಭದಲ್ಲಿ ಸಂಬೋಳಿ ನಾಗಿದೇವ ಮನೆಯಿಂದ ಹೊರಬರುತ್ತಾನೆ. ಆಗ ಬಸವಣ್ಣ ನಾಗಿದೇವನಿಗೆ ಶರಣಾರ್ಥಿ ಎಂದದ್ದಲ್ಲದೆ ಪಾದ ಮುಟ್ಟಿ ನಮಸ್ಕರಿಸುತ್ತಾನೆ. ಆಗ ನಾಗಿದೇವ ದೇವಾ, ಬೇಡ ನೀವಾರು, ನಾನಾರು, ಸಸಿಯ ಮೇಲೆ ಸಾಗರ ಹರಿಯಬಾರದು ಎಂದಾಗ ಬಸವಣ್ಣ ಮೋಡ ಕವಿದ ಸೂರ್ಯನಂತಿರುವ ನಿನ್ನನ್ನು, ನಿನ್ನ ಸಮಾಜವನ್ನು ಮುಟ್ಟದೆ ದೂರವಿಟ್ಟಿರುವ ಸಾಮಾಜಿಕ ಅಪರಾಧಕ್ಕಾಗಿ ನಾನು ಜನತೆಯ ಪರವಾಗಿ ಕ್ಷಮೆ ಕೋರುತ್ತೇನೆ ಎಂದಾಗ

"ನಾಗಿಮಯ್ಯ : ಇರಲಿ ಬಿಡಿ ದೇವಾ. ಶತಶತಮಾನಗಳಿಂದ ಇದು ಬೆಳೆದು ಬಂದಿದೆ, ಬೆಳೆಯುತ್ತಾ ಹೋಗುತ್ತದೆ.

ಬಸವಣ್ಣ : ನಾನು ಬೆಳೆಯಗೊಡುವುದಿಲ್ಲ. 'ನೆಲನೊಂದೇ ಹೊಲಗೇರಿ–ಶಿವಾಲಯಕ್ಕೆ. ಜಲವೊಂದೇ ಶೌಚ–ಆಚಮನಕ್ಕೆ. ಕುಲವೊಂದೇ ತನ್ನ ತಾನರಿದವಂಗೆ....' ಇದು ನನ್ನ ನಿಲುವು. ಹುಟ್ಟುತ್ತ ಯಾವನೂ ಹೊಲೆಯನಲ್ಲ, ಯಾವನೂ ಹಾರವನಲ್ಲ. ಹೀಗಿದ್ದೂ ಮನುಷ್ಯರಲ್ಲಿ ಈ ಭೇದಕಲ್ಪನೆ ಹುಟ್ಟಿಸಿದವನೇ ಹೊಲೆಯ."[೩೩]

ಈ ಸಂಭಾಷಣೆಯ ಮೂಲಕ ಬಸವಣ್ಣ ಮುಂದುವರೆದು ಜಾತಿ ಎಂಬುದು ಸ್ವಾರ್ಥಕ್ಕೆ ಅನುಗುಣವಾಗಿದೆ. ಇದು ಶ್ರಮದ ವಿವಿಧ ಮುಖಗಳು. ಹೀಗಿರುವಾಗ ಬೌದ್ಧಿಕ ಶ್ರಮದವನು ಶ್ರೇಷ್ಠ ದೈಹಿಕ ಶ್ರಮದವನು ಕನಿಷ್ಠ ಎಂಬ ಕೆಟ್ಟ ಸಂಪ್ರದಾಯವನ್ನು ನಾಶಮಾಡಬೇಕೆಂಬ ನಿಲುವನ್ನು ತಾಳುತ್ತಾನೆ. ಇದೇ ವಿಚಾರವನ್ನು ಹರಭಕ್ತ ಹರಳಯ್ಯನವರು.

"ಕೋತಿ ಕುಲಕ್ಕೆಲ್ಲಿಯದಪ್ಪ ಜಾತಿ? ನೀತಿ. ಮುಖ್ಯ ನೀತಿ. ಯಾವ ಪ್ರಾಣಿವರ್ಗದಲ್ಲಿಯೂ ಜಾತಿಯಿಲ್ಲ. ಈ ಮನುಷ್ಯ ವರ್ಗದಲ್ಲೇಕೆ ಜಾತಿ ಹುಟ್ಟಿಕೊಂಡಿತು? ಅದಕ್ಕೆ ಅಣ್ಣ ಬಸವಣ್ಣನವರು ಈ ಜಾತಿ ಪದ್ಧತಿಯನ್ನು ಖಂಡಿಸಿ ಅನುಭವ ಮಂಟಪದಲ್ಲಿ ಹೀಗೆ ಹೇಳಿದರು 'ಸಪ್ತಧಾತು ಸಮಂಪಿಂಡಂ ಸಮಯೋನಿ ಸಮುದ್ಭವಂ। ಆತ್ಮ ಜೀವಿ ಸಮಾಯುಕ್ತಂ ವರ್ಣನಾಂ ಕಿಂ ಪ್ರಯೋಜನಂ?"[೩೪]

ಅಂದರೆ ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ, ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ಎಂದರೆ ಜಾತಿ ಅನ್ನೋದು ಕಾರ್ಯದ ಮೇಲೆ ಬಂದ ಹೆಸರು. ಕಾಲಕ್ರಮೇಣ ದುಷ್ಟವರ್ಗಗಳು ಹುಟ್ಟಿಕೊಂಡು ಜಾತಿಗಳನ್ನಾಗಿಸಿದರು ಎನ್ನುತ್ತಾನೆ. ಮುಂದುವರೆದು ಬಸವಣ್ಣವರು ಇದಕ್ಕೆ ಪ್ರತಿಕ್ರಿಯೆಯಾಗಿ ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ ಎಂದು ನುಡಿದಿಲ್ಲವೇ ಎಂದು ಹರಳಯ್ಯನವರು ವ್ಯಕ್ತಪಡಿಸುವ ಅಭಿಪ್ರಾಯದಲ್ಲಿ ಬಸವಣ್ಣನ ಸಮಾನತೆಯ ಪ್ರಜ್ಞೆ ಗೋಚರಿಸುತ್ತದೆ.

**ಅಂತರ್‌ಜಾತಿ ವಿವಾಹ**

ಸಂಸ್ಕೃತ ಭಾಷೆಯಲ್ಲಿ 'ಜನ್ಮನಾ ಜಾಯತೇ ಶೂದ್ರ: ಸಂಸ್ಕಾರತ್ ದ್ವಿಜ ಉಚ್ಯತೆ' ಎಂಬ ಉಕ್ತಿ ಕಂಡುಬರುತ್ತದೆ. ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ನಂತರ ಜೀವನದಲ್ಲಿ ಸಂಸ್ಕಾರ ಹೊಂದಿದವರು ದ್ವಿಜರಾಗುತ್ತಾರೆ. ಅಂದರೆ ಪ್ರತಿಯೊಬ್ಬ ಮನುಷ್ಯ ಹುಟ್ಟಿನಿಂದ ಸರಿಸಮಾನರು. ನಂತರ ಗುಣ ಮತ್ತು ವೃತ್ತಿಯನುಗುಣವಾಗಿ ವಿವಿಧ ವರ್ಗಗಳಾಗುತ್ತವೆ. ಜಾತಿಪದ್ಧತಿಯು ಸಾಮಾಜಿಕ ಸ್ತರವಿನ್ಯಾಸದ ಒಂದು ವಿಶಿಷ್ಟ ಬಗೆ. ಇದು ಪ್ರಾಚೀನ ಹಾಗೂ ಆಧುನಿಕ ಭಾರತೀಯ ಸಮಾಜದಲ್ಲಿ ಹೆಚ್ಚಾಗುತ್ತಾ ನಡೆದಿದೆ. ಇದು ಸಾಮಾನ್ಯವಾಗಿ ಮಾನವ ಸಮಾಜದಲ್ಲಿ ಅನುವಂಶಿಯಾಗಿ ಗಳಿಸಲಾಗುವ ಸಾಮಾಜಿಕ ಸ್ತರವಿನ್ಯಾಸದ ಒಂದು ವಿಶಿಷ್ಟ ಪ್ರಕಾರ ಎಂದು ಹೇಳಬಹುದು. ಇಂತಹ ಜಾತಿವ್ಯವಸ್ಥೆಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡಬೇಕೆಂಬ ಆಸೆಯನ್ನು ಹೊತ್ತ ಚಿಂತಕರಲ್ಲಿ ಬಸವಣ್ಣನವರು ಪ್ರಮುಖರು. ಮನುಷ್ಯ ಮನುಷ್ಯರೆಂದು ಒಪ್ಪಿಕೊಳ್ಳದ ಅಂತಹ ಕಾಲದಲ್ಲಿ ಅಂತರ್ಜಾತಿ ವಿವಾಹ ನಡೆದಿರುವುದು ಆಧುನಿಕ ಕಾಲಕ್ಕೂ ಮುಂದಿನ ಕಾಲಕ್ಕೂ ಮರೆಯದಿರುವಂತಹ ಮುಂದಿನ ಪೀಳಿಗೆಗೆ ಮಾದರಿಯಾಗುವಂತಹ ವ್ಯವಸ್ಥೆಯನ್ನು ಶಿವಶರಣರು ನಡೆಸಿರುವುದು ಶ್ಲಾಘನೀಯ ಸಂಗತಿಯಾಗಿದೆ.

ಭಾರತೀಯ ಸಮಾಜವು ಶತಶತಮಾನಗಳಿಂದ ರಾಜಮಹಾರಾಜರ ಆಳ್ವಿಕೆಗೆ ಒಳಪಟ್ಟಿದ್ದುದೇ ಅಲ್ಲದೆ ಜಾತಿ ಪದ್ಧತಿಯನ್ನು ಸತತವಾಗಿ ಅನುಸರಿಸಿಕೊಂಡು ಬಂದಿರುವುದು, ಭೂ ಒಡೆತನವನ್ನು ಹೊಂದುವುದು ಉದ್ಯೋಗವನ್ನು ಅನುಸರಿಸುವುದನ್ನು ಕಾಣುತ್ತೇವೆ. ಶಿವಶರಣರು ಬದುಕಿದ ಕಾಲ ಸುವರ್ಣಯುಗವೆಂದೇ ಕರೆಯಬೇಕು. ಏಕೆಂದರೆ ಒಬ್ಬ ಅರಸನ ಕಾಲದಲ್ಲಿ ಆತನ ಕೈಕೆಳಗೆ ಮಹಾಮಂತ್ರಿಯಾಗಿ ಅರಮನೆಯನ್ನು ನಿರಾಕರಿಸಿ ಮಹಾಮನೆಯ ಮೂಲಕ ಸಾಮಾಜಿಕ ಸಮಾನತೆಗಾಗಿ ಪ್ರಯತ್ನಿಸಿರುವ ಚಿಂತನೆ ಗಮನಾರ್ಹವಾದುದಾಗಿದೆ.

ಹರಳಯ್ಯನವರಿಗೆ ಬಸವಣ್ಣನವರು ಶರಣು ಶರುಣಾರ್ಥಿ ಎಂದ ಕಾರಣಕ್ಕಾಗಿಯೇ ಹರಳಯ್ಯ ದಂಪತಿಗಳಿಬ್ಬರು ತಮ್ಮ ತೊಡೆಯ ಚರ್ಮದಿಂದ ಸಿದ್ಧಪಡಿಸಿದ ಚಪ್ಪಲಿ (ಹೆಮ್ಮಾವಿಗೆ) ಗಳನ್ನು ಬಸವಣ್ಣನಿಗೆ ಅರ್ಪಿಸಲು ಹೊರಡುತ್ತಾರೆ. ಅಂತಹ ಸಂದರ್ಭದಲ್ಲಿ ಮಧುವರಸ ಹರಳಯ್ಯನವರನ್ನು ನಿಲ್ಲಿಸಿ ಆ ಹೆಮ್ಮಾವಿಗೆಗಳನ್ನು ತಾನು ಮೆಟ್ಟಬೇಕು ಅದರ ಬೆಲೆ ಎಷ್ಟು ಎಂಬುದಾಗಿ ವಿಚಾರಿಸಿ ಒತ್ತಾಯದ ಮೇರೆಗೆ ಅವುಗಳನ್ನು ಪಡೆದು ಮೆಟ್ಟಲು ಮುಂದಾಗುತ್ತಾನೆ.

ಆಗ ಮಧುವರಸರಿಗೆ ಮೈ ತುಂಬ ಹುರಿಬಂದು ತನ್ನ ತಪ್ಪನ್ನು ತಿದ್ದಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ಆ ಪವಿತ್ರ ಪಾದುಕೆಗಳಿಗೆ ಅಪಚಾರವೆಸಗಿದ ಮಹಾಪಾಪಿ ನಾನು. ಆದರೂ ಅದಾವುದನ್ನು ಲೆಕ್ಕಿಸದೆ ನನ್ನನ್ನು ನಿಜಮಾನವನನ್ನಾಗಿ ಮಾಡಿದವರು ನೀವು. ಅಲ್ಲದೇ ಈ ಅನುಭವ ಮಂಟಪದ ವೇದಿಕೆಯನ್ನು ಅನುಗ್ರಹಿಸಿಕೊಟ್ಟವರು. ಅದಕ್ಕಾಗಿಯೇ ನಿಮ್ಮ ಮಗ ಶೀಲವಂತನಿಗೆ ನನ್ನ ಮಗಳು ನೀಲಾಳನ್ನು ಕೊಟ್ಟು ಮದುವೆ ಮಾಡಿ ನಿಮ್ಮಿಂದ ಋಣಮುಕ್ತನಾಗಲು ಇಚ್ಚಿಸಿದ್ದೇನೆ ಎಂದು ಹೇಳುವಲ್ಲಿ ಮಾನವರು ಶರಣರಾದ ಮೇಲೆ ಬದಲಾದ ವಿಚಾರಗಳು ಎದ್ದುಕಾಣುತ್ತವೆ. ಈ ವಿಷಯವಾಗಿ ಅನುಭವ ಮಂಟಪದಲ್ಲಿ ಅಲ್ಲಮಪ್ರಭುಗಳ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಚರ್ಚೆ ನಡೆದಂತಹ ಸಂದರ್ಭದಲ್ಲಿ ಹರಳಯ್ಯನವರನ್ನು ವಿಚಾರಿಸಲಾಗಿ ಹರಳಯ್ಯನವರು ಇದಕ್ಕೆ ನಾನು ಏನು ಹೇಳಬೇಕು ತಿಳಿಯದಂತಾಗಿದೆ ಎನ್ನುತ್ತಾನೆ. ಆಗ

"ಬಸವಣ್ಣನವರು : ಮಧುವರಸರ ಮಾತು ಸಹಜವಾದುದು ಹರಳಯ್ಯನವರೇ ನೀವಿದನ್ನು ತಿರಸ್ಕರಿಸಲಾಗದು. ನಮ್ಮಲ್ಲಿ ಜಾತಿ ಮತಗಳ ದೇಶ ಭಾಷೆಗಳ, ಪ್ರಾಂತ್ಯ ಪ್ರದೇಶಗಳ ಭಿನ್ನತೆ ತೊಲಗದೆ ಮಾನವರೆಲ್ಲ ಒಂದೆಂಬ ಭಾವವು ನೆಲೆಗೊಳ್ಳದು. ಇಂದು ಮಧುವರಸರು ಜಾತಿಮತಗಳ ಭಿನ್ನತೆಯನ್ನು ತೊರೆದು ತಮ್ಮ ಮಗಳನ್ನು ಹರಳಯ್ಯನವರ ಮಗ ಶೀಲವಂತನಿಗೆ ಕೊಟ್ಟು ಮಾನವರೆಲ್ಲಾ ಒಂದೆಂಬ ಭಾವದಲ್ಲಿ ಐಕ್ಯಗೊಂಡಿದ್ದಾರೆ. ಅನುಭವ ಮಂಟಪವು ಮಾತಿನ ಮಂಟಪವಲ್ಲ. ಮಾತನ್ನು ಕೃತಿಗಿಳಿಸುವ ಮಹಾಮನೆ ಯೆಂದು ಜನತೆ ನಂಬುವಂತಾಗಬೇಕು.

ಹರಳಯ್ಯ : ಶರಣಶರಣೆಯರ ಆಶೀರ್ವಾದ ಹಾಗೂ ಪ್ರಭುವಿನ ಅಣತಿಯಂತೆ ಆಗಬಹುದು.

ಪ್ರಭುದೇವ : ನಮ್ಮ ಮಂಟಪವು ಈವರೆಗೆ ಅನೇಕ ನಿರ್ಣಯಗಳನ್ನು ಕೈಗೊಂಡಿದೆ. ಇಲ್ಲಿ ಸಮಸ್ಯೆಗಳು ಪರಿಹಾರ ಪಡೆದಿವೆ. ಆದರೆ ಜಾತಿ ಮತಗಳ ಸಮಸ್ಯೆಯು ಅತ್ಯಂತ ಜಟಿಲವಾದದು.... ಇಂತಹ ಮಹಾಸಾಹಸದಲ್ಲಿ ಮುಂದಾಗಿ ಹರಳಯ್ಯ ಮಧುವಯ್ಯಗಳ ಅನುಭವಮಂಟಪಕ್ಕೆ ಜೀವಕಳೆಯಿತ್ತಿದ್ದಾರೆ. ತಡವೇಕೆ? ಈ ಮಂಟಪದಲ್ಲಿಯೇ ಇಂದೇ ಸರ್ವ ಶರಣರ ಸಾಕ್ಷಿಯಾಗಿ ಭಾವೈಕ್ಯದ ಸಂಕೇತವಾಗಿ ನೀಲಾ-ಶೀಲರ ಕಲ್ಯಾಣವಾಗಲಿ."[೩೫]

ಹೀಗೆ ಅಂತರ್ಜಾತಿ ವಿವಾಹವು ಶಿವಶರಣರ ಆಶೀರ್ವಾದದೊಂದಿಗೆ ನೆರವೇರುತ್ತದೆ. ಆಗ ಬ್ರಾಹ್ಮಣರು ಇದಕ್ಕೆ ಸಮ್ಮತಿಸದೆ ತಮ್ಮ ತಮ್ಮಲ್ಲಿ ಆಡಿಕೊಳ್ಳುತ್ತಾರೆ. ಪ್ರಭುದೇವರು 'ಎತ್ತಣ ಮಾಮರ ಎತ್ತಣ ಕೋಗಿಲೆ' ಎಂಬ ವಚನದ ಜೊತೆಗೆ ಬಸವಣ್ಣನವರ 'ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ' ಎಂಬ ವಚನಗಳು ಈ ವಿವಾಹಕ್ಕೆ ನಾಂದಿಯಾಗುತ್ತವೆ.

ಈ ಮದುವೆಯ ನೆಪವನ್ನು ಇಟ್ಟಿಕೊಂಡು ಮಂಚಣ್ಣಮಂತ್ರಿ, ಪೆದ್ದರಸ ಕಲ್ಯಾಣಶೆಟ್ಟಿ ಬಿಜ್ಜಳನ ಆಸ್ಥಾನದಲ್ಲಿ ಮಧುವರಸ ಮತ್ತು ಹರಳಯ್ಯನವರನ್ನು ಅಪರಾಧಿಗಳ ಸ್ಥಾನದಲ್ಲಿ ನಿಲ್ಲಿಸಿದ್ದಾರೆ. ಸನಾತನ ಕಾಲದಿಂದಲೂ ನಡೆದು ಬಂದಿರುವ ಕುಲಧರ್ಮಗಳು ಹೊಲೆಗೂಡಿ ಹೋಗುತ್ತಿವೆ. ಧರ್ಮನಿಷ್ಠರಾದ ಪ್ರಜೆಗಳು ಇದರಿಂದಾಗಿ ಕಲ್ಯಾಣವನ್ನು ಬಿಟ್ಟು ಹೋಗಲು ನಿರ್ಧರಿಸಿದ್ದಾರೆ. ಆಗ ಬಿಜ್ಜಳನು ಬಸವಣ್ಣನವರಿಗೆ ಈ ವಿಷಯವಾಗಿ ಚರ್ಚಿಸಲು ಮುಂದಾದಾಗ ಬಸವಣ್ಣವರು ಮಧುವರಸ ಹರಳಯ್ಯನವರೇ, ನೀವು ಅಪರಾಧವನ್ನು ಒಪ್ಪಿಕೊಳ್ಳುವಿರೋ ಅಥವಾ ನಿಮ್ಮ ಅಪೇಕ್ಷೆಗಳೇನಾದರೂ ಇರುವವೊ? ಎಂದಾಗ ಮಧುವರಸ ನಾವು ಅಪರಾಧಿಗಳಲ್ಲ ಎನ್ನುತ್ತಾನೆ. ಆಗ ಮಂಚಣ್ಣ ನಿಮ್ಮನ್ನು ನಿರಪರಾಧಿಗಳೆಂದು ಯಾರು ಕರೆಯುವರು. ನೀವು ಅಪರಾಧಿಗಳೇ ಈ ಮಾತಿಗೆ ಬಿಜ್ಜಳ ನ್ಯಾಯಾಸನವು ನಿಮ್ಮನ್ನು ನಿರಪರಾಧಿಗಳೆಂದು ನಿರ್ಣಯಿಸಿದ ಮೇಲಲ್ಲವೇ ನೀವು ಅಪರಾಧಮುಕ್ತರು. ಹೀಗೆ ವ್ಯಕ್ತವಾಗುವ ವಿಚಾರ ಬಹುಮುಖಿ ಚಿಂತನೆಗಳನ್ನು ಮುಂದಿಡುತ್ತದೆ.

"**ಪೆದ್ದರಸ** : ಮಧುವರಸರೆ ನೀವು ಶ್ರೇಷ್ಠ ಕುಲದ ಬ್ರಾಹ್ಮಣರಾಗಿದ್ದು ಹೊಲಿಯನಾದ ಹರಳಯ್ಯನ ಮಗನಿಗೆ ನಿಮ್ಮ ಮಗಳು ಕೊಟ್ಟು ಜಾತ್ಯಂತರ ವಿವಾಹ ಮಾಡಿಸಿ ಬ್ರಾಹ್ಮಣ ಕುಲದ ಪಾವಿತ್ರ್ಯವನ್ನು ಭಂಗಪಡಿಸಿದ್ದಕ್ಕಾಗಿ ಆ ಅಪರಾಧವನ್ನು ನಿಮ್ಮ ಮೇಲೆ ಮಂಡಿಸಲಾಗಿದೆ. ಈ ವಿವಾಹವು ಧರ್ಮ ಹಾಗೂ ಸಮಾಜದ ದೃಷ್ಟಿಯಿಂದ ಮಹಾಪರಾಧವಾಗಿದೆ.

**ಮಧುವರಸ** : ಮದುವೆ ಮಾಡುವುದು, ಮಕ್ಕಳ ಹಡೆಯುವುದು, ಉಣ್ಣುವುದು, ಮಲಗುವುದು ಇವೆಲ್ಲ ವ್ಯಕ್ತಿ ಸ್ವಾತಂತ್ರ್ಯದ ಮಾತಾಗಿವೆ. ಇವು ನ್ಯಾಯಾಸನಕ್ಕೆ ಸಂಬಂಧಿಸಿದ ವಿಷಯಗಳಲ್ಲ.

**ಮಂಚಣ್ಣ** : ಬ್ರಾಹ್ಮಣರು ಹೊಲೆಯರನ್ನು ಲಗ್ನವಾದರೆ ನಾಡಶಾಂತಿಗೆ ಭಂಗವಾದರೆ? ಕುಲ ಜಾತಿಗಳ ಕೊಲೆಯಾಗುತ್ತಿರುವುದನ್ನು ನೋಡಿ ನ್ಯಾಯಾಸನವು ಸುಮ್ಮನಿರುವುದೇ."[೩೬]

ಹೀಗೆ ನಡೆದ ಕುಲಾಂತರ ವಿವಾಹವನ್ನು ರದ್ದುಪಡಿಸಿ ಇವರಿಗೆ ಶಿಕ್ಷೆ ವಿಧಿಸಬೇಕೆಂಬ ನಿರ್ಣಯಕ್ಕೆ ಬಂದಂತಹ ಸಂದರ್ಭದಲ್ಲಿ ಹರಳಯ್ಯನವರು ಹೊಲೆಯ ಹಾರವರು ಶಿವದೀಕ್ಷೆ ಹೊಂದಿದ ಮೇಲೆ ಅಂತರ್ಜಾತಿ ವಿವಾಹದ ಪ್ರಶ್ನೆ ಬರುವುದಿಲ್ಲ. ಅದು ಶಿವಕುಲದ ಮದುವೆ ಎಂಬುದಾಗಿ ನುಡಿಯುತ್ತಾನೆ. ಆಗ ಬಿಜ್ಜಳನು ಬಸವಣ್ಣನಿಗೆ ಈ ಲೋಕದಲ್ಲೆಂದಾದರೂ ಹೊಲೆಯ ಹಾರವರಲ್ಲಿ ಲಗ್ನವಾಗಿರುವುದೇ? ಎಂದಾಗ ಹರಳಯ್ಯನವರು ಹುಟ್ಟಿನಿಂದ ಹೊಲೆಯಾಗಿದ್ದರೂ ದೀಕ್ಷೆ ಹೊಂದಿದ ಮಹಾಶಿವಶರಣರು. ಇವರು ಮನದಿಚ್ಛೆಯಂತೆ ಮಾಡಿದ

ವಿವಾಹ ಎಂದಿಗೂ ಅಪರಾಧವಲ್ಲ. ಇವರಿಗೆ ಶಿಕ್ಷೆ ಕೊಡುವುದು ಆಗುವುದಿಲ್ಲ. ತತ್ವಬಿಟ್ಟು ಶಾಂತಿಸ್ಥಾಪನೆ ಮಾಡುವುದು ರಾಜಧರ್ಮವಲ್ಲ ಎಂದು ಹೇಳುವಲ್ಲಿ ವೈಜ್ಞಾನಿಕತೆಯ ಪ್ರಜ್ಞೆ ಆ ಕಾಲದಲ್ಲಿಯೇ ಪ್ರಖರತೆಯನ್ನು ಪಡೆದಿತ್ತೆಂದು ಹೇಳಬಹುದಾಗಿದೆ.

ಜನಪ್ರಿಯ ನಾಟಕಗಳಲ್ಲಿ ಪ್ರೇಮ ಪ್ರಕರಣಗಳನ್ನು ಸೃಷ್ಟಿಸುವಲ್ಲಿ ಹೆಚ್ಚಿನ ಆದ್ಯತೆ ನೀಡಿರುವುದು ಗಮನಾರ್ಹ. ಇದಕ್ಕೆ ಕಾರಣವೆಂದರೆ ನೋಡುಗರಿಗೆ ಮನರಂಜನೆ ನೀಡುವುದಾಗಿದ್ದರೂ ಈ ನಾಟಕಗಳಲ್ಲಿ ಮುಖ್ಯವಾಗಿ ಶಿವಶರಣರಾಗಿ ಶಿವಶರಣರು ಜಾತಿ ಮತವನ್ನು ಬದಿಗೊತ್ತಿ ಬ್ರಾಹ್ಮಣ ಹೊಲೆಯರ ನಡುವೆ ಮದುವೆ ಮಾಡಿಸಿದ್ದು ಅಂತರ್ಜಾತಿ ವಿವಾಹಕ್ಕೆ ನಾಂದಿ ಹಾಡಿದರು ಎನ್ನುವ ಸಂಗತಿ ಒಂದೆಡೆಯಾದರೆ ಇನ್ನೊಂದೆಡೆ ಶೀಲವಂತ ಮತ್ತು ನೀಲ ಇವರಿಬ್ಬರೂ ಮೊದಲಿಂದಲೂ ಪ್ರೀತಿ–ಪ್ರೇಮಕ್ಕೆ ಜೋತುಬಿದ್ದು ತಮ್ಮ ನೈತಿಕ ವಿಚಾರಗಳಿಂದ ಅಂತರ್ಜಾತಿ ವಿವಾಹವಾಗಲು ಒಪ್ಪಿಕೊಂಡರೆಂಬ ವಿಚಾರಗಳು ವ್ಯಕ್ತವಾಗಿವೆ. ನೀಲ–ಶೀಲ ಇಬ್ಬರೂ ಜಾತಿ ಎಂಬ ಗೋಡೆ ವಿವಾಹಕ್ಕೆ ಹೇಗೆ ಅಡ್ಡಾಗುತ್ತೆಂಬ ಸಂಭಾಷಣೆ.

"ಶೀಲ : ಅನರ್ಥವಾದೀತು ನೀಲಾ! ಮತಭೂತಗಳು ಸುಮ್ಮನಿರಲಾರವು.

ನೀಲ : ಪ್ರೇಮಮಂತ್ರದಿಂದ ಆ ಭೂತಗಳನ್ನು ಉಚ್ಚಾಟನೆ ಮಾಡಿದರಾಯಿತು.

ಶೀಲ : ಆ ಧೈರ್ಯ ನಿನಗಿದೆಯೆ? ನೀಲಾ! ನಿಮ್ಮ ತಂದೆಯ ಕೋಪಾಗ್ನಿಯು ನಮ್ಮನ್ನು ದಹಿಸಿಬಿಟ್ಟಿತು.

ನೀಲ : ಅದು ಕೋಪಿಸಿದವರನ್ನು ದಹಿಸುವುದು. ನಿರ್ಮಲ ಪ್ರೇಮಿಗಳನ್ನು ದಹಿಸುವುದೇ? ಶೀಲಾ–ಶೀಲಾ ನನ್ನನ್ನು ಪ್ರೇಮಿಸಲಾರೆಯಾ?

ಶೀಲ : ಹೃದಯಪೂರ್ವಕವಾಗಿ ಪ್ರೇಮಿಸುತ್ತೇನೆ. ಆದರೆ–ಆದರೆ ನೀಲಾ ಈ ಪ್ರೇಮಕುಸುಮವು ಅರಳುವದೆಂದಿಗೋ? ಇಲ್ಲವೇ ಹಾಗಿಯೇ ಮೊಗ್ಗಾಗಿ ಉದರಿ ಬೀಳುವುದೋ ಏನೋ? ನೀಲಾ ನೀನು ಮೊದಲಿನ ಜಾತಿಯವಳು, ನಾನು ಕಡೆಯ ಜಾತಿಯವ. ಕೂಡುವುದು ಹೇಗೆ?..."[೩೭]

ಹೀಗೆ ಇವರಿಬ್ಬರ ಸಂಭಾಷಣೆ ನಿರ್ಮಲವಾಗಿರುವ ಪ್ರೇಮತತ್ವವನ್ನು ಸಾರುತ್ತಾ ಇಂತಹ ಪ್ರೇಮಕ್ಕೆ ಯಾವುದೇ ಜಾತಿ ಮುಖ್ಯವಲ್ಲ. ಎರಡು ಹೃದಯಗಳ ಸಮ್ಮಿಳಿತವೇ ಹೊರತು ಮೇಲು ಕೀಳು ಎಂಬುದೇ ಇಲ್ಲ ಎಂಬ ಅಭಿಪ್ರಾಯವನ್ನು ಅಭಿವ್ಯಕ್ತಪಡಿಸುತ್ತವೆ.

ಜನಪ್ರಿಯ ನಾಟಕಗಳಿಗಿಂತ ಭಿನ್ನವಾಗಿ ನಿಲ್ಲುವಂತಹ ನಾಟಕಗಳೆಂದರೆ ಗಂಭೀರ ನಾಟಕಗಳು. ಜನಪ್ರಿಯ ನಾಟಕಗಳು ಚರಿತ್ರೆಯನ್ನು ಕಟ್ಟಿಕೊಡುವಾಗ ವೈಭವಿಕರಿಸುವಲ್ಲಿ ಪ್ರಮುಖ ಸ್ಥಾನಮಾನವನ್ನು ಪಡೆದುಕೊಂಡರೆ ಗಂಭೀರ ನಾಟಕಗಳು ಚರಿತ್ರೆಯನ್ನು ಬಹಳ ಅರ್ಥಗರ್ಭಿತವಾಗಿ ಆಲೋಚಿಸುವಂತಹ ನೆಲೆಯಲ್ಲಿ ರಚನೆಯಾಗಿರುತ್ತವೆ. ತಲೆದಂಡ, ಸಂಕ್ರಾಂತಿ ಮತ್ತು ಶಿವರಾತ್ರಿ

ನಾಟಕಗಳನ್ನು ರಚಿಸಿದ ಗಿರೀಶ್ ಕಾರ್ನಾಡ, ಪಿ.ಲಂಕೇಶ ಹಾಗೂ ಚಂದ್ರಶೇಖರ ಕಂಬಾರ ಅವರು ಬಹಳ ವಿಶಿಷ್ಟವಾಗಿ ಚಿತ್ರಿಸಿರುವ ಅಂಶಗಳು ಗಂಭೀರತೆಯನ್ನು ಪಡೆದುಕೊಂಡಿವೆ. ಏಕೆಂದರೆ ಅಂತರ್‌ಜಾತಿ ವಿವಾಹ ಏರ್ಪಟ್ಟಿರುವುದು ಅಥವಾ ನಡೆಸಿರುವುದು, ನಡೆಸಲು ಮುಂದಾಗಿರುವ ವಿಚಾರಗಳನ್ನು ಪಾತ್ರಗಳ ಸಂಭಾಷಣೆಗಳ ಮೂಲಕ ಭಿನ್ನವಾಗಿ ಕಟ್ಟಿಕೊಡುವಲ್ಲಿ ಪ್ರಮುಖಪಾತ್ರವಹಿಸಿವೆ.

ಈಗಾಗಲೇ ಶಿವಶರಣರಾದ ಮಧುವರಸ, ಹರಳಯ್ಯ ತಮ್ಮ ಮಕ್ಕಳ ಅಂತರ್ಜಾತಿ ವಿವಾಹವನ್ನು ಮಾಡಲು ಮುಂದಾಗಿ ಶಿವಶರಣ ಬಸವಣ್ಣನಿದ್ದಲ್ಲಿಗೆ ಬರುತ್ತಾರೆ. ಆಗ ಬಸವಣ್ಣ ಈ ಲಗ್ನದ ವಿಚಾರ ವರ್ಣಾಶ್ರಮದ ಧರ್ಮದ ಬೇರಿಗೆ ಕೊಡಲಿ ಏಟು. ಕಳೆದ ಎರಡು ಸಾವಿರ ವರ್ಷದಾಗ ಇಂತಹ ಸಂಬಂಧ ಕೂಡಿಲ್ಲ. ಸನಾತನಿಗಳು ಕೂಡ ಆಗೊಟ್ಟಿಲ್ಲ. ಈ ಸುದ್ಧಿ ಗೊತ್ತಾದರ ಎಂಥ ವಿಷ ಹೊರಹೊಮ್ಮುತದೆ ಎಂಥ ಜ್ವಾಲೆ ಭುಗಿಲೇಳುತ್ತದೆ ಗೊತ್ತದ ನಿಮಗೆಲ್ಲಾ ಎನ್ನುವಲ್ಲಿ ಸಂಪ್ರದಾಯದ ತಳಹದಿಯಾಗಿ ನಿಂತಿರುವುದು ಕಾಣುತ್ತೇವೆ. ಆಗ ಮಧುವರಸರು ಈ ವಿಷ ಕುಡಿದು ಗಂಟಲಲ್ಲೇ ನಿಲ್ಲಿಸಿ, ವಿಷಕಂಠರಾಗೋಣ ಎನ್ನುತ್ತಿದ್ದಂತೆಯೇ

"ಬಸವಣ್ಣ : (ಕನಲಿ) ಇದು ನಾಟಕದ ಸಂವಾದ ಆಡೋ ಹೊತ್ತಲ್ಲ. ನಮ್ಮ ಹೊಟ್ಟ್ಯಾಗ ಹುಟ್ಟಿರೋ ಈ ಮಕ್ಕಳ ಬಾಳೇವಿನ ಮಾತದ. ನಾಳೆ ಅವರು ಮನಿ ಮಾಡಿದಲ್ಲಿ, ಒಲಿ ಹೂಡಿದಲ್ಲಿ ಸನಾತನಿಗಳ ಹಾಗೆ ಅವರನ್ನ ಬೆಂಬತ್ತಿ ಬರತದ, ಹಾವಿನ ಪಡೆಬಂಧಾಂಗ. ಆಗ ಅವರಿಗೆ ಯಾರು ಕಾವಲು? ಹಿಂದಾಗಡೆ ಪಶ್ಚಾತ್ತಾಪ ಪಡೂದಕ್ಕಿಂತ ಮೊದಲ ಎಚ್ಚರ ವಹಿಸಿರೋದು ಉತ್ತಮ.

ಹರಳಯ್ಯ : ಅಂದರ ನೀವನ್ನೋದು ಈ ಲಗ್ಗಣ ಬ್ಯಾಡ ಅಂತ. ನನಗನಿಸಿತ್ತು, ಕಲ್ಯಾಣಿ ಬಸವಣ್ಣನಂತಾ ಬಸವಣ್ಣ ಇರವಲ್ಲನ್ಯಾಕ. ನಮ್ಮ ಕಕ್ಕಯ್ಯನಂತಾ ಕಕ್ಕಯ್ಯ ಇರಬಾರದ್ಯಾಕ? ಹಾರವರ ಸರಿಸಾಟಿಯಾಗಿ ಸಮಗಾರ ನಿಂತ ಅಂದರ ಶರಣರ ಮೊದಲು ಅಡ್ಡಗಾಲು ಹಾಕ್ಕಾರು."[೩೮]

ಆಗ ಬಸವಣ್ಣ ಹರಳಯ್ಯನವರಿಗೆ ಎಂದಾದರೊಂದು ದಿನ ಈ ಧರ್ಮ, ಜಾತಿ ಅಳಿದು ಪ್ರತಿಯೊಬ್ಬ ಮನುಷ್ಯ ಮನುಷ್ಯನಾಗತಾನ, ಭಕ್ತ ಆಗತಾನ, ಆದರೆ ಆ ಯುಗ ಮೂಡಲಿಕ್ಕೆ ನಾವಿನ್ನು ಬಾಳ ದುಡಿಯಬೇಕು ಎಂದಾಗ ಮಧುವರಸರು ಶಿವಯೋಗದ ಒಳಿತಿಗಾಗಿ ನನ್ನ ಮಗಳನ್ನು ಜೀವ ಬಲಿ ಕೊಡಲಿಕ್ಕೆ ನಾನು ಸಿದ್ಧ ಎನ್ನುವಲ್ಲಿ ಮನುಷ್ಯರು ಮನುಷ್ಯರೇ ಹೊರತು ಜಾತಿ ಮುಖ್ಯವಲ್ಲ ಎಂಬ ತತ್ವ ಅಡಗಿರುವುದು ಕಾಣುತ್ತೇವೆ. ಹೀಗೆ ಶೀಲ ಮತ್ತು ನೀಲರ ನಡುವೆ ಮದುವೆ ಮಾಡಬೇಕೆಂಬ ಅಪೇಕ್ಷೆ ಹೊತ್ತ ಶಿವಶರಣ ದಂಪತಿಗಳು ಶೀಲನನ್ನು ಕರೆಸಿ ಈ ಮದುವೆಗೆ ಒಪ್ಪಿಗೆ ಇದೆಯೇ ಎಂದು ಕೇಳಿದಾಗ ಇಲ್ಲಿ ಶೀಲಾ ನಿರಾಕರಿಸುವ ಮಾತುಗಳನ್ನಾಡುತ್ತಾನೆ. ಏಕೆಂದರೆ ನೀಲಾ ಮೇಲ್ಜಾತಿಯವಳು. ನಾವು ಚಪ್ಪಲಿ ಹೊಲೆಯುವ

ಜನರು. ಆಕೆಗೆ ಚಪ್ಪಲಿ ಅಥವಾ ತೊಗಲಿನ ವಾಸನೆ ಬಡಿದರೆ ಮೂಗು ಮುಚ್ಚಿಕೊಳ್ಳುತ್ತಾಳೆ. ಅಷ್ಟೇ ಅಲ್ಲದೇ ನಾನಾಕಿನ ನೋಯಸಾಕ, ಆಕೀ ಜಲ್ಮ ಹಾಳು ಮಾಡಕ ಒಲ್ಲೆ. ನಾಳೆ ಸಮಗಾರನ ಹಾರುವಗಿತ್ತಿ ಅಂತ ಆಕಿನಾ ಎಲ್ಲರೂ ಅಣಕಸತಾರಲ್ಲರಿ ಎಂದು ಹೇಳುವಲ್ಲಿ ಮಡಿ ಮೈಲಿಗೆ ಎಂಬ ಭೂತ ಇನ್ನಷ್ಟು ಗಟ್ಟಿಯಾಗುತ್ತಾ ಜೀವಂತವಾಗಿರುವ ಅಂಶವನ್ನು ಈ ನಾಟಕ ವ್ಯಕ್ತಪಡಿಸುತ್ತದೆ. ಮಧುವರಸನ ಹೆಂಡತಿ ತನ್ನ ಮಗಳ ಮಮತೆ ಮತ್ತು ಹೆತ್ತ ಪ್ರೀತಿಗಾಗಿ ಹೊಲೆಯರ ಮನೆಗೆ ಮಗಳನ್ನು ಕೊಡಲು ಹಿಂಜರಿಯುತ್ತಾಳೆ. ಇವರ ಕೇರಿಗೆ ಹೋಗಿ ಬಂದಾಗಂತೂ ವಾಂತಿ ಮಾಡಿಕೊಂಡು ಹಾಸಿಗೆ ಹಿಡಿತಾಳೆ ಎಂದಾಗ ಮಧುವರಸ ಅದು ಶರಣರು ನಮ್ಮಿಕೊಂಡ ಕಾಯಕ. ಇಲ್ಲಿ ಕಾಯಕದ ಅವಮಾನ ಬ್ಯಾಡ ಎನ್ನುತ್ತಿದ್ದಂತೆಯೇ ಹರಳಯ್ಯನವರು ಅಕ್ಕನವರು ಹೇಳಿದ್ದು ಸರಿ ಎನ್ನುತ್ತಾ ಹೀಗೆ ಇವರೀರ್ವರ ನಡುವೆ ಚರ್ಚೆ ಏರ್ಪಟ್ಟು ಉಳಿದ ಶಿವಶರಣರು ಮಾತಿಗಿಳಿದು ಕೊನೆಯಲ್ಲಿ ಬಸವಣ್ಣನವರ ಹತ್ತಿರ ಬಂದಾಗ ಬಸವಣ್ಣ ಈ ಲಗ್ನದ ಕುರಿತು ಹರಳಯ್ಯ ಮಧುವರಸರ ಕುಟುಂಬದವರೇ ಬಗೆಹರಿಸಬೇಕಾದ ಮಾತು. ಅವರಾಗಿ ಬಂದು ಕೇಳಿದರು. ನಾನು ಕಕ್ಕಯ್ಯ ನಮಗೆ ತಿಳಿದಿದ್ದನ್ನು ಹೇಳಿದಿವಿ. ಈಗ ಉಳಿದ ಮಾತು ಅವರಿಗೆ ಬಿಟ್ಟಿದ್ದು ಇದರಲ್ಲಿ ನಮ್ಮದು ಯಾವುದೇ ರೀತಿಯ ಒತ್ತಾಯವಿಲ್ಲ. ಎಂಬಲ್ಲಿ ಅವರವರ ಮನದಾಳದ ಮೂಲಕವೇ ಸಮಾಜ ಬದಲಾಗಬೇಕು. ಅವರವರ ನೈತಿಕತೆಯಿಂದಲೇ ವಿವಾಹ ನಡೆಯಬೇಕು ಎಂಬ ವಿಚಾರಗಳನ್ನು ಅಭಿವ್ಯಕ್ತಿಸುತ್ತದೆ.

ಇದೇ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ನಾಟಕ 'ಶಿವರಾತ್ರಿ' ಈಗಾಗಲೇ ಬಸವಣ್ಣ ಮಂತ್ರಿ ಪದವಿಗೆ ರಾಜಿನಾಮೆ ನೀಡಿ ತಾನು ಸ್ಥಾಪಿಸಿದ ಮಹಾಮನೆಯ ಮೂಲಕ ಸಾಮಾಜಿಕ ಸುಧಾರಣೆ ಮಾಡಬೇಕೆಂಬ ಅಭಿಲಾಷೆಯೊಂದಿಗೆ ಬಿಜ್ಜಳನಲ್ಲಿ ಹೀಗೆ ಕಲ್ಯಾಣದಲ್ಲಿ ಇರಲು ಅವಕಾಶ ಮಾಡಿಕೊಡಿ ಎನ್ನುತ್ತಾನೆ. ಆಗ

"ಬಿಜ್ಜಳ : ಹೊಸಗಾಳಿಯ ಹೆಸರಿನಲ್ಲಿ ನೀನು ವರ್ಣಸಂಕರ ವರ್ಣಾಶ್ರಮ ಧರ್ಮವನ್ನು ಪ್ರಶ್ನಿಸುವಂಥ ಮದುವೆ ಮಾಡಬಹುದೇ?

ಬಸವಣ್ಣ : ವರ್ಣಸಂಕರದ ಮದವೆಯಲ್ಲ, ಇದು ಅನುಭವ ಮಂಟಪದ ಸಿದ್ಧಾಂತ. ಒಂದು ಕಾಲಕ್ಕೆ ಮಧುವರಸರು ಬ್ರಾಹ್ಮಣರಾದದು ನಿಜ. ಹರಳಯ್ಯನವರು ಶೂದ್ರರಾಗಿದ್ದದು ನಿಜ. ಆದರೆ ಅವರು ಲಿಂಗದೀಕ್ಷೆ ತಗೊಂಡು ಶಿವಧರ್ಮದವರಾಗಿದ್ದಾರೆ. ಶರಣನಾದ ಮೇಲೆ ಹರಳಯ್ಯ ಅಂತ್ಯಜನಲ್ಲ, ಮಧುವರಸ ವಿಪ್ರನಲ್ಲ. ಶರಣರಿಗೆ ಜಾತಿಭೇದವಿಲ್ಲ. ಆದ್ದರಿಂದ ಅದು ಸ್ವಜಾತಿಯ ಸ್ವಧರ್ಮದ ವಿವಾಹ. ಇದು ಜಾತೀಯತೆಯನ್ನು ನಿರ್ನಾಮ ಮಾಡುವ ವೀರಸಾಹಸ

ಬಿಜ್ಜಳ : ನಿಮ್ಮ ಸಿದ್ಧಾಂತವನ್ನು ಜೀರ್ಣಿಸಿಕೊಂಬ ಶಕ್ತಿ ಸಮಾಜಕ್ಕಿಲ್ಲ. ಸನಾತನಾ ಕಾಲದಿಂದಲೂ ನಡೆದು ಬಂದ ಸಂದರ್ಭದಲ್ಲಿ ಮಧ್ಯೆ ನೀನು ಬಂದು ಜನಗಳಲ್ಲಿ ಇಲ್ಲದ ಅಗತ್ಯಗಳನ್ನು ಗುರುತಿಸಿ ಬಗೆಹರಿಸಬಲ್ಲನೆಂಬ ಅಹಂಕಾರದ ಮಾತಲ್ಲವೇ?

ಬಸವಣ್ಣ : ಸಾವಿರ ವರ್ಷ ನಡೆದುಕೊಂಡು ಬಂದದ್ದಕ್ಕೆ ಅದು ಸತ್ಯ ಮತ್ತು ನಿರಂತರವಾಗ ಬೇಕಿಲ್ಲ ಪ್ರಭು. ಸುಳ್ಳು ಮತ್ತು ಅನ್ಯಾಯಗಳೂ ಆಗಿರಬಹುದು. ಯಾಕೆಂದರೆ ಇವು ಸಾವಿರಾರು ವರ್ಷಗಳಿಂದ ಇವೆಯಲ್ಲ. ಕೆಲವು ಪ್ರತಿಷ್ಠಿತರಿಗೆ ಮಾತ್ರ ಸತ್ಯವಾಗಿ, ಉಳಿದವರಿಗೆ ಅದು ಅಸತ್ಯವೆಂದು ಖಾತ್ರಿಯಾಗಿದ್ದರೆ ಆ ಉಳಿದವರು ತಮಗೆ ಅಸತ್ಯವೆನಿಸಿದ್ದನ್ನು ತಿರಸ್ಕರಿಸುವ ಹಕ್ಕು ಅವರಿಗೆ ಇದೆಯಲ್ಲವೆ? ನನಗೆ ಸತ್ಯವಾದದ್ದು ತಮಗೂ ಸತ್ಯವಾಗಲೇಬೇಕೆಂದು ಹೇಳಲಾಗುವುದಿಲ್ಲ."[೩೯]

ಹೀಗೆ ಈ ನಾಟಕದ ಮೂಲಕ ವರ್ಣಾಶ್ರಮದ ಭದ್ರ ಬುನಾದಿಯನ್ನು ಕಡಿದು ಹಾಕುವಲ್ಲಿ ಮತಾಂಧತೆಯನ್ನು ದೂರ ತಳ್ಳುವಲ್ಲಿ ಯಶಸ್ವಿಯಾಗುತ್ತಾ ಈ ಅಂತರ್ಜಾತಿ ವಿವಾಹವನ್ನು ಒಪ್ಪಿಕೊಂಡ ಬಸವಣ್ಣ ಈ ಮೇಲಿನಂತೆ ಚರ್ಚೆ ಮಾಡುವುದರ ಮೂಲಕ ಮಾನವೀಯತೆಯನ್ನು ಮೆರೆಯುತ್ತಾನೆ.

ಈ ಎರಡು ನಾಟಕಗಳಿಗಿಂತ ಭಿನ್ನವಾಗಿ ನಿಲ್ಲುವ ನಾಟಕ ಸಂಕ್ರಾಂತಿ. ಇಲ್ಲಿ ಅಂತರ್ಜಾತಿ ವಿವಾಹಕ್ಕೆ ಎಡೆಮಾಡಿಕೊಡುವ ಅದರ ಕುರಿತಾಗಿ ಮಾತನಾಡುವ ಪ್ರೀತಿಸುವ ಪಾತ್ರಗಳ ಹೆಸರು ಬೇರೆಯಾದರೂ ವಿಷಯ ಅಂತರಂಗದಲ್ಲಿ ಅಂತರ್ಜಾತಿ ವಿವಾಹದ ಕುರಿತಾಗಿ ಇರುವ ವೈರುಧ್ಯತೆಯನ್ನು ಚಿತ್ರಿಸುತ್ತದೆ. ಉಷಾ ಉಜ್ಜನ ಮಗ ರುದ್ರನನ್ನು ಪ್ರೀತಿಸಿದ ಬ್ರಾಹ್ಮಣ ಕನ್ಯೆ. ಇವರೀರ್ವರ ವಿಷಯವಾಗಿ ಬಿಜ್ಜಳನಲ್ಲಿಗೆ ಬಂದಾಗ ಬಸವಣ್ಣನು ಸಹ ಅಲ್ಲಿ ಇರುತ್ತಾನೆ. ಉಷಾ ಈಗಾಗಲೇ ದಲಿತ ರುದ್ರನನ್ನು ಪ್ರೀತಿಸಿದ್ದಾಳೆ. ಅದಕ್ಕೆ ಕಾರಣ ಆತನಲ್ಲಿರುವ ವಿಕಾರವಾದ ವರ್ತನೆ. ಆ ವರ್ತನೆಯಿಂದ ರುದ್ರನನ್ನು ಬದಲಾವಣೆ ಮಾಡುವುದರ ಮೂಲಕ ಅವನೊಬ್ಬ ಶುದ್ಧ ಮನುಷ್ಯನನ್ನಾಗಿ ಮಾಡಬೇಕೆಂಬ ಆಸೆಯಿಂದ ಉಷಾ ಅವನನ್ನು ಪ್ರೀತಿಸಲು ಮುಂದಾಗುತ್ತಾಳೆ. ಅವನಿಗೆ ತನ್ನ ಮನವನ್ನು ಅರ್ಪಿಸುತ್ತಾಳೆ. ಹೀಗೆ ಉಷಾ ಮತ್ತು ರುದ್ರರ ನಡುವೆ ವರ್ಣಸಂಕರ ಮೀರಿ ಪ್ರೀತಿ ಗಟ್ಟಿಯಾಗಿ ಬೆಳೆಯಲು ಕಾರಣವಾಗುತ್ತ ಹೋಗುತ್ತದೆ. ಬಸವಣ್ಣನ ಆಗಮನ ಆತನ ತತ್ವದಿಂದಾಗಿ ಕೆಳಜಾತಿಯ ಜನರೆಲ್ಲ ಭಕ್ತಿ ಕಾಯಕದಿಂದಾಗಿ ಶರಣತ್ವವನ್ನು ಪರಿಪಾಲಿಸಲು ಮುಂದಾಗುತ್ತಾರೆ. ಬಸವಣ್ಣನ ಆದರ್ಶಕ್ಕೆ ರುದ್ರನು ಸಹ ಶರಣು ಹೊಂದಿದ್ದಾನೆ. ಶರಣನಾದ ರುದ್ರ ತನ್ನ ಪ್ರೀತಿಯ ಬ್ರಾಹ್ಮಣ ಕನ್ಯೆ ಉಷಾಳನ್ನು ಪ್ರೀತಿಸಲು ಮುಂದೆ ಬಂದಾಗ ಆಕೆ ರುದ್ರನಿಂದ ಅತ್ಯಾಚಾರವಾಗಿದೆ ಎಂದು ದೂರು ನೀಡುತ್ತಾಳೆ. ಆಗ ಬಿಜ್ಜಳ ರುದ್ರನಿಗೆ ಮರಣದಂಡನೆ ಶಿಕ್ಷೆಗೆ ಗುರಿಪಡಿಸುತ್ತಾನೆ. ರುದ್ರನ ಶಿಕ್ಷೆಯನ್ನು ಅರಿತ ತಂದೆ ಉಜ್ಜ ಮಗನ ಪ್ರೀತಿ ಮಮತೆಯಿಂದಾಗಿ ಗೋಳಿಡುತ್ತಾನೆ. ಆಗ ರುದ್ರ ತಂದೆಗೆ ನೀನೇನು ಭಯಪಡಬೇಡ ಬಸವಣ್ಣ ಇದ್ದಾನೆ. ಅಂದಾಗ ಉಜ್ಜ ಅವರಿಗೇನು ಗೊತ್ತಾಗತೈತಿ ಆಕೆ ನಿನ್ನ ಪ್ರೀತಿಸಿದ್ದು, ಈ ಸುದ್ದಿ ಪ್ರಪಂಚಕ್ಕೆ ಮುಟ್ಟುವ ಹಾಗೆ ಕೂಗುತಿನಿ ಎಂದು ಕಿರುಚುತ್ತಾನೆ. ಆಗ ರುದ್ರ ಬಸವಣ್ಣ ಸಾಯಿ ಅಂದ್ರೆ ನಾ ಸಾಯ್ತಿನಿ. ಅಂದಾಗ ಬಸವಣ್ಣ ಹಾಗೂ ಬಿಜ್ಜಳರಿಬ್ಬರು ಮಾತಾಡು ಎಂದು ಒತ್ತಾಯಿಸಿದಾಗ ಮೌನನಾಗುತ್ತಾನೆ. ಆಗ ಬಸವಣ್ಣ ಆಕೆ ನಿನಗೆ ಬಲಾತ್ಕಾರ ಮಾಡಿದಳೆಂದು ಹೇಳುವುದಕ್ಕೆ ಏಕೆ ಹಿಂಜರಿಯುವೆ

ಹೇಳು ಎಂದಾಗ ಉಷಾಳ ಕಡೆಗೆ ನೋಡಿದ ರುದ್ರ ನನ್ನ ತಲೆದಂಡ ನಿನಗೆ ಏಕೆ ಬೇಕಿತ್ತು, ಆಗ ನಗ್ತಾ ನಗ್ತಾ ನನ್ನ ಜೊತೆ ಇದ್ದೆ ಈಗ ಏನಾಗೈತಿ ಹೇಳು ಎಂದು ಕೇಳುತ್ತಾನೆ. ಆಗ ಬಿಜ್ಜಳ ನಿನ್ನ ಮೇಲೆ ರುದ್ರ ಬಲತ್ಕಾರ ಮಾಡಿದ್ದು ನಿಜವೇ ಎಂದಾಗ ಉಷಾ ಹೌದು ಎನ್ನುತ್ತಾಳೆ. ಮುಂದುವರೆದು

"**ಉಷಾ** :(ಮೌನ) ನನ್ನ ಬಳಿ ಮಾತಾಡುತ್ತಿದ್ದವ ಬೇರೆ. ಆತ ಬಂದು ಮೈ ಮೇಲೆ ಬಿದ್ದ. ಆತ ನನಗೆ ಬೇಕಾದವನಾಗಿದ್ದ; ಆದರೆ ನಾನು ಎದ್ದು ನೋಡಿದಾಗ ಆತ ಇರಲಿಲ್ಲ. ಅಲ್ಲಿದ್ದವನು ಶರಣ ರುದ್ರ, ಇದು ಅತ್ಯಾಚಾರವಲ್ಲದೆ ಮತ್ತೇನು?"[೪೦]

ಎಂದು ಹೇಳುವಲ್ಲಿ ಶರಣರ ತತ್ವದಿಂದ ಶರಣನಾದ ರುದ್ರನ ಬಗೆಗೆ ಮಾತನಾಡುತ್ತಾಳೆ. ಹೀಗೆ ಈ ನಾಟಕ ದಲಿತ ರುದ್ರನ ಪ್ರೀತಿಯೇ ಅಮರ, ಶರಣ ರುದ್ರನ ಪ್ರೀತಿ ಅಮರವಲ್ಲ. ಏಕೆಂದರೆ ಉಷಾ ಪ್ರೀತಿಸಿದ್ದು ದಲಿತರುದ್ರನನ್ನು, ಶರಣರುದ್ರನಲ್ಲ ಅಂದರೆ ದಲಿತರು ದಲಿತರಾಗಿಯೇ ಇರಬೇಕು. ಅವರು ಎಂದಿಗೂ ಶರಣರಾಗಬಾರದು, ಬದಲಾವಣೆಯಾಗಬಾರದು ಎಂಬ ತತ್ವವನ್ನು ಬೋಧಿಸಿದರೂ ಅಂತರಂಗದಲ್ಲಿ ದಲಿತರನ್ನು ಪ್ರೀತಿಸುವ ಬ್ರಾಹ್ಮಣ ಕನ್ಯೆಯರು ಅಂದಿಗೂ ಇದ್ದರು ಎಂಬುದನ್ನು ಒತ್ತಿ ಹೇಳುವಂತೆ ಕಾಣಿಸುತ್ತದೆ.

**ದೇವದಾಸಿ**

ದೇವದಾಸಿ ಎಂಬ ಮತ್ತೊಂದು ಬಗೆಯ ದಾಸಪದ್ಧತಿ ವೈದಿಕ ಸಮಾಜದಲ್ಲಿ ಬಹು ಪ್ರಾಚೀನ ಕಾಲದಿಂದ ಬೆಳೆದು ಬಂದಿದೆ. ಇದು ಧರ್ಮದ, ದೇವರ ಹೆಸರಿನಲ್ಲಿ ನಡೆಯುವ ವೇಶ್ಯಾಪದ್ಧತಿಯಲ್ಲದೆ ಬೇರೇನೂ ಅಲ್ಲ. ದೇವಾಲಯಗಳ ಪ್ರಸಿದ್ಧಿ ಆ ದೇವಾಲಯಗಳು ಹೊಂದಿರುವ ದೇವದಾಸಿಯರ ಗುಣ ಮತ್ತು ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಈ ಹಿಂದೆಯೇ ಪುರಿ ಮತ್ತು ತಿರುಪತಿ ದೇವಾಲಯಗಳು ಅತಿ ಹೆಚ್ಚು ದೇವದಾಸಿಯರನ್ನು ಹೊಂದಿದ್ದವು ಎಂದು ಹೇಳಲಾಗುತ್ತದೆ. ಕರ್ನಾಟಕದ ಪ್ರಸಿದ್ಧ ರಾಜ ಮನೆತನವೆಂದು ಹೆಸರು ಪಡೆದ ವಿಜಯನಗರ ಸಾಮ್ರಾಜ್ಯದಲ್ಲಿ ದೇವಸ್ಥಾನದ ಪ್ರಮುಖ ಬೀದಿಯಲ್ಲಿ ಇವರಿಗೆ ಮಾನ್ಯತೆ ಇತ್ತು ಎಂದು ಹೇಳಲಾಗುತ್ತವೆ.

ಚಿಕ್ಕವಯಸ್ಸಿನಲ್ಲಿಯೇ ಹೆಣ್ಣುಮಕ್ಕಳನ್ನು ದೇವಾಲಯಗಳಿಗೆ ಅರ್ಪಿಸಲಾಗುತ್ತಿತ್ತು. ಅವರು ವಯಸ್ಸಿಗೆ ಬಂದ ಕೂಡಲೇ ಕಲ್ಲು ದೇವರೊಡನೆ ಅವರ ಮದುವೆ ಸಮಾರಂಭ ನಡೆಯುತ್ತಿತ್ತು. ಅವರಲ್ಲಿ ಬಹಳ ಸುಂದರಿಯಾದವರನ್ನು ದೇವಾಲಯದ ಪುರೋಹಿತವರ್ಗ ತಮ್ಮ ಕಾಮಕ್ಕೆ ಬಲಿ ತೆಗೆದುಕೊಂಡರೆ ಉಳಿದವರನ್ನು ರಾಜ್ಯಪರಿವಾರದವರು ನಂತರ ಅವರನ್ನು ಸಾರ್ವಜನಿಕ ವೇಶ್ಯೆಯರಾಗಲು ಬಿಡುತ್ತಿದ್ದರು. ವೈದಿಕ ಧಾರ್ಮಿಕ ಸಂಪ್ರದಾಯಗಳ ಅಧಃಪತನದ ಪರಮಾವಧಿಯನ್ನು ದಾಸ–ದಾಸಿಯ ಸ್ಥಿತಿಗತಿಗಳನ್ನು ನೋಡಿ ತಿಳಿಯಬಹುದಾಗಿದೆ.

ಹಿಂದೂ ಸಂಪ್ರದಾಯದ ಪ್ರಕಾರ ಕೆಳಕುಟುಂಬದ ಒಬ್ಬ ಹುಡುಗಿಯನ್ನಾದರೂ ದೇವದಾಸಿ ಯನ್ನಾಗಿ ಮಾಡಬೇಕೆಂಬ ಸಂಪ್ರದಾಯ ಸನಾತನ ಕಾಲದಿಂದಲೂ ನಡೆದುಕೊಂಡು ಬಂದಿದೆ.

ದೇವದಾಸಿಯರಿಗೆ ಸಮನಾರ್ಥಕವಾಗಿ ಬಸವಿ, ಜೋಗಿನಿ ಮತ್ತು ಮಾತಂಗಿ ಎಂಬ ಹೆಸರುಗಳಿಂದ ಕರೆಯುವ ಪದ್ಧತಿ ರೂಢಿಯಲ್ಲಿತ್ತು. ಅಲ್ಲದೇ ಕೆಳಜಾತಿಯ ಹುಡುಗಿ ಸುಂದರಿಯಾಗಿದ್ದರೆ ಅವಳನ್ನು ದೇವರ ಸೇವಕಿಯಾಗಿ ನೇಮಿಸಿ ಮೇಲ್ಜಾತಿಯ ಪುರುಷರಿಗೆ ಭೋಗದ ವಸ್ತುವಾಗಿ ಇರುವುದನ್ನು ಹಲವಾರು ನಾಟಕಗಳಲ್ಲಿ ವ್ಯಕ್ತವಾಗಿವೆ. ಹೀಗೆ ಒಂದು ಕಡೆ ದೇವರು ಧರ್ಮ ಈ ಪದ್ಧತಿಗೆ ಮೂಲಕಾರಣವೆಂಬ ವಿಚಾರಗಳು ಅಭಿವ್ಯಕ್ತಗೊಂಡಿವೆ. ಇಂತಹ ದೇವದಾಸಿ ಪದ್ಧತಿಯನ್ನು ವಿರೋಧಿಸಿ ಅವರಿಗೂ ಸರಿಸಮಾನವಾದ ಅವಕಾಶಗಳನ್ನು ಸಮಾಜ ಹಾಗೂ ಧರ್ಮದಲ್ಲಿ ಸಿಗಬೇಕೆಂಬ ಅಭಿಲಾಷೆಯನ್ನು ಹೊತ್ತು ಅದರ ವಿರುದ್ಧ ಸಿಡಿದೆದ್ದವರು ಶಿವಶರಣರು. ಏಕೆಂದರೆ ಈ ಪದ್ಧತಿ ಸ್ತ್ರೀಯರನ್ನು ಅಮಾನವೀಯವಾಗಿ ಶೋಷಣೆ ಮಾಡಲಾಗುತ್ತದೆ. ಇದೊಂದು ಸಾಮಾಜಿಕ ಸಮಸ್ಯೆಯಾಗಿದ್ದು ಇದಕ್ಕೆ ಗುರಿಯಾದ ಮಹಿಳೆಯರನ್ನು ತಲೆತಗ್ಗಿಸಿ ಬದುಕುವಂತೆ ಮಾಡಿರುವುದು ಶೋಚನೀಯ ಎಂಬ ವಿಚಾರಗಳನ್ನು ನಾಟಕಗಳಲ್ಲಿ ತಿಳಿಸಿರುವುದು ಕಾಣುತ್ತೇವೆ. ಮೊದಲಿಗೆ ದೇವಸ್ಥಾನಗಳಲ್ಲಿ ಸೀಮಿತವಾಗಿದ್ದ ಈ ಪದ್ಧತಿ ನಂತರದಲ್ಲಿ ಅರಮನೆವರೆಗೂ ಬಂದಿರುವ ಅಮಾನುಷ ವಿಚಾರ ಈ ಕೆಳಗಿನ ಸಂಭಾಷಣೆಯಿಂದ ಅರಿಯಬಹುದು.

“**ಭಟ್ಟ** : ನೀನು ವೇಶ್ಯೆ. ನಿನ್ನ ಜಾತಿ ಧರ್ಮವನ್ನು ಬಿಟ್ಟು, ಈ ರೀತಿ ವರ್ತಿಸುವುದು ಯೋಗ್ಯವೇ? ಕಲಾವತಿ: ತಾವು ಪಂಡಿತರು. ವಾದಿಸುವೆನೆಂದು ಭಾವಿಸಬೇಡಿ. ತಾವಂದಂತೆ ನಮ್ಮ ಜಾತಿಗೂ ಧರ್ಮವಿರುವುದೇ?

**ಭಟ್ಟ** : ಲೋಕಪ್ರಸಿದ್ಧವಾದ ವಿಷಯದಲ್ಲಿ ಸಂದೇಹವೇಕೆ?

**ಕಲಾವತಿ** : ಹಾಗಾದರೆ ಲೋಕದಲ್ಲಿ ಮೊದಲು ನಮ್ಮ ಜಾತಿಯವರು ಯಾವ ಹೆಸರಿನಿಂದ ಕರೆಯಲ್ಪಡುತ್ತಿದ್ದರು?

**ಭಟ್ಟ** : ದೇವದಾಸಿಯರೆಂದು.

**ಕಲಾವತಿ** : ಅಂದ ಬಳಿಕ ಆ ದೇವದಾಸಿಯರು ನರದಾಸಿಯರಾಗಬಹುದೇ?”[೪೧]

ಹೀಗೆ ಕಲಾವತಿ ಪ್ರಶ್ನೆ ಮಾಡುವಲ್ಲಿ ಶರಣತ್ವದ ಪ್ರತಿಭಟನೆ ವ್ಯಕ್ತವಾಗಿದೆ. ಏಕೆಂದರೆ ಅಂದಿನ ಕಾಲದಲ್ಲಿ ದೇವಸ್ಥಾನದ ಅಡಿಯಲ್ಲಿ ನೇಮಿಸಲ್ಪಟ್ಟಿದ್ದ ದೇವದಾಸಿಯರು ಅರಸರ ಕಾಲಕ್ಕೆ ಅರಸರೇ ಪ್ರತ್ಯಕ್ಷ ದೈವ ಎಂಬ ವಿಚಾರದಡಿಯಲ್ಲಿ ಅರಮನೆಯಲ್ಲಿ ಅರಸರ ಮನವನ್ನು ತಣಿಸುವುದಕ್ಕಾಗಿ ನೃತ್ಯ ಸಂಗೀತದಲ್ಲಿ ತೊಡಗುವವರು ಒಂದರ್ಥದಲ್ಲಿ ಈ ಗುಂಪಿಗೆ ಸೇರಿದವರಾಗಿರುತ್ತಿದ್ದರು. ಈ ಕಾರಣದಿಂದಲೇ ಬಸವಣ್ಣನವರು ಸೂಳೆ ಸಂಕವ್ವೆಯಂತಹ ಮಹಿಳೆಯನ್ನು ಗುರುತಿಸಿ ಆಕೆಗೆ ಸಾಮಾಜಿಕ ಹಾಗೂ ಧಾರ್ಮಿಕ ಸ್ಥಾನಮಾನಗಳಲ್ಲಿ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದರಿಂದಲೇ ಆಕೆಯು ಸಹ ತನ್ನ ಅನುಭವದ ವಿಚಾರಗಳನ್ನು ವಚನಗಳ ರೂಪದಲ್ಲಿ ರಚನೆ ಮಾಡುವಲ್ಲಿ ಯಶಸ್ವಿಯಾಗಿದ್ದಳು ಎಂಬುದೇ ಒಂದು ನೈತಿಕತೆ. ಇಲ್ಲಿ ಕಲಾವತಿ ಎಂಬ

ಪಾತ್ರವು ಸಹ ದೇವದಾಸಿ ಪದ್ಧತಿಯಿಂದ ಹೊರಬರುವ ವಿಚಾರವನ್ನು ಮುಂದಿಟ್ಟುಕೊಂಡು ತರ್ಕಕ್ಕೆ ಇಳಿದಾಗ ಬಿಜ್ಜಳ ಪ್ರತಿಯೊಬ್ಬರಿಗೂ ವಾಕ್‌ಸ್ವಾತಂತ್ರ್ಯವಿದೆ. ಕಲಾವತಿ ನಿನ್ನ ಉದ್ದೇಶವನ್ನು ಸ್ಪಷ್ಟವಾಗಿ ತಿಳಿಸು ಎನ್ನುತ್ತಾನೆ. ಆಗ ಕಲಾವತಿಯು ನರರಲ್ಲಿ ಉತ್ತಮನೆಂದು ಒಪ್ಪಿಕೊಳ್ಳಬಹುದೇ ಹೊರತು ದೇವನೆಂದು ಹೇಳಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ.

ದೇವದಾಸಿ ಪದ್ದತಿ ದೇವಾಲಯ ಸಂಸ್ಕೃತಿಯಿಂದ ನರಮಾನವರ ಭೋಗದ ವಸ್ತುವಾಗಿ ಕಾಣಿಸಿಕೊಳ್ಳುವುದರ ಮೂಲಕ ಸಮಾಜದಲ್ಲಿ ಸೂಳೆ ಎನ್ನುವ ಅಪವಾದಕ್ಕೆ ಸಿಲುಕಿ ತಮ್ಮ ಬದುಕನ್ನು ಸಾಗಿಸಿದ ಅಂಶಗಳು ಸಾಕಷ್ಟು ರೀತಿಯಲ್ಲಿ ವ್ಯಕ್ತವಾಗಿವೆ. ಆದರೆ ಅದೇ ದೇವದಾಸಿ ೧೨ನೇ ಶತಮಾನದ ಸಂದರ್ಭದಲ್ಲಿ ಬಸವಣ್ಣನ ಸ್ವಾಮಿ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ವೃತ್ತಿ ಧರ್ಮವನ್ನಾಗಿ ಮಾಡಿಕೊಂಡಳು ಎಂಬ ಅಭಿಪ್ರಾಯ ಒಂದೆಡೆಯಾದರೆ ಇನ್ನೊಂದೆಡೆ ಬಸವಣ್ಣನ ತತ್ವ ಮತ್ತು ಆಚರಣೆಗಳಿಂದ ಬದಲಾವಣೆ ಹೊಂದಿದಳೆಂಬ ವಿಚಾರಗಳು ಅಭಿವ್ಯಕ್ತಗೊಳ್ಳುತ್ತಾ ಹೋಗುತ್ತವೆ. ಏಕೆಂದರೆ ತಮ್ಮ ಬದುಕನ್ನು ಅದೇ ವೃತ್ತಿಯಿಂದಲೇ ಸಾಗಿಸಬೇಕೆಂಬ ಸನಾತನಾ ಕಾಲದ ಅವಿವೇಕ ಬುದ್ಧಿಗೆ ಈ ಶತಮಾನದ ವೇಶ್ಯೆ ಬದಲಾದ ವಿವೇಕವಂತಳಾಗಿ ಶರಣರ ಸನ್ಮಾರ್ಗದಲ್ಲಿ ನಡೆಯುವಂತಹ ವೈಚಾರಿಕತೆಯನ್ನು ರೂಢಿಸಿ ಕೊಂಡಳೆಂಬ ಹಾಗೂ ಪ್ರಶ್ನೆ ಮಾಡುವ ವಿಚಾರ ಮಾಡುವ ನೈತಿಕತೆಗೆ ಬದ್ಧಳಾಗಿದ್ದಾಳೆಂಬ ಅಂಶವು 'ಶಿವರಾತ್ರಿ' ನಾಟಕದಲ್ಲಿ ವ್ಯಕ್ತವಾಗಿದೆ. ಈ ನಾಟಕ ಪ್ರಾರಂಭವಾಗುವುದೇ ವೇಶ್ಯ ಮನೆತನದಿಂದ ಎಂಬುದೇ ವಿಶೇಷ.

ಮಹಾಮನೆ ಮತ್ತು ಅರಮನೆ ಈ ಎರಡು ಕೇಂದ್ರ ರೂಪಕಗಳ ಸುತ್ತ ನಾಟಕ ಕಟ್ಟಲ್ಪಟ್ಟಿದೆ ಮತ್ತು ಪರಸ್ಪರ ವಿರುದ್ಧ ವಿರುವ ಈ ಎರಡು ರೂಪಕಗಳು ಸೂಳೆ ಸಾವಂತ್ರಿಯ ಮನೆಯಲ್ಲಿ ಪರಸ್ಪರ ಎದುರಾಗುತ್ತವೆ. ಅರಮನೆಯನ್ನು ಬದಿಗಿರಿಸಿ ಅದರ ಬದಲಾಗಿ ಸಮಜೋದ್ಧಾರಕ್ಕಾಗಿ ಮಹಾಮನೆಯನ್ನು ನಿರ್ಮಿಸಿಕೊಂಡು ಮಹಾಮನೆ ಪ್ರತಿನಿಧಿಯಾಗಿ ಬಸವಣ್ಣ ಸೂಳೆ ಸಾವಂತ್ರಿಯ ಮನೆಗೆ ಮುಗ್ಧ ಸಂಗಯ್ಯನನ್ನು ಹುಡುಕಿಕೊಂಡು ಬಂದರೆ, ಅರಮನೆಯನ್ನು ಪ್ರತಿನಿಧಿಸುವ ಅರಸನಾದ ಬಿಜ್ಜಳ ವೇಶ್ಯ ಸಂಗಕ್ಕಾಗಿ ಅಲ್ಲಿಗೆ ಬರುತ್ತಾನೆ. ಬೀದಿ ಬದಿಗಳಲ್ಲಿ ಶರಣ ಬೇಟೆಯಾಗುತ್ತಿರುವಾಗ ಅಮವಾಸ್ಯೆಯ ಕತ್ತಲಲ್ಲಿ ವೇಶ್ಯೆಯ ಮನೆಯಲ್ಲಿ ರಾಜ ಹಾಗೂ ಅವನ ಪ್ರಧಾನಿ ಸಂಧಿಸುವುದೇ ನಾಟಕೀಯ ಸನ್ನಿವೇಶ ಮತ್ತು ಸಂಭಾಷಣೆ ಹೀಗಿದೆ. ಬಿಜ್ಜಳನು ವೇಶ್ಯೆಯ ಸಂಗವನ್ನು ಬಯಸಲು ಮಾರುವೇಷದಲ್ಲಿ ಸಾವಂತ್ರಿಯ ಮನೆಗೆ ಬರುತ್ತಾನೆ. ಸಾವಂತ್ರಿ ಬಿಜ್ಜಳನಿಗೆ ಸ್ವಾಗತಿಸಲು ಹೋಗುತ್ತಾಳೆ. ಹೀಗೆ ಇವರೀರ್ವರ ನಡುವೆ ಸಂಭಾಷಣೆ ಏರ್ಪಟ್ಟು ನೀವು ಮಾರುವೇಷದಲ್ಲಿ ಬಂದರೆ ನಿಮ್ಮನ್ನು ಯಾರು ಗುರುತು ಹಿಡಿಯಲಾರರೆಂದು ತಿಳಿದಿರೇನು ಅಂದಾಗ ಬಿಜ್ಜಳ ಗುರುತು ಹಿಡಿದಾರಯೇ ಎಂದಾಗ ವೇಷಾಂತರದಲ್ಲಿ ಸಿಂಹ ಬಂದರೂ ಅದು ಸಿಂಹವಲ್ಲದೇ ಬೇರೇನು ಆಗೋದು ಸಾಧ್ಯ ಎನ್ನುತ್ತಾಳೆ. ಮುಂದುವರೆದು ಆಕೆ ಮನೆಗೆ ಬರುವ ಗಿರಾಕಿಯ ವಿವರಗಳನ್ನು ಬೇರೆಯವರಿಗೆ ಕೊಡುಲುಂಟೆ ಪ್ರಭು ಅದು

ಸೂಳೆಯ ಧರ್ಮವಲ್ಲ ಬೊಗಳುತ್ತವಾದ್ದರಿಂದ ಗಿರಾಕಿಗೆ ಅನಾನುಕೂಲವಾದಿತೆಂದು ನಾವು ನಾಯಿಯನ್ನು ಸಾಕಿಲ್ಲ ಎಂದು ಹೇಳುವಲ್ಲಿ ಸೂಳೆಯರದು ಒಂದು ಧರ್ಮ. ಅದೊಂದು ವೃತ್ತಿ. ನಂತರದಲ್ಲಿ ಬಸವಣ್ಣನಿಂದಾಗಿ ಬದಲಾವಣೆಯ ಪ್ರತೀಕವಾಗಿ ಕಾಣಿಸಿಕೊಳ್ಳುತ್ತದೆಂಬ ವಿಚಾರ ಸ್ಪಷ್ಟವಾಗುತ್ತದೆ.

ಆಗ ಬಿಜ್ಜಳನು ಸಾವಂತ್ರಿಯ ಮನೆಯಾಳಗಿರುವ ಕಾಮಾಕ್ಷಿಯ ಮೇಲೆ ವ್ಯಾಮೋಹವನ್ನು ಇಟ್ಟುಕೊಂಡು ಬಂದರೂ ಅವಳು ಈತನನ್ನು ಸ್ವಾಗತಿಸಲು ಬರದೇ ಕಾರಣವನ್ನು ಕೇಳಲಾಗಿ ಆಕೆ ಬೇರೆಯೊಬ್ಬರ ಸೇವೆಯಲ್ಲಿದ್ದಾಳೆ ಎಂಬ ಮಾತನ್ನು ಕೇಳಿದ ಬಜ್ಜಳ

**"ಬಿಜ್ಜಳ** : (ಕೋಪದಿಂದ)ಏನೆಂದೆಯೇ ದುಷ್ಟರಂಡೇ, ಬಿಜ್ಜಳನ ವಾರಾಂಗನೆ ಇನ್ನೊಬ್ಬ ವಿಟನ ಸೇವೆಯಲ್ಲಿರುವಳೋ?

**ಸಾವಂತ್ರಿ** : ಕೋಪ ಮಾಡಿಕೋಬ್ಯಾಡ್ರಿ ಪ್ರಭು. ವಿಚಾರನಾರಿಯರಾದ ನಾವು ಸೇವೆ ಬಯಸಿ ಬಂದ ಎಲ್ಲಾರನ್ನೂ ಸಮಾನವಾಗಿ ಕಾಣುವುದು ನಮ್ಮ ವೃತ್ತಿಧರ್ಮ. ತಾವು ಕೊಡುವ ಬೆಲೆಯನ್ನೇ ಅವರೂ ಕೊಟ್ಟುದರಿಂದ ಇಲ್ಲವೆನ್ನುವ ಮನಸ್ಸು ನಮಗಾಗಲಿಲ್ಲ.

**ಬಿಜ್ಜಳ** : (ವ್ಯಂಗ್ಯವಾಗಿ) ಓಹೋ ಧರ್ಮಜಿಜ್ಞಾಸೆ ವೇಶ್ಯಾವಾಟಿಕೆಯವರೆಗೂ ಬಂದಿತೋ? ಧನ್ಯ ಬಸವಾ ಧನ್ಯ! (ಸಾವಂತ್ರಿ ಮುಗುಳು ನಗುವಳು) ವಾರಾಂಗನೆಯರಿಗೆ ಮಹಾರಾಜರನ್ನು ಕಂಡು ನಗುವಷ್ಟು ಕೊಬ್ಬು ಬಂತೊ?"[೨]

ಹೀಗೆ ಸಾವಂತ್ರಿ ಮಾತನಾಡುವಲ್ಲಿ ಬಸವಣ್ಣನ ಶರಣಧರ್ಮ, ಕಾಯಕ ಹಾಗೂ ಭಕ್ತಿ ಅವಳನ್ನು ಬದಲಾವಣೆಯ ಪ್ರತೀಕವನ್ನಾಗಿಸಿ ಶರಣೆಯನ್ನಾಗಿ ಮಾಡುವಲ್ಲಿ ಶ್ರಮಿಸಿದ ವಿಚಾರ ಬಿಜ್ಜಳನಿಗೆ ಗೊತ್ತಾಗುತ್ತದೆ. ಮುಂದುವರೆದ ಬಿಜ್ಜಳ ಕಾಮಾಕ್ಷಿಯ ಜೊತೆಗಿದ್ದವನು ನನ್ನ ಶ್ರೀಮಂತಿಕೆಗೆ ಸ್ಪರ್ಧಿಸುವನೇ ಎಂಬ ಅಹಂಕಾರ ಹಾಗೂ ಶ್ರೀಮಂತಿಕೆಯ ವಿಚಾರವನ್ನು ಬಿಂಬಿಸುತ್ತಾನೆ. ಅಂದರೆ ವೇಶ್ಯೆಯರು ಕೇವಲ ಹಣಕ್ಕಾಗಿ ಅಷ್ಟೇ ಅಲ್ಲ ಅವರು ಶ್ರೀಮಂತರ, ಅರಸರ ಸ್ವತ್ತು ಎಂಬ ವಿಚಾರವನ್ನು ವ್ಯಕ್ತಪಡಿಸುತ್ತಾನೆ. ದಿನಾಲು ಕಾಮಾಕ್ಷಿಯೊಂದಿಗೆ ಸುಖಪಡುವ ಬಿಜ್ಜಳ ಸಾವಂತ್ರಿಯ ಮಾತು ಕೇಳಿ ಸಿಟ್ಟಿನಿಂದ ಕಾಮಾಕ್ಷಿಯ ಕೋಣೆಯ ಬಾಗಿಲನ್ನು ತೆರೆದು ನೋಡುತ್ತಾನೆ. ಹಾಸಿಗೆಯ ಮೇಲೆ ಮುಗ್ಧ ಸಂಗಯ್ಯನವರು ಲಿಂಗಪೂಜೆ ಮಾಡುತ್ತಿರುವುದನ್ನು ಕಂಡ ಬಜ್ಜಳನ ಮುಖದಲ್ಲಿ ಸ್ವಲ್ಪ ಮುಗಳುನಗು ಬರುತ್ತದೆ. ಆಗ ಬಿಜ್ಜಳ ಪಾಪದ ಹಾಸಿಗೆಯ ಮೇಲೆ ಲಿಂಗ ಪೂಜೆಯೇ ಎಂದು ಹೇಳುವಲ್ಲಿ ಬಸವಣ್ಣನವರ ನೈತಿಕತೆ ಹಾಗೂ ಶರಣರ ವಿಚಾರ ಅರಿವಿಗೆ ಬರುತ್ತದೆ. ಶರಣರು ಕಾಯಕನಿಷ್ಠೆಯಿಂದ ಬದುಕಬೇಕೆಂಬ ನಿಲುವನ್ನು ತಾಳಿ ಪ್ರತಿಯೊಬ್ಬರು ಸಮಾಜದಲ್ಲಿ ಸಮಾನರು. ಇಲ್ಲಿ ಯಾವುದೇ ರೀತಿಯ ಭಿನ್ನ ಭೇದವಿಲ್ಲ. ವೇಶ್ಯೆಯರು ಎಂದರೆ ಕೇವಲ ಭೋಗದ ವಸ್ತುಗಳಲ್ಲ. ಅವರಲ್ಲಿ ಶರಣಕುಲದ ಮನಸ್ಸುಗಳಿವೆ ಎಂಬುದನ್ನು ಅರಿತ ಬಸವಣ್ಣ ಅದರಲ್ಲಿ ಲಿಂಗಪೂಜೆಯ ಮಹತ್ವವನ್ನು ಸಾರುತ್ತಾನೆ. ಲಿಂಗ ಎನ್ನುವುದು ಒಂದು ಧರ್ಮಕ್ಕೆ ಒಂದು ಜನಾಂಗಕ್ಕೆ ಸೀಮಿತವಲ್ಲ. ಕಾಯಕನಿಷ್ಠೆ ಮತ್ತು

ಪ್ರಾಮಾಣಿಕತೆ, ದಯೆ ಯಾರಲ್ಲಿ ಇರುತ್ತದೆಯೋ ಅವರೆಲ್ಲರಿಗೂ ಇದು ಅನ್ವಯವಾಗುತ್ತದೆಂಬ ವಿಚಾರವನ್ನು ಮಂಡಿಸಿದ್ದಾರೆ. ಬಿಜ್ಜಳ ತನ್ನ ಅರಮನೆಯಿಂದ ಕಾಮದ ಸುಖಕ್ಕಾಗಿ ವೇಶ್ಯೆಯರ ಮನೆಗೆ ಬಂದರೆ, ಬಸವಣ್ಣ ಮಹಾಮನೆಯಿಂದ ಅದೇ ವೇಶ್ಯೆಯರ ಮನೆಗೆ ಬಂದು ಅವರನ್ನು ತಾಯಿ ಎಂದು ಒಪ್ಪಿಕೊಂಡು ಅವರಿಗೆ ಮಾತೃಸ್ಥಾನ ನೀಡಿ ಸಾಮಾಜಿಕ ಸಮಾನತೆಯನ್ನು ಬಯಸುತ್ತಾನೆ.

ಬಸವಣ್ಣ ಸಾವಂತ್ರಿಯ ಮನೆಗೆ ಆಗಮನವಾಗುವುದರೊಳಗಾಗಿ ಬಿಜ್ಜಳ ಅಲ್ಲಿರುವುದನ್ನು ಕಂಡು ಆಶ್ಚರ್ಯವಾಗುತ್ತಾನೆ. ಚಕಿತನಾದ ಬಸವಣ್ಣ ಮಹಾರಾಜರು ಇಲ್ಲಿ ಎಂದು ಆಶ್ಚರ್ಯನಾದರೂ ತನ್ನ ಮಾನವೀಯ ಧರ್ಮದಿಂದ ನಮಸ್ಕರಿಸುತ್ತಾನೆ. ಆಗ ಬಿಜ್ಜಳ ಎದ್ದುನಿಂತು ಸ್ವಾಗತಿಸಲು ಮುಂದಾಗುತ್ತಾನೆ. ಆಗ ಬಸವ ತನ್ನ ಮನೆಗೆ ಬಂದದ್ದನ್ನು ಕಂಡ ಸಾವಂತ್ರಿ ಮನದೊಳಗೆ ಹರ್ಷಗೊಂಡು ಸೂಳೆಯ ಮನೆತನಕ ಪಾದ ಬೆಳೆಸಿದಿರಾ ನನ್ನಪ್ಪ! ನನ್ನ ಬದುಕನ್ನು ಪಾವನಗೊಳಿಸಿದಿರಿ ತಂದೇ ಎಂದು ತನ್ನ ಸೆರಗಿನಿಂದ ಬಸವಣ್ಣನ ಪಾದವನ್ನು ಒರೆಸಲು ಮುಂದಾದಗ ಬಸವಣ್ಣ ಅವಳನ್ನು ಎಬ್ಬಿಸಿ ಏಳು ತಾಯಿ ಎಂದು ಸಂಬೋಧಿಸಿ ಮಾತೃ ಸ್ಥಾನಮಾನವನ್ನು ನೀಡುತ್ತಾನೆ. ಆಗ ಬಿಜ್ಜಳ ಮಹಾರಾಜ ಹಾಗೂ ಮಂತ್ರಿಗಳು ಕಲ್ಯಾಣದ ಸೂಳೆಯ ಮನೆಯಲ್ಲಿ ಭೇಟಿಯಾಗುವುದೆಂದರೆ ಇದು ಯೋಗ ಯೋಗವೋ, ಕರ್ಮಧರ್ಮದ ಸಂಯೋಗವೋ ಎಂದಾಗ ಇದು ನಿಜವಾಗಲು ಪವಿತ್ರಸ್ಥಾನ ಎಂಬುದಾಗಿ ಬಸವಣ್ಣ ನುಡಿದು ಮುಂದುವರೆದು ಮಹಾರಾಜರೆ ನಿಮ್ಮ ಸರಸಸಲ್ಲಾಪಕ್ಕೆ ಭಂಗ ತಂದಿರುವುದಾದರೆ ನನ್ನನ್ನು ಕ್ಷಮಿಸಿ ಎನ್ನುತ್ತಾನೆ. ಆಗ ಬಿಜ್ಜಳ ಅರಮನೆಯಲ್ಲಿ ಸಿಗದ ಮನೋರಂಜನೆಗಾಗಿ ಇಲ್ಲಿಗೆ ಬಂದೆ. ಆದರೆ ಕಾಮಾಕ್ಷಿಯನ್ನು ನಿನ್ನ ಮುಗ್ಧಸಂಗಯ್ಯ ಅಪಹರಿಸಿಬಿಟ್ಟ ಇರಲಿ ನೀನು ಸಹ ಮನೋರಂಜನೆಗಾಗಿ ಬಂದಿದ್ದಿಯಾ ಅಂದುಕೊಂಡೆ ಎನ್ನುತ್ತಾನೆ. ಆಗ ಬಸವ ಮುಗ್ಧಸಂಗಯ್ಯ ಹೇಳದೇ ಕೇಳದೇ ಮನೆ ಬಿಟ್ಟು ಇಲ್ಲಿಗೆ ಬಂದಿದ್ದಾನೆ ಎಂಬ ಸುಳಿವಿನಿಂದಾಗಿ ಆತನನ್ನು ಕರೆದುಕೊಂಡು ಹೋಗಲು ಬಂದಿರುವುದಾಗಿ ತಿಳಿಸುತ್ತಾನೆ. ಲಿಂಗಪೂಜೆಯಲ್ಲಿ ನಿರತನಾದ ಸಂಗಯ್ಯನಿಗೆ ಕೈ ಜೋಡಿಸಿದ ಬಸವಣ್ಣ ಸಾವಂತ್ರಿ ನಿನ್ನ ಮನೆಯಲ್ಲಿ ಲಿಂಗಪೂಜೆ ಅದರಲ್ಲಿ ಸಂಗಯ್ಯನಿಂದ ನೀನು ಧನ್ಯಳು ಎನ್ನುತ್ತಾನೆ. ಹೀಗೆ ಸಾವಂತ್ರಿ ಬಸವಣ್ಣನ ಮಧ್ಯೆ ಸಂಭಾಷಣೆ ನಡೆಯುವುದನ್ನು ಕಂಡು ಆಶ್ಚರ್ಯಚಕಿತನಾದ ಬಿಜ್ಜಳ ನೋಡುತ್ತ ಕುಳಿತು ಕೊಂಡಿದ್ದಾನೆ.

ಸಾವಂತ್ರಿ ಬಸವಣ್ಣನಿಗೆ ಹಾಲು, ಹಣ್ಣುಗಳೊಂದಿಗೆ ಉಪಚರಿಸಲು ಮುಂದಾದಾಗ ಬಸವಣ್ಣನು ಬೇಡ ತಾಯಿ ಇವತ್ತು ಶಿವರಾತ್ರಿ, ನನಗೆ ತೃಪ್ತಿಯಾಗಿದೆ. ತಾಯಿ ತೃಪ್ತಿಯಾಗಿದೆ ಎನ್ನುತ್ತಾನೆ.

"**ಬಿಜ್ಜಳ** : ಓಹೋ ಈ ಸೂಳೆ ನಿನ್ನ ತಾಯಿಯೋ?

**ಬಸವಣ್ಣ** : ಸಂಗಯ್ಯನಿಗೆ ತಾಯಿಯಾದವಳು ನನಗೂ ತಾಯಿಯಾಗೋದು ನನ್ನ ಭಾಗ್ಯವಲ್ಲವೇ ಪ್ರಭು? ನನ್ನನ್ನು ತನ್ನ ಮಗ ಎಂದು ತಾಯಿ ಸಾವಂತ್ರಿ ಒಪ್ಪಿಕೊಂಡರೆ ನಾನು ಧನ್ಯನಾದೆ.

**ಸಾವಂತ್ರಿ** : ಈ ಸೂಳೆಯ ಬದುಕನ್ನು ಪಾವನಗೊಳಿಸಿದಿರಿ ನನ್ನಯ್ಯಾ? ಸಂಗಯ್ಯ ನನ್ನ ಮನೆಗೆ ಬಂದರು! ಮಹಾತ್ಮ ಬಸವಣ್ಣನವರು ನನ್ನ ಮನೆಗೆ ಬಂದರು! ಇಂಥಾ ಅನಿರೀಕ್ಷಿತ ಭಾಗ್ಯದಿಂದ ಈ ಸೂಳೆಯ ಜನ್ಮ ಸಾರ್ಥಕವಾಯಿತು ನನ್ನಯ್ಯಾ!"[೪೩]

ಹೀಗೆ ಸಂಭಾಷಣೆಯಲ್ಲಿ ಸಾವಂತ್ರಿ ಬಸವಣ್ಣನ ಮಾನವೀಯತೆಯನ್ನು ಕೊಂಡಾಡುತ್ತಿರುವುದನ್ನು ಕಂಡು ಬಿಜ್ಜಳ ಏನೋ ಬಸವಾ ಈ ಜನಕ್ಕೆ ಏನು ಮಾಟ ಮಾಡಿದ್ದಿ ಎಲ್ಲರೂ ಬಸವಭಕ್ತಿಯನ್ನು ನಂಬಿದ್ದಾರೆ ಎಂದು ಹೇಳುವಲ್ಲಿ ಬಸವಣ್ಣನನ್ನು ವೈಭವೀಕರಿಸುವ ವಿಶಿಷ್ಟತೆ ಎದ್ದುಕಾಣುತ್ತದೆ. ಹೀಗೆ ಬಸವಣ್ಣನವರು ಯಾವ ಸಮಾಜ ಮಹಿಳೆಯರನ್ನು ಅದರಲ್ಲೂ ವೇಶ್ಯೆಯರನ್ನು ಕಡೆಗಣಿಸಿ ನೋಡುತ್ತಿತ್ತೋ ಅಂತಹವರಲ್ಲಿ ಮಾತೃಸ್ಥಾನಮಾನವನ್ನು ಕೊಟ್ಟು ಸಹಕರಿಸಿ ಅವರಲ್ಲಿ ಭಕ್ತಿಯ ಮಾರ್ಗವನ್ನು ಕಂಡುಕೊಂಡವನಾಗಿದ್ದಾನೆ.

ಇಲ್ಲಿಯವರೆಗೆ ದಲಿತವರ್ಗದ ದೇವದಾಸಿಯರ ಕುರಿತು ಮಾತನಾಡಿರುವ ಸಂಗತಿ ಒಂದೆಡೆಯಾದರೆ, ಇನ್ನೊಂದೆಡೆ ದೇವದಾಸಿಯರನ್ನು ಹೊರತು ಪಡಿಸಿ ಅದೇ ಕೆಳ ಸಮುದಾಯದ ಸಾಮಾನ್ಯ ಸ್ತ್ರೀಯರ ಮೇಲೆ ಆಗುವ ಅನ್ಯಾಯ ಅಧರ್ಮ, ವ್ಯಾಮೋಹ ಮುಂತಾದವುಗಳು ಅಂದಿನಿಂದ ಇಂದಿನವರೆಗೆ ನಿರಂತರವಾಗಿ ನಡೆದಿರುವ ವಿಚಾರಗಳನ್ನು ಈ ನಾಟಕಗಳು ಅಭಿವ್ಯಕ್ತಿಸುತ್ತವೆ. ಬಸವಣ್ಣನವರು ಸೂಳೆಯರನ್ನು ತಾಯಿಯಾಗಿ ಕಂಡದ್ದಲ್ಲದೇ ಉಳಿದ ಅದೇ ಸಮುದಾಯದ ಜನರಿಗೆ ಶಿವದೀಕ್ಷೆಯನ್ನು ನೀಡಿ ಲಿಂಗವಂತರನ್ನಾಗಿ ಮಾಡುವಲ್ಲಿ ಶ್ರಮಿಸಿದರು ಎಂಬುದು ಚರಿತ್ರೆಯಾದರೂ ನಾಟಕಗಳಲ್ಲಿ ವ್ಯಕ್ತಪಡಿಸುವ ವಿಚಾರಗಳು ಸತ್ಯಕ್ಕೆ ಸಮೀಪವೆನಿಸುವ ದೃಷ್ಟಿಯಲ್ಲಿ ಚಿತ್ರಿಸುತ್ತವೆ. ಮಡಿ–ಮೈಲಿಗೆ ಎಂಬುದು ಮನುಷ್ಯ ಮನುಷ್ಯರನ್ನು ದೂರವಾಗಿಸಿ ಉಚ್ಛ ನೀಚ ಎಂಬ ವರ್ಗವನ್ನು ಸೃಷ್ಟಿಸಿ ದೈಹಿಕವಾಗಿ ಹಿಂಸಿಸಿ ದೂರಿಕರಿಸುವಂತಹ ವ್ಯವಸ್ಥೆ ಸನಾತನ ಸಂಪ್ರದಾಯದ ತಾಯಿ ಬೇರು. ಇಂತಹ ಸಂಸ್ಕೃತಿಗೆ ಧಿಕ್ಕಾರ ಹಾಕಬೇಕೆಂಬ ಕನಸನ್ನು ಕಂಡವರು ಶಿವಶರಣರು.

ಅಂದು ದೈಹಿಕವಾಗಿ ಮುಟ್ಟಿಸಿಕೊಳ್ಳಲು ಹಿಂಜರಿಯುತ್ತಿದ್ದ ಕಾಲದಲ್ಲಿ ತಮ್ಮ ತತ್ವ ಬೋಧನೆಯ ಮೂಲಕ ಸಾಮಾಜಿಕ ಸಮಾನತೆಯನ್ನು ತರುವಲ್ಲಿ ಮುಂದಾದರು. ಅಲ್ಲದೇ ಲಿಂಗಭೇದವನ್ನು ಮರೆತು ಸ್ತ್ರೀ ಪುರುಷರೆಲ್ಲರೂ ಸಮಾನರು ಎಂಬ ತತ್ವವನ್ನು ಬೋಧಿಸಿದವರು ಶಿವಶರಣರು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ಚತುವರ್ಗಗಳನ್ನು ಸೃಷ್ಟಿಸಿ ಒಂದರ ಕೆಳಗೊಂದು ಎಂಬುದನ್ನು ತಿಳಿಸುತ್ತಾ ಬ್ರಾಹ್ಮಣರ ಸೇವೆಯನ್ನು ಉಳಿದ ಮೂರು ವರ್ಗಗಳು ಮಾಡಬೇಕು ಎಲ್ಲರ ಸೇವೆಯನ್ನು ಶೂದ್ರರು ಮಾಡಬೇಕು. ಶೂದ್ರರಲ್ಲಿಯೇ ಹೊಲೆ ಮಾದಿಗರು ಅಸ್ಪೃಶ್ಯರು ಇವರು ಯಾವುದೇ ರೀತಿಯ ಆಸ್ತಿ, ಶಿಕ್ಷಣ ಪಡೆಯಬಾರದು ಎಂಬುದಾಗಿ ಹೇಳಿಕೊಂಡು ಬಂದ ಶಾಸ್ತ್ರಗಳು, ವೇದಗಳು, ಆಗಮಗಳು ಮುಂತಾದವುಗಳನ್ನು ಬಸವಣ್ಣ ವಿರೋಧಿಸಿದನು. ಅದೇನೇ ಇರಲಿ ಇಲ್ಲಿ ಮುಖ್ಯವಾಗಿ ಹೇಳಬೇಕಾದ ವಿಷಯವೇನೆಂದರೆ ಮೇಲ್ಜಾತಿಯ ಪುರುಷ ವರ್ಗವು ಕೆಳಜಾತಿಯ ಸುಂದರ ಹೆಣ್ಣನ್ನು ಯಾವಾಗಲಾದರೂ

ಮುಟ್ಟಬಹುದು ಸಂಭೋಗಿಸಬಹುದು, ಆದರೆ ಮೇಲ್ಜಾತಿ ಹೆಣ್ಣನ್ನು ಶೂದ್ರ ಕಣ್ಣೆತ್ತಿ ನೋಡಿದ್ದಾದರೆ ಕಣ್ಣನ್ನು ಕಿತ್ತಿಹಾಕಬೇಕು. ಒಂದು ವೇಳೆ ಆಕೆಯನ್ನು ಸಂಭೋಗಿಸಿದ್ದೇ ಆದರೆ ಆತನ ಮರ್ಮಾಂಗವನ್ನು ಕತ್ತರಿಸಬೇಕು. ಶೂದ್ರ ಸ್ತ್ರೀ ಮೇಲ್ವರ್ಗದ ಸ್ತ್ರೀ ಆಗಿ ಹುಟ್ಟಬೇಕಾದರೆ ಆಕೆ ಏಳು ಜನ ಮೇಲ್ವರ್ಗದ ಪುರುಷರೊಂದಿಗೆ ಸಂಬಂಧವನ್ನಿಟ್ಟುಕೊಳ್ಳಬೇಕೆಂಬ ನಿಯಮಗಳನ್ನು ಈಗಾಗಲೇ ಕೃತಿಗಳಿಂದ ಚರಿತ್ರೆಯಿಂದ ತಿಳಿದುಕೊಂಡಿದ್ದೇವೆ.

ಇಲ್ಲಿ ಭಟ್ಟರು ಬರುವ ಸಂದರ್ಭದಲ್ಲಿ ಬೀದಿ ಕಸ ಗುಡಿಸುವ ಗಂಗಾಳನ್ನು ಕಂಡು ನೀವು ಹೊಲೆಯ ಹೆಂಗಸರು ನಾನು ಬರುವುದು ಕಾಣಲಿಲ್ಲವೇ ಕಸವನ್ನು ನಮ್ಮ ಮೇಲೆ ಎಸೆಯುವೆಯಾ? ಎಂದಾಗ ಗಂಗಾಳು ನಾನು ಬುದ್ಧಿಪೂರ್ವಕವಾಗಿ ಎಸೆಯಲಿಲ್ಲ. ಬಾಗಿ ಕಸಗೂಡಿಸುವಾಗ ತಮ್ಮನ್ನು ನೋಡಲಿಲ್ಲ. ಆಗ ಭಟ್ಟರು ನಮ್ಮಂಥವರನ್ನು ಕಂಡೊಡನೆ ದೂರ ಸರಿದು ನಿಲ್ಲಬೇಕು ಎಂದು ಹೇಳಿದಾಗ ಅದಕ್ಕೆ ತಲೆಬಾಗಿದ ಗಂಗಾ ಹೂಂ ಎಂದು ತಲೆಯಾಡಿಸುತ್ತಾಳೆ. ಇಂತಹ ಸುಂದರ ಗಂಗಳನ್ನು ನೋಡಿದ ಭಟ್ಟರು ಮನದೊಳಗೆ ಪದ್ಮಿನಿ ಜಾತಿ ಕನ್ಯೆಯರು ಹೊಲೆ ಮಾದಿಗರ ಕುಲದಲ್ಲಿ ಹುಟ್ಟಿದರೆಂದು ಹೇಳುವ ಹಿರಿಯರ ಮಾತು ಸತ್ಯ ಎಂದು ಆಕೆಯ ಮೇಲೆ ವ್ಯಾಮೋಹಕ್ಕೆ ಒಳಗಾಗಿ ಆಕೆಗೆ ತನ್ನ ಮನದಾಳದ ಬಯಕೆಯನ್ನು ವ್ಯಕ್ತಪಡಿಸುತ್ತಾನೆ.

ಆಗ ಗಂಗಾಳು ನಾವು ಕೀಳುಕುಲದವರು ಎಂದಾಗ ಭಟ್ಟರು ಬೀದಿಯಲ್ಲಿ ಕಸಗುಡಿಸುವ ಬದಲು ನಾನು ಹೇಳಿದಂತೆ ಕೇಳಿದರೆ ನಿನಗೂ ಕ್ಷೇಮ ಎಂದು ಮುಂದುವರೆದು ಭಟ್ಟರು.

"**ಭಟ್ಟ :** ಛೆ, ಹುಚ್ಚಿ, ಜಾತಿಯಲ್ಲೇನಿದೆ ಮಣ್ಣು? ಜಗತ್ತಿನಲ್ಲಿರುವುದು ಎರಡೇ ಜಾತಿ! ಒಂದು ಗಂಡು, ಒಂದು ಹೆಣ್ಣು! ನಮ್ಮಂಥವರೇ ನಮಗೆ ಅನುಕೂಲವಾಗುವ ಹಾಗೆ ಬೇರೆ ಬೇರೆ ಕಟ್ಟಳೆಗಳನ್ನು ಮಾಡಿಕೊಂಡಿದ್ದೇವೆ. ಸುಣ್ಣ, ಚುಂಬನ ಇವುಗಳಿಗೆ ಏನೂ ದೋಷವಿಲ್ಲ. ಬೇಕಾದವರ ಮನೆಯ ಸುಣ್ಣ ತಿನ್ನಬಹುದು. ಬೇಕಾದ ಜಾತಿಯ ಸ್ತ್ರೀಯೊಡನೆ ಸರಸವಾಡಬಹುದು.

**ಗಂಗಾ :** ಸರಸವಾಡಬಹುದು. ಯಾಕೆ, ನಾಲಿಗೆ ಉದ್ಧವಾಯಿತಲ್ಲ. ಪರಸ್ತ್ರೀಯೊಡನೆ ಈ ರೀತಿ ಮಾತನಾಡಲು ನಿಮಗೆ ನಾಚಿಕೆಯಾಗದಿಲ್ಲವೇ? ಈ ರಾಜಮಾರ್ಗದಲ್ಲಿ ನಿಮ್ಮ ಮರ್ಯಾದೆಯನ್ನು ಮಾರಿಸಿಬಿಟ್ಟೇನು ಜೋಕೆ!"೪೪

ಹೀಗೆ ಗಂಗಾ ಏನೆಲ್ಲ ಹೇಳಿದರೂ ಭಟ್ಟರು ಮನೆ ಕಟ್ಟಿಸಿಕೊಡಲು ಮುಂದಾಗಿ ಆಕೆಯನ್ನು ಬಲವಂತವಾಗಿ ಕೇಳಲಾಗಿ ಆಕೆ ಕೂಗಿಕೊಳ್ಳಲು ಮುಂದಾದಾಗ ಭಟ್ಟರು ನಮ್ಮ ಕುಲದವರು ಯಾರಾದರೂ ನೋಡಿದರೆ ನನಗೆ ಬಹೀಷ್ಕಾರ ಹಾಕುತ್ತಾರೆ. ಎಂದು ಅಂಗಲಾಚಿ ಬೇಡುತ್ತಾ ಕೊನೆಗೆ ಗಂಗಾಳ ಕಾಲಿಗೆ ಬೀಳುತ್ತಾನೆ. ಇಲ್ಲಿ ದಲಿತ ಸಾಮಾನ್ಯ ಸ್ತ್ರೀಯರು ಹಣ, ಶ್ರೀಮಂತಿಕೆಗೆ ತಮ್ಮ ದೇಹವನ್ನು ಅರ್ಪಿಸಲು ಮುಂದಾಗುತ್ತಾರೆಂಬ ಮೇಲ್ವರ್ಗದ ಜನತೆಗೆ ಈ ನಾಟಕ ಮಾನದಿಂದಲೇ ಉತ್ತರ ನೀಡುತ್ತದೆ. ಇದೇ ವಿಷಯಗಳನ್ನು ವ್ಯಕ್ತಪಡಿಸುವ ಅಂಶಗಳು ಈ

ನಾಟಕದಲ್ಲಿ ಹೀಗೆ ವ್ಯಕ್ತಗೊಂಡಿವೆ. ಪಂಡಿತ ದೂರದಿಂದ ಯುವತಿಯೊಬ್ಬಳು ಹೊಲೆಯ ಬರುವುದನ್ನು ಆಸೆಗಣ್ಣಿನಿಂದ ನೋಡುತ್ತಿರುವ ಪಂಡಿತರಿಗೆ ಕರಣಿಕ ಪಂಡಿತ್ರೇ ನಮ್ಮನ್ನು ಬಿಡಬ್ಯಾಡ್ರಿ ಎಂದಾಗ

"**ಪಂಡಿತ** : ಛೇ ಛೇ.; ಎಲ್ಲಾದ್ರೂ ಬಿಟ್ಟೇನೇ? ಉಪ್ಪು, ಹುಳಿ, ಖಾರ ತಿಂದ ಜೀವ ಅಲ್ಲವೇ? (ಎಂದು ಹೇಳುತ್ತಾ ಆ ಹೆಣ್ಣುಮಕ್ಕಳಿಗೆ ಹಕ್ಕಿ ಎಂಬುದಾಗಿ ಕರೆಯುತ್ತಾನೆ. ಆಗ ಕರಣಿಕ ಅವಳು ಹೊಲೆಯರ ಲಕ್ಕಿ ಎಂದಾಗ ಪಂಡಿತರು ಹೀಗೆ ಹೇಳುತ್ತಾರೆ.)

**ಪಂಡಿತ** : ಹೂವಿನ ಜಾತಿ ಮುಖ್ಯ ಅಲ್ಲ ಅದರ ಸೌಂದರ್ಯ ಸುವಾಸನೆ ಬಹಳ ಮುಖ್ಯ."[೬೨]

ಅಂದರೆ ಕೆಳಜಾತಿಯ ಸ್ತ್ರೀಯರು ಪಂಡಿತರಿಗೆ ಹಕ್ಕಿ, ಹೂ ಕಾಣಿಸಿದಂತೆ ಕಾಣಿಸಿ ಅವರ ಸೌಂದರ್ಯವನ್ನು ಅನುಭವಿಸಬೇಕೆಂಬ ನೀಚತನಕ್ಕೆ ಕೈ ಹಾಕುವ ಅವರ ಆಸೆಗಳಿಗೆ ಕೆಳವರ್ಗದ ಹೆಣ್ಣುಗಳು ಹೇಗೆ ಕಾಣಿಸುತ್ತವೆಂಬ ಅಂಶ ಮೇಲಿನ ಸಂಭಾಷಣೆಯಿಂದ ತಿಳಿಯಬಹುದಾಗಿದೆ. ಸುಂದರ ದಲಿತ ಯುವತಿಯರು ಮೇಲ್ವರ್ಗದ ಕಾಮುಕ ಪಿಶಾಚಿಗಳಿಗೆ ಗಂಗಾ ಪ್ರತಿಭಟಿಸಿದಂತೆ ಕೆಲವರು ಪ್ರತಿಭಟಿಸಿದರೆ, ಇನ್ನು ಕೆಲವು ಸ್ತ್ರೀಯರು ಅಸಹಾಯಕರಾಗಿಯೇ ಉಚ್ಛಕುಲದ ನೀಚತನದ ಕಾಮುಕಕ್ಕೆ ಬಲಿಯಾಗುತ್ತಾರೆ. ಹೀಗೆ ಒಬ್ಬ ಸ್ತ್ರೀ ಯಾವನೊಬ್ಬ ಮೇಲ್ವರ್ಗದ ಕಾಮುಕನಿಗೆ ಬಲಿಯಾಗಿ ಬಸುರಿಯಾಗುತ್ತಾಳೆ. ಒಂದು ಮಗುವಿಗೆ ಜನ್ಮವನ್ನು ನೀಡುತ್ತಾಳೆ. ಬಲಿಯಾದ ಹೆಂಗಸು ತನ್ನ ಅಸಹಾಯಕತೆಯನ್ನು ಯಾರ ಮುಂದೆ ವ್ಯಕ್ತಪಡಿಸದೇ ಸಮಾಜದಲ್ಲಿ ಇರುವ ಟೀಕೆಗೆ ಗುರಿಯಾಗುತ್ತಾಳೆ. ಆಕೆ ಗಂಡನಿಲ್ಲದೇ ಮಗುವಿಗೆ ಜನ್ಮ ನೀಡಿದ ಕಾರಣಕ್ಕಾಗಿ ಸೂಳೆ ಎಂಬ ಪಟ್ಟವನ್ನು ಕಟ್ಟುತ್ತದೆ. ಬಸವಣ್ಣನವರು ಅನುಭವಮಂಟಪದಲ್ಲಿ ಶರಣರೊಂದಿಗೆ ಚರ್ಚೆಯಲ್ಲಿ ಇದ್ದಾಗ ಇಬ್ಬರು ತಳವಾರರು ಹಗ್ಗದಿಂದ ಬಿಗಿದು ಆಕೆಯನ್ನು ಕರೆತರುತ್ತಾರೆ. ಅದೇ ಹುಟ್ಟಿದ ಕೂಸು ಅವಳ ಕೈಯಲ್ಲಿ ಇರುತ್ತದೆ. ಬಸವಣ್ಣ ವಿಚಾರಿಸಲಾಗಿ ತಳವಾರ ಈಕೆ ಸೂಳೆ ಹಡೆದ ಕೂಸನ್ನು ಕತ್ತಲಲ್ಲಿ ಎಸೆದು ಹೊರಟಿರುವುದು ಗೊತ್ತಾಯಿತು ಎಂದಾಗ ಬಸವಣ್ಣ ಹಗ್ಗ ಬಿಚ್ಚಿಸಿ ವಿಚಾರಿಸಿ ತಾಯಿ ನೀನು ಈ ವೃತ್ತಿಗೆ ಇಳಿದಿಯೇ ಎಂದಾಗ ಆಕೆ ದುಃಖಿಸುತ್ತಾ ಹೇಳುತ್ತಾಳೆ. ಆಗ ಬಸವಣ್ಣ ಹೊಟ್ಟೆತುಂಬ ಊಟ, ಕೈತುಂಬ ಕೆಲಸ ಸಾಧ್ಯವಾದರೆ ಮದುವೆಗೆ ಒಪ್ಪುತ್ತಿಯಾ ಎಂದಾಗ ಇದಕ್ಕಿಂತ ದೊಡ್ಡ ಭಾಗ್ಯವೇನಿದೆ ಎನ್ನುತ್ತಾಳೆ. ಆಗ ಬಸವಣ್ಣ ಈ ಶರಣೆಯನ್ನು ಮದುವೆಯಾಗಿ ಈ ಶರಣ ಶಿಶುವಿಗೆ ತಂದೆಯಾಗಲು ಯಾರು ಒಪ್ಪುತ್ತೀರಾ ಎಂದಾಗ ಯುವಶರಣ ಮುಂದಾಗುತ್ತಾನೆ. ಆಗ ಸೂಳೆಯಾದ ನನ್ನನ್ನು ಸತಿಯನ್ನಾಗಿಸುದುದು ಇನ್ನೊಂದು ಪವಾಡ ನೀ ನನ್ನ ಪಾಲಿನ ಪರಮಾತ್ಮ ಎಂದು ಬಸವಣ್ಣನಿಗೆ ಹೇಳುತ್ತಿದ್ದಂತೆಯೇ ತಾಯಿ ನಿನ್ನ ಹಣೆಯಲ್ಲಿ ಕುಂಕುಮ, ವಿಭೂತಿ, ಮುಖದಲ್ಲಿ ನಗೆ ಕಂಡ ಪುಣ್ಯ ನನ್ನದಾಯಿತು ಎಂದು ಹೇಳುತ್ತಾನೆ.

"**ಮಾಚಿದೇವ** : ಈ ಕ್ರಿಯೆ ಇಲ್ಲಿಗೇ ನಿಲ್ಲಬಾರದು. ಇಂಥವರು ವೇಶ್ಯಾ ಸ್ತ್ರೀಯರಾಗಲು ಸಮಾಜವೇ ಹೊಣೆ. ಈಗ ಸಮಾಜವೇ, ಅಂದರೆ ಸಮಾಜದ ಭಾಗವಾಗಿರುವ

ನಾವೇ ಆ ತಪ್ಪನ್ನು ತಿದ್ದಬೇಕು. ಇಂಥ ಪುಣ್ಯಸ್ತ್ರೀಯರು ತಲೆಯೆತ್ತಿ ಬಾಳುವಂತೆ ಮಾಡಬೇಕು."[೪೬]

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಶತಶತಮಾನಗಳಿಂದಲೂ ಮಹಿಳೆಯರು ಶೋಷಣೆಗೆ ಒಳಗಾಗುತ್ತಲೇ ಬಂದದ್ದಾರೆ. ಮೇಲ್ಜಾತಿಯ ಮಹಿಳೆಯರು ಧರ್ಮದ ಹೆಸರಿನಲ್ಲಿ ತಮ್ಮ ಗಂಡಸರಿಂದ ಮಾತ್ರ ಶೋಷಣೆಗೆ ಒಳಗಾಗುತ್ತಾರೆ. ಆದರೆ ತಳ ಸಮುದಾಯದ ಮಹಿಳೆಯರು ಧರ್ಮ ಮತ್ತು ಮೇಲ್ಜಾತಿಯವರ ಕ್ರೌರ್ಯದಂತಹ ಆಚರಣೆಯಿಂದ ಶೋಷಣೆಗೆ ಒಳಗಾಗುವ ಪರಿಸ್ಥಿತಿ ನಿರ್ಮಾಣವಾಗಿದೆ ಎಂಬುದುರ ಮೇಲಿನ ಮಾತುಗಳು ನಿದರ್ಶನವಾಗಿವೆ. ಇಂತಹ ಅನಿಷ್ಟ ಪದ್ಧತಿಯನ್ನು ನಿಲ್ಲಿಸಲೇ ಬೇಕು ಎಂಬ ಆಶಯ ಮೇಲಿನ ಮಾತಿನಲ್ಲಿ ವ್ಯಕ್ತವಾಗಿವೆ. ಇಂದು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರನ್ನು ಹೀನಾಯಕವಾಗಿ ದುಡಿಸಿಕೊಳ್ಳಲಾಗುತ್ತದೆ. ಇದಕ್ಕೆ ನಮ್ಮ ಸಾಮಾಜಿಕ ವ್ಯವಸ್ಥೆಯೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ವೈದಿಕಶಾಹಿ ಪರಂಪರೆಯಲ್ಲಿ ನಮಗೆ ದೊರೆಯುವ ಸಾಮಾಜೀಕರಣದ ಸ್ವರೂಪವನ್ನು ನಾಟಕವೆಂಬ ರೂಪಕದಲ್ಲಿ ಹೀಗೆ ಅಭಿವ್ಯಕ್ತಿಸಿದ್ದಾರೆ. ಗ್ರಾಮೀಣ ಪರಿಸರದಲ್ಲಿ ವಿಶೇಷ ದಿನಗಳಲ್ಲಿ ನಾಟಕಗಳನ್ನು ಅಭಿನಯಿಸುವುದು ವಾಡಿಕೆ. ಈ ನಾಟಕ ಅಭಿನಯವು ಕೇವಲ ಮನೋರಂಜನೆಗೆ ಸೀಮಿತವಾಗಿಲ್ಲ. ಅವು ಜನರಲ್ಲಿ ಬದುಕನ್ನು ಕಟ್ಟಿಕೊಳ್ಳಲು ಪ್ರೇರಣೆಯನ್ನು ನೀಡವಲ್ಲಿ ಸಾಧನಗಳು ಹೌದು. ಇಂತಹ ನಾಟಕ ಮಹಿಳೆಯನ್ನು ಹೇಗೆ ಚಿತ್ರಿಸುತ್ತವೆ. ಅದರಿಂದ ಉಂಟಾಗಬಹುದಾದ ಪರಿಣಾಮ ಯಾವ ಬಗೆಯದು ಎನ್ನುವುದನ್ನು ಯೋಚಿಸಬೇಕಾಗಿದೆ. ಪರಂಪರೆ ಹೆಸರಿನಲ್ಲಿ ಇಂದು ಮಹಾಭಾರತದ ಕಥೆಯನ್ನು ಅಭಿನಯಕ್ಕೆ ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಅಂತಹ ಕಥೆಯಲ್ಲಿ ದುಶ್ಯಾಸನ ಕಥೆಯು ಒಂದಾಗಿದೆ. ಹೀಗೆ ದುಶ್ಯಾಸನ ನಾಟಕ ನಡೆಯುವ ಸಂದರ್ಭದಲ್ಲಿ ದ್ರೌಪದಿಯು ತನ್ನ ಮಾನ ರಕ್ಷಣೆಗಾಗಿ ಮೊರೆಯಿಡುತ್ತಿರುವ ಸಂದರ್ಭದಲ್ಲಿ ದುಶ್ಯಾಸನನು ಆಕೆಯ ಸೀರೆಯನ್ನು ಶೆಳೆಯುತ್ತಾನೆ. ಇಂತಹ ಸಂದರ್ಭದಲ್ಲಿ ಇದು ನಾಟಕವೆಂದು ಅರಿಯದ ದಲಿತ ಯುವಕ(ಚನ್ನ)ನೊಬ್ಬನು ಅವಳ ರಕ್ಷಣೆಗೆ ಧಾವಿಸುವ ಪ್ರಸಂಗ ಬಂದು ಒದಗುತ್ತದೆ. ನಾಟಕವೆಂದು ಅರಿಯದ ಆ ಮುಗ್ಧ ಚನ್ನನನ್ನು ಜನರು(ಮೇಲ್ಜಾತಿ) ಅವನ ಮುಗ್ಧತೆಯನ್ನು ಅರಿಯದೆ ಅವನ ಕೆಳಜಾತಿಯವನು ಎಂದು ಗ್ರಹಿಸುವುದು. ಸಾಮಾಜಿಕ ಕ್ರೌರ್ಯವನ್ನು ಎತ್ತಿ ತೋರಿಸುತ್ತದೆ. ಚೆನ್ನನ ದೊಡ್ಡ ಮನಸ್ಸು ಸಮಾಜಕ್ಕೆ ಬೇಕಾಗಿಲ್ಲ. ಅವರಿಗೆ ಬೇಕಾಗಿರುವುದು ಜಾತಿ ಅಲ್ಲದೆ ಮಹಿಳೆಯರನ್ನು ಅಪಮಾನಗೊಳಿಸುವ ಸಂಗತಿಗಳು ನಮ್ಮ ಸಾಮಾಜಿಕ ವ್ಯವಸ್ಥೆ ಬಹು ಮನ್ನಣೆಯನ್ನು ಪಡೆದುಕೊಂಡಿವೆ ಎಂದು ಹೇಳುವುದಕ್ಕೆ ಈ ನಾಟಕದಲ್ಲಿಯ ದುಶ್ಯಾಸನ ಕಥೆ ಸಾಕ್ಷಿಯಾಗಿದೆ.

"**ಮಾಚಿ** : ಭಟ್ಟರೆ! ನಾನು ಹೇಳುವದೇನು ನಾವು ತಿಳಿಯಲಾರಿರಾ? ಚೆನ್ನನು ತಮ್ಮನ್ನು ಮುಟ್ಟಬೇಕೆಂದು ಕೆಟ್ಟ ಮನಸ್ಸಿನಿಂದಲೇನು ಬರಲಿಲ್ಲ. ಇಲ್ಲಿಯ ನೋಟವನ್ನು ನೋಡಿ ಅಮಾಯಕನಾದ ಅವನ ಅಂತರಂಗವು ಕರುಣಾರಸದಿಂದ ತುಳುಕಿ

ಯಿೂ ಸಾಹಸ ಕಾರ್ಯವನ್ನು ಮಾಡಿಸಿತು. ನೀವು ಅವನ ಹೊಲೆಯ ತನವನ್ನು ಮಾತ್ರ ದ್ವೇಷಿಸದಿರಲ್ಲದೆ. ಅವನಲ್ಲಡಗಿದ ಹೆಂಗಸಿನ ಅವಮಾನವನ್ನು ನೋಡಿ ಸಹಿಸಿದ ದೊಡ್ಡ ಗುಣವನ್ನು ಅರಿಯಲಿಲ್ಲ. ಆವನ ಸಹಾಯಕ್ಕಾಗಿ ಬಂದ ಕಳಾವತಿಯ ಮನೋ ರೀತಿಯನ್ನು ಅರಿಯದೆ, ಅವಮಾನ ಪಡಿಸದಿರಿ. ಅವರು ತಮ್ಮಲ್ಲಿ ದುಡುಕಿರಬಹುದು. ಇದು ಅಪರಾಧವೆಂದು ತಾವು ಬಗೆಯುವುದಾದರೆ ನಾನೇನು ಹೇಳಲಾರೆ. ಒಟ್ಟಿಗೆ ಜನರನ್ನು ಉದ್ರೇಕಗೊಳಿಸುವ ಆಟಗಳನ್ನು ಆಡದೆಯಿರುವುದು ಉತ್ತಮವು.

**ಭಟ್ಟ :** ಎಂದಿನಿಂದಲೂ ಆಡಿಕೊಂಡು ಬಂದ ಆಟಗಳನ್ನು ಇಂದು ಮಾತ್ರ ಉದ್ರೇಕಗೊಳಿಸು ವಂತಲೂ. ಅವು ಉತ್ತಮವಲ್ಲವೆಂತಲೂ ಹೇಳಬಹುದೇ?

**ಮಾಚಿ :** ಕಾಲಕ್ಕೆ ತಕ್ಕ ಆಟಗಳು ಬೇಕು ಭಟ್ಟರೆ. ಅದರಲ್ಲಿಯು ಹೆಂಗಸರನ್ನು ಅವಮಾನಗೊಳಿಸುವ ಆಟಗಳು ಯಾವ ಕಾಲಕ್ಕೂ ತಕ್ಕವುಗಳಲ್ಲ ಅಷ್ಟೇಯೇಕೆ ಮಹಾಭಾರತ ಕಾಲದಲ್ಲಿ ಒಬ್ಬ ದ್ರೌಪದಿಯ ಮಾನಭಂಗಕ್ಕೆ ಹದಿನೆಂಟು ಅಕ್ಷೋಹಿಣಿಯ ಪ್ರಾಣಿಗಳು ಬಲಿಯಾಗಬೇಕಾಯಿತು. ಯಾವ ಹೆಣ್ಣಿನ ಅಪಮಾನವನ್ನು ನೋಡಲು ಸಜ್ಜನರಾದ ಭೀಷ್ಮ ದ್ರೋಣಾದಿಗಳು ನಾಚಿಕೆಯಿಂದ ತಲೆ ತಗ್ಗಿಸಿದರೋ ಅಂತಹ ನೋಟವನ್ನು ನೀವಿಂದು ನಿಮ್ಮ ವಿನೋದಕ್ಕೆ ಉಪಯೋಗಿಸಬಹುದೇ?"[೪೭]

ಹೀಗೆ ಬಸವಣ್ಣನ ಪ್ರಭಾವ ಹಾಗೂ ಪ್ರಚೋದನೆಯ ಭಾವನೆಗಳಿಂದ ಸಮಾಜದಲ್ಲಿ ನಡೆಯುವ ಅನೈತಿಕ ಚಟುವಟಿಕೆಗಳ ವಿರುದ್ಧ ಬಂಡೇಳುವ ಪ್ರವೃತ್ತಿ ಕಂಡುಬರುತ್ತದೆ. ಸ್ತ್ರೀಯರನ್ನು ದೇವರೆಂದು ಪೂಜಿಸುವ ನಮ್ಮ ದೇಶ ಅದೇ ಸ್ತ್ರೀಯರನ್ನು ಅವಮಾನ ಹಾಗೂ ಅಪಮಾನಕ್ಕೆ ಈಡುಮಾಡಿ ಶೋಷಿಸುವ ಹುನ್ನಾರವನ್ನು ಇಲ್ಲಿ ವಿರೋಧಿಸಲಾಗಿದೆ. ಬಸವಣ್ಣ ಸಾಮಾನ್ಯ ಸ್ತ್ರೀಯರ ಕುರಿತು ಇರುವ ಅಭಿಪ್ರಾಯಗಳು ನಿಜಕ್ಕೂ ಶ್ಲಾಘನೀಯವಾದವುಗಳಾಗಿವೆ.

**ಬಲಿಪದ್ಧತಿ**

ಸಾಮಾಜಿಕ ಸಮಸ್ಯೆಗಳಲ್ಲಿ ಬಲಿಪದ್ಧತಿಯು ಒಂದಾಗಿದೆ. ಇದು ಒಂದು ರೀತಿಯಲ್ಲಿ ಸಂಪ್ರದಾಯವೆನ್ನುವಂತೆ ಅಂದಿನಿಂದ ಇಂದಿನವರೆಗೆ ಬೆಳೆದು ಬಂದಿದೆ. ಒಂದು ರೀತಿಯಲ್ಲಿ ಇದು ಹಿಂಸೆಯೆಂದು ಎನಿಸಿದರೂ ಮನುಷ್ಯ ತಾನು ತಿನ್ನುವ ಪ್ರಾಣಿಗಳನ್ನು ದೇವರ ಹೆಸರಿನಲ್ಲಿ ಬಲಿ ಕೊಡುತ್ತಾ ಆಹಾರ ಪದ್ಧತಿಯಾಗಿ ಪರಂಪರೆ ಎನ್ನುವಂತೆ ಮುಂದುವರಿಸಿಕೊಂಡು ಬಂದಿದ್ದಾನೆ. ಜಗತ್ತಿನಲ್ಲಿ ಇರುವ ೮೪ ಕೋಟಿ ಜೀವರಾಶಿಗಳು ಜೀವಿಸುತ್ತವೆ. ಇಂಥ ಪ್ರಾಣಿಗಳಲ್ಲಿ ಮಾನವನೂ ಒಬ್ಬ. ಇವನು ಉಳಿದ ಜೀವರಾಶಿಗಳಿಗಿಂತ ಬೌದ್ಧಿಕವಾಗಿ ಭಿನ್ನವಾಗಿದ್ದಾನೆ. ಪ್ರತಿಯೊಂದು ಜೀವಿಯೂ ಬದುಕಬೇಕಾದರೆ ಅದಕ್ಕೆ ಆಹಾರ ಮುಖ್ಯವಾಗುತ್ತದೆ. ಮನುಷ್ಯ ತನ್ನ ಜೀವಿತ ಅವಧಿಯನ್ನು ಪೂರ್ಣಗೊಳಿಸಲು ಅಥವಾ ಬದುಕಲು ಪ್ರಾರಂಭದಲ್ಲಿ

ಪ್ರಾಣಿಗಳನ್ನು ಬೇಟೆಯಾಡುವುದು, ಅವುಗಳನ್ನು ತಿನ್ನುವುದು ಪ್ರಾರಂಭಿಸಿದ. ನಂತರದಲ್ಲಿ ಧರ್ಮ ದೇವರು ಎಂಬ ಸೃಷ್ಟಿ ಆದಾಗಿನಿಂದ ಸಮಾಜದಲ್ಲಿ ಮತ್ತೊಂದು ರೀತಿಯ ಬದಲಾವಣೆ ಕಾಣಿಸಿಕೊಳ್ಳಲು ಪ್ರಾರಂಭಿಸಿತು. ಏಕೆಂದರೆ ಧರ್ಮ ಮತ್ತು ದೇವರು ಸಮಾಜವನ್ನು ಒಳ್ಳೆಯ ರೀತಿಯಲ್ಲಿ ನಡೆಸುತ್ತವೆ ಎಂಬ ವಿಚಾರಗಳು ಅಂದಿನಿಂದಲೂ ಬೆಳೆದು ಬಂದಿವೆ.

ಮನುಷ್ಯನಿಗೆ ಸಮಾಜದಲ್ಲಿ ಮೇಲುಕೀಳು ಎಂಬ ವ್ಯವಸ್ಥೆ ಅವನ ವೃತ್ತಿಯ ಮೂಲಕ ಹುಟ್ಟಿಕೊಂಡವು. ಅದರಂತೆ ದೇವರುಗಳು ಸಹ ಈ ಆಧಾರದ ಮೇಲೆ ಜನ್ಮ ತಾಳುತ್ತಾ ಬಂದವು. ಮೇಲ್ವರ್ಗದ ದೇವತೆಗಳೆಲ್ಲವು ಸಸ್ಯಹಾರಕ್ಕೆ ಸಂಬಂಧಪಟ್ಟರೆ ಕೆಳವರ್ಗದ ದೇವತೆಗಳೆಲ್ಲವೂ ಸಸ್ಯಹಾರದ ಜೊತೆಗೆ ಮಾಂಸಾಹಾರವನ್ನು ಬಯಸಿದವು. ಇಲ್ಲಿ ಕೆಳವರ್ಗದ ಮನುಷ್ಯರು ತಮ್ಮ ಆಹಾರ ಪದ್ಧತಿಯಿಂದ ದೇವರಿಗೆ ಸಂತೃಪ್ತಿ ನೀಡುವುದಾಗಿ ಜೊತೆಗೆ ದೇವರ ಹೆಸರಿನಲ್ಲಿ ತಾವು ತಿನ್ನುವ ಪ್ರಾಣಿಗಳನ್ನು ಬಲಿಕೊಡುವ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಧರ್ಮ ಹಿಂಸೆಯನ್ನು ಕುರಿತು ಹೇಳಿದರೂ ಆ ಧರ್ಮದ ಅಡಿಯಲ್ಲಿಯೇ ಪ್ರಾಣಿಗಳನ್ನು ಬಲಿಕೊಡುವುದು ಸರ್ವೇ ಸಾಮಾನ್ಯವಾಗಿ ನಡೆದುಕೊಂಡು ಬಂದಿದೆ. ಪ್ರಾಣಿಗಳನ್ನು ಬಲಿ ಕೊಡುವುದು ಹಿಂಸೆ ಎಂದು ಗೊತ್ತಿದ್ದರೂ ಆ ಆಹಾರದಿಂದ ಸಂತುಷ್ಟರಾಗುವ ಮಾನವ ಕುಲ ಕೋಟಿ ಹಿಂಸೆಗೆ ಪ್ರೇರಕ ಶಕ್ತಿಯಾಗಿದ್ದಾನೆ ಎಂಬ ವಿಚಾರ ಸ್ಪಷ್ಟವಾಗಿದೆ. ಹಿಂಸೆ ಎಂಬುದು ಸಮಾಜದ ನೈತಿಕತೆಗೆ ಮಾರಕವಾಗಿದ್ದರೂ ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಸಂಪ್ರದಾಯವೆಂಬಂತೆ ಬೆಳೆದುಕೊಂಡು ಬಂದಿದೆ. ಇಂತಹ ಹಿಂಸೆಯ ವಿರುದ್ಧ ಕಾಲ ಕಾಲಕ್ಕೆ ಒಬ್ಬೊಬ್ಬ ಮಹಾಪುರುಷರು ಹುಟ್ಟಿ ನೈತಿಕ ತತ್ವಗಳನ್ನು ಬೋಧಿಸಿದರೂ ಇನ್ನೂ ಜೀವಂತವಾಗಿರುವುದು ವಿಪರ್ಯಾಸ ದುರಂತವಾಗಿದೆ.

ಈ ಬಲಿ ಪದ್ಧತಿಯು ಧಾರ್ಮಿಕ ಆಚರಣೆಗಳಲ್ಲಿ ಒಂದು. ಇದಕ್ಕೆ ವೇದಗಳು ಶಾಸ್ತ್ರಗಳು, ಆಗಮಗಳು ಮತ್ತು ಯಜ್ಞ ಯಾಗಗಳು ಕಾರಣವಾಗುತ್ತಾ ಅದನ್ನು ಪ್ರತಿಪಾದಿಸುತ್ತವೆ. ಈ ಪದ್ಧತಿ ಈ ದೇಶದ ಅಂತ್ಯಜರಿಗೆ ಅಂಟಿಕೊಂಡು ಒಂದು ತತ್ವದಂತೆ ಬೆಳೆದಿದೆ. ಏಕೆಂದರೆ ಇದೊಂದು ಕೊಳೆತ ಸಂಪ್ರದಾಯವೆಂದು ತಿಳಿದರೂ ಅದನ್ನು ನಿಲ್ಲಿಸುವ ಗೊಡವೆಗೆ ಹೋಗಲಾರದ ಮನುಷ್ಯ ದೇವರು ಮತ್ತು ತಮ್ಮ ನಡುವೆ ಸಂತುಷ್ಟ ಭಾವನೆ ತಾಳುವುದಾಗಿ ನಂಬಿಕೊಂಡು ಬಂದಿದ್ದಾನೆ. ದೇವರು ಒಂದು ವೇಳೆ ರಕ್ತ ಮಾಂಸ ಬಯಸುವುದಾದರೆ ಮೇಲ್ವರ್ಗದ ದೇವತೆಗಳು ಇದರಿಂದ ದೂರ ಇರುವುದು ಯಾಕೆ ಎಂಬ ಪ್ರಶ್ನೆ ಸಹಜವಾಗಿ ತಲೆದೋರುತ್ತದೆ. ೧೨ನೇ ಶತಮಾನದಲ್ಲಿ ಬಸವಣ್ಣ ಬದುಕಿ ಜೀವನದುದ್ದಕ್ಕೂ ಸಮಾಜ ಮತ್ತು ಧರ್ಮದ ಕಟ್ಟಳೆಗಳನ್ನು ತಿದ್ದಬೇಕು ಎಂಬ ತತ್ವದಿಂದಲೆ ಈ ಪದ್ಧತಿಯನ್ನು ವಿರೋಧಿಸಿ ವೈದಿಕ ಧರ್ಮದ ದ್ವೇಷವನ್ನು ಕಟ್ಟಿಕೊಂಡ. ಆದರೆ ಮೂಲಭೂತವಾದಿಗಳು ಬಸವಣ್ಣನ ತತ್ವದ ಮರ್ಮವನ್ನು ಅರಿಯದೇ ಆತನ ವಿರುದ್ಧ ದ್ವೇಷವನ್ನು ಸಾರಿ ಮುಂದಾದರು. ಆಗ ಬಸವಣ್ಣ ನಾನು ಯಾರನ್ನೂ ಹೀಯಾಳಿಸಿಲ್ಲ. ಸತ್ಯವನ್ನೇ ಪ್ರತಿಪಾದಿಸಿದೆ. ಇದರಿಂದ ಪುರೋಹಿತ

ಹಾಗೂ ಪೂಜಾರಿಗಳ ಸ್ವಾರ್ಥದ ಕುತಂತ್ರತೆ ಈ ಸಮಾಜವನ್ನು ಹಾಳು ಮಾಡಲು ಹೊರಟಿದೆ. ಒಂದು ವೇಳೆ ದೇವರುಗಳಿಗೆ ಕುರಿ, ಕೋಳಿ, ಕೋಣ ಮುಂತಾದ ಸಾಧು ಪ್ರಾಣಿಗಳ ಆಹಾರ ಮುಖ್ಯವೇ ಹೊರತು ಕಾಡು ಪ್ರಾಣಿಗಳಲ್ಲ. ಏಕೆಂದರೆ ಕುರಿ, ಕೋಳಿ, ಕೋಣ ನಾವು ಸಾಕುವ ಪ್ರಾಣಿಗಳು ಜೊತೆಗೆ ತಿನ್ನಲ್ಲಿಕ್ಕೆ ಯೋಗ್ಯವಾದವುಗಳು ಎಂದು ಅರಿತ ಮಾನವ ದೇವರ ಹೆಸರಿನಲ್ಲಿ ಬಲಿಕೊಡಲು ಮುಂದಾದನು. ಇಂಥ ವ್ಯವಸ್ಥೆಯ ವಿರುದ್ಧ ಬಸವಣ್ಣ ಸಿಡಿದೆದ್ದು ಪ್ರಾಣಿಗಳಿಗೂ ದಯೆ ತೋರಿಸಬೇಕೆಂಬ ನಿಲುವನ್ನು ತಾಳಿ ದಯವೇ ಧರ್ಮದ ಮೂಲವಯ್ಯ, ದಯೆ ಬೇಕು ಸಕಲ ಪ್ರಾಣಿಗಳಲ್ಲಿ ಎಂಬ ಸಿದ್ಧಾಂತವನ್ನು ಬೋಧಿಸಿ ಸಾಮಾನ್ಯ ಜನರನ್ನು ಈ ಹಿಂಸೆಯಿಂದ ಮುಕ್ತಗೊಳಿಸಬೇಕೆಂಬ ತತ್ವವನ್ನು ಸಾರುತ್ತಾನೆ.

ಈ ಪದ್ಧತಿ ಒಂದು ರೀತಿಯಲ್ಲಿ ಹರಕೆಯನ್ನು ಮುಟ್ಟಿಸುವುದಾಗಿದೆ. ಹರಕೆ ಎಂಬುದು ದೇವರನ್ನು ಸಮಾಧಾನ ಪಡಿಸುವುದು ಎಂದರ್ಥ. ಏಕೆಂದರೆ ದೇವತೆಗಳು ಒಂದು ವೇಳೆ ಸಿಟ್ಟಿಗೆದ್ದರೆ ಆ ಊರು, ಆ ನಾಡು, ಹಳ್ಳಿಗಳು ಇಕ್ಕಟ್ಟಿಗೆ ಸಿಲುಕುತ್ತವೆ ಎಂಬ ಭ್ರಮೆ ಜನರಲ್ಲಿ ಅಡಗಿತ್ತು. ಹೀಗಾಗಿ ಹರಕೆ ತಪ್ಪಿಸುವುದು ಪಾಪ ಎಂಬ ವಿಚಾರ ಜನರಲ್ಲಿ ಆಳವಾಗಿ ಬೇರೂರಿತ್ತು. ಹೀಗೆ ಈ ಒಂದು ಪದ್ಧತಿಯನ್ನು ಮೇಲ್ವರ್ಗದ ಜನತೆ ಕೆಳವರ್ಗದ ಮೇಲೆ ಒತ್ತಡ ಹೇರುತ್ತಾ ಬಂದರು. ಆಗ ಈ ವ್ಯವಸ್ಥೆಯ ವಿರುದ್ಧ ಬಸವಣ್ಣನವರು ತಮ್ಮ ತತ್ವವನ್ನು ಬೋಧಿಸಿ ದೇವರು ನಮ್ಮೆಲ್ಲರನ್ನು ಸೃಷ್ಟಿ ಮಾಡಿದಂತೆ ಪ್ರಾಣಿಗಳನ್ನು ಸೃಷ್ಟಿ ಮಾಡಿದ್ದಾನೆ. ಅಂದರೆ ಪ್ರತಿಯೊಂದು ಜೀವಿಯ ತಂದೆ ದೇವರು ಎನ್ನುವುದಾದರೆ ಮಕ್ಕಳ ಮಾಂಸವನ್ನು ಆಹಾರವಾಗಿ ಸ್ವೀಕರಿಸಲು ದೇವರು ಒಪ್ಪುತ್ತಾನೆಯೇ ಎಂಬ ವಿಚಾರವನ್ನು ಮುಂದಿಡುತ್ತಾನೆ. ಅಲ್ಲದೇ ಪ್ರಾಣಿವಧೆ ಎಂಬುದು ಶಿವದ್ರೋಹ. ಅಷ್ಟೇ ಅಲ್ಲದೇ ಅದೊಂದು ಅಜ್ಞಾನ ಎಂದು ಹೇಳಿ ಜನರಿಗೆ ತಿಳಿ ಹೇಳುತ್ತಾನೆ.

ಮರಿಯ, ಪೂಜಾರಿ, ಕರಿಯ, ಹೀಗೆ ನಾಲ್ಕು ವ್ಯಕ್ತಿಗಳ ಪಾತ್ರಗಳ ನಡುವೆ ನಡೆಯುವ ಸಂಭಾಷಣೆ ಭಯವನ್ನು ತುಂಬುವಲ್ಲಿ ಯಶಸ್ವಿಯಾಗುತ್ತವೆ. ಪೂಜಾರಿಯು ಕರಿಯ ಮತ್ತು ಮರಿಯ ಎಂಬ ಕೆಳವರ್ಗದ ವ್ಯಕ್ತಿಗಳಿಗೆ ಭಕ್ತರೇ, ನನಗೆ ಹಸಿವು, ಬಾಯಾರಿಕೆ ಆಗುತ್ತಲಿದೆ. ಆ ಕಾರಣಕ್ಕಾಗಿ ತಡ ಮಾಡದೇ ನೀವು ನನಗೆ ಪ್ರಾಣಿಬಲಿಯನ್ನು ಕೊಡಲೇ ಬೇಕು ಎಂದು ಹೇಳುತ್ತಿರುವಾಗ ಬಸವಣ್ಣ ಇದು ನಿಜವಾದ ದೇವತೆಯ ಹರಕೆಯಲ್ಲ. ಪೂಜಾರಿ ತೋರ್ಪಡಿಸಿ ಕೆಳಗಿನ ಜನರನ್ನು ವಂಚಿಸುತ್ತಿರುವ ವೇಷ ಎಂದಾಗ ಪೂಜಾರಿಯು ಭಕ್ತರೇ, ಬಸವಣ್ಣನ ಮಾತುಗಳನ್ನು ನಂಬಬೇಡಿ ಒಂದು ವೇಳೆ ನನಗೆ ಪ್ರಾಣಿಬಲಿ ಕೊಡದೇ ಹೋದರೆ ನಿಮ್ಮ ಓಣಿಯಲ್ಲಿ ಹೆಣದ ರಾಶಿ ಹಾಕ್ತೀನಿ ಎಂದು ಹೆದರಿಸುತ್ತಾನೆ. ಆಗ ಅಲ್ಲಿ ಇದ್ದ ಕರಿಯ ಮತ್ತು ಮರಿಯ ಬಸವಣ್ಣನನ್ನು ವಿರೋಧಿಸುತ್ತಾರೆ. ಆಗ ಬಸವಣ್ಣ ಹೀಗೆ ಹೇಳುತ್ತಾನೆ.

"ಬಸವಣ್ಣ : ಹಾಗಾದರೆ ಈ ಮೂಕಜಂತುವಿನ ಹತ್ಯೆಗೈದು ನಿಮ್ಮಮ್ಮನಿಗೆ ಆಹಾರ ಮಾಡುವ ಬದಲು ನನ್ನನ್ನೇ ನಿಮ್ಮ ತಾಯಿಗೆ ಬಲಿಯಾಗಿ ಒಪ್ಪಿಸಿಕೊಳ್ಳಿ. ಇದೋ ನಿಮ್ಮ

ಇಷ್ಟದಂತೆ ಮಾಡಿಕೊಂಡು ನಿಮ್ಮ ಅಮ್ಮನಿಗೆ ತೃಪ್ತಿಪಡಿಸಿ(ವಧಸ್ಥಂಬದ ಬಳಿ ಬಂದು ಕತ್ತು ಬಗ್ಗಿಸಿ ಕೂರುವ–ಎಲ್ಲರೂ ಮೂಕರಾಗಿ ನಿಂತು ಒಬ್ಬರ ಮುಖವನ್ನೊಬ್ಬರು ನೋಡುತ್ತಾ ನಿಲ್ಲುವರು) ಏಕೆ? ಅಣ್ಣಂದಿರಾ ಮೌನವಾದಿರಿ. ತೆಗೆದುಕೊಳ್ಳಿ. ನನ್ನ ಬಲಿಯನ್ನು ಏಕೆ? ಮೇಕೆಯ ಬಲಿಗಿಂತಲೂ ನನ್ನ ಬಲಿಯಿಂದ ನಿಮ್ಮ ತಾಯಿಗೆ ಹೆಚ್ಚಿನ ತೃಪ್ತಿ ಸಿಗುತ್ತದೆ. ಪ್ರಾಣಿಗಳ ರಕ್ತ ಮಾಂಸವನ್ನು ಸೇವಿಸುವ ನಿಮ್ಮ ದೇವಿ ನರಬಲಿಯ ಸ್ವೀಕರಿಸಲಾರಳೇ? ಅಮ್ಮಾ ತಾಯಿ ಲೋಕಮಾತೆ ನೀನಾಗಿದ್ದರೆ ಈ ಚರಾಚರ ಜಗತ್ತಿನಲ್ಲಿ ಜನಿಸಿದ ಸಚರಾಚರ ಪ್ರಾಣಿಗಳೆಲ್ಲವೂ ನಿನ್ನ ಮಕ್ಕಳೇ ಅಲ್ಲವೇ? ಹಾಗಾದರೆ ನಿನ್ನ ಮಕ್ಕಳ ಬಲಿಯನ್ನೇ ಕೇಳುವುದು ಆವ ನ್ಯಾಯ ಹೇಳು, ಹೇಳು? ಅಣ್ಣಂದಿರಾ ಹಸಿವು ಹಸಿವು ಎಂದು ಭೋರಿಡುತ್ತಿದ್ದ ನಿಮ್ಮ ತಾಯಿ ಏಕೆ ಮೌನವಾದಳು? ದಾಹ ದಾಹವೆಂದು ಭಕ್ತರಿಗೆ ದಿಗಿಲೆಬ್ಬಿಸಿ ಬಿಸಿ ರಕ್ತಬೇಕೆಂದು ಬಾಯಿಯಲ್ಲಿ ಬೆಂಕಿಯ ನುಡಿಯಾಡುತ್ತಿದ್ದ ಭೈರವಿ ಏಕೆ ಬಾಯಿಗೆ ಬೀಗ ಹಾಕಿಕೊಂಡಳು? ನೀವು ನಿಮ್ಮ ಪೂಜಾರಿ ಹೇಳುತ್ತಿರುವುದೆಲ್ಲಾ ಹುಚ್ಚು ಕಲ್ಪನೆ... ಹೆತ್ತ ತಾಯಿ ತನ್ನ ಮಕ್ಕಳನ್ನೇ ಬಲಿ ತೆಗೆದುಕೊಳ್ಳುವುದು ನಿಜವೇ? ನಮಗೆಲ್ಲಾ ಜೀವಕೊಟ್ಟ ತಾಯಿ ಈ ಮೂಕ ಪ್ರಾಣಿಗಳಿಗೂ ಜೀವ ಕೊಟ್ಟು ಪ್ರಪಂಚದಲ್ಲಿ ಎಲ್ಲರಂತೆ ಬಾಳಲು ಅವಕ್ಕೂ ಅವಕಾಶ ಕೊಟ್ಟಿದ್ದಾಳೆ... ಈ ಹುಚ್ಚು ಕಲ್ಪನೆಯನ್ನು ಬಿಟ್ಟು ನೀವು ನಿಮ್ಮ ತಾಯಿಯನ್ನು ಹೂವು ಹಣ್ಣುಗಳಿಂದಲೇ ತೃಪ್ತಿಪಡಿಸಿ ಆಕೆ ಮೆಚ್ಚುತ್ತಾಳೆ. ಪೂಜಾರಪ್ಪ ಸತ್ಯ ಹೇಳು ನಿನಗೆ ತಾಯಿ ನಿನ್ನ ಮೈಮೇಲೆ ಬಂದು ನನಗೆ ತಿನ್ನಲು ಮಾಂಸಬೇಕು ಕುಡಿಯಲು ರಕ್ತ ಬೇಕು ಎಂದು ಕೇಳಿದಳೆ."[೪೯]

ಬಸವಣ್ಣನ ಈ ವಿಚಾರಗಳಿಂದಾಗಿ ಕರಿಯ, ಮತ್ತು ಮರಿಯ ಇಬ್ಬರೂ ಪರಿವರ್ತನೆ ಯಾಗುವುದರ ಮೂಲಕ ಹೆಂಡ ಮತ್ತು ಮಾಂಸದಿಂದ ದೂರ ಆಗ್ತೀವಿ. ಅಲ್ಲದೇ ನಮ್ಮ ಜನತೆ ಕಣ್ಣಿದ್ದು ಕುರುಡರಾಗಿದ್ದರು. ಈಗ ತಮ್ಮಿಂದ ನಮ್ಮ ಮನ, ಕಣ್ಣು ತೆರೆದಿದೆ ಎಂದು ಹೇಳುವಲ್ಲಿ ಬಹು ಬೇಗ ಬಸವಣ್ಣನ ತತ್ವಗಳಿಗೆ ಮಾರು ಹೋದ ಕೆಳಗಿನ ಜನತೆ ಒಳ್ಳೆಯ ವಿಚಾರಗಳಿಗೆ ತಲೆಬಾಗುತ್ತಾರೆಂಬ ನಿಲುವು ವ್ಯಕ್ತವಾಗಿರುವುದು ಮನಗಾಣಬಹುದು ಮುಂದುವರೆದು ಕೆಳಗಿನ ಜನತೆಯನ್ನು ಬದಲಾವಣೆ ಮಾಡಬೇಕೆಂಬ ಅಭಿಲಾಷೆ ಹೊತ್ತ ವಿಚಾರವಾದಿಗಳಿಗೆ ಮೇಲ್ವರ್ಗದವರು ತಮ್ಮ ಕುಹಕ ಬುದ್ಧಿಯನ್ನು ತೋರಿಸಿದರೂ ಆ ಬುದ್ಧಿಗೆ ಕೆಳಗಿನ ಜನತೆ ತಮ್ಮ ಜ್ಞಾನವನ್ನು ತೋರಿಸಿಕೊಡಬಲ್ಲರು ಎಂಬ ವಿಚಾರ ಇಲ್ಲಿ ಮನದಟ್ಟಾಗುತ್ತದೆ. ಬಸವಣ್ಣನವರು ಅಂಧಕಾರ ಮತ್ತು ಅಜ್ಞಾನವನ್ನು ಹೊಡೆದೋಡಿಸಿ ಜನರಲ್ಲಿ ಜ್ಞಾನವನ್ನು ತುಂಬುವುದರ ಜೊತೆಗೆ ಹಿಂಸೆಯ ತಾಣವಾಗಿರುವ ವೇದ, ಶಾಸ್ತ್ರ ಮತ್ತು ಆಗಮಗಳನ್ನು ವಿರೋಧಿಸಿ ಪ್ರಾಣಿಯ ಹಿಂಸೆಯಿಂದ ಪ್ರಾಣಿಗೆ ಆಗುವ ನೋವು, ಯಾತನೆ ದುಃಖ ಮನುಷ್ಯನು ಮನುಷ್ಯನಾಗಿದ್ದಾಗ ಮಾತ್ರ ಅರ್ಥವಾಗುತ್ತದೆ ಎಂಬ ವಿಚಾರದಡಿಯಲ್ಲಿ ಮೇಕೆಯನ್ನು ಎಳೆದುಕೊಂಡು ಹೋಗುವ ಆ ಮೇಕೆಯಿಂದ ಹೊರಡುವ ಅರಚುವಿಕೆಯ ಶಬ್ದವನ್ನು ಕೇಳಿದ ಬಸವಣ್ಣ ದುಃಖಿಸುತ್ತಾನೆ.

"**ಶಂಕರ** : (ಸಮಾಧಾನ ಮಾಡುತ್ತಾ) ಅವರವರ ನಂಬಿಕೆ ಅವರವರಿಗೆ. ಇದಕ್ಕೆ ನೀನೇಕೆ ದುಃಖಿಸಬೇಕು ಬಸವಣ್ಣ!"

**ಬಸವ** : ಮರನಗೊಟ್ಟಿಗೆ ಬಪ್ಪ ಕಿರುಕುಳ ದೈವಕ್ಕೆ
ಕುರಿಯನಿಕ್ಕಿದೆಯೆಂದು ನಲಿನಲಿದಾಡುವರು!
ಕುರಿ ಸತ್ತು ಕಾಯ್ವುದೇ ಹರಮುಳಿದವರ?
ಕುರಿ ಬೇಡ ಮರಿ ಬೇಡ ಪತ್ರೆ ಸಾಲದೇ?”[೪೯]

ಇಲ್ಲಿ ಬಸವಣ್ಣನ ದಯಾಳತ್ವ ಅರ್ಥವಾಗದೇ ಇರಲಾರದು. ಇಂದು ಆಧುನಿಕ ಕಾಲದಲ್ಲಿ ಕಾನೂನುಗಳು ಇದ್ದರೂ ಪ್ರಾಣಿ ಬಲಿ ಪದ್ಧತಿ ಇನ್ನೂ ಮುಂದುವರಿದುಕೊಂಡು ಬಂದಿರುವುದು ಒಂದು ಕಡೆಯಾದರೆ ಇನ್ನೊಂದೆಡೆ ಯಾವ ಜಾತಿ ಇದನ್ನು ವಿರೋಧಿಸುತ್ತಿತ್ತು. ಅದೇ ಜಾತಿ ಈ ಆಹಾರಕ್ಕೆ ಮೀಸಲಾಗಿರುವುದು ಕಾಣುತ್ತೇವೆ. ದೇವರ ಹೆಸರಿನಲ್ಲಿ ಬಲಿಯಾಗುವ ಪ್ರಾಣಿಗಳು ಒಂದು ಕಡೆಯಾದರೆ ದಿನನಿತ್ಯ ಆಹಾರಕ್ಕಾಗಿ ಬಲಿಯಾಗುವ ಪ್ರಾಣಿಗಳ ಸಂಖ್ಯೆ ಅಧಿಕವಾಗಿದೆ. ಪ್ರಾಣಿ ಹಿಂಸೆ ಮಹಾಪಾಪ ಎಂದು ಗೊತ್ತಿದ್ದರೂ ಆಧುನಿಕ ದೇವತೆಗಳ ಹರಕೆಗೆ ಜಾತ್ರೆಯ ದಿನಗಳಂದು ಸಾವಿರಾರು ಕುರಿ, ಕೋಳಿಗಳನ್ನು ವಿಶೇಷವಾಗಿ ಕೆಳಗಿನ ಉಗ್ರದೇವತೆಗಳಾದ ಮಾರೆಮ್ಮ ಅಥವಾ ದುರುಗಮ್ಮಳ ಜಾತ್ರೆಯ ದಿನಗಳಂದು ಕೋಣವನ್ನು ಬಲಿ ಕೊಡುವ ಪದ್ಧತಿ ಇಂದಿಗೂ ನಾವು ಕಾಣುತ್ತೇವೆ. ಪ್ರಾಣಿಬಲಿಗಳನ್ನು ನೀಡಬಾರದು. ಅವುಗಳಿಗೂ ನಮ್ಮಂತೆ ಜೀವವಿದೆ ಎಂದು ಕೊಂಡು ಕಾನೂನು ನಿರ್ಬಂಧನೆಯನ್ನು ಹೇರಿದರೂ ಇಂದು ನಾವು ಬಲಿಕೊಡುವ ಪದ್ಧತಿಯನ್ನು ಪತ್ರಿಕೆಗಳ ಮೂಲಕ ಬಿತ್ತರಿಸುವಂತಹ ಕೆಲಸ ನಡೆದಿದೆ. ಇಂತಹ ವ್ಯವಸ್ಥೆಯ ವಿರುದ್ಧ ಆಗಿನ ಆಳರಸರ ಮಂತ್ರಿಯಾಗಿ ಬಸವಣ್ಣ ಜನ ಮನಕ್ಕೆ ತಿಳಿಸಿದ್ದಲ್ಲದೇ ಈ ಪದ್ಧತಿಯನ್ನು ನಿಲ್ಲಿಸಬೇಕೆಂದು ಹೋರಾಡಿರುವುದು ಸತ್ಯ ಸಂಗತಿ. ಹೀಗೆ ಬಸವಣ್ಣನ ತತ್ವಗಳನ್ನು ಮುಂದುವರಿಸಿದ್ದೇ ಆದರೆ ದೇವರ ಹೆಸರಿನಲ್ಲಿ ಹಾಗೂ ತಮ್ಮ ಆಹಾರ ಪದ್ಧತಿಯಿಂದ ನಡೆಯುವ ಪ್ರಾಣಿಹಿಂಸೆಯನ್ನು ತಡೆಗಟ್ಟಬಹುದು ಎಂಬ ವಿಚಾರ ಇಲ್ಲಿ ಸ್ಪಷ್ಟವಾಗಿದೆ.

### ವೇಳವಾಳಿ ಮತ್ತು ಸಹಗಮನ ಪದ್ಧತಿ

ಇವೆರಡು ಸಮಾಜದಲ್ಲಿ ನಡೆಯುವ ಕ್ರೂರ ಆಚರಣೆ ಪದ್ಧತಿಗಳಾಗಿವೆ. ಅಂದಿನ ಕಾಲದಲ್ಲಿ ಇವು ಪ್ರಮುಖವಾಗಿ ಗೋಚರವಾಗುತ್ತಾ ತಮ್ಮತನವನ್ನು ಮೆರೆಯುವಲ್ಲಿ ಪ್ರತಿಫಲ ಕಂಡಿದೆ ಎಂಬ ವಿಚಾರವನ್ನು ಒತ್ತಿ ಹೇಳುತ್ತವೆ. ವೇಳವಾಳಿ ಎಂಬುದು ಒಂದು ಅರ್ಥದಲ್ಲಿ ಅನ್ನದ ಋಣವೇ ಆಗಿದೆ. ಈ ವೇಳವಾಳಿಗೆ ಜೋತು ಬಿದ್ದವರಲ್ಲಿ ಕವಿಗಳು, ಜನಸಾಮಾನ್ಯರು, ದಂಡನಾಯಕರು ಆಗಿದ್ದಾರೆ. ಅವತ್ತಿನ ಕಾಲದ ಸಾಮಾಜಿಕ ಸಂದರ್ಭವನ್ನು ಇಟ್ಟುಕೊಂಡು ಈ ವೇಳವಾಳಿಯನ್ನು ಅನುಸರಿಸುತ್ತಾ ಬಂದವರಾಗಿದ್ದಾರೆ. ಈ ವೇಳವಾಳಿಗೋಸ್ಕರ ಅರಸರನ್ನು ಕವಿಗಳು ಮಹಾಭಾರತದ ಪಾತ್ರಗಳೊಂದಿಗೆ ಸಮೀಕರಿಸಿ ಬರೆದಿದ್ದು ಚರಿತ್ರೆಯಾದರೆ, ಇನ್ನೂ ದಂಡನಾಯಕರು ಯುದ್ಧದಲ್ಲಿ ವೀರಸ್ವರ್ಗ ಸೇರಿದರೆ ಅವರ ವೇಳವಾಳಿಯಾದ ವ್ಯಕ್ತಿ ಆ ದಂಡನಾಯಕರ ಆತ್ಮಕ್ಕೆ ಶಾಂತಿ ಸಿಗಲೆಂದು ತನ್ನ ರುಂಡವನ್ನು ಕತ್ತರಿಸಿಕೊಂಡು ವೀರ

ಸ್ವರ್ಗಕ್ಕೆ ಹೋಗುವುದು ಇತಿಹಾಸ. ಇದು ಒಂದರ್ಥದಲ್ಲಿ ಕ್ರೂರ ಆಚರಣೆ ಎಂದೆನಿಸಿದರೂ ಅದು ಗೊತ್ತಿದ್ದರೂ ತಮಗೆ ಅನ್ನ ನೀಡಿದವರ ಪ್ರಾಣಕ್ಕೆ ತಮ್ಮ ಪ್ರಾಣವನ್ನು ಅರ್ಪಿಸಬೇಕೆಂಬ ನಿಲುವು ಆ ಆಚರಣೆಯ ಪದ್ಧತಿಯಾಗಿ ಬೆಳೆದುಕೊಂಡು ಬಂದಿದೆ. ಅಲ್ಲದೇ ಈ ಪದ್ಧತಿಗೆ ದುಮುಕಿ ವೀರಸ್ವರ್ಗ ಸೇರುತ್ತೇವೆ ಎಂಬ ಭ್ರಮೆಯಲ್ಲಿ ಮುಳುಗಿದವರಿಗೆ ಬಸವಣ್ಣ ತನ್ನ ವಿಚಾರವನ್ನು ಮಂಡಿಸುತ್ತಾನೆ. ಅಷ್ಟೇ ಅಲ್ಲದೇ ಇದೊಂದು ಕ್ರೂರ ಆಚರಣೆಯಾಗಿದೆ ಎಂದು ಹೇಳುತ್ತಿದ್ದಂತೆಯೇ ಅಧಿಕಾರಿಯೊಬ್ಬರು ಬಸವಣ್ಣನವರೇ ಇದು ಕ್ರೂರ ಆಚರಣೆಯಲ್ಲ. ಪರಂಪರೆಯಿಂದ ನಡೆದು ಬಂದ ಪುಣ್ಯ ಆಚರಣೆ. ಏಕೆಂದರೆ ಒಡೆಯನು ಜೀವಂತವಾಗಿದ್ದಾಗ ಸುಖ ಸಂತೋಷಗಳು ಲಭಿಸಲಿ, ಅವನು ಸತ್ತಾಗ ಸ್ವರ್ಗ ಸೇರಲೆಂದೇ ಜೀವತ್ಯಾಗ ಮಾಡಿ ಕೊಳ್ಳುವುದು ವೇಳವಾಳಿಗಳ ಕರ್ತವ್ಯ ಎನ್ನುತ್ತಾನೆ. ಅಷ್ಟೇ ಅಲ್ಲದೇ ಪುರಾಣ ಕಾಲದಿಂದಲೂ ನಡೆದು ಬಂದ ವೈದಿಕ ಸಾಮಾಜಿಕ ಮೌಲ್ಯಗಳು ಎಂದಾಗ ಬಸವಣ್ಣ ಇದು ಮೌಲ್ಯವಲ್ಲ. ಸೋಗಿನ ರೂಪದಲ್ಲಿ ಶೋಷಣೆ ಮಾಡುವ ಹುನ್ನಾರ ಎನ್ನುತ್ತಾನೆ. ಎಂದರೆ ರಾಜವರ್ಗದವರಿಂದ ಪ್ರಜೆಗಳ ಶೋಷಣೆ ಎಂದರ್ಥ. ಮುಂದುವರಿದು ಬಸವಣ್ಣ ಲಿಂಗಕ್ಕಾಗಿ ಭಕ್ತ ಪ್ರಾಣತ್ಯಾಗ ಮಾಡಿಕೊಳ್ಳುವಂತೆ, ರಾಜನಿಗಾಗಿ ಪ್ರಜೆ ಪ್ರಾಣತ್ಯಾಗ ಮಾಡಿಕೊಳ್ಳುವುದು ತಪ್ಪಾಗುತ್ತದೆ. ಏಕೆಂದರೆ ರಾಜನಿಗಿಂತ ಪ್ರಜೆಯು ಶ್ರೇಷ್ಠವಾದವನು. ಹೀಗಾಗಿ ರಾಜನಿಗೆ ಪ್ರಜೆ ವೇಳವಾಳಿಯಾಗಬಾರದು. ಆದರೆ ರಾಜನೇ ಪ್ರಜೆಗಳಿಗೆ ವೇಳವಾಳಿಯಾಗಬೇಕೆಂಬ ವಿಚಾರವನ್ನು ಮುಂದಿಡುತ್ತಾನೆ. ಅಷ್ಟೇ ಅಲ್ಲ ನಮ್ಮ ಪ್ರಾಣದಂತೆ ಪ್ರಜೆಗಳನ್ನು ಪ್ರೀತಿಸಬೇಕು. ಪ್ರಜೆಗಳೊಂದಿಗೆ ವೇಳವಾಳಿ ಸಂಬಂಧ ಇಟ್ಟುಕೊಳ್ಳಬೇಕು. ರಾಜ ವೇಳವಾಳಿ ಬದಲಾಗಿ ಪ್ರಜೆ ವೇಳವಾಳಿ ಎಂಬ ಪ್ರತಿಜ್ಞೆ ನಮ್ಮದಾಗಬೇಕು ಎಂಬ ಚಿಂತನೆಯನ್ನು ಮುಂದಿಟ್ಟ ಬಸವಣ್ಣ ಸಾಮಾನ್ಯ ಜನತೆಯ ಪರವಾಗಿ ನಿಂತು ನಿಜವಾದ ವೇಳವಾಳಿಯ ಅರ್ಥವನ್ನು ಕಲ್ಪಿಸಿಕೊಟ್ಟಿದ್ದಾನೆ.

ವೇಳವಾಳಿಯು ಪುರುಷರ ಪ್ರಾಣಕ್ಕೆ ಕುತ್ತು ತಂದರೆ ಸಹಗಮನ ಪದ್ಧತಿಯು ಸ್ತ್ರೀಯರ ಪ್ರಾಣಕ್ಕೆ ಕುತ್ತು ತರುತ್ತದೆ. ಸಹಗಮನ ಪದ್ಧತಿ ಇಂದು ನಿನ್ನೆಯದಲ್ಲ. ಅಂದಿನ ಕಾಲದಿಂದಲೂ ಸ್ತ್ರೀಯರನ್ನು ಅಮಾನುಷವಾಗಿ ಶೋಷಣೆಗೆ ಗುರಿಪಡಿಸುವ ಒಂದು ರೀತಿಯ ನಿರ್ಬಂಧನೆಯಾಗಿದೆ. ಏಕೆಂದರೆ ಅಂದಿನ ಸಮಾಜ ಮತ್ತು ಧರ್ಮ ಆಳರಸರ ಕಪಿಮುಷ್ಟಿಯಲ್ಲಿದ್ದವು. ರಾಜರು ಬಾಯಿಂದ ಬಂದ ಮಾತುಗಳೇ ಕಾನೂನುಗಳಾಗಿ ಸಮಾಜದಲ್ಲಿ ನಡೆಯುತ್ತಿದ್ದವು. ಆಗಿನ ಕಾಲದಲ್ಲಿ ಯುದ್ಧ ನಡೆಯುವಂತಹ ಸಂದರ್ಭದಲ್ಲಿ ಹೋರಾಡಿ ಗಂಡ ಸತ್ತರೆ ಆತನ ಚಿತೆಯಲ್ಲಿಯೇ ಹೆಂಡತಿ ಮರಣವಪ್ಪುವುದು ಸಹಗಮನ ಪದ್ಧತಿ ಎನಿಸಿಕೊಂಡಿತ್ತು. ಇದು ಇನ್ನೊಂದು ರೀತಿಯಲ್ಲಿ ರಾಜ ಯಾವುದೋ ಕಾರಣಕ್ಕೆ ಸತ್ತಾಗ ಅವನ ಋಣದಿಂದ ಮುಕ್ತನಾಗಲು ಅಥವಾ ವೀರಸ್ವರ್ಗ ಸಿಗುತ್ತದೆ ಎಂಬ ಭ್ರಮೆಯಿಂದ ಸಾಮಾನ್ಯ ಪ್ರಜೆ ತನ್ನ ಪ್ರಾಣವನ್ನು ತ್ಯಾಗ ಮಾಡುತ್ತಿದ್ದ. ರಾಜನಿಗೆ ವೀರಸ್ವರ್ಗ ಸಿಗಲೆಂಬ ತನ್ನ ಪ್ರಾಣವನ್ನು ಬಿಟ್ಟವನ ಹೆಂಡತಿ ಈ ಸಹಗಮನ ಪದ್ಧತಿಗೆ ಕಾರಣಗಳಾಗಿ ಇದಕ್ಕೆ ಪ್ರಚೋದನೆ ಎಂಬಂತೆ ಸಿದ್ಧಳಾಗುತ್ತಾಳೆ.

ಇದು ರಾಜನ ಒಂದು ಪ್ರಾಣಕ್ಕೆ ಸತಿ ಪತಿಗಳ ಎರಡೂ ಪ್ರಾಣಿಗಳ ಆಹುತಿಯಾಗುವುದು ಸಮಾಜದ ನೈತಿಕತೆಗೆ ದುರಂತವೇ ಆಗಿದೆ. ಇದು ದುರಂತವೆಂದು ಗೊತ್ತಿದ್ದರೂ ಆಗಿನ ಕಾಲದ ವೈದಿಕ ಸಂಪ್ರದಾಯಗಳು ಕಟ್ಟಳೆಗಳು ನೀತಿ ನಿಯಮಗಳು ಇದರಿಂದ ವೀರಸ್ವರ್ಗ ಸಿಗುತ್ತದೆಂಬ ವಿಚಾರಗಳನ್ನು ಸಾರುತ್ತಿದ್ದವು. ಈ ವ್ಯವಸ್ಥೆಯನ್ನು ಕಂಡ ಬಸವಣ್ಣ ಈ ಪದ್ಧತಿಯನ್ನು ಸಮಾಜದಿಂದ ಕಿತ್ತೊಗೆಯಬೇಕೆಂಬ ನಿಲುವನ್ನು ತಾಳಿ ಅದೊಂದು ಕ್ರೂರ ಪದ್ಧತಿಯೆಂಬ ವಿಚಾರವನ್ನು ಸ್ಪಷ್ಟಪಡಿಸುತ್ತಾನೆ.

ನಿಮ್ಮ ಪತಿ ಒಡೆಯನಿಗಾಗಿ ರುಂಡ ಕತ್ತರಿಸಿಕೊಂಡದ್ದು ಒಂದು ಅಮಾನುಷವಾದರೆ ಅವನ ಸಲುವಾಗಿ ನೀವು ಬೆಂಕಿಗೆ ಬಿದ್ದು ಸಾಯುವುದು ಮತ್ತೊಂದು ಅಮಾನುಷ ಆಚರಣೆ. ಸ್ವರ್ಗ, ವೀರ ಎಂಬ ಕಲ್ಪನೆಗಳು ಕೇವಲ ಹುಸಿಯಾದವುಗಳು. ಏಕೆಂದರೆ ನಿಮ್ಮಿಂದ ಹುಟ್ಟಿದ ಕೂಸು ಅನಾಥನನ್ನಾಗಿ ಮಾಡುವ ಈ ಪದ್ಧತಿ ಆಘಾತಕಾರಿಯಾದುದಲ್ಲದೇ ಮತ್ತೇನು? ನೀವು ನಿಮ್ಮ ಕಂದಮ್ಮನಿಗಾದರೂ ಉಳಿಯಬೇಕು. ಏಕೆಂದರೆ ಯಾವ ಸ್ತ್ರೀ ಕುಂಕುಮ, ಕೈ ತುಂಬಾ ಬಳೆಯಿಂದ ಶೋಭಿಸುತ್ತಿದ್ದಳೇ ಅಂಥವಳನ್ನು ಅಮಾನುಷವಾಗಿ ಸಹಗಮನ ಪದ್ಧತಿಗೆ ನೂಕುವುದು ಸರಿಯಲ್ಲ. ಗಂಡ ಸತ್ತರೆ ಹೆಂಡತಿ ಚಿತೆಯೇರುತ್ತಾಳೆ. ಆದರೆ ಹೆಂಡತಿ ಸತ್ತರೆ ಗಂಡ ಚಿತೆಯೇರುವ ಮತ್ತೊಂದು ಉದಾಹರಣೆಗಳಿಲ್ಲದೇ ಮತ್ತೊಂದು ಮದುವೆಯಾಗುತ್ತಾನೆ. ಇಂತಹ ಅನೈತಿಕ ಚಟುವಟಿಕೆಗಳ ವಿರುದ್ಧ ಬಸವಣ್ಣ ಗಂಡ ಸತ್ತ ಹೆಂಡತಿಯು ಮತ್ತೊಂದು ಮದುವೆಯಾಗಬಹುದು ಎಂಬ ತತ್ವವನ್ನು ಬೋಧಿಸುತ್ತಾನೆ.

"**ಅಧಿಕಾರಿ** : ಪ್ರಭೂ.ಇದು ಕ್ರೂರ ಆಚರಣೆಯಲ್ಲ. ಪರಂಪರಾಗತವಾಗಿ ನಡೆದು ಬಂದ ಪುಣ್ಯ ಆಚರಣೆ ಒಡೆಯನು ಜೀವಂತವಾಗಿರುವಾಗ ಅವನಿಗೆ ಸುಖ ಸಂತೋಷಗಳು ಒದಗಿ ಬರಲಿ ಎಂದೋ, ಸತ್ತಾಗ ಅವನು ಸ್ವರ್ಗ ಸೇರಲೆಂದೋ ಜೀವತ್ಯಾಗ ಮಾಡಿಕೊಳ್ಳುವುದು ವೇಳವಾಳಿಗಳ ಕರ್ತವ್ಯ. ಹಾಗೆಯೇ ಗಂಡ ಸತ್ತಾಗ ಚಿತೆಯೇರುವುದು ಹೆಂಡಂದಿರ ಕರ್ತವ್ಯ.

**ಬಸವಣ್ಣ** : ಯಾರು ಹೇಳಿದರು? ಈ ವೇಳವಾಳಿ ಮರಣ, ಮಾಸ್ತಿಮರಣ ಪುಣ್ಯ ಆಚರಣೆಗಳೆಂದು?"[೫೦]

ಬಸವಣ್ಣ ಒಬ್ಬ ಮಹಾಮಂತ್ರಿಯಾಗಿ ಸನಾತನ ಸಂಪ್ರದಾಯದ ವಿರುದ್ಧ ವೈದಿಕ ಕ್ರೂರ ಪದ್ಧತಿಗಳ ವಿರುದ್ಧ ಅರಮನೆಯನ್ನು ಮಹಾಮನೆಯ ಮೂಲಕ ಸಮಾಜ ಸುಧಾರಣೆಯಾಗಬೇಕು ಎಂಬ ಕನಸಿನೊಂದಿಗೆ ಆ ಕನಸು ನನಸಾಗಬೇಕೆಂಬ ವಿಚಾರದ ಅಡಿಯಲ್ಲಿ ಶರಣರನ್ನು ಕೂಡಿಸಿ ಶರಣ ಸಂಪ್ರದಾಯದ ಪ್ರಕಾರ ಶರಣರ ತತ್ವಗಳು ಜನರ ಮನದಲ್ಲಿ ಹಾಸುಹೊಕ್ಕಾಗಬೇಕು ಎಂಬ ವಿಚಾರದೊಂದಿಗೆ ಬಸವಣ್ಣನು ಪ್ರತಿಯೊಬ್ಬರು ತಮ್ಮ ಜೀವಿತದ ಅವಧಿಯಲ್ಲಿ ಕಾಯಕವನ್ನು ಹೊರತು ಪಡಿಸಿ ಯಾವುದೇ ಅನಿಷ್ಟ ಆಚರಣೆಗಳಿಗೆ ತಲೆಬಾಗಬಾರದು ಎಂಬ ಸಿದ್ಧಾಂತವನ್ನು

ಪ್ರತಿಪಾದಿಸಿ ಆ ಸಿದ್ಧಾಂತಕ್ಕೆ ಜಾತಿ, ಮತ, ಕುಲ, ಲಿಂಗ ಎಂಬ ತಾರತಮ್ಯವಿಲ್ಲದೇ ಬದ್ಧರಾಗ ಬೇಕು ಎಂಬ ಅಂಶಗಳನ್ನು ಈ ನಾಟಕದಲ್ಲಿ ಬಸವಣ್ಣನ ಆಶಾ ಮನೋಭಾವನೆ ವ್ಯಕ್ತವಾಗಿರುವುದು ಕಂಡುಬರುತ್ತದೆ.

ಸಮಾಜವು ಗತಕಾಲದಿಂದಲೂ ಮನುಷ್ಯನ ಜೀವಂತಿಕೆಯನ್ನು ಕುರಿತು ಚಿಂತನಾ ಮಂಥನವಾಗಿರುತ್ತದೆ. ಮನುಷ್ಯನು ಸಮಾಜದ ಅನಿವಾರ್ಯ ಅಂಗ. ಹೀಗಾಗಿ ತಾನು ಬಾಳಿ ಬದುಕಿದ ಸಮಾಜದ ಸಮಕಾಲೀನ ವ್ಯವಸ್ಥೆಗೆ ಸ್ಪಂಧಿಸುತ್ತಾ ಹೋಗುತ್ತಾನೆ. ಸಮಾಜ ವಿವಿಧ ವರ್ಗದ, ವಿವಿಧ ಜಾತಿಯ ಜನಗಳನ್ನೊಳಗೊಂಡಿರುತ್ತದೆ. ಪ್ರಸ್ತುತ ಭಾರತದಲ್ಲಿ ವರ್ಣ ವ್ಯವಸ್ಥೆ ಮೂಲವಾದ ಸಾಮಾಜಿಕ ಪರಿಸ್ಥಿತಿ ಪರಿಸರದಲ್ಲಿ ಒಂದೊಂದು ವರ್ಗ ಜಾತಿಗಳು ಬೇರೆ ಬೇರೆಯಾಗಿ ಒಂದರ ಮೇಲೊಂದರಂತೆ ಬದುಕನ್ನು ಸಾಗಿಸುತ್ತವೆ. ಇವೆಲ್ಲ ಸೇರಿ ಸಮಾಜವೆನಿಸಿಕೊಂಡರೂ ಪ್ರತಿಯೊಂದು ವ್ಯವಸ್ಥೆಗೆ ಚರಿತ್ರೆ ಬೇರೆ ಬೇರೆಯಾಗಿದೆ. ಇಂತಹ ಸಮಾಜವು ಮತ್ತು ಅದರ ವ್ಯವಸ್ಥೆ ಅಡಿಯಲ್ಲಿ ಸಂಸ್ಕೃತಿ, ಸಂಪ್ರದಾಯ, ಆಚರಣೆ ವಿಚಾರಗಳು ಮೂಲಭೂತವಾಗಿ ನಿಂತು ಸಮಾಜವನ್ನು ಮುನ್ನಡೆಸುತ್ತವೆ. ಇವು ಸಮಾಜದ ಬದಲಾವಣೆಗೆ ಕಾರಣವಾಗದಿದ್ದರೂ ಸಮಾಜದ ಅನೈತಿಕತೆಗೆ ಕಾರಣವಾಗಿರುವುದು ಮರೆಯುವಂತಿಲ್ಲ. ಏಕೆಂದರೆ ಈಗಾಗಲೇ ಹೇಳಿದಂತೆ ಗತಶೀಲವಾದುದು. ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಸುಮಾರು ವರ್ಷಗಳ ಚರಿತ್ರೆ ಇದೆ ಎಂದರೂ ಮಾನವನ ಹುಟ್ಟಿನೊಡನೆ ಸಮಾಜ ನಿರ್ಮಾಣವಾಗಿದೆ ಎಂಬ ವಿಚಾರ ಅಷ್ಟೇ ಸಮೀಪವಾಗಿದೆ.

ಸಮಾಜ ಮತ್ತು ಧರ್ಮ ಒಂದು ರೀತಿಯಲ್ಲಿ ಅವಿನಾಭಾವ ಸಂಬಂಧವನ್ನು ಹೊಂದಿವೆ. ಧರ್ಮ ಒಂದು ಮತದ ಸಿದ್ಧಾಂತಕ್ಕೆ ಒಳಪಟ್ಟರೆ ಸಮಾಜದಲ್ಲಿ ಕಾಲಕ್ಕೆ ಅನುಗುಣವಾಗಿ ಅನೇಕ ಧರ್ಮಗಳು ಉದ್ಭವಗೊಂಡಿವೆ. ಸನಾತನ ಸಂಸ್ಕೃತಿಯನನು ಅನುಸರಿಸಿಕೊಂಡು ಬಂದಿರುವ ಸಮಾಜ ನಂತರದಲ್ಲಿ ಮಾನವೀಯ ಮೌಲ್ಯವನ್ನು ಹೊಂದಿರುವ ಧರ್ಮಗಳ ಸಿದ್ಧಾಂತಕ್ಕೆ ಬದ್ಧವಾಗಿರುವುದು ಕಾಣುತ್ತೇವೆ. ಏಕೆಂದರೆ ಸಮಾಜ ಎಲ್ಲಾ ಜಾತಿಯ ಎಲ್ಲಾ ಧರ್ಮದ, ಎಲ್ಲಾ ಸಂಸ್ಕೃತಿಯ ಜೀವನವನ್ನು ಒಳಗೊಂಡಿರುತ್ತದೆ. ಹೀಗಾಗಿ ಸಮಾಜದಲ್ಲಿ ಎಲ್ಲಾ ವರ್ಗದ, ಎಲ್ಲಾ ಧರ್ಮದ ಜನರು ಬದುಕಿರುವುದರಿಂದಲೇ ಆ ಪ್ರದೇಶದ ಸಮಾಜವನ್ನು ಗುರುತಿಸುತ್ತೇವೆ. ಹೀಗೆ ಸಮಾಜ ಧರ್ಮದ ಕಟ್ಟುಪಾಡುಗಳಿಂದ ಜನರನ್ನು ಮೂಢನಂಬಿಕೆಗಳಿಗೆ ಬಲಯಾಗುವಂತೆ ಮಾಡಿತ್ತು. ಕಾರಣ ಸನಾತನ ಸಂಸ್ಕೃತಿಯನ್ನು ಬಿತ್ತರಿಸುವ ವೈದಿಕ ಮತದ ಪ್ರಭಾವ ಹೆಚ್ಚಾಗಿತ್ತು. ಇಂತಹ ಸಂದರ್ಭದಲ್ಲಿ ಬುದ್ಧ ಬೌದ್ಧ ಧರ್ಮದ ಮೂಲಕ ನವ ಸಮಾಜದ ಕನಸು ಕಂಡರೆ, ಮಹಾವೀರ ಜೈನಧರ್ಮದ ಮೂಲಕ ಹಿಂಸೆ ಎಂಬುದು ಮಹಾಪಾಪ ಎಂದು ಬೋಧಿಸಿದ ತದನಂತರದಲ್ಲಿ ಇಡೀ ಬಿರುಕು ಬಿಟ್ಟಿರುವ ಸಮಾಜದ ವ್ಯವಸ್ಥೆಯನ್ನು ಒಂದುಗೂಡಿಸುವ ಪ್ರಯತ್ನ ೧೨ನೇ ಶತಮಾನದಲ್ಲಿ ನಡೆಯಿತು.

ಈ ಕಾಲ ಸಮಾಜದ ಸುವರ್ಣ ಕಾಲವೆಂದು ಹೇಳಬೇಕು. ಏಕೆಂದರೆ ಉನ್ನತ ವರ್ಗದಿಂದ ಕೆಳಗಿರುವ ಮೂರು ವರ್ಗಗಳು ಶೋಷಣೆಗೆ ಒಳಗಾಗಿದ್ದವು. ಅಂತಹ ಸಂದರ್ಭದಲ್ಲಿ ಅತ್ಯಂತ ಶ್ರೇಷ್ಠ ಜಾತಿಯಲ್ಲಿ ಜನ್ಮ ತಾಳಿದ ಬಸವಣ್ಣ ಸಮಾಜದ ಅಧೋಗತಿಗೆ ನಿರ್ಬಂಧನೆ ಹಾಕುವುದರ ಮೂಲಕ ಸಮಾನತೆಯ ಸಮಾಜವನ್ನು ಕಾಣಲು ಹಂಬಲಿಸಿರುವುದು ಚರಿತ್ರೆಗೆ ಮೂಲ ದಾಖಲೆಯಾಗಿದೆ. ಯಾವ ಸಮಾಜವನ್ನು ಮಲಿನಗೊಳಿಸಬೇಕು ಉಳಿದ ವರ್ಗಗಳಿಂದ ಸೇವೆ ಮಾಡಿಸಿಕೊಳ್ಳಬೇಕು ಎಂಬ ಸನಾತನ ಸಂಸ್ಕೃತಿಗೆ ೧೨ನೇ ಶತಮಾನ ಬಸವಣ್ಣನ ತತ್ವ ಪ್ರೇರಣೆಯಾಗಿದೆ. ಈಗಾಗಲೇ ಬಸವಣ್ಣ ಕೈಲಾಸದಿಂದ ಭೂಲೋಕಕ್ಕೆ ಬಂದನೆಂಬ ವಿಚಾರ ಮಂಡಿತವಾಗಿದೆ. ಅದೇನೇ ಇರಲಿ ಕಠೋರವಾದ ಜಾತಿ ವ್ಯವಸ್ಥೆ, ಲಿಂಗ ತಾರತಮ್ಯ, ಸಹಗಮನ ಪದ್ಧತಿ, ಅಂತರ್‌ಜಾತಿ ವಿವಾಹ ಎಲ್ಲಕ್ಕಿಂತ ಮಿಗಿಲಾಗಿ ಏಕೈಕ ಒಂದು ಜಾತಿಗೆ ಮೀಸಲಾದ ಲಿಂಗ ವ್ಯವಸ್ಥೆಯನ್ನು ಮೆರೆದ ಏಕೈಕ ವ್ಯಕ್ತಿ ಎಂಬ ವಿಚಾರಗಳು ಈ ಆಧುನಿಕ ನಾಟಕಗಳಲ್ಲಿ ವ್ಯಕ್ತವಾಗಿವೆ.

**ಅನುಭವಮಂಟಪ**

ಅರಮನೆ ಅನಾದಿ ಕಾಲದಿಂದಲೂ ರಾಜರು ನಿರ್ಮಿಸಿದ ಸಿಂಹಾಸನವಾದರೆ ೧೨ನೇ ಶತಮಾನದಲ್ಲಿ ಅರಮನೆಯಲ್ಲಿದ್ದುಕೊಂಡೇ ಮಹಾಮನೆಯ ಮೂಲಕ ಅನುಭವಮಂಟಪ ಎಂಬ ಷಟ್‌ಸ್ಥಲಗಳ ಹೆಸರಿನಲ್ಲಿ ನಿರ್ಮಿಸಿದ ಸಿಂಹಾಸನ ಇದಾಗಿದೆ. ಇದಕ್ಕೆ ಶೂನ್ಯಸಿಂಹಾಸನ ಎಂಬುದಾಗಿಯೂ ಶಿವಶರಣರು ಕರೆದಿರುವಲ್ಲಿ ಅದಕ್ಕೊಂದು ಅರ್ಥವಿದೆ. ಇದರ ಮೂಲ ಉದ್ದೇಶ ಕೇವಲ ಧಾರ್ಮಿಕತೆಗೆ ಅಷ್ಟೇ ಸಂಬಂಧಿಸಿಲ್ಲ. ಸಾಮಾಜಿಕ, ಆರ್ಥಿಕ, ಇದಕ್ಕಿಂತ ಮಿಗಿಲಾಗಿ ಮಾನವ ಸಂಘಟನೆಯೇ ಇದರ ಮೂಲ ಉದ್ದೇಶ. ಈ ಅನುಭವಮಂಟಪದ ಮೂಲಕ ಸರ್ವರಿಗೂ ಸಮಾನವಾದ ಹಕ್ಕುಗಳನ್ನು ಕಲ್ಪಿಸಿಕೊಡುವುದು, ಅದರ ಮೂಲಕ ಸರ್ವರಿಗೂ ಸ್ವಾತಂತ್ರ್ಯವನ್ನು ದೊರಕಿಸುವುದು. ಜೊತೆಗೆ ಭಾವೈಕ್ಯತೆಯನ್ನು ತರುವುದು, ಉತ್ತಮ ಸಮಾಜ ಮತ್ತು ಧರ್ಮದ ಅಡಿಯಲ್ಲಿ ಜೀವನವನ್ನು ಸಾಗಿಸುವುದು. ಜೊತೆಗೆ ಅಂತಸ್ತನ್ನು ಧಿಕ್ಕರಿಸಿ ಮೇಲು-ಕೀಳು ಎಂಬುದನ್ನು ಮರೆತು ಬಡವ-ಬಲ್ಲಿದನೆಂಬ ತಾರತಮ್ಯತೆ ಬದಿಗಿಟ್ಟು ಕಾಯಕಕ್ಕೆ ಮೊದಲ ಪ್ರಾಶಸ್ತ್ಯ ನೀಡಿ ಭಕ್ತಿಯ ಸಿದ್ಧಾಂತವನ್ನು ಪ್ರತಿಪಾದಿಸುವ ಸಲುವಾಗಿ ಇದು ನಿರ್ಮಾಣಗೊಳ್ಳುತ್ತದೆ. ಇಲ್ಲಿ ಅರಸರಾಗಲೀ ಸಾಮಾನ್ಯ ಜನರಾಗಲೀ ಒಂದೇ. ಅರ್ಥಾತ್ ಮಾನವರು ಎಲ್ಲರೂ ಸದ್ಭಾವದಿಂದ ಸೌಹಾರ್ದತೆಯಿಂದ ಬಾಳಬೇಕೆಂಬುದೇ ಶರಣರ ನಿಲುವಾಗಿತ್ತು. ಏಕೆಂದರೆ ಧರ್ಮ, ರಾಜಕೀಯ, ಆರ್ಥಿಕ ಮತ್ತು ಸಮಾಜ ಈ ನಾಲ್ಕರಿಂದ ಇಡೀ ಜಗತ್ತು ನಡೆಯುತ್ತದೆ. ಇಲ್ಲಿ ಪ್ರಮುಖವಾಗಿ ಧರ್ಮದ ಸಿದ್ಧಾಂತವನ್ನು ಬೋಧಿಸುವ ಶರಣರ ನೈತಿಕ ವಿಚಾರಗಳಿಗೆ ಅನುಭವಮಂಟಪವು ಒಂದು ವೇದಿಕೆಯಾಗಿ ನಿಲ್ಲುತ್ತದೆ. ಈ ಮಂಟಪವನ್ನು ಸ್ಥಾಪನೆ ಮಾಡಿದ ಬಸವಾದಿ ಪ್ರಮಥರು ಅಧ್ಯಕ್ಷ ಸ್ಥಾನವನ್ನು ಅಲ್ಲಮಪ್ರಭುಗಳಿಗೆ ಕಲ್ಪಿಸುವುದರ ಮೂಲಕ ಎಲ್ಲಾ ಜಾತಿಯ ಶರಣರು ಪ್ರತಿಯೊಂದು ವಿಷಯದ ಬಗೆಗೆ ಚರ್ಚೆ

ಮಾಡುತ್ತಾ ಅವುಗಳನ್ನು ಸುಧಾರಣೆಗೆ ತರುವಲ್ಲಿ ಪ್ರಯತ್ನಿಸುತ್ತಾರೆ. ಅನುಭವಮಂಟಪವು ಮೇಲ್ವರ್ಗದ ಜನಗಳಿಗೆ ಮಹಾಮನೆಯಾಗಿ ಗೋಚರಿಸುತ್ತದೆ.

**"ಬಸವ** : ಅನುಭವಮಂಟಪವನ್ನು ಸ್ಥಾಪಿಸೋಣ. ನಮ್ಮ ತನು, ಮನ, ಧನವನ್ನದಕ್ಕರ್ಪಿಸಿ, ಜಗತ್ತಿನಲ್ಲಿ ಧರ್ಮಯುಗವನ್ನಾರಂಭಿಸೋಣ. ಆದರೆ ಅದರ ಪ್ರಭುತ್ವ ನನಗೆ ಬೇಡ-ನಾನು ಸಾಧಕ. ಸಿದ್ಧನಲ್ಲ. ನಮಗೂ ದಾರಿ ತೋರಿಸುವ, ನಮ್ಮ ಕುರುಡು ಕಣ್ಣುಗಳಿಗೆ ಬೆಳಕು ನೀಡುವ ಪ್ರಭು ಬರುತ್ತಾನೆ. ಅವನಿಗೆ ಆ ಸ್ಥಾನ ಮೀಸಲು. ಅವನ ಬರುವುದನ್ನು ಆತುರದಿಂದ ಭಕ್ತಿಯಿಂದ ಶಾಂತಿಯಿಂದ ನಿರೀಕ್ಷಿಸೋಣ.

**ಸೋಮಿದೇವ** : ಬಸವರಾಜ-ನನ್ನ ಸರ್ವಸ್ವವನ್ನು ನಾನು ಮಂಟಪಕ್ಕೆ ಅರ್ಪಿಸುತ್ತೇನೆ.

**ಶಿವಭಕ್ತ ೧** - ನಾನು ಮರದ ಕಾಯಕ ಮಾಡುತ್ತೇನೆ.

**ಶಿವಭಕ್ತ ೨** - ಇಟ್ಟಿಗೆ ಗಾರೆ ಕೆಲಸ ನನ್ನದಾಗಿರಲಿ

**ನರಸ ಮಾದಣ್ಣ** - ನಾವು ಮಣ್ಣು ಹೋರುತ್ತೇವೆ.

**ಶಿವಭಕ್ತ ೩** - ಮಂಟಪದ ಅಲಂಕರಣ ನನಗಿರಲಿ.

**ಬಸವ** - (ಹಿಗ್ಗಿ) ಧನ್ಯ-ಧನ್ಯ-ಪರಮ ಧನ್ಯ... ನಾಳೆಯೇ ಶುಭ ಕೆಲಸ ಪ್ರಾರಂಭವಾಗಲಿ. ಮಧುವನದ ಪಕ್ಕದ ಹೂದೋಟದಲ್ಲಿ ನಮ್ಮ ಆಧ್ಯಾತ್ಮ ಜೀವನ ವಿಕಸಿಸಲಿ- ಶಿವಧ್ಯಾನ, ಶಿವಜ್ಞಾನ, ಶಿವಚಿಂತನೆಗಳಿಗೆ ಮಂಟಪ ಮಹಾಕ್ಷೇತ್ರ ವಾಗಲಿ..."[೫೧]

ಅಷ್ಟೇ ಅಲ್ಲದೇ ಸನಾತನ ಸಂಸ್ಕೃತಿಯ ವಿರುದ್ಧ ಹುಟ್ಟಿಕೊಂಡ ಪೀಠದಂತೆ ಭಾಸವಾಗುತ್ತದೆ. ಈ ಪೀಠಕ್ಕೆ ಶರಣರೆಲ್ಲರೂ ಕೂಡಿಕೊಂಡು ಕಾಯಕಕ್ಕೆ ಮೊದಲ ಸ್ಥಾನ ನೀಡುವುದರ ಮೂಲಕ ಶೂನ್ಯ ಪೀಠಾಧಿಕಾರಿಯನ್ನಾಗಿ ಪ್ರಭುದೇವರನ್ನು ಆಯ್ಕೆ ಮಾಡುತ್ತಾರೆ. ಆಗ ಸನಾತನವಾದಿಗಳು ಇದರ ವಿರುದ್ಧ ಘೋಷಣೆಗಳನ್ನು ಕೂಗುತ್ತಾರೆ. ಆಗ ಬಸವಣ್ಣ ಪ್ರಗತಿಪರ ವಿಚಾರಗಳ ವಾದವನ್ನು ನಮ್ಮ ಅನುಭಮಂಟಪದ ಮೂಲಕ ತರಬೇಕೆಂಬುದೇ ಶರಣರ ನಿಲುವು. ಹೀಗಾಗಿ ನಾವೆಲ್ಲರೂ ಸೇರಿ ಕಾಯಕನಿಷ್ಠೆಗೆ ಪ್ರಥಮ ಸ್ಥಾನ ನೀಡುವುದರ ಮೂಲಕ ಜ್ಞಾನತತ್ವಕ್ಕೆ ಬೆಲೆ ಕೊಟ್ಟು ಅಲ್ಲಮಪ್ರಭುಗಳಿಗೆ ಆ ಸ್ಥಾನವನ್ನು ಕಲ್ಪಿಸಿದ್ದೇವೆ. ಇದು ನಮಗೆ ಅನಿವಾರ್ಯವಾಗಿದೆ. ಏಕೆಂದರೆ ಅಸ್ತಿತ್ವ ಮಾನವ ಕುಲಕ್ಕೆ ಬೇಕೆಂಬುದೇ ಇದರ ಉದ್ದೇಶ. ಶರಣರೆಲ್ಲರೂ ಅರಮನೆಯ ಬದಲಾಗಿ ಪರ್ಯಾಯ ಪೀಠ ಸ್ಥಾಪಿಸಿ ಅದರ ಮೂಲಕ ಸಮಾಜವನ್ನು ಒಂದುಗೂಡಿಸುತ್ತೇವೆ ಎಂಬ ಭ್ರಮೆ ನಿಮ್ಮದಾಗಿದೆ. ನಾವು ಸಂಪ್ರದಾಯವಾದಿಗಳು ಇದನ್ನು ವಿರೋಧಿಸುತ್ತೇವೆ ಎಂದಾಗ ಬಸವಣ್ಣ ಜಂಗಮಕ್ಕೆ ಜಾತಿಯಿಲ್ಲ. ಜ್ಞಾನಕ್ಕೂ-ಜಾತಿಗೂ

ಸಂಬಂಧವಿಲ್ಲ. ಅವನು ದಾಸಿಯ ಪುತ್ರನಾಗಲೀ, ವೇಶ್ಯೆಯ ಪುತ್ರನಾಗಲೀ ಶಿವದೀಕ್ಷೆ ಪಡೆದ ನಂತರ ಅವನು ಸಾಕ್ಷಾತ್ ಶಿವನೇ ಆಗಿದ್ದಾನೆ. ಇದು ನಮ್ಮ ಶರಣ ಸಿದ್ಧಾಂತ ಎನ್ನುತ್ತಾನೆ. ಆಗ ಮೂಲಭೂತವಾದಿಗಳು ಅಗ್ರಪೀಠದ ಅಧಿಕಾರ ನಮಗೇ ಸಲ್ಲಬೇಕು. ನಾವು ಶುದ್ಧ ಜಂಗಮರು ಎನ್ನುತ್ತಾರೆ. ಹೀಗೆ ಶರಣರು ಹಾಗೂ ಮೂಲಭೂತವಾದಿಗಳ ನಡುವೆ ಸಂಭಾಷಣೆ ನಡೆದಾಗ ನಿಜವಾದ ಜಂಗಮದ ಪರಿಕಲ್ಪನೆ ನಮ್ಮ ಅರಿವಿಗೆ ಬರುತ್ತದೆ.

**"ಬಸವಣ್ಣ** : ಇನ್ನೊಮ್ಮೆ ಹೇಳುತ್ತೇನೆ ಕೇಳಿ. ಜಂಗಮವೆನ್ನುವುದು ಜಾತಿವಾಚಿಯಲ್ಲ, ಜ್ಞಾನವಾಚಿ, ಸಾಮಾಜಿಕವೇ ಇರಲಿ, ಧಾರ್ಮಿಕವೇ ಇರಲಿ, ಎಲ್ಲ ಹಂತಗಳಲ್ಲಿಯೂ ಜಾತಿಯನ್ನು ನಿರಾಕರಿಸಿ ಜ್ಞಾನವನ್ನು ಎತ್ತಿಹಿಡಿಯುವುದು ನಮ್ಮ ಧ್ಯೇಯ.(ಇದನ್ನು ನಾವು ವಿರೋಧಿಸುತ್ತೇವೆ. ಪ್ರತಿಭಟಿಸುತ್ತೇವೆ ಎನ್ನುತ್ತ ಕೆಲವು ಜಂಗಮರು ಅಲ್ಲಲ್ಲಿ ಕುಳಿತುಕೊಳ್ಳುತ್ತಾರೆ).

**ಮಾಚಿದೇವ** : ನೀವು ಹೀಗೆ ಹಟ ಹಿಡಿದರೆ ಏನು ಪ್ರಯೋಜನವಾಗುವುದಿಲ್ಲ. ಪ್ರಭುದೇವ ಕೇವಲ ಜಂಗಮನಲ್ಲ, ಮಹಾಜಂಗಮ, ಅವನಲ್ಲದೆ ಮತ್ತಾರೂ ಈ ಪೀಠಕ್ಕೆ ಅರ್ಹರು?

**ಲಕುಲೀಶ ಪಂಡಿತ** : ಹೀಗೋ, (ಬಸವಣ್ಣನನ್ನು ಉದ್ದೇಶಿಸಿ) ಬಸವಣ್ಣಾ, ಇನ್ನೊಮ್ಮೆ ವಿಚಾರಿಸಿ, ಜಂಗಮ ಪರಿಕಲ್ಪನೆಯನ್ನು ಇಷ್ಟ ದೂರ ಒಯ್ಯುವುದರಿಂದ ದೊಡ್ಡ ಸಮಸ್ಯೆ ಉದ್ಭವಿಸುತ್ತದೆ.

**ಬಸವಣ್ಣ** : ನೀವು ಕಲ್ಲು ಬಡಿಗೆಗಳನ್ನು ಬಳಸಿ ಘಟ್ಟಿವಾಳಯ್ಯನನ್ನು ಮಾರಂಣಾಂತಿಕವಾಗಿ ಹಿಂಸಿಸಿದಾಗಲೇ ಸಮಸ್ಯೆ ಉದ್ಭವವಾಗಿದೆ. ಸತ್ಯದ ದಾರಿಯಲ್ಲಿ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಲು ನನಗೆ ಆಗುವುದಿಲ್ಲ."[೫೨]

ಆಗ ಮೂಲಭೂತವಾದಿಗಳು ಬಸವಣ್ಣನ ಬಗ್ಗೆ ಇಲ್ಲ ಸಲ್ಲದ ಅಪವಾದಗಳನ್ನು ಹೋರಿಸಿ ಇಡೀ ಕಲ್ಯಾಣ ನಿನ್ನಿಂದಲೇ ಹಾಳಾಯಿತು. ಕಾರಣ ನಿನ್ನ ಹೊಸ ರೀತಿಯ ಜಂಗಮದ ಪರಿಕಲ್ಪನೆಯಾಗಿದೆ. ಎಂದಾಗ ಬಸವಣ್ಣನವರು ಇಂತಹ ಹತ್ತು ಕಲ್ಯಾಣಗಳನ್ನು ಕಟ್ಟಬಹುದು. ನನಗೆ ಮುಖ್ಯವಾದದ್ದು ಜನಕಲ್ಯಾಣವೇ ಹೊರತು, ಜಾತಿಜಂಗಮದ ಪರಿಕಲ್ಪನೆಯಲ್ಲ. ಜ್ಞಾನಿಜಂಗಮ ಪೀಠ ಪರಂಪರೆಯನ್ನು ಬೆಳೆಸುವ ಉದ್ದೇಶವೇ ನಮ್ಮ ಶರಣರದ್ದು ಎಂಬ ತತ್ವವನ್ನು ಪ್ರತಿಪಾದಿಸುತ್ತೇನೆ. ಆಗ ಸನತಾನವಾದಿಗಳು ಈ ಪೀಠದ ವಿರುದ್ಧ ಧಿಕ್ಕಾರ ಹಾಕಿ, ಇದರಿಂದ ಸನಾತನ ಸಂಸ್ಕೃತಿ ಹಾಳಾಗುತ್ತದೆಂಬ ವಿಚಾರವನ್ನು ಮುಂದಿಟ್ಟರು.

ಕೆಲವೊಂದು ನಾಟಕಗಳಲ್ಲಿ ಅನುಭವಮಂಟಪಕ್ಕೆ ಸೇರುವ ಮುಂಚೆ ಕೆಲವು ಅರ್ಹತೆಗಳು ಬೇಕು ಎಂಬ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಇದಕ್ಕೆ ನಿದರ್ಶನವೆಂಬಂತೆ ಶೀಲ ಮತ್ತು ನೀಲಾರ ನಡುವೆ ನಡೆಯುವ ಸಂಭಾಷಣೆ ಮುಖ್ಯವಾಗುತ್ತದೆ. ಶೀಲ ಈಗಾಗಲೇ ಬಸವಣ್ಣನ

ತತ್ವ ಮತ್ತು ಸಿದ್ಧಾಂತದ ವಿಚಾರಗಳಿಗೆ ಬದ್ಧನಾಗಿದ್ದಾನೆ. ಈತ ನೀಲಾಳ ಮುಂದೆ ಅನುಭವ ಮಂಟಪದ ವಿಚಾರಗಳನ್ನು ತಿಳಿಸಲಾಗಿ ಆಗ ನೀಲಾಳು ನಾನು ಸಹ ಅನುಭವಮಂಟಪಕ್ಕೆ ಸೇರಬೇಕು ಎಂದುಕೊಂಡಿದ್ದಾನೆ ಎಂದಾಗ ಶೀಲನು ಕಾಯಕ ಮೊದಲ ಸ್ಥಾನವಾಗಬೇಕೆನ್ನುತ್ತಾನೆ.

“**ನೀಲಾ** : ಸೇರಬೇಕೆಂಬ ಬಯಕೆಯೇನೋ ಇದೆ. ಆದರೆ ಹಿಂದೊಮ್ಮೆ ನೀನೆ ಹೇಳಿರಲಿಲ್ಲವೆ. 'ಪತಿಯ ಕುರುಹು ಹೇಳದವರಿಗೆ ಅಲ್ಲಿ ಕುಳ್ಳಿರಲವಾಕಾಶವಿಲ್ಲ'ವೆಂದು.

**ಶೀಲ** : ಅಹುದು, ನಿಜ. ಆದರೆ ಅದೊಂದು ಸಾಮಾನ್ಯ ನಿಯಮ, ಇದಕ್ಕೆ ಅಪವಾದವು ಉಂಟು.

**ನೀಲಾ** : ಹಾಗಾದರೆ ನನ್ನನ್ನಲ್ಲಿಗೆ ಕರೆದುಕೊಂಡು ಹೋಗುವೆಯಾ?

**ಶೀಲ** : ಕರೆದುಕೊಂಡೆನೋ ಹೋಗುವೆ. ಆದರೆ ಮತ್ತೆರಡು ನಿಯಮಗಳಿವೆ?...

**ನೀಲಾ** : ಆ ನಿಯಮಗಳಾವುವು?

**ಶೀಲಾ** : ಜಾತಿಯನ್ನು ಹಿಡಿಯಬಾರದು, ಕಾಯಕವನ್ನು ಬಿಡಬಾರದು”.[೫೩]

ಅಂದರೆ ಮೂಲಸ್ಥಾನ 'ಕಾಯಕ'. ಪ್ರತಿಯೊಬ್ಬರು ಕಾಯಕದಿಂದಲೇ ಬದುಕಬೇಕು. ಕಾಯಕವೇ ಮೂಲ ಹೊರತು ಜಾತಿಯಲ್ಲ. ಅಂದರೆ ಮಾನವೀಯತೆಯೇ ಇದರ ಜೀವಾಳ. 'ಶರಣಸತಿ ಲಿಂಗಪತಿ' ಎಂಬ ತತ್ವದಡಿಯಲ್ಲಿ ಶಿವಶರಣರು ಬದುಕಿದರು. ಹೀಗಾಗಿ ಪತಿಯ ಕುರುಹು ಹೇಳಿದವರಿಗೆ ಅಲ್ಲಿ ಅವಕಾಶವಿದೆ ಎನ್ನುವುದಾದರೆ, ಅನುಭವಮಂಟಪದಲ್ಲಿ ಶಿವಶರಣರೆಲ್ಲರೂ ಕೂಡಿದ್ದಾರೆ. ಮೊಟ್ಟಮೊದಲ ಶಿವಶರಣರ ಚರ್ಚೆಯೆಂದರೆ ದೇವರ ಪೂಜೆಯಲ್ಲಿ ಸರ್ವರ ಹಕ್ಕನ್ನು ಮನ್ನಿಸುವುದು. ಜೊತೆಗೆ ದೇವರ ಪೂಜೆಗಾಗಿ ಸರ್ವರ ಹಕ್ಕನ್ನು ಮನ್ನಿಸುವುದು. ಜೊತೆಗೆ ದೇವರ ಪೂಜೆಗಾಗಿ ದೇವರ ಮಂದಿರಗಳಿಗೆ ಹೋಗುವುದನ್ನು ನಿಲ್ಲಿಸುವುದು. ಎರಡನೆಯದಾಗಿ, ಭಕ್ತ ಬಯಸಿದಾಗಲೆಲ್ಲ ಅವನ ಅನುಕೂಲ ರೀತಿಯಲ್ಲಿ ಪೂಜಿಸಲು ಅವಕಾಶವನ್ನು ಕಲ್ಪಿಸಿಕೊಡುವುದು. ಇಲ್ಲಿ ಸುಧಾರಣೆಯ ರೀತಿಯಲ್ಲಿ ಕಂಡುಬಂದರೆ ಸುಧಾರಣೆಯ ನೆಪದಲ್ಲಿ ಜನಜೀವನವನ್ನು ಕಲುಕಲು ಇಷ್ಟಪಡದ ಶರಣರು ಪ್ರತಿಯೊಬ್ಬ ವ್ಯಕ್ತಿಗೆ ಲಿಂಗಧಾರಣ ಪದ್ಧತಿಯನ್ನು ತರುತ್ತಾರೆ. ದೇವ ಮತ್ತು ಭಕ್ತರ ನಡುವೆ ಲಿಂಗಧಾರಣೆಯ ಮೂಲಕ ನೇರವಾದ ಸಂಬಂಧವನ್ನು ಏರ್ಪಡಿಸಲು ಇಷ್ಟಲಿಂಗಕ್ಕೆ ಅವಕಾಶ ನೀಡುತ್ತಾರೆ. ಚೌಡಯ್ಯ, ಮಾಜಿದೇವ, ಚೆನ್ನಬಸವಣ್ಣ, ಸಿದ್ಧರಾಮಯ್ಯ, ಅಕ್ಕನಾಗಮ್ಮ, ಕಿನ್ನರಿ ಬೊಮ್ಮಯ್ಯ, ಹರಳಯ್ಯ, ಲಕ್ಕಮ್ಮ ಮತ್ತು ಮಧುವರಸನ್ನು ಒಳಗೊಂಡು ಈ ವಿಚಾರವಾಗಿ ಬಸವಣ್ಣನ ಹತ್ತಿರ ಚರ್ಚಿಸಿದಾಗ ಬಸವಣ್ಣ ಧರ್ಮದ ಮೂಲಕವಾಗಿ ಲಿಂಗವನ್ನು ಹೇಗೆ ಮತ್ತು ಯಾರು ಕಟ್ಟಬೇಕು ಎಂಬುದಕ್ಕೆ ಹೀಗೆ ಹೇಳುತ್ತಾರೆ.

“**ಬಸವಣ್ಣ** : ಲಿಂಗ ಮುಟ್ಟದವನೇ ಕೀಳು ಜಾತಿ, ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ ಶಿವಕುಲವಹುದು ತಪ್ಪದು. ಕಬ್ಬುನ ಹೊನ್ನಹುದು ತಪ್ಪದು, ಪರುಷ ಮುಟ್ಟಲೊಡನೆ, ಕೂಡಲಸಂಗಮದೇವನೊಲ್ಲ ಸರ್ವಸಂದೇಹಿಗಳ.

**ಕಿನ್ನರಿ ಬೊಮ್ಮಯ್ಯ** : ಅಣ್ಣನವರ ಈ ಮಾತಿನಲ್ಲಿ ಸರ್ವಮಾನವರಿಗೂ ದೇವಾ ಪೂಜಾ ಸ್ವಾತಂತ್ರ್ಯವಿದೆ.

**ಹರಳಯ್ಯ** : ಈ ನಿರ್ಣಯವನ್ನು ಸಭೆಯ ತಂದು ಅನಂತ ಕಾಲದಿಂದ ದೇವ ಪೂಜೆಯಿಂದ ವಂಚಿಸಲ್ಪಟ್ಟದ್ದಂತಹ ಕೋಟ್ಯಾನುಕೋಟಿ ಜನತೆಯ ಹಕ್ಕುಗಳನ್ನು ಗೌರವಿಸಿದ್ದಕ್ಕಾಗಿ ಅವರೆಲ್ಲರ ಪ್ರತಿನಿಧಿಯಾಗಿ ನಾನು ಅಣ್ಣನವರನ್ನು ಅಭಿನಂದಿಸುತ್ತೇನೆ".[೫೪]

ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುವ ವಿಚಾರಗಳು ಲಿಂಗವನ್ನು ಯಾರಿಂದ ಪಡೆಯಬೇಕು ಎಂಬ ಪ್ರಶ್ನೆಗೆ ಶರಣರು ಅರಿವು, ಆಚಾರ, ಲಿಂಗ ಒಂದಾಗಿರುವವರಿಂದ ಪಡೆಯಬೇಕು, ಅಲ್ಲದೇ ಲಿಂಗಸಂಸ್ಕಾರಕ್ಕೆ ವಿಧಿ-ವಿಧಾನಗಳು ಏನಾದರೂ ಇವೆಯಾ? ಎಂದಾಗ ಚೆನ್ನಬಸವಣ್ಣನವರು ಜಾತಿ, ಕುಲ, ಗೋತ್ರ, ಲಿಂಗ ಮುಂತಾದವುಗಳನ್ನು ನೋಡದೇ ಭಕ್ತನ ಅಂಗಕ್ಕೆ ಲಿಂಗದ ಸಂಬಂಧವನ್ನು ಕಲ್ಪಿಸುವುದು. ಹೀಗೆ ಪಡೆದ ಲಿಂಗವನ್ನು ನಾದ, ಬಿಂದು ಹಾಗೂ ಕಳಯುಕ್ತವಾಗಿ ಪೂಜಿಸಬೇಕು ಎಂಬುದನ್ನು ಗಮನಿಸಿದಾಗ ದೇವಾಲಯಗಳಿಗಿಂತ ಇಷ್ಟಲಿಂಗದ ಪರಿಕಲ್ಪನೆ ಎಷ್ಟು ಮುಖ್ಯ? ಅದರ ಮಹತ್ವ ಎಂಬ ವಿಚಾರಗಳನ್ನು ಶಿವಶರಣರು ಮುಂದಿಡುತ್ತಾರೆ. ಗುರು, ಲಿಂಗ, ಜಂಗಮ ಎನ್ನುವ ತತ್ವದ ಅಡಿಯಲ್ಲಿ ಪ್ರತಿಯೊಬ್ಬ ವ್ಯಕ್ತಿ ನಮ್ಮ ಮುಖವನ್ನು ನೋಡಿಕೊಳ್ಳಲು ಕನ್ನಡಿ ಎಷ್ಟು ಅವಶ್ಯಕವೋ, ನಮ್ಮೊಳಗಿರುವ ದೇವರನ್ನು ಕಾಣಲು ಬೇಕಾಗಿರುವ ಕನ್ನಡಿಯೇ ಇಷ್ಟಲಿಂಗ. ಇಷ್ಟಲಿಂಗವನ್ನು ಯಾರ್‍ಯಾರು ಧರಿಸಬೇಕು ಎಂಬುದಕ್ಕೆ ಶರಣರು ಲಿಂಗವಿದ್ದಲ್ಲಿ ಹೊಲೆಯಿಲ್ಲ ಎನ್ನುತ್ತಾರೆ. ಅಂದರೆ ಇಲ್ಲಿ ಪ್ರತಿಯೊಬ್ಬರು ಲಿಂಗವನ್ನು ಧರಿಸಲೇಬೇಕು. ಇದರಿಂದ ಅನಾಚಾರಗಳು ದೂರವಾಗುತ್ತವೆ. ಈ ಇಷ್ಟಲಿಂಗದ ಪರಿಕಲ್ಪನೆ ಪ್ರತಿಯೊಬ್ಬ ವ್ಯಕ್ತಿಗೆ ನೇರವಾಗಿ ದೇವರ ದರ್ಶನ ಮಾಡಿಸುತ್ತದೆ. ಹೀಗಾಗಿ ಇಷ್ಟಲಿಂಗವೆಂಬುದು ಜ್ಯೋತಿಯಿದ್ದಂತೆ. ಆ ಜ್ಯೋತಿಯ ಮೂಲಕ ಬೆಳಕನ್ನು ಕಾಣುತ್ತಾರೆ. ಹಾಗಾದರೆ ಲಿಂಗವೆನ್ನುವುದು ನಮ್ಮ ಆತ್ಮ ಎನ್ನುವುದಾದರೆ ಬಸವಣ್ಣನವರು ನಮ್ಮ ಆತ್ಮವೇ ದೇವರೆಂದು ಕರೆದಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಆತ್ಮವನ್ನು ಶುದ್ಧಪಡಿಸಿಕೊಳ್ಳಬೇಕಾದರೆ ಇಷ್ಟಲಿಂಗವು ಅವಶ್ಯಕವಾಗಿದೆ. ಹೀಗಾಗಿ ಲಿಂಗವನ್ನು ಧರಿಸಿದ ಅಂಬಿಗರ ಚೌಡಯ್ಯನವರು ಹೀಗೆ ಹೇಳುತ್ತಾರೆ.

"**ಅಂಬಿಗರ ಚೌಡಯ್ಯ** : ಕಟ್ಟಿದ ಲಿಂಗವನ್ನು ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ, ಹೊಟ್ಟೆಯಡಿ ಯಾಗಿ ಬೀಳುವ ಬೊಟ್ಟಿ ಮೂಳನನ್ನು ಮೆಟ್ಟಿದ ಎಡಪಾದ ರಕ್ಷೆಯಿಂದ ಹೊಡೆಯಬೇಕು.

**ಚೆನ್ನಬಸವಣ್ಣ** : ಅಂಗದ ಮೇಲೆ ಲಿಂಗಧರಿಸಿಯೂ ಸ್ಥಾವರ ದೇವಾಲಯಗಳಿಗೆ ಹೋಗುವವರನ್ನು ಚೌಡಯ್ಯನವರಂತೆ ಕಟುವಾಗಿ ತರಾಟೆಗೆ ತೆಗೆದುಕೊಳ್ಳಲು ಯಾರಿಂದಲೂ ಸಾಧ್ಯವಿಲ್ಲ.

ಅಲ್ಲಮಪ್ರಭುಗಳು : ಪೃಥ್ವಿಗೆ ಹುಟ್ಟಿದ ಶಿಲೆ
ಕಲ್ಲು ಕುಟಿಕಂಗೆ ಹುಟ್ಟಿದ ಮೂರುತಿ,
ಮಂತ್ರಕ್ಕೆ ಲಿಂಗವಾಯಿತ್ತಲ್ಲಾ!
ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಕೈ ವಿಡಿವ,
ಅಚ್ಚವ್ರತಗೇಡಿಗಳನೇನಂಬೆ ಗುಹೇಶ್ವರಾ"[೫೫]

ಅಂಬಿಗರ ಚೌಡಯ್ಯ, ಚೆನ್ನಬಸವಣ್ಣ ಅವರ ವಿಚಾರಗಳನ್ನು ಅವಲೋಕನ ಮಾಡಿದಂತಹ ಸಂದರ್ಭದಲ್ಲಿ ಅಂಬಿಗರ ಚೌಡಯ್ಯನವರ ಹೇಳಿಕೆಗೆ ಚೆನ್ನಬಸವಣ್ಣನವರು ಪುಷ್ಠೀ ಕೊಡುವಂತೆ ಕಾಣಿಸದಿದ್ದರೂ ಶರಣರ ಕುಲದ ನಿಯಮಗಳನುಸಾರವಾಗಿ ಲಿಂಗ ತಾರತಮ್ಯವನ್ನು ವಿರೋಧಿಸಿದ್ದಾರೆ. ಬಸವಣ್ಣನವರು ವೀರಶೈವ ಧರ್ಮದ ಮೂಲಕ ಒಂದು ಜಾತಿಗೆ ಸೀಮಿತವಾಗಿದ್ದ ಇಷ್ಟಲಿಂಗವನ್ನು ಸಮಾಜದಲ್ಲಿ ಬದುಕುವ ಜಾತಿಭೇದ ಎನ್ನದೇ ಪ್ರತಿಯೊಬ್ಬ ಮಾನವನು ಇಷ್ಟಲಿಂಗವನ್ನು ಧರಿಸಬೇಕು ಎಂಬ ನಿಲುವನ್ನು ತಾಳಿದ್ದಾನೆ. ಈ ನಿಲುವಿಗೆ ಅವತ್ತಿನ ಮೂಲಭೂತವಾದಿಗಳು ವಿರೋಧ ವ್ಯಕ್ತಪಡಿಸಿ ಇಷ್ಟಲಿಂಗ ಎನ್ನುವ ಪರಿಕಲ್ಪನೆ ಕೇವಲ ಲಿಂಗಾಯತ ಧರ್ಮಕ್ಕೆ ಸೇರಿದ್ದು ಎನ್ನುವ ಚಿಂತನೆಯನ್ನು ಮುಂದಿಟ್ಟಾಗ ಬಸವಣ್ಣನವರು ಸಮಾಜದ ಕನಸು ನನಸಾಗಬೇಕಾದರೆ ಇಷ್ಟಲಿಂಗದ ಪರಿಕಲ್ಪನೆ ಪ್ರತಿಯೊಬ್ಬರಿಗೂ ಅತ್ಯಗತ್ಯ ಎಂಬ ಮಾತನ್ನ ಸ್ಪಷ್ಟಪಡಿಸಿದ್ದಾರೆ. ಆಗಿನ ಕಾಲದ ರಾಜಕೀಯ, ಧಾರ್ಮಿಕ ಚಿಂತನೆಗಳನ್ನೊಳಗೊಂಡ ಮತಾಭಿಮಾನಿಗಳು ಇಷ್ಟಲಿಂಗದ ಪರಿಕಲ್ಪನೆಯಿಂದ ವೀರಶೈವ ಧರ್ಮ ತನ್ನ ಅವನತಿಯನ್ನು ಕಳೆದುಕೊಳ್ಳುತ್ತದೆ ಎಂಬ ಭ್ರಮೆಯಲ್ಲಿ ಮುಳುಗಿದವರಿಗೆ ಶರಣ ಕುಲದವರು ವಿಡಂಬನಾತ್ಮಕವಾಗಿ ಹೇಳಿರುವುದು ಗಮನಾರ್ಹ ಸಂಗತಿ. ಕೆಲವೊಂದು ನಾಟಕಗಳಲ್ಲಿ ನಾಟಕಕಾರರು ಯಾವುದೇ ಮೂಲಭೂತವಾದಕ್ಕೆ ಗಂಟು ಬೀಳದೇ ವಾಸ್ತವಿಕ ಸಂಗತಿಯನ್ನು ಅಭಿವ್ಯಕ್ತಿಸಿರುವುದು ಕಾಣುತ್ತೇವೆ. ಏಕೆಂದರೆ ಶೈವಧರ್ಮದ ನಂತರ ವೀರಶೈವ ಧರ್ಮ ಪುನರ್‌ಸೃಷ್ಟಿಯಾಗುವುದರ ಮೂಲಕ ಜಾತಿರಹಿತ ಸಮಾಜವನ್ನಾಗಿ ಮಾಡುವಲ್ಲಿ ಶ್ರಮಿಸಿರುವುದನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ ಧರ್ಮ ಮಾನವನಿಗಾಗಿ, ಮಾನವರ ಏಳಿಗೆಗಾಗಿ ಪ್ರತಿಯೊಂದು ಧರ್ಮ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುವಂತೆ ಶಿವಶರಣರು 'ಮಾನವ ಧರ್ಮ' ಎಂಬ ಹೆಸರಿನಲ್ಲಿ ವೀರಶೈವ ಎಂಬ ಪರಿಕಲ್ಪನೆ ಕೊಟ್ಟು ಆ ಧರ್ಮದ ಮೂಲಕ ಸಮಾಜದಲ್ಲಿ ನಡೆಯುವ ಅಂಧಕಾರ ವ್ಯವಸ್ಥೆಯ ವಿರುದ್ಧ ಡಾಂಭಿಕತನದ ವಿರುದ್ಧ ತನ್ನ ಚಿಂತನೆಗಳನ್ನು ಮುಂದಿಟ್ಟಿತು. ಬಸವಣ್ಣ ಜಾತಿವ್ಯವಸ್ಥೆಯನ್ನು ನಿರಾಕರಿಸಿ ಧರ್ಮದ ಮೂಲಕ ಒಂದು ಮಾಡಲು ಹೊರಟಾಗ ಅಲ್ಲಿನ ಧರ್ಮಾಭಿಮಾನಿಗಳು ವಿರೋಧ ವ್ಯಕ್ತಪಡಿಸಿರುವ ಅಂಶಗಳು ಈ ನಾಟಕದಲ್ಲಿ ಹೀಗೆ ವ್ಯಕ್ತಗೊಂಡಿದೆ.

"ಶೆಟ್ಟಿ : ಮಹಾಪ್ರಭು, ಮಹಾಮಂತ್ರಿಗಳೇ ಅಪರಾಧಿಗಳನ್ನು ಕುರಿತು ಕ್ಷಮಾಯಾಚನೆ ಮಾಡುವುದೆಂದರೆ ಇದು ನಿಜವಾಗಿ ರಾಜದ್ರೋಹವೇ ಸರಿ. ಮೇಲಾಗಿ

ವೀರಶೈವ ತತ್ವಕ್ಕೂ ವಿರೋಧವೆಂಬುದನ್ನು ಅಚ್ಚ ಮತ್ತು ಉಚ್ಚ ವೀರಶೈವನಾದ ನಾನು ಒತ್ತಿ ಒತ್ತಿ ಹೇಳುತ್ತೇನೆ.

**ಬಸವಣ್ಣ** : ಶೆಟ್ಟರೇ ಏನು ಹೇಳಿದಿರಿ? ವೀರಶೈವ ತತ್ವ, ಅದಕ್ಕೆ ವಿರೋಧವೇ ಅದು ನನ್ನಿಂದ?

**ಶೆಟ್ಟಿ** : ಹೌದು ತಮ್ಮಿಂದ.

**ಬಸವಣ್ಣ** : ಅಂದರೆ ಶೆಟ್ಟರೇ. ವೀರಶೈವ ತತ್ವದ ಉಪದೇಶ ಮಾಡಲು ಬಂದಿರುವಿರಾ? ಶೆಟ್ಟರೇ ನೀವು ವೀರಶೈವರೇ? ನಿಮ್ಮಲ್ಲಿ ಆ ಗುಣವಿದೆಯೇ? ನಿತ್ಯ ಅಸಂಖ್ಯಾತ ಬಿಲ್ವದಳಗಳನ್ನು ಹಾಳು ಮಾಡಿ, ಮೈ ತುಂಬಾ ಭಸ್ಮ ಲೇಪಿಸಿಕೊಂಡು ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿಕೊಂಡು, ಶಿವ ಶಿವ ಎನ್ನುತ್ತಾ, ಭಕ್ತಿಯಿಲ್ಲದೆ ಡಾಂಭಿಕತನದ ನಡತೆಯಿಂದ ಮೇಲೆ ಮೇಲೆ ಜಪ ಮಾಡುವವ ರಂತೆ ತೋರಿಸಿ ಅಂತರಂಗದಲ್ಲಿ ಪರಧನ ಪರಸ್ತ್ರೀಯರನ್ನು ಜಪಿಸುತ್ತಾ ತಿರುಗುತ್ತಿರುವ ನಿಮಗೆ ವೀರಶೈವರೆಂದು ಹೇಳಿಕೊಳ್ಳುವುದಕ್ಕಾದರೂ ನಾಚಿಕೆಯಾಗುವುದಿಲ್ಲವೇ?"[೫೭]

ಎಂದು ಬಸವಣ್ಣನವರು ನಿಮ್ಮಂಥವರಿಂದಲೇ ನಿಜವಾದ ವೀರಶೈವರು ಇವತ್ತು ನಾಚಿಕೆಪಡುವಂತ ಸಂದರ್ಭವೊದಗಿದೆ. ನೀವು ಅಥವಾ ನಿಮ್ಮ ಮೂಲಭೂತವಾದಕ್ಕೆ ವೀರಶೈವ ಶರಣತತ್ವ ಎಂಬ ಅರಿವು ನಿಮಗಿದೆಯೇ? ಎನ್ನುವ ಪ್ರಶ್ನೆ ಮಾಡುವುದರ ಮೂಲಕ ಬಸವಣ್ಣನವರು ನಿಜವಾದ ಶಿವಶರಣರಿಗೆ ಕಾಯಕವೇ ಹೊರತು ಜಾತಿಯಲ್ಲ. ಪರಧನ, ಪರಸತಿ ಮತ್ತು ಪರದೈವನೊಲ್ಲೆನೆಂಬ ವಿಚಾರ ವೀರಶೈವ ಧರ್ಮದ ತತ್ವ. ಇಂತಹ ತತ್ವಗಳನ್ನು ಮರೆತ ನೀವು ವೀರಶೈವರೆಂದು, ಪಂಡಿತರೆಂದು ಹಾಗೂ ಬ್ರಾಹ್ಮಣರೆಂದು ಹೇಳಿಕೊಳ್ಳುವುದರ ಮೂಲಕ ಮತಾಂಧತೆಯನ್ನು ಉಂಟು ಮಾಡುವುದಕ್ಕೆ ನಾಚಿಕೆಯಾಗುವುದಿಲ್ಲವೇ? ಎನ್ನುವ ವಿಚಾರವನ್ನು ಮುಂದಿಟ್ಟಿದ್ದಾರೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಬಸವಣ್ಣನವರ ಸಾಮಾಜಿಕ ಕಾಳಜಿ, ಇಷ್ಟಲಿಂಗದ ಮೂಲಕ ನಿಜವಾದ ವೀರಶೈವ ಧರ್ಮದ ತತ್ವಗಳ ಅರಿವನ್ನು ಮೂಡಿಸಿ ಜನಪರ ಜೀವಪರ ಚಿಂತನೆಗಳಿಗೆ ದಾರಿ ಮಾಡಿಕೊಟ್ಟಿದ್ದಾರೆ. ನಿಜವಾದ ವೀರಶೈವ ಧರ್ಮವೆಂದರೆ ಶರಣಧರ್ಮ, ಮಾನವಧರ್ಮ ಎಂಬುದಾಗಿ ಹೇಳಿರುವ ಅಂಶಗಳು ಇಲ್ಲಿ ಗೋಚರವಾಗುತ್ತವೆ. ಅಂದರೆ ಮಾನವ ಮತ್ತು ಶರಣರ ನಡುವೆ ಇರುವ ಸಾಮ್ಯತೆಯನ್ನು ಪ್ರತಿಪಾದಿಸುವುದೇ ವೀರಶೈವ ಧರ್ಮವೇ ಹೊರತು ಅದು ಜಾತಿ-ಭೇದ ಎಂಬುದನ್ನು ಒತ್ತಿ ಹೇಳುವ ಧರ್ಮವಲ್ಲ ಎಂಬ ವಿಚಾರಗಳು ಸ್ಪಷ್ಟವಾಗುತ್ತವೆ.

ಬಸವಾದಿ ಪ್ರಮಥರು ತಾಳಿರುವ ನಿಲುವು ಗಮನಾರ್ಹವಾದುದು. ಏಕೆಂದರೆ ಅವತ್ತಿನ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ಅರಿತುಕೊಂಡು ಅಂಧಕಾರ ಸಮಾಜವನ್ನು ಹೊಡೆದೋಡಿಸಿ

ಭ್ರಾತೃತ್ವ ಸಮಾಜವನ್ನಾಗಿಸುವಲ್ಲಿ ಪಟ್ಟ ಶ್ರಮ ಅಪರಿಮಿತವಾದುದು. ಏಕೆಂದರೆ ಆ ಕಾಲದಲ್ಲಿ ನಡೆದ ಸಮಾಜೋ-ಧಾರ್ಮಿಕ ಆಂದೋಲನ ಚಳುವಳಿ ಎಂಬ ಒಂದು ರೂಪಕ್ಕೆ ಅರ್ಥವನ್ನು ಕೊಟ್ಟು ಜಾತಿ ಸಹಿತ, ಸಮಾಜ, ಧರ್ಮ ಅಂಧಾಭಿಮಾನ ಮುಂತಾದವುಗಳಿಗೆ ವೈಚಾರಿಕ ಮತ್ತು ವೈಜ್ಞಾನಿಕ ತಳಹದಿಯನ್ನು ಹಾಕಬೇಕೆಂಬ ಶರಣರ ಬೌದ್ಧಿಕ ವಿಚಾರಗಳು ಆ ಕಾಲದ ಸಂದರ್ಭವನ್ನು ಎತ್ತಿಹಿಡಿದವು. ಯಾವ ಧರ್ಮಗಳು ಸಮಾಜದಲ್ಲಿ ಬಿರುಕು ಬಿಡುವಂತೆ ಮಾಡಿದ್ದವೋ ಅಂತಹ ಧರ್ಮದ ಕಟ್ಟುಪಾಡು ಸಂಪ್ರದಾಯ ಆಚಾರ-ವಿಚಾರಗಳ ವಿರುದ್ಧ ಮಾನವೀಯ ಧರ್ಮದ ಮೂಲಕ ಪ್ರಖರಗೊಳಿಸಿದ್ದಾರೆ. ಇಲ್ಲಿ ಇಂದು ಆಧುನಿಕ ಕಾಲದ ವೀರಶೈವ ಅಭಿಮಾನಿಗಳು ಬಸವಣ್ಣನ ಮಾನವೀಯ ಧರ್ಮವನ್ನು ಒಂದು ಜಾತಿಗೆ ಸೀಮಿತ ಪಡಿಸುವುದರ ಮೂಲಕ ಆ ಧರ್ಮದ ಕಿರೀಟಕ್ಕೆ ಕಳಂಕ ತರುವ ವಿಚಾರಗಳು ತಲೆಯೆತ್ತಿರಬೇಕಾದರೆ ಅಂದಿನ ಕಾಲದ ಸಂಪ್ರದಾಯಸ್ಥ ಮೂಲಭೂತವಾದಿಗಳು ಬಸವಣ್ಣನ ಸಮಾಜನಿಷ್ಠೆಗೆ ಯಾವ ರೀತಿಯಾಗಿ ಅಡ್ಡಿಪಡಿಸಿವೆ ಎಂಬ ಅಂಶಗಳು ಕೂಡ ಈ ನಾಟಕಗಳಲ್ಲಿ ವ್ಯಕ್ತವಾಗಿವೆ. ಅಂದರೆ ಶ್ರೇಷ್ಟ ಕುಲದ ಬ್ರಾಹ್ಮಣರ ಜಾತಿಯಲ್ಲಿ ಹುಟ್ಟಿದ ಬಸವಣ್ಣ ಅದೇ ಜಾತಿಯ ನಂಬಿಕೆಗಳ ವಿರುದ್ಧ ಬಾಲ್ಯದಲ್ಲಿಯೇ ಸಿಡಿದೆದ್ದು ತನ್ನ ಜೀವಿತಾವಧಿಯಲ್ಲಿ ಶ್ರೇಷ್ಠ ಕನಿಷ್ಠ ಎಂಬ ತಾರತಮ್ಯವನ್ನು ಹೋಗಲಾಡಿಸುವುದು. ಅಷ್ಟೇ ಅಲ್ಲದೇ ೪ ವರ್ಗಗಳನ್ನು ಒಂದುಗೂಡಿಸಿ ಎಲ್ಲರೂ ಸರಿಸಮಾನರು ಅವರವರ ಕಾಯಕವೇ ಮುಖ್ಯ ಎಂಬ ವಿಚಾರವನ್ನು ಬಿತ್ತಿದರು. ಅಲ್ಲದೇ ದೇವಾಲಯಗಳು, ಮಠಮಾನ್ಯಗಳು, ಲಿಂಗಪೂಜೆ ಹೀಗೆ ಇನ್ನಿತರ ಅಂಶಗಳು ಶ್ರೇಷ್ಟ ಕುಲಕ್ಕೆ ಸೀಮಿತವಾಗಿದ್ದ ಕಾಲದಲ್ಲಿ ಇವೆಲ್ಲವೂ ಸರ್ವರ ಸಮಪಾಲು ಆಗಲೇಬೇಕೆಂಬ ವಿಚಾರದೊಂದಿಗೆ ಬಸವಣ್ಣನವರು ನಿಕೃಷ್ಣ ಜನಗಳಿಗೆ ಇವುಗಳ ವಾಸ್ತವಿಕ ದರ್ಶನವನ್ನು ಮೂಡಿಸುವುದರ ಮೂಲಕ ಸಮಾನತೆ ಸಾರಿದ್ದಾರೆ. ಮಹಿಳೆ, ಪುರುಷ ಎಂಬ ಲಿಂಗಭೇದವನ್ನು ಮರೆತು ಅವರಿಗೂ ಸರಿಸಮಾನವಾದ ಅವಕಾಶಗಳನ್ನು ಕಲ್ಪಿಸಿ ಇಷ್ಟಲಿಂಗ ಧಾರಣೆಯನ್ನು ಪ್ರತಿಯೊಬ್ಬರು ಧರಿಸಬಹುದು, ಪೂಜಿಸಬಹುದು ಎಂಬ ಅಂಶಗಳನ್ನು ಪ್ರತಿಪಾದಿಸಿದ್ದಾರೆ.

ಒಟ್ಟಾರೆಯಾಗಿ ಬಸವಣ್ಣನ ನೈತಿಕತೆ ಎಂಟುನೂರು ವರ್ಷಗಳ ಹಿಂದೆ ಆಧುನಿಕ ವೈಜ್ಞಾನಿಕ ವಿಚಾರಗಳು ಆ ಕಾಲಕ್ಕೆ ಬಸವಣ್ಣನಲ್ಲಿ ಇದ್ದವು ಎಂಬ ಹೇಳಿಕೆಗಳನ್ನು ಈ ನಾಟಕಗಳಲ್ಲಿ ಕಾಣಬಹುದಾಗಿದೆ.

### ೩.೩. ಆರ್ಥಿಕತೆಗೆ ಸಂಬಂಧಿಸಿ ಗ್ರಹಿಕೆಗಳು

ಸಾಮಾಜಿಕ ವ್ಯವಸ್ಥೆಯನ್ನು ಗಮನಿಸಿದಾಗ ಮಾನವನು ತನ್ನ ಬದುಕು ಹಸನ ಮಾಡಿಕೊಳ್ಳಲು ಅನೇಕ ಕೆಲಸ ಕಾರ್ಯಗಳನ್ನು ಮಾಡಲು ಆರಂಭಿಸಿದ. ಆತನ ಕೆಲಸ ಕಾರ್ಯಗಳನ್ನು ಆಧರಿಸಿಯೇ ವಿವಿಧ ವೃತ್ತಿಗಳು ರೂಪುಗೊಂಡವು. ಕಾಲಾನಂತರದಲ್ಲಿ ಈ ವೃತ್ತಿಯನ್ನು ಆಧರಿಸಿಯೇ ಜಾತಿ ಪದ್ಧತಿಯು ರೂಪುಗೊಂಡಂತಿದೆ. ಸಮಾಜದಲ್ಲಿ ಮನುಷ್ಯನಿಗೆ ಒಂದು ಅಂತಸ್ತು ನಿರ್ಮಾಣವಾಗುವುದು ಆತನ ಆರ್ಥಿಕ ಸ್ಥಿತಿಗತಿಗಳಿಂದ ಎಂದು ಹೇಳಬಹುದು.

ಹಿರಿಯರು ಆದ್ದರಿಂದಲೇ ಬಹು ಹಿಂದೆಯೇ "ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು" ಎಂದು ಹೇಳಿದ್ದಾರೆ. ಪ್ರತಿಯೊಬ್ಬರೂ ತಮ್ಮ ಜೀವನ ನಿರ್ವಹಣೆಗಾಗಿ ಯಾವುದಾದರೂ ಒಂದು ಕಾರ್ಯವನ್ನು ಮಾಡಬೇಕು ಎನ್ನುವುದು ಈ ಮೇಲಿನ ಮಾತಿನ ಧ್ವನಿಯಾಗಿದೆ. ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣಾಶ್ರಮ ಪದ್ಧತಿಯಂತೆ ಬೇರೆ ಬೇರೆ ಸಮುದಾಯ ತಮ್ಮ ಜಾತಿಗೆ ಅನುಸಾರವಾಗಿ ಉದ್ಯೋಗವನ್ನು ಮಾಡುತ್ತಿದ್ದವು. ಈ ವ್ಯವಸ್ಥೆಯು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಮುಂದುವರೆದಿರುವುದು ಕಾಣಸಿಗುತ್ತದೆ. ಗ್ರಾಮೀಣ ಪರಿಸರದಲ್ಲಿ ಕೃಷಿ ಪ್ರಮುಖ ಉದ್ಯೋಗವಾದರೆ, ಆ ಕೃಷಿಕರಿಗೆ ನೆರವಾಗಲು ಇತರ ಸೇವಾ ವರ್ಗಗಳು ಇದ್ದವು. ಅವುಗಳೆಂದರೆ ಬಡಿಗ, ಕಂಬಾರ, ಕುಂಬಾರ, ಚಮ್ಮಾರ, ನೇಕಾರ ಹೀಗೆ ಮುಂತಾದ ಕುಲಕಸುಬುಗಳೊಂದಿಗೆ ವ್ಯಾಪಾರಿ ವರ್ಗಗಳೂ ಇದ್ದವು. ಆದರೆ ಪಟ್ಟಣದ ಪರಿಸ್ಥಿತಿ ಇದಕ್ಕಿಂತಲೂ ಭಿನ್ನವಾಗಿದೆ. ಪಟ್ಟಣದಲ್ಲಿ ಕೃಷಿಗಿಂತ ವ್ಯಾಪಾರ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಇಲ್ಲಿ ದೇಶ-ವಿದೇಶಗಳಿಂದಲೂ ವ್ಯಾಪಾರಿಗಳು ಬಂದು ವ್ಯಾಪಾರ ವಹಿವಾಟುಗಳನ್ನು ನಡೆಸುತ್ತಿದ್ದರು. ಈ ವ್ಯಾಪಾರಿ ವರ್ಗವು ಆ ರಾಜ್ಯದ ಅಭಿವೃದ್ಧಿಯನ್ನು ನಿರ್ಧರಿಸುವಲ್ಲಿ ಯಶಸ್ವಿಯಾಗಿದ್ದವು.

ಈ ಹಿನ್ನೆಲೆಯಲ್ಲಿ ಇದನ್ನೇ ಮುಖ್ಯವಾಗಿಟ್ಟುಕೊಂಡು ಕಾಲಕಾಲಕ್ಕೆ ನಡೆದಿರುವ ಈ ವ್ಯಾಪಾರಿ ವೃತ್ತಿಗಳು ಅಂದಿನ ಕಾಲದ ವ್ಯವಸ್ಥೆಯ ಅನುಗುಣವಾಗಿ ನಡೆದಿರುವುದು ಒಂದು ಕಡೆಯಾದರೆ, ಇನ್ನೊಂದು ಕಡೆ ತಮ್ಮ ಕೇಂದ್ರ, ನಾಡು, ರಾಜ್ಯ ಹೀಗೆ ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳನ್ನು ಆರ್ಥಿಕತೆಯಿಂದ ಬಿಡುಗಡೆಗೊಳಿಸಿ ಸರ್ವರಿಗೂ ಏಳಿಗೆಯನ್ನು ಬಯಸುವುದು - ನಡೆದಿರುವ ಪ್ರಯತ್ನ ಶ್ಲಾಘನೀಯವಾಗಿದೆ. ನಾವು ಇಲ್ಲಿ ಪ್ರಧಾನವಾಗಿ ಚರ್ಚೆ ಮಾಡುವ ಕಾಲವೆಂದರೆ ೧೨ನೇ ಶತಮಾನ. ಈ ಶತಮಾನದ ಪೂರ್ವದಿಂದಲೂ ಬ್ರಾಹ್ಮಣ. ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುರ್ವರ್ಣಗಳು ಹುಟ್ಟಿಕೊಂಡಿದ್ದವು. ನಾವು ಇತಿಹಾಸವನ್ನು ಗಮನಿಸಿದಾಗ ದ್ರಾವಿಡರ ನಂತರ ಈ ದೇಶಕ್ಕೆ ಆರ್ಯರು ಬಂದರು. ನಂತರದಲ್ಲಿ ಆರ್ಯರು ದೇವಾಲಯಗಳು, ಧರ್ಮ ಮತ್ತು ಉದ್ಯೋಗಕ್ಕಾಗಿ ವ್ಯಾಪಾರಗಳನ್ನು ಕೈಗೊಂಡರು. ಉದ್ದೇಶ ವ್ಯಾಪಾರದಿಂದ ಒಂದು ಕಡೆ ದೇಶದ ಅಭಿವೃದ್ಧಿಯನ್ನು ಮಾಡುತ್ತೇನೆ ಎಂದಾದರೂ, ಮತ್ತೊಂದೆಡೆಯಲ್ಲಿ ಪುರೋಹಿತಶಾಹಿಯ ಅಭಿವೃದ್ಧಿಯಲ್ಲಿ ಮಾತ್ರ ಗಣನೀಯವಾದ ಸೇವೆ ಸಲ್ಲಿಸಲು ಮುಂದಾದರು.

ಇಂತಹ ಸಂದರ್ಭದಲ್ಲಿ ಮಧ್ಯಮ ಮತ್ತು ಕೆಳಗಿನ ಜಾತಿಯವರು ತಮ್ಮ ಕಾಯಕದ ಅನುಸಾರವಾಗಿ ಬದುಕಲು ನಿರತರಾಗಿದ್ದರು. ಇಂತಹ ಒಂದು ಸಂದರ್ಭವನ್ನು ಆಲೋಚಿಸಿ ಕೂಲಂಕುಷವಾಗಿ ಚರ್ಚಿಸಿ ಸರ್ವ ಜನಾಂಗಕ್ಕೂ ಬಿಗಿದಪ್ಪಿರುವ ಆರ್ಥಿಕ ದುರ್ಬಲತೆಯನ್ನು ಹೋಗಲಾಡಿಸಿ ಸಮಾನತೆಯನ್ನು ತರುವಲ್ಲಿ ಶಿವಶರಣರು ಪಟ್ಟ ಪಾಡು ಆಗಣನೀಯವಾದುದು.

ಬ್ರಾಹ್ಮಣ ಬ್ರಹ್ಮನ ತಲೆಯಲ್ಲಿ ಹುಟ್ಟಿದವ ಎಂಬ ಇತಿಹಾಸದ ಕುರುಹಕ್ಕೆ ಆ ವರ್ಗವು ದೇವಾಲಯಗಳು ಪೂಜೆ ಪುನಸ್ಕಾರಗಳೊಂದಿಗೆ ಸೇವೆ ಸಲ್ಲಿಸುವುದರ ಮೂಲಕ ಅದೇ ನಮ್ಮ

ವೃತ್ತಿ ಕಾಯಕ ಎಂದರಿತು ವ್ಯಾಪಾರದ ವಹಿವಾಟಕ್ಕೆ ತಮ್ಮನ್ನು ಅಣಿಗೊಳಿಸಿದ್ದರು. ಈ ವರ್ಗವನ್ನು ಹೊರತುಪಡಿಸಿ ಉಳಿದ ಮೂರು ವರ್ಗಗಳು ತಮ್ಮ ಕಾಯಕದಿಂದ ದುಡಿದ ಶ್ರಮದ ಮೂಲಕ ತಮ್ಮ ಫಸಲಿಗೆ ಇವರಿಂದ ಯಾವುದೋ ಒಂದು ರೂಪದಲ್ಲಿ ಹಣವನ್ನು ತೆಗೆದುಕೊಳ್ಳುತ್ತಿದ್ದರು. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಬ್ರಾಹ್ಮಣರ ಜಾತಿಯಲ್ಲಿ ಹುಟ್ಟಿದ ಬಸವಣ್ಣ ೧೨ನೇ ಶತಮಾನದ ಆ ಕಾಲದ ಇಡೀ ದೇಶವೇ ಆರ್ಥಿಕ ಅಭದ್ರತೆಯಿಂದ ಮುಕ್ತಿ ಹೊಂದಬೇಕು. ಇದರಿಂದ ಎಲ್ಲರೂ ಬಿಡುಗಡೆ ಹೊಂದಬೇಕು ಎಂಬ ಚಿಂತನೆಯೊಂದಿಗೆ ಶಿವಶರಣರ ಆದಿಯಾಗಿ ಆ ಕಾಲಕ್ಕೆ ಪ್ರಮುಖ ಸ್ಥಾನವನ್ನು ಕಲ್ಪಿಸಿದರು. ಕಾರಣವೆಂದರೆ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಒಬ್ಬ ಮಂತ್ರಿಯಾಗಿ ತದನಂತರ ಅರ್ಥಮಂತ್ರಿಯಾಗಿ ರಾಜಕೀಯ ಜೊತೆ ಜೊತೆಗೆ ಆರ್ಥಿಕ ದುರ್ಬಲತೆಯನ್ನು ಕಿತ್ತೊಗೆದು ಸಬಲತೆ ಮತ್ತು ಸಫಲತೆಯನ್ನು ಕಾಣುವಲ್ಲಿ ಮಾಡಿದ ಪ್ರಯತ್ನ ಆಧುನಿಕ ರಾಜಕೀಯ ವ್ಯವಸ್ಥೆಗೆ ಹಿಡಿದ ಕೈಗನ್ನಡಿಯಾಗಿದೆ.

ಇಂತಹ ವಿಚಾರಗಳನ್ನು ಆಧುನಿಕ ನಾಟಕಗಳು ಮತ್ತು ಆಧುನಿಕ ನಾಟಕಕಾರರು ತಮ್ಮ ಕೃತಿಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಬಸವಣ್ಣನ ವಾಸ್ತವಿಕ ಮತ್ತು ನೈತಿಕತೆಯ ಆಧಾರದ ಮೇಲೆ ಅವನು ಮಾಡಿರುವ ನಾಡಿನ, ದೇಶದ ಮತ್ತು ಸಾಮಾನ್ಯ ಜನರ ಅಭಿವೃದ್ಧಿಯನ್ನು ಯಾವ ರೀತಿಯಾಗಿ ಶ್ರಮಿಸಿದ ಎನ್ನುವ ಚಿಂತನೆಯನ್ನು ಮುಂದಿಡುತ್ತಾರೆ.

ಬಸವಣ್ಣನವರು ಕೂಡಲಸಂಗಮಕ್ಕೆ ವಿದ್ಯೆ ಕಲಿಯಲು ಬಂದಾಗ ಅಲ್ಲಿರುವ ಮಠ-ಮಾನ್ಯಗಳು ಬಿತ್ತುತ್ತಿರುವ ಜಾತಿ ಸಂಸ್ಕೃತಿಯನ್ನು ವಿರೋಧಿಸಿ ತನ್ನ ಆದ್ಯ ಗುರು ಜಾತವೇದ ಮುನಿಗಳಿಂದ ಆರ್ಶೀವಾದ ಪಡೆದು ಅವರು ಹೇಳಿದಂತೆ ಬಸವಣ್ಣ ಕಲ್ಯಾಣಕ್ಕೆ ಬರುತ್ತಾರೆ. ಈ ಮುಂಚೆ ಮಠ-ಮಾನ್ಯ ಸಂಸ್ಕೃತಿಗಳ ವಿರುದ್ಧ ಸಿಡಿದೆದ್ದ ಬಸವಣ್ಣನಿಗೆ ಜಾತವೇದ ಮುನಿಗಳು ನಿನ್ನ ನಿಷ್ಠೆ, ಪ್ರಾಮಾಣಿಕತೆ ಅದಕ್ಕಿಂತಲೂ ಮಿಗಿಲಾಗಿ ನಿನ್ನಲ್ಲಿ ತಳವೂರಿರುವ ಪ್ರಶ್ನೆ ಮಾಡಿರುವ ತಾರ್ಕಿಕ ಮನೋಭಾವನದ ಹಿಂದೆ ಜಗತ್ತಿನ ಉದ್ಧಾರವಿದೆ ಎಂಬ ಅಂಶ ನನಗೆ ತಿಳಿದುಬಂದಿದೆ. ಈ ಕಾರಣಕ್ಕಾಗಿ ಒಂದು ಸಣ್ಣ ಪುಟ್ಟ ಹಳ್ಳಿಯಲ್ಲಿರುವುದಕ್ಕಿಂತ ದೊಡ್ಡ ದೊಡ್ಡ ಪಟ್ಟಣಗಳಲ್ಲಿರುವ ಅಂಧಕಾರ ವ್ಯವಸ್ಥೆಯನ್ನು ಹೊಡೆದೋಡಿಸುತ್ತೀಯ ಎಂಬ ವಿಚಾರ ನನಗೆ ತಿಳಿದು ಬಂದಿದೆ. ಈ ಕಾರಣಕ್ಕಾಗಿ ನಿಮ್ಮ ಮಾವನವರಾದ ಬಲದೇವರು ಈಗಾಗಲೇ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದಾರೆ ದಯವಿಟ್ಟು ಹೋಗು ಎಂದು ತಿಳಿಸಿದಾಗ ಬಸವಣ್ಣನವರು ಮಂಗಳವೇಡೆಗೆ ಬಂದು ಬಿಜ್ಜಳನ ಆಸ್ಥಾನದಲ್ಲಿ ಕರಣಿಕನಾಗಿ ಸೇರಿಕೊಳ್ಳುತ್ತಾನೆ.

ಬಿಜ್ಜಳ, ಬಲದೇವ ಮತ್ತು ಬಸವಣ್ಣ ಈ ಮುಂಚೆ ಇರುವ ಕರಣಿಕರ ನಡುವೆ ಲೆಕ್ಕದ ಪ್ರಸ್ತಾಪ ಬಂದಾಗ ಬಿಜ್ಜಳನು ಕರಣಿಕರನ್ನು ಕರೆಯಿಸಿ ಲೆಕ್ಕ ಕೇಳಲು ಮುಂದಾದಾಗ ಮುಖ್ಯ ಕರಣಿಕರು ತೊದಲುವುದನ್ನು ಕಂಡು ಆಶ್ಚರ್ಯಪಟ್ಟು ಬಿಜ್ಜಳನಿಗೆ ಅದು ಯಾಕೋ ಸಂಶಯ ಬಂದಾಗ ಬಲದೇವರು ನಾಲ್ಕು ದಿನಗಳಿಂದ ಕರಣಿಕರೆಲ್ಲರೂ ಸೇರಿ ಲೆಕ್ಕ ಮಾಡುವಾಗ

ವಿಫಲರಾಗಿದ್ದಾರೆ. ಈ ಸ್ವಲ್ಪ ದಿನಗಳ ಅವಕಾಶಕೊಟ್ಟರೆ ಎಲ್ಲಾ ಲೆಕ್ಕಪತ್ರಗಳನ್ನು ಸರಿಯಾಗಿ ಒಪ್ಪಿಸುವೆ ಎಂದು ಹೇಳುತ್ತಿದ್ದಂತೆಯೇ ಬಲದೇವನ ಪಕ್ಕದಲ್ಲಿಯೇ ಇದ್ದ ಬಸವಣ್ಣನು ತನ್ನ ಬೌದ್ಧಿಕತೆಯಿಂದ ತಕ್ಷಣವೇ ಆ ಲೆಕ್ಕ ಪತ್ರಗಳನ್ನು ನೋಡಿ ಸರಿಪಡಿಸುತ್ತಾನೆ. ಆಗ ಬಿಜ್ಜಳನು ಬಸವಣ್ಣನ ತೇಜಸ್ಸು ಜ್ಞಾನ ಜೊತೆಗೆ ಅವನ ವಿಚಾರಗಳನ್ನು ಅವಲೋಕಿಸಿ ಈ ಯುವಕ ಯಾರು? ಎಂಬುದಾಗಿ ಪ್ರಶ್ನಿಸಿದಾಗ ಬಲದೇವ ಆತನ ಚರಿತ್ರೆಯನ್ನೆಲ್ಲ ಹೇಳಿ ತನ್ನ ಸೋದರಳಿಯ ಎಂತಲೂ ಹೇಳುತ್ತಾನೆ. ಇದನ್ನು ಗಮನಿಸಿದ ಬಿಜ್ಜಳನು ಬಸವಣ್ಣನವರನ್ನು ತಮ್ಮ ಭಂಡಾರದ ಮುಖ್ಯ ಕರಣಿಕನನ್ನಾಗಿ ನೇಮಿಸಿಕೊಳ್ಳಲು ಸಿದ್ಧನಾಗುತ್ತಾನೆ. ಮುಂದುವರೆದು ಬಿಜ್ಜಳ ಬಸವಣ್ಣನನ್ನು ಕೇಳಲಾಗಿ ಆಗ ವಿಶ್ವಾಸ ದೊಡ್ಡದು ಸೇವೆ ಸಲ್ಲಿಸಲು ಸಿದ್ಧನಿದ್ದೇನೆ. ಅದು ನನ್ನ ಕಾಯಕ ಎಂಬುದಾಗಿ ಉತ್ತರ ಕೊಡುತ್ತಾನೆ. 'ಕಾಯಕ' ಎಂಬ ಅರ್ಥವೇ ಗೊತ್ತಿರದ ಅರಸ ಬಿಜ್ಜಳನಿಗೆ ಏನೂ ಗೋಚರಿಸದಂತಾಗಿ ಆಶ್ಚರ್ಯನಾಗುತ್ತಾನೆ. ಆಗ ಬಸವಣ್ಣನವರು ಈ ರೀತಿಯಾಗಿ ಹೇಳುತ್ತಾರೆ.

"ಬಸವಣ್ಣ : ಪ್ರಭ; ಕಾಯಕ್ಕೆ ಸಂಬಂಧಿಸಿದ ಕಾರ್ಯವೇ ಕಾಯಕ. ಅದು ಭೌತಿಕ ಅಥವಾ ಬೌದ್ಧಿಕ ಪರಿಶ್ರಮ ಆಗಿರಬಹುದು. 'ಹೊಟ್ಟೆ ಇದ್ದವನು ಉಣ್ಣುವುದು, ನೆತ್ತಿ ಇದ್ದವನು ಓದುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ರಟ್ಟೆ ಇದ್ದವನು ದುಡಿಯುವುದು'. ಕಾಯಕದಲ್ಲಿ ಮೇಲು-ಕೀಳು, ಸ್ತ್ರೀ-ಪುರುಷ, ಆಳು-ಅರಸ ಎನ್ನುವ ಅಂತರವಿಲ್ಲ. ಜಾತಿ ಮತಗಳ ಹಂಗಿಲ್ಲ. ಪ್ರತಿಯೊಬ್ಬರೂ ಜೀವನೋಪಾಯಕ್ಕಾಗಿ ಒಂದಿಲ್ಲೊಂದು ಕೆಲಸವನ್ನು ಮಾಡಲೇಬೇಕು. ದುಡಿಮೆಯೇ ಧರ್ಮ. ಅದನ್ನೇ ನಾನು 'ಕಾಯಕ' ಎನ್ನುವುದು. ಕಾಯಕ ಜೀವಿಗಳೆಲ್ಲರೂ ಸಮಾನರು.

ಬಿಜ್ಜಳ : ವಿವರಣೆ ತುಂಬಾ ಚೆನ್ನಾಗಿದೆ. ಕಾಯಕದಿಂದ ಏನು ಪ್ರಯೋಜನ?

ಬಸವಣ್ಣ : ಕಾಯಕದಿಂದ ಶ್ರೇಷ್ಠತೆಯನ್ನು ಸಾಧಿಸಬಹುದು. ಸಮಾನತೆ ತರಬಹುದು".[೫೭]

ಹೀಗೆ ಬಸವಣ್ಣನ ಧೈರ್ಯ, ಬುದ್ಧಿವಂತಿಕೆ, ಚಾಣಾಕ್ಷತನ ಕಂಡು ಬಿಜ್ಜಳನು ಬಸವಣ್ಣನನ್ನು ಮುಖ್ಯ ಕರಣಿಕನನ್ನಾಗಿ ನೇಮಿಸಿಕೊಳ್ಳುತ್ತಾನೆ. ಆಗ ಮೊದಲಿದ್ದ ಕರಣಿಕರು ತಲಾ ತಲಾಂತರದಿಂದ ಬಂದ ಲೆಕ್ಕಗಳನ್ನು ನಮಗೆ ಒಪ್ಪಿಸಲು ಅಸಾಧ್ಯವಾದಾಗ ಇನ್ನು ಮೊನ್ನೆ ಬಂದ ಬಸವಣ್ಣನಿಗೆ ಸಾಧ್ಯವೇ? ಎಂದು ಅಪಹಾಸ್ಯ ಮಾಡುತ್ತಾರೆ. ಇದು ಏನೇ ಇರಲಿ, ಬಸವಣ್ಣನವರು ತಮ್ಮ ಕಾಯಕ ನಿಷ್ಠೆಯಿಂದ ಅರಮನೆಯಲ್ಲಿದ್ದುಕೊಂಡು ಆರ್ಥಿಕ ಸುಧಾರಣೆಗೆ ಕೈಹಾಕುವಲ್ಲಿ ಮುಂದಾಗುತ್ತಾನೆ. ಇದಕ್ಕೆ ಉದಾಹರಣೆ ಎಂಬಂತೆ ಬಸವಣ್ಣನು ಸಾಮಾನ್ಯ ಕರಣಿಕನಾಗಿ ತನ್ನ ಕಾಯಕದಲ್ಲಿ ನಿರತನಾದಾಗ ಆ ರಾಜ್ಯದಲ್ಲಿ ಬರಗಾಲ ಸಂಭವಿಸುತ್ತದೆ. ಆಗ ಮಂಚಣ್ಣ, ಬಿಜ್ಜಳ ಇನ್ನು ಮುಂತಾದವರು ತಮ್ಮ ತಮ್ಮ ಚರ್ಚೆಯನ್ನು ಮಾಡುವಂತಹ ಸಂದರ್ಭದಲ್ಲಿ ಕರಣಿಕ ಬಸವಣ್ಣ ಆಗಮಿಸುತ್ತಾನೆ. ಬಂದ ಬಸವಣ್ಣನನ್ನು ಬಿಜ್ಜಳನು ವಿಚಾರಿಸಲಾಗಿ ನಮ್ಮ

ರಾಜ್ಯದಲ್ಲಿ ಬರಗಾಲ ಭೀಕರವಾಗಿ ಹಾಗೂ ಕ್ಷಾಮ ಹೆಚ್ಚಾಗಿರುವುದರಿಂದ ನಮ್ಮನ್ನು ನಂಬಿರುವ ಪ್ರಜೆಗಳು ಒಂದೊಪ್ಪತ್ತಿಗೆ ಅನ್ನಕ್ಕೆ ಗತಿಯಿಲ್ಲದೇ ಪರನಾಡಿಗೆ ವಲಸೆ ಹೋಗುತ್ತಿದ್ದಾರೆಂಬ ವಿಷಯ ಜನನಾಯಕರಿಂದ ತಿಳಿದುಬಂದಿದೆ ಎನ್ನುತ್ತಾನೆ. ಆಗ ಬಿಜ್ಜಳನು ದಿಗ್ಭ್ರಾಂತನಾಗಿ ಇದೇನು ಅನಾಹುತ, ಈಗೇನು ಮಾಡುವುದು ಎಂದು ವಿಚಾರಿಸುತ್ತಾನೆ. ಆಗ ಬಸವಣ್ಣನ ಕಾಯಕನಿಷ್ಠೆಗೆ ವಿರೋಧವಿರುವ ಮೂಲಭೂತವಾದಿಗಳು ತಮ್ಮ ಮೂರ್ಖತನದ ಪರಮಾವಧಿ ಯನ್ನು ಬಿಜ್ಜಳನಲ್ಲಿ ತಿಳಿಸುತ್ತಾರೆ. ಆಗ ಮಂಚಣ್ಣನವರು ಪ್ರಜೆಗಳ ಬದುಕಿನ ಕಷ್ಟ ನಿವಾರಣೆಗೆ ಬಸವಣ್ಣನವರನ್ನೇ ಕೇಳಬೇಕು ಎಂದಾಗ ಬಸವಣ್ಣನವರು ಪ್ರತಿಯೊಬ್ಬ ಪ್ರಜೆಗೂ ದವಸಧಾನ್ಯ ನಮ್ಮ ಭಂಡಾರದ ಬೊಕ್ಕಸದಿಂದಲೇ ಹಣದ ವ್ಯವಸ್ಥೆಯಾಗಬೇಕು ಎನ್ನುತ್ತಾನೆ. ಆಗ ಮಂಚಣ್ಣನವರು ಇಷ್ಟೊಂದು ಹಣ ನಮ್ಮ ಭಂಡಾರದಲ್ಲಿ ಇದೆಯೇ? ಎಂಬ ಪ್ರಶ್ನೆಯನ್ನು ಒಡ್ಡುತ್ತಾನೆ. ಹೀಗೆ ಚರ್ಚೆ ನಡೆಯುವಂತಹ ಸಂದರ್ಭದಲ್ಲಿ ಒಬ್ಬ ವ್ಯಕ್ತಿ ಆಗಮಿಸಿ ಮಹಾಮಾತೆಯ ದೇವಸ್ಥಾನದಲ್ಲಿ ಸಿಕ್ಕ ಶಾಸನದ ಪ್ರತಿಯನ್ನು ಬಿಜ್ಜಳನಿಗೆ ನೀಡುತ್ತಾನೆ. ಅಲ್ಲಿದ್ದ ಪಂಡಿತವರ್ಗ, ಭಟ್ಟರು, ವೇದಗಳನ್ನು ಕಲಿತವರು ಅಲ್ಲದೇ ಜ್ಞಾನಿಗಳಿಗೆ ಈ ಶಾಸನದ ಪತ್ರವನ್ನು ಕೊಟ್ಟು ಓದಲು ತಿಳಿಸಿದಾಗ ಅವರೆಲ್ಲರೂ ಈ ಶಾಸನದ ಭಾಷೆ ಪೈಶಾಚಿಕ ಎಂಬುದಾಗಿ ತಮ್ಮ ಅಜ್ಞಾನವನ್ನು ಮುಚ್ಚಿಡಲು ಪ್ರಯತ್ನಿಸುತ್ತಾರೆ. ಆಗ ಬಸವಣ್ಣನವರು ಆಗಮಿಸಿ ಆ ಶಾಸನವನ್ನು ಓದಿ ಅದರಲ್ಲಿರುವ ಸಂದೇಶವನ್ನು ಅರ್ಥಮಾಡಿಕೊಂಡು ಬಿಜ್ಜಳನಿಗೆ ತಿಳಿಸುತ್ತಾರೆ. ಆಗ ಬಿಜ್ಜಳನು ಬಸವಣ್ಣನ ಮಾತಿಗೆ ಒಪ್ಪಿಗೆಯನ್ನು ಸೂಚಿಸುತ್ತಾನೆ. ಶಾಸನದಲ್ಲಿರುವ ವಿಷಯವೇನೆಂದರೆ ಬಿಜ್ಜಳನು ಕೂಡುವ ಸಿಂಹಾಸನದ ಎದುರಿಗೆ ನಿಧಿ ಇದೆಯೆಂಬುದು ಅಭಿವ್ಯಕ್ತವಾಗಿದೆ. ಈ ವಿಷಯವನ್ನು ತಿಳಿದ ಮತಾಂಧರರು ಸಿಂಹಾಸನದ ಎದುರಿಗೆ ಭೂಮಿ ಅಗೆಯುವುದೇ? ಅಥವಾ ಕೆರೆ ತೋಡಿಸುವುದೇ? ಎಂದು ಏನೆಲ್ಲಾ ಹೇಳಿ ಅದನ್ನು ನಿಲ್ಲಿಸಲು ಮುಂದಾಗುತ್ತಾರೆ. ಕೊನೆಗೆ ಸಿಂಹಾಸನ ಎದುರು ಹೂಳು ತೆಗೆಸಿದಾಗ ರತ್ನ, ವಜ್ರ, ವೈಡೂರ್ಯ, ಅನರ್ಘ್ಯ ಭಂಡಾರ ಎಲ್ಲವೂ ಸಿಗುತ್ತದೆ. ಆಗ ಬಿಜ್ಜಳನು 'ಬಸವಣ್ಣನವರೇ, ಇದೆಲ್ಲ ನಿಮಗೆ ಸೇರಬೇಕಾದುದು, ನೀವೇ ತೆಗೆದುಕೊಳ್ಳಿರಿ' ಎಂದಾಗ ಮಾನವೀಯ ಬಸವಣ್ಣನವರು ಅರಸರೇ. ಈ ಹಣ ನಿಮ್ಮದು. ಇದೇ ಹಣದಿಂದಲೇ ಪ್ರಜೆಗಳಿಗೆ ಬಂದೊದಗಿದ ಬರಗಾಲವನ್ನು ನೀಗಿಸಬಹುದಲ್ಲವೇ? ಎಂದಾಗ ಅರಸನಾದ ಬಿಜ್ಜಳ ಇದಕ್ಕೆ ಒಪ್ಪಿಗೆ ಸೂಚಿಸುತ್ತಾನೆ. ಆಗ ಬಸವಣ್ಣ ಜನಕಲ್ಯಾಣವೇ ದೇಶದ ಕಲ್ಯಾಣ, ರಾಜ್ಯದ ಕಲ್ಯಾಣ. ಪ್ರಜೆಗಳೇ ದೇವರು ಎಂದು ಆ ಕಾಲದ ಆರ್ಥಿಕ ಅಸಂಬದ್ಧತೆಯನ್ನು ಹೋಗಲಾಡಿಸಲು ಪ್ರಯತ್ನಿಸಿರುವ ಉದ್ದೇಶ ಮಹತ್ವದ್ದಾಗಿದೆ. ಇಲ್ಲಿ ಬಸವಣ್ಣನವರ ನೈತಿಕತೆ, ಪ್ರಜೆಗಳ ಕಾಳಜಿಯನ್ನು ಮೆಚ್ಚಿದ ಬಿಜ್ಜಳನು ತನ್ನಲ್ಲಿದ್ದ ಮಹಾಮಂತ್ರಿಗಳ ಪಂಡಿತರ ಅವಿವೇಕತನವನ್ನು ಅಲ್ಲಗಳೆದು ಹೀಗೆ ಹೇಳುತ್ತಾನೆ.

"ಬಿಜ್ಜಳ : ಹಾಂ! ಬಸವಣ್ಣನವರೇ. ಜನ ಕಲ್ಯಾಣಕ್ಕಾಗಿ ಈ ಸಂಪತ್ತಿನ ವಿನಿಯೋಗ ಮಾಡಬೇಕೆಂಬ ತಮ್ಮ ವಿಚಾರ ತುಂಬಾ ಉಚಿತವಾದುದು. ನಿಮ್ಮ ಈ ಉನ್ನತ ಸಲಹೆಗಾಗಿ ನಾನು ನಿಮಗೆ ತುಂಬಾ ಉಪಕೃತನಾಗಿದ್ದೇನೆ. ಈ

ಸಂಪತ್ತು ನಮ್ಮ ವಶದಲ್ಲಿದ್ದರೂ ಇದನ್ನು ವೆಚ್ಚ ಮಾಡುವ ಅಧಿಕಾರ ನಿಮ್ಮದು. ಇಂದಿನಿಂದ ನೀವೇ ಅರ್ಥಮಂತ್ರಿಗಳು. ಅಷ್ಟೇ ಅಲ್ಲ, ಈ ಕಲ್ಯಾಣ ರಾಜ್ಯದ ಮಹಾಮಂತ್ರಿಗಳು! ನಮ್ಮೆಲ್ಲರನ್ನೂ ಅಗಲಿ ಸ್ವರ್ಗಸ್ಥರಾಗಿರುವ ನಿಮ್ಮ ಮಾವ ಬಲದೇವ ಮಹಾಮಂತ್ರಿಗಳ ರಿಕ್ತಸ್ಥಾನ ನಿಮ್ಮಿಂದಲೇ ಅಲಂಕೃತವಾಗಲಿ (ಬಸವಣ್ಣನನ್ನು ಆಸ್ಥಾನದಲ್ಲಿ ಕೂಡ್ರಿಸಿ).

ಬಸವಣ್ಣನವರೇ, ತಮಗೆ ಯೋಗ್ಯ ಕಂಡಂತೆ ಕಾರ್ಯವನ್ನು ನಿರ್ವಹಿಸಬಹುದು. ಪ್ರಜೆಗಳ ಕಷ್ಟವನ್ನು ನೀಗಿಸಿ, ರಾಜ್ಯದಲ್ಲಿ ಸುಖ-ಶಾಂತಿ ನೆಲೆಸುವಂತೆ ಮಾಡುವ ಮಹಾಕಾರ್ಯಭಾರ ನಿಮ್ಮನ್ನೇ ಕೂಡಿದೆ (ಮಂಗಳವಾದ್ಯಗಳು ಮೊಳಗುವವು)."[೫೭]

ಹೀಗೆ ಬಸವಣ್ಣನವರ ವಿಚಾರವನ್ನು ಕೇಳಿ ಬಿಜ್ಜಳ ಪ್ರಜೆಗಳ ಕಷ್ಟವನ್ನು ನಿವಾರಿಸುವ ಸಲುವಾಗಿ ಈ ನಿಧಿಯಿಂದ ಪ್ರಜೆಗಳು ಬದುಕಲಿಕ್ಕೆ ದಾರಿ ಮಾಡಿಕೊಡುತ್ತಾರೆ. ಆಗ ಬಸವಣ್ಣನ ವಿಚಾರಗಳನ್ನು ಕಂಡ ಪಂಡಿತವರ್ಗವು ಅಪಹಾಸ್ಯ ಮಾಡುವುದರ ಮೂಲಕ ತಮ್ಮ ತಮ್ಮಲ್ಲಿ ನೀಚತನದ ಪ್ರವೃತ್ತಿಯನ್ನು ಪ್ರತಿಪಾದಿಸುವುದು ಒಂದು ಕಡೆ ಕಂಡು ಬಂದರೆ ಇನ್ನೊಂದೆಡೆ ಬಸವಣ್ಣನ ದಯಾಳು ಗುಣ ಬಸವಣ್ಣನ ಮಾತು ಕೇಳಿದ ಬಿಜ್ಜಳ ಅರಸನ ದಯಾಳತ್ವಕ್ಕೆ ಅಲ್ಲಿನ ಪ್ರಜೆಗಳೆಲ್ಲರೂ ಖುಷಿ ಪಡುತ್ತಾರೆ. ಇದರ ಹಿಂದೆ ಬಸವಣ್ಣನ ಕಾಯಕನಿಷ್ಠೆ ಮತ್ತು ಮಾನವೀಯತೆ ಎದ್ದು ಕಾಣುತ್ತದೆ. ಅಂದರೆ ಬಸವಣ್ಣನವರ ಮಾನವೀಯ ಮೌಲ್ಯಗಳು ಜನಪರವಾಗಿದ್ದು ಜನರ ಹಿತವನ್ನು ಕಾಪಾಡಲೇಬೇಕೆಂಬ ನಿಲುವು ಮಹತ್ವದ್ದಾಗಿದೆ. ಅಷ್ಟೇ ಅಲ್ಲದೇ ಕಾಯಕವೇ ಕೈಲಾಸ ಎಂದರಿತ ಬಸವಣ್ಣ ಪ್ರತಿಯೊಬ್ಬರು ದುಡಿದು ಬದುಕಬೇಕು ಎಂದು ಸಾರಿದ. ಇಂತಹ ಹೇಳಿಕೆಯಿಂದ ಮೊದಲಿದ್ದ ಪ್ರಜೆಗಳು ಪರಿವರ್ತನೆಯಾಗಬಹುದು ಎಂಬ ಅನೈತಿಕ ಚಟುಟಿಕೆಗಳ ಕೇಂದ್ರಬಿಂದುವಾಗಿದ್ದ ಪಂಡಿತರು, ಪುರೋಹಿತಶಾಹಿಗಳು ನಿಧಿಯ ಹಣದಿಂದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಬೇಕೆಂಬ ಅಭಿಲಾಷೆಯನ್ನು ಹೊತ್ತು ನಿಲ್ಲುತ್ತಾರೆ. ಕಾರಣ ದೇವಾಲಯಗಳು, ಮಠ-ಮಾನ್ಯಗಳು ಬ್ರಾಹ್ಮಣರ ಬದುಕುವ ಕೇಂದ್ರಗಳಾಗಿದ್ದವು. ಅಷ್ಟೇ ಅಲ್ಲದೇ ಆ ದೇವಾಲಯಗಳನ್ನು ನೋಡಿಕೊಳ್ಳುವ, ಪೂಜೆ ಮಾಡಿಕೊಳ್ಳುವ ಅಧಿಕಾರವೆಲ್ಲವೂ ಇವರ ಸ್ವತ್ತಾಗಿತ್ತು. ಹೀಗಾಗಿ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಲಾರದೇ ಇರುವುದಕ್ಕಾಗಿ ನಮ್ಮ ರಾಜ್ಯದಲ್ಲಿ ಬರಗಾಲ, ಕ್ಷಾಮ ಉಂಟಾಗಿದೆ. ಇದಕ್ಕಾಗಿ ದೇವಾಲಯಗಳನ್ನು ಪುನರ್‌ಜೀವನಗೊಳಿಸಬೇಕು. ಹಣವನ್ನು ದೇವಾಲಯಗಳಿಗೆ ಮೀಸಲಾಗಿರಿಸಬೇಕು ಎಂಬ ಕುತಂತ್ರ ನೀತಿಗೆ ಬಸವಣ್ಣನವರು ಉಳ್ಳವರು ಶಿವಾಲಯ ಮಾಡುವರು. ನಾನೇನು ಮಾಡಲಿ ಬಡವನಯ್ಯಾ ಎನ್ನ ಕಾಲೇ ಕಂಬ, ಎನ್ನ ದೇಹವೇ ದೇಗುಲ, ಎನ್ನ ಶಿರವೇ ಹೊನ್ನ ಕಳಸ ಕೂಡಲಸಂಗಮದೇವಾ ಎಂಬುದಾಗಿ ನುಡಿದು ಪ್ರಜೆಗಳ ಹಿತವೇ ದೇವರ ಹಿತ. ಆ ದೇವರು ಆತ್ಮದಲ್ಲಿದ್ದಾನೆ. ಆತ್ಮವೇ ದೇವರು ಮತ್ತು ದೇವಾಲಯ. ಹೀಗೆ ಇರುವಾಗ ದೇವಾಲಯಗಳ ನಿರ್ಮಾಣಕ್ಕಿಂತ ಜನಗಳ ಹಿತವನ್ನು

ಕಾಪಾಡುವುದೇ ನಮ್ಮೆಲ್ಲರ ಉದ್ದೇಶವೆಂಬುದಾಗಿ ವಿವೇಕಪರ ಆಲೋಚನೆಗಳನ್ನು ಹೊಂದಿರುವ ಅಂಶಗಳು ಈ ನಾಟಕಗಳಲ್ಲಿ ವ್ಯಕ್ತವಾಗಿವೆ.

ಪ್ರಾರಂಭದಲ್ಲಿ ಸಾಮಾನ್ಯ ಕರಣಿಕನಾಗಿದ್ದ ಬಸವಣ್ಣನವರು ನಂತರದಲ್ಲಿ ಭಂಡಾರದ ಮುಖ್ಯ ಕರಣಿಕನಾಗಿ, ಮಹಾಮಂತ್ರಿಯಾಗಿ ನಂತರದಲ್ಲಿ ಅರ್ಥಮಂತ್ರಿಯಾಗಿ ಕಾಯಕದಲ್ಲಿ ನಿರತನಾಗುತ್ತಾನೆ. ಅರ್ಥಮಂತ್ರಿಯಾದ ಬಸವಣ್ಣ ಆ ರಾಜ್ಯದಲ್ಲಿನ ಬಡತನ, ಬರಗಾಲ, ಮುಂತಾದವುಗಳನ್ನು ಹೋಗಲಾಡಿಸಿ ಅರ್ಥನೀತಿಯಂತೆ ಸುಧಾರಣೆ ತರಬೇಕೆಂಬ ಮಹತ್ವದ ವಿಚಾರವನ್ನು ಸ್ಪಷ್ಟಪಡಿಸುತ್ತಾನೆ. ಹೀಗೆ ಮುಂದುವರೆಯುತ್ತಾ ಬಡವರಿಗೆ ಭಿಕ್ಷುಕರಿಗೆ ಮಿಗಿಲಾಗಿ ಭಿಕಾರಿಗಳಿಗೆ ದಾನ ಧರ್ಮದ ಮೂಲಕ ಅವರನ್ನು ಉದ್ಧಾರ ಮಾಡುವಲ್ಲಿ ಶ್ರಮಿಸುತ್ತಾನೆ. ಅಲ್ಲದೇ ಭಂಡಾರದ ಹಣ ದೇವಾಲಯಗಳಿಗೆ ಕೊಡುವುದರಲ್ಲಿ ಕಡಿತಗೊಳಿಸುತ್ತಾನೆ. ಆಗ ಮಂತ್ರಿಯಾದ ಮಂಚಣ್ಣ, ಕೇಶವಭಟ್ಟ ಮುಂತಾದವರು ಭಂಡಾರದ ಹಣದಿಂದ ಯಾಗ-ಯಜ್ಞಗಳು ನಡೆಯಬೇಕು. ಬ್ರಾಹ್ಮಣರಿಗೆ ದಾನ ದಕ್ಷಿಣೆಗಳು ನೀಡಬೇಕು. ಅನ್ನ ಸಂತರ್ಪಣೆ ಯಾಗಬೇಕು ಅಂದಾಗ ಮಾತ್ರ ಭೀಕರತೆ ಹೋಗಲಿಕ್ಕೆ ಸಾಧ್ಯವಾಗುತ್ತದೆ ಮತ್ತು ರಾಜ್ಯ ಸುಖವಾಗಿರುತ್ತದೆ ಎಂಬ ಉದ್ದೇಶದಿಂದ ಅರಸನಿಗೆ ಬಸವಣ್ಣನ ವಿರುದ್ಧ ದೂರು ನೀಡುತ್ತಾರೆ.

"**ಕೇಶವಭಟ್ಟ** : ಹೌದು. ತುತ್ತು ಕೂಳು ಕಾಣದ ಅವರಿಗೆ ಸುಖ ಭೋಜನ. ನಮಗೋ ಉಪವಾಸ. ತುಂಡುಬಟ್ಟೆ ಕಾಣದ ಅವರಿಗೆ ದಿವ್ಯದುಕೂಲ. ನಮಗೋ ಇನ್ನೊಂದು ಪಂಚೆಯಿಲ್ಲ. ವಿಪರೀತ ಆಡಳಿತ.

**ಮಂಚಣ್ಣ** : ನಮ್ಮದೂ ಅದೇ ಸ್ಥಿತಿ. ರಾಜ್ಯದ ಬೊಕ್ಕಸದಿಂದ ನಮಗೆ ಸಲ್ಲುತ್ತಲಿದ್ದ ವಾರ್ಷಿಕ ಸಂಬಳ, ಕಾಣಿಕೆಗಳನ್ನು ಅರ್ಧದಷ್ಟು ಕಡಿಮೆಗೊಳಿಸಿದ್ದಾನೆ".[೫೯]

ಈ ಸಂಭಾಷಣೆಯನ್ನು ಗಮನಿಸಿದಾಗ ಸುಖ ಭೋಜನದಿಂದ ಮೆರೆಯುತ್ತಿದ್ದ ಬ್ರಾಹ್ಮಣ ವರ್ಗವು ವಿರೋಧವನ್ನು ವ್ಯಕ್ತಪಡಿಸುತ್ತದೆ. ಆಗ ಬಿಜ್ಜಳನು ಇವರ ಮಾತುಗಳ್ನು ಕೇಳಿ ಈ ಭಂಡಾರದ ಹಣ ಬಸವಣ್ಣನ ಸ್ವಂತ ಆಸ್ತಿಯಲ್ಲ. ಕರೆಯಬೇಕು ಎನ್ನುವಷ್ಟರಲ್ಲಿ ಅಲ್ಲಿಗೆ ಬಸವಣ್ಣ ಆಗಮಿಸುತ್ತಾನೆ. ಆಗ ವಿಚಾರಿಸಿದಾಗ ನಾನು ಸರಿಪಡಿಸಿದ್ದೇನೆಯೇ ಹೊರತು ಇವರಿಗೆ ಕೊಡುವ ಯಾವ ಸವಲತ್ತನ್ನು ಕಡಿಮೆ ಮಾಡಿಲ್ಲ. ಏಕೆಂದರೆ ಭಂಡಾರದ ಒಡೆಯರು ಪ್ರಜೆಗಳೇ ಹೊರತು ಅರಸರಲ್ಲ ಎಂದಾಗ ಅಲ್ಲಿರುವ ಎಲ್ಲರೂ ದಿಗ್ಭ್ರಮೆಗೊಳ್ಳುತ್ತಾರೆ. ಆಗ ಬಸವಣ್ಣನವರು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ವಾಕ್ಯವನ್ನು ಮುಂದಿಡುತ್ತಾರೆ. ಮುಂದುವರೆದು ಮಠ-ಮಾನ್ಯಗಳಿಗೆ ಕೊಡುವ ಸವಲತ್ತುಗಳನ್ನು ಕಡಿಮೆ ಮಾಡಿ ಅವುಗಳ ಮೇಲೆ ಕಂದಾಯವನ್ನು ಹಾಕುತ್ತಾನೆ. ಇವುಗಳಿಂದ ಬಂದ ಹಣದಿಂದ ರಾಜ್ಯದ ಜನತೆ ಸುಖವಾಗಿರಬೇಕು, ಅವರೆಲ್ಲರೂ ಸುಖವಿದ್ದಾಗ ಮಾತ್ರ ಮಂತ್ರಿ-ಅರಸ ಎಂಬ ಹೆಸರಿಗೆ ಕಳಂಕವಿರುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಮನುಷ್ಯ ಹುಟ್ಟಿನಿಂದ ಹಿಡಿದು

ಶತಶತಮಾನಗಳ ಕಾಲ ಒಂದು ವರ್ಣಕ್ಕೆ ಸೀಮಿತವಾಗಿದ್ದ ಎಲ್ಲವುಗಳನ್ನು ವಿರೋಧಿಸಿದ ಬಸವಣ್ಣ ಜನಪರ ಮತ್ತು ರಾಜ್ಯಪರ ಏಳಿಗೆಯನ್ನು ಬಯಸುತ್ತಾನೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಬಸವಣ್ಣನಿಗೆ ಅಗ್ರಹಾರದ ಸಂಸ್ಕೃತಿಯ ವಿರೋಧವೇ ಹೊರತು ಜನಹಿತ ಸಂಸ್ಕೃತಿಯ ವಿರೋಧವಲ್ಲ. ಏಕೆಂದರೆ ಅಂದಿನ ಕಾಲ ಮತ್ತು ಇಂದಿನ ಕಾಲದಲ್ಲಿ ಬಸವಣ್ಣನ ತತ್ವ ಮತ್ತು ವಿಚಾರಗಳನ್ನು ಒಂದು ವೇಳೆ ಆಚಾರಕ್ಕೆ ತಂದಿದ್ದಾದರೆ ಇವತ್ತಿನ ಘನವೆತ್ತ ಚಿಂತಕರು, ಬುದ್ಧಿವಂತರು ಮತ್ತು ವಿವೇಕಶೀಲರು ಹಳೆಯ ಸಂಪ್ರದಾಯವನ್ನು ಮುಂದುವರಿಸುತ್ತಾರೆಯೇ ಹೊರತು ಬಸವಣ್ಣನ ತತ್ವಗಳನ್ನು ಆಚರಿಸುವಲ್ಲಿ ಹಿಂದಾಗುತ್ತಾರೆ ಎಂಬ ಹೇಳಿಕೆಯನ್ನು ಹೇಳಲೇಬೇಕಾಗಿಲ್ಲ.

ಬಸವಣ್ಣನವರು ಬಾಲ್ಯದಲ್ಲಿಯೇ ತನ್ನ ಬೌದ್ಧಿಕ ಸ್ಥಿತಿಗತಿಗಳನ್ನು ಅರಿತು ಆಧ್ಯಾತ್ಮಿಕ ಮತ್ತು ಭಕ್ತಿಯ ಕಡೆಗೆ ಅದರ ಮೂಲಕ ಸಮಾಜದಲ್ಲಿರುವ ಬಡತನವನ್ನು ಹೋಗಲಾಡಿಸಬೇಕೆಂಬ ನಿರ್ಧಾರ ಮೆಚ್ಚುವಂತದ್ದು. ಏಕೆಂದರೆ ವಿದ್ಯೆ ಕಲಿಯಲು ಕೂಡಲಸಂಗಮಕ್ಕೆ ಬಂದಂತಹ ಸಂದರ್ಭದಲ್ಲಿ ಮಠ-ಮಾನ್ಯಗಳು ಸಾಲ ಕೊಟ್ಟ ಬಡ್ಡಿಯನ್ನು ತೆಗೆದುಕೊಳ್ಳುವ ವ್ಯವಹಾರವನ್ನು ವಿರೋಧಿಸುತ್ತಾರೆ. ಏಕೆಂದರೆ ಯಾವ ಮಠ-ಮಾನ್ಯಗಳು ಜನರ ಜೀವನದ ಬಗ್ಗೆ ಚಿಂತನೆ ಮಾಡಬೇಕಾಗಿತ್ತೋ, ಅಂತಹದನ್ನು ಬಿಟ್ಟು ಅಗ್ರಹಾರ ಸಂಸ್ಕೃತಿಯ ಮೂಲಕ ಒಂದು ಜನಾಂಗದ ಸೊತ್ತಾಗಿ ಉಳಿದಿರುವ ವ್ಯವಸ್ಥೆಯ ವಿರುದ್ಧ ಸಿಡಿದೇಳುತ್ತಾನೆ. ಬಸವಣ್ಣನವರು ಆಸ್ತಿ ಮತ್ತು ಸ್ಥಿರಾಸ್ತಿಗಳ ಬಗೆಗೆ ಆಸೆಪಟ್ಟವರಲ್ಲ ಎಂಬುದಕ್ಕೆ ಬಿಜ್ಜಳನು ಈ ನಿಧಿ ನಿಮ್ಮದಾಗಲಿ ಎಂದಾಗ ಒಪ್ಪಿಕೊಳ್ಳದ ಬಸವಣ್ಣ ತನ್ನ ಸ್ವಂತ ಆಸ್ತಿಯನ್ನು ಬಡಬಗ್ಗರಿಗೆ ಹಂಚುವುದರ ಮೂಲಕ ಕಾಯಕನಿಷ್ಠೆಯನ್ನು ಎತ್ತಿ ಹಿಡಿಯುತ್ತಾನೆ. 'ಆಸೆಯೆಂಬುದು ಅರಸಂಗಲ್ಲದೇ ಶಿವಭಕ್ತರಿಗುಂಟೇನಯ್ಯ' ಎಂದು ಹೇಳುವುದರ ಮೂಲಕ ಬುದ್ಧನ ಆಸೆಯೇ ದುಃಖಕ್ಕೆ ಮೂಲ ಎಂಬ ಹೇಳಿಕೆಗೆ ಪುಷ್ಠಿ ಕೊಟ್ಟಂತೆ ಭಾಸವಾಗುತ್ತದೆ. ಮೂಲ ಉದ್ದೇಶ ಬಸವಣ್ಣನವರಲ್ಲಿ ಸುಪ್ತವಾಗಿರುವ ನೈತಿಕತೆ, ಸಮಾಜಪರ ಮೂಲದ್ದಾಗಿದೆ. ಹೀಗಾಗಿ ಬಸವಣ್ಣನವರು ಒಬ್ಬ ಅರಸನ ಕೈಯಲ್ಲಿ ಅರ್ಥಮಂತ್ರಿಯಾಗಿದ್ದರೂ ಮಂತ್ರಿಯ ಕಾನೂನುಗಳನ್ನು ಮೀರಿ ಬಡವರ ಪಾಲಿಗೆ ವರವಾಗುತ್ತಾನೆ. ಏಕೆಂದರೆ ಪ್ರತಿಯೊಬ್ಬರು ಹುಟ್ಟುತ್ತಾರೆ, ನಂತರದಲ್ಲಿ ಸಾಯುತ್ತಾರೆ. ಇವೆರಡರ ಮಧ್ಯೆ ಬದುಕುವ ಮನುಷ್ಯ ಮನುಷ್ಯನಾಗಬೇಕೆ ಹೊರತು ಪಶುಪಕ್ಷಿಗಳಂತೆ ಜೀವನ ಆಗಬಾರದೆಂಬ ವಿಚಾರವನ್ನು ಬಸವಣ್ಣ ಸ್ಪಷ್ಟಪಡಿಸುತ್ತಾನೆ. ತನ್ನ ಆಳುಗಳಿಗೆ ತನ್ನ ಆಸ್ತಿಯನ್ನೆಲ್ಲಾ ನೀಡಿದಾಗ ಆಗ ಆಳುಗಳು ಇದು ನಿಮ್ಮ ಆಸ್ತಿ. ನಾವೆಲ್ಲಾ ಸೇವಕರು. ಇದನ್ನೆಲ್ಲಾ ನಮಗೆ ಹಂಚಿ ನೀವು ಹೋಗುವುದಾದರೂ ಎಲ್ಲಿಗೆ? ಎಂದಾಗ ಬಸವಣ್ಣನವರು ಆಸ್ತಿಯನ್ನು ನಿರಾಕರಿಸಿ ಮಾತನಾಡುವಲ್ಲಿ ಜೀವಪರ ಕಾಳಜಿ ಎದ್ದು ಕಾಣುತ್ತದೆ. ವಂಶಪರಂಪರೆಯಾಗಿ ಬಂದಿರುವ ಆಸ್ತಿ, ಮನೆ ಮುಂತಾದವುಗಳು ಆತನ ಕುಟುಂಬದ ಜನರಿಗೆ ಸೇರಬೇಕೆಂಬ ಯಾವ ನಿಯಮವು ಇಲ್ಲ. ಅಂದರೆ ಈ ಆಸ್ತಿಯನ್ನು ಬೆಳೆಸಿ, ದುಡಿದು ಬದುಕಿದವರು ನೀವು. ಈ ಆಸ್ತಿಯ ಉಳಿವಿಗೆ ತಮ್ಮ ಬೆವರಿನ

ಶ್ರಮ ಅತ್ಯಮೂಲ್ಯವಾಗಿದೆ. ಹೀಗಾಗಿ ಈ ಆಸ್ತಿ ನಿಮಗೆ ಸೇರಬೇಕಾದುದು ಎಂದಾಗ ಆಳುಮಕ್ಕಳೆಲ್ಲ ಆಶ್ಚರ್ಯಚಕಿತರಾಗಿ ನಿಲ್ಲುತ್ತಾರೆ. ಮುಂದುವರಿದ ಬಸವಣ್ಣ ಆಳುಗಳಿಗೆ ಹೇಳುವ ಮಾತು ಮಾನವೀಯತೆಗೆ ಹಿಡಿದ ಕೈಗನ್ನಡಿಯಾಗಿದೆ.

"**ಬಸವಣ್ಣ** : ಸುಳ್ಳು, ಇದು ಬೆಳದದ್ದು ನಿಮ್ಮ ಬೆವರಿನಿಂದ. ನಿಮ್ಮ ಆಸ್ತಿಯನ್ನು ನಿಮಗೆ ಕೊಡುತ್ತಿದ್ದೇನೆ. ತೆಗೆದುಕೊಂಡು ನನ್ನನ್ನು ಋಣಮುಕ್ತನನ್ನಾಗಿ ಮಾಡಿರಿ. ಹೊಲ-ತೋಟಗಳನ್ನು, ಮನೆ ಬಯಲು ಜಾಗಗಳನ್ನು, ಕೊಟ್ಟಿಗೆಯಲ್ಲಿಯ ದನ-ಕರುಗಳನ್ನು ನೀವೆಲ್ಲ ಆಮೇಲೆ ಹಂಚಿಕೊಳ್ಳಿರಿ. ಈಗ ಈ ದುಡ್ಡು ನಿನಗೆ, ಚಿನ್ನ-ಬೆಳ್ಳಿ ನಿನಗೆ, ಒಡವೆ-ವಸ್ತು ಕಸಗೂಡಿಸುವ ನಿನಗೆ, ಪಾತ್ರೆ-ಪಗಡಿ ನಿನಗೆ (ಹೀಗೆ ಹೇಳುತ್ತಾ ಗಂಡು ಹೆಣ್ಣು ಆಳುಗಳಿಗೆ ಹಂಚಿ ತಂಗಿಯೊಂದಿಗೆ ಹೊರಡುತ್ತಾನೆ.)"[೬೦]

ಬಸವಣ್ಣನ ದೃಷ್ಟಿಯಲ್ಲಿ ಆಸ್ತಿ ಹಿರಿಯರಿಂದ ಅವರ ಆಸ್ತಿ ಮಕ್ಕಳಿಗೆ ಹೋಗಬೇಕೆನ್ನುವುದಕ್ಕೆ ವಿರೋಧವಿದೆ. ಆಸ್ತಿಯ ಒಡೆತನ ವಂಶ ಪರಂಪರೆಯಿಂದ ಹೋಗುವುದರ ಬದಲು ಅದನ್ನು ಉತ್ತಿ-ಬಿತ್ತಿ ಬೆಳದವರಿಗೆ ಸೇರಬೇಕೆಂಬ ಬಸವಣ್ಣನ ನಿಲುವು ಆಸ್ತಿ ಸಂಗ್ರಹಿಸುವಿಕೆಯ ಪ್ರಕ್ರಿಯೆಯನ್ನು ವಿರೋಧಿಸುತ್ತದೆ. ಬಸವಣ್ಣನವರು ಸಾಮಾಜಿಕ ಅಸಮಾನತೆಗೆ ಆರ್ಥಿಕತೆಯೇ ಮುಖ್ಯ ಕಾರಣ ಎಂಬುದನ್ನು ಮನಗಂಡಿದ್ದಾರೆ.

ಆರ್ಥಿಕ ಮತ್ತು ಧಾರ್ಮಿಕ ಅವಕಾಶಗಳನ್ನು ನೀಡಿದ್ದೇ ಆದಲ್ಲಿ ಸಾಮಾಜಿಕ ಅಸಮಾನತೆಯು ಕಣ್ಮರೆಯಾಗುತ್ತದೆ ಎನ್ನುವುದು ಅವರ ನಿಲುವು. ಬಿಜ್ಜಳನ ಆಸ್ಥಾನದಲ್ಲಿ ಮಹಾಮಂತ್ರಿಯಾಗಿಯೂ ಬಸವಣ್ಣ ಆರ್ಥಿಕ, ಧಾರ್ಮಿಕ ಅವಕಾಶಗಳನ್ನು ಹಿಂದುಳಿದವರಿಗೆ ನೀಡಲು ಅರಮನೆಯ ಕಾನೂನುಗಳು ತೊಡಕಾಗಿರುವುದರಿಂದಾಗಿ ಮಹಾಮನೆಯ ಮೂಲಕ ಪ್ರಯತ್ನಿಸುತ್ತಾನೆ. ಅರಮನೆಯಲ್ಲಿ ಶ್ರೇಣೀಕೃತ ಅಧಿಕಾರವಿದೆ. ಆದರೆ ಬಸವಾದಿ ಶರಣರು ನಿರ್ಮಿಸಿಕೊಂಡಿರುವ ಮಹಾಮನೆಯಲ್ಲಿ ಶ್ರೇಣೀಕೃತ ವ್ಯವಸ್ಥೆಯಿಲ್ಲ. ಇಲ್ಲಿ ಎಲ್ಲವೂ ತರ್ಕಬದ್ಧವಾಗಿಯೇ ನಡೆಯುತ್ತದೆ. ಇಲ್ಲಿಯ ನಿರ್ಣಯಗಳು ಏಕವ್ಯಕ್ತಿಯಿಂದ ಕೂಡಿದ ನಿರ್ಣಯಗಳಲ್ಲ. ಬದಲಾಗಿ ಸಾಮೂಹಿಕ ತೀರ್ಮಾನಗಳಾಗಿರುತ್ತವೆ. ಇಲ್ಲಿ ಕಾಯಕ ಕಡ್ಡಾಯ. ಹಾಗೆಂದ ಮಾತ್ರಕ್ಕೆ ಹಣದ ಸಂಗ್ರಹಕ್ಕೆ ಪ್ರೋತ್ಸಾಹವಿಲ್ಲ. ಇಲ್ಲಿ ಸಾಮೂಹಿಕ ಒಡೆತನವಿದೆ. ಇಂತಹ ಸಂದರ್ಭದಲ್ಲಿ ಬಸವಣ್ಣನ ವಿಚಾರಧಾರೆಗಳನ್ನು ಒಪ್ಪದ ಜನರು ಬಸವಣ್ಣನವರ ವಿರುದ್ಧ ಬಿಜ್ಜಳನಲ್ಲಿ ತಪ್ಪು ಸಂದೇಶಗಳನ್ನು ನೀಡುತ್ತಾರೆ. ಇವರಿಗೆ ಮೇಲ್ಜಾತಿಯ ಸಮುದಾಯದ ಹಿತಾಸಕ್ತಿಯನ್ನು ಕಾಪಾಡುವುದು ಮುಖ್ಯವೇ ಹೊರತು ರಾಜ್ಯದ ಸಮಸ್ತ ಜನತೆಯ ಕಲ್ಯಾಣವಲ್ಲ. ಹೀಗಾಗಿ ಬಸವಣ್ಣನವರ ವಿರುದ್ಧ ಅನೇಕ ಆರೋಪಗಳನ್ನು ಹೋರಿಸಲಾಗುತ್ತದೆ. ಅಂತಹ ಆರೋಪಗಳೆಂದರೆ ಬಸವಣ್ಣನವರು ರಾಜ್ಯದ ಒಡೆತನವನ್ನು ತಮ್ಮದಾಗಿಸಿಕೊಳ್ಳಲು ಅರಮನೆಗೆ ಪರ್ಯಾಯವಾಗಿ ಮಹಾಮನೆಯನ್ನು ಕಟ್ಟುತ್ತಿದ್ದಾರೆ. ಹಾಗೂ ಭಂಡಾರದ ಹಣವನ್ನು ಮಹಾಮನೆಯ ದಾಸೋಹದ ಕಾರ್ಯಗಳಿಗೆ ಬಳಸುತ್ತಿದ್ದಾರೆ ಎಂಬುದಾಗಿದೆ. ಇದು ಒಂದು ರೀತಿಯಲ್ಲಿ ಬಸವಣ್ಣನವರ ಮೇಲೆ ಆರೋಪದಂತೆ

ಕಂಡು ಬರುತ್ತದೆ. ಏಕೆಂದರೆ ರಾಜ್ಯದ ಬೊಕ್ಕಸದಿಂದಲೇ ೧,೯೬,೦೦೦ ಜಂಗಮರಿಗೆ ಅನ್ನ ಸಂತರ್ಪಣೆಯಾಗುತ್ತದೆಂಬ ವಿಚಾರವನ್ನು ಮಂಚಣ್ಣನವರು ಅಭಿಪ್ರಾಯಪಟ್ಟಾಗ ಬಿಜ್ಜಳರು ಸಂದೇಹಕ್ಕೊಳಗಾಗಿ ಬಸವಣ್ಣನವರನ್ನು ವಿಚಾರಿಸುತ್ತಾರೆ. ಆಗ ಬಸವಣ್ಣನವರು ಪರಧನ, ಪರಸತಿ, ಪರದೈವ ಶರಣರಿಗೆ ಸಲ್ಲಲಾರದವು. ಅಷ್ಟೇ ಅಲ್ಲ ಅರಸರ ಬೊಕ್ಕಸ ಹಾಳು ಮಾಡಿ ನನಗೆ ನನ್ನ ಧರ್ಮ ಪ್ರಚಾರವನ್ನು ಮಾಡುವುದು ಬೇಕಾಗಿಲ್ಲ. ಇದು ಸಂಗಮನಾಥನ ಆಣೆ. ಬೇಕಾದರೆ ನಾಳೆ ಬಪ್ಪುದು ನಮಗಿಂದೇ ಬರಲಿ ಎಂಬ ಮಾತಿನಂತೆ ಭಂಡಾರದ ಲೆಕ್ಕಪತ್ರಗಳನ್ನು ತಾವು ಪರಿಶೀಲಿಸಬಹುದು ಎಂದಾಗ ಮಂಚಣ್ಣನವರು ನಿನ್ನ ಮಾತಿನಲ್ಲಿ ಕೆಳಗಿನ ಜನರ ಅಭಿವೃದ್ಧಿಯೇ ಹೊರತು ನಮ್ಮ ಅಭಿವೃದ್ಧಿ ಕಾಣುತ್ತಿಲ್ಲ ಎಂದಾಗ, ಇಬ್ಬರ ದೇಹದಲ್ಲಿಯೂ ಒಂದೆ ರಕ್ತ. ಆದರೆ ಜೀವನದ ಸಮಸ್ಯೆಗಳನ್ನು ಎದುರಿಸುವಾಗ ಭಿನ್ನವಾಗಿರುತ್ತದೆ ಎಂದು ಹೇಳುವಲ್ಲಿ ಬಸವಣ್ಣನವರ ಶರಣಪರ ಚಿಂತನೆ ಜೀವದ್ರವ್ಯವಾಗಿದೆ.

ಭಂಡಾರದ ಮಂತ್ರಿಯಾದ ಬಸವಣ್ಣ ದಾಸೋಹಕ್ಕೆ ಅಂದರೆ ಶರಣರ ಅನ್ನ ಸಂತರ್ಪಣೆಗೆ ಭಂಡಾರದ ಹಣವನ್ನು ವ್ಯಯ ಮಾಡಿದನೆಂದು ಅಲ್ಲಿರುವ ಕಿಡಿಗೇಡಿ ಮಂತ್ರಿಗಳು ಅರಸನಾದ ಬಿಜ್ಜಳನಿಗೆ ಹೇಳಿದಾಗ ಬಸವಣ್ಣನವರು ಕರೆಯಿಸುತ್ತಾರೆ. ಆಗ ಭಂಡಾರದ ಲೆಕ್ಕಪತ್ರವನ್ನು ಮಾಡಿದಾಗ ಭಂಡಾರದಲ್ಲಿದ್ದ ಹಣ ಒಂದಿಷ್ಟು ಕಡಿಮೆಯಾಗದೇ ಇರುವುದನ್ನು ಕಂಡು ಬಿಜ್ಜಳ ವಿಸ್ಮಯನಾಗುತ್ತಾನೆ. ಆಗ ಬಸವಣ್ಣನ ವಿರುದ್ಧ ಅಪವಾದಗಳನ್ನು ಹೊರಿಸಿದ ಮಂತ್ರಿಗಳು ವಿಸ್ಮಯರಾಗಿ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತಾರೆ. ಆಗ ಬಿಜ್ಜಳ ಮಹಾರಾಜರು ಸರ್ವರನ್ನೊಳಗೊಂಡು ಬಸವಣ್ಣನವರ ಜ್ಞಾನ ಮತ್ತು ಔದಾರ್ಯಗಳನ್ನು ಕಂಡು ಕ್ಷಮೆಯಾಚಿಸುತ್ತಾನೆ. ಆಗ ಭಕ್ತಿಭಂಡಾರಿ ಬಸವಣ್ಣನವರು ಪ್ರಭುಗಳೇ ನಾನು ಮಾಡಿದ್ದು ಶಿವಶರಣರ ಸಂತರ್ಪಣೆ ಎಲ್ಲಿಂದ, ಹೇಗೆ ಎಂಬುದು ನನಗೆ ಗೊತ್ತಾಗದೇ ಹೋಗಿದೆ ಎಂದಾಗ ಅಲ್ಲಿ ನೆರೆದಿರುವ ಜನಸಮೂಹವೆಲ್ಲ ಪವಾಡ ಪುರುಷ ಬಸವಣ್ಣನೆಂದು ಒಪ್ಪಿಕೊಳ್ಳುವುದರ ಮೂಲಕ ಆತನ ಅಪವಾದಕ್ಕೆ ತೆರೆ ಎಳೆಯುತ್ತಾರೆ. ಹೀಗೆ ಕೆಲವು ಪಠ್ಯಗಳು ಬಸವಣ್ಣನನ್ನು ಪವಾಡ ಪುರುಷನಂತೆ ಚಿತ್ರಿಸಿವೆ. ಇದಕ್ಕೆ ಉದಾಹರಣೆ ಎಂಬಂತೆ ತಲೆದಂಡ ನಾಟಕದಲ್ಲಿ ಬರುವ ಪಾತ್ರಗಳು ಸಾಕ್ಷಿಯಾಗುತ್ತವೆ. ರಂಗವ್ವ ಎನ್ನುವವಳು ಬಸವಣ್ಣನವರಿಗೆ ನೀವು ಪವಾಡ ಪುರುಷರು ಎಂದಾಗ ದಂಗು ಬಡಿದ ಬಸವಣ್ಣ ನಾನು ಪವಾಡ ಪುರುಷನಲ್ಲ, ಎನ್ನುತ್ತಿದ್ದಂತೆಯೇ ಇನ್ನೊಂದು ಪಾತ್ರ ಈ ಪವಾಡವನ್ನು ನಿನ್ನ ಶಿವ ಮಾಡಿದ್ದಾನೆ ಅಂದರೆ ಶಿವ ಮತ್ತು ನೀನು ಬೇರೆ ಬೇರೆಯಲ್ಲ ಎಂಬ ವಿವರಗಳು ಇಲ್ಲಿ ವ್ಯಕ್ತವಾಗಿವೆ.

"ರಂಗವ್ವ : ನೀ ಮಾಮನೀ ವೆಚ್ಚಕಂತ ಬೊಕ್ಕಸದಾಗಿಂದ ರೊಕ್ಕ ಇಸಗೊಂಡಿದ್ದೀಯಂತ... ಐವತ್ತು ಸಾವಿರ ಹೊನ್ನು. ಅದನ್ನ ಶಿವ ಮತ್ತೆ ತುಂಬಿ ಕೊಟ್ಟನಂತೆ. ಸಣ್ಣ ಧಣೇರು ಲೆಕ್ಕ ಎಣಿಸಿದರೆ ಒಂದು ದುಗ್ಗಾಣಿ ಕಮ್ಮಿಯಿದ್ದಿದ್ದಿಲ್ಲಂತ.

ಬಸವಣ್ಣ : (ಬೆದರಿದವನಂತೆ) ಪವಾಡ? ಛೆ, ಛೆ, ಶಾಂತಂ ಪಾಪಂ!

**ಮುದುಕ** : ಎಣಿಸಿಧಾಂಗ ಖಾಲಿ ಚೀಲ ತುಂಬಿಕೋಟಿದ್ದವು. ಅಮ್ಯಾಗ ಅಮ್ಯಾಗಂತೀ ಗಲ್ಲಿಸಿ ಗಲ್ಲಿಸಿ ತುಂಬಿದರೂ ಹೊನ್ನು ಹೊರ್‍ಯಾಕ ಸುರಿಯಾಕ ಹತ್ತಿದವು....."[೬೧]

ಎಂದಾಗ ಬಸವಣ್ಣನವರು ಬೊಕ್ಕಸದಾಗಿನ ಹಣವನ್ನು ನಾನು ಕದ್ದಿದ್ದೇನೆ ಎಂಬುದನ್ನು ನಂಬುತ್ತೀರಾ ಎಂಬುದಾಗಿ ನಡೆಯುತ್ತಾನೆ. ಆಗ ಬಿಜ್ಜಳನು ಬಸವಣ್ಣನವರೇ ಇವತ್ತು ಭಕ್ತಿಭಂಡಾರಿ ಪವಾಡ ಪುರುಷ ಎಂದು ಕರೆಯುವ ಜನ ನಾಳೆ ಕಳ್ಳ ಬಸವಣ್ಣನೆಂತಲೂ ಕರೆಯಲು ಹಿಂದೆ-ಮುಂದೆ ನೋಡದೇ ಕರೆಯುವ ಸಂದರ್ಭ ಬಂದರೂ ಬರಬಹುದು ಎಂದಾಗ ಬಸವಣ್ಣನವರು ಲಜ್ಜೆ ಭಂಡನ ಸಲುವಾಗಿ ಶಿವ ಪವಾಡ ಮಾಡ್ತಾನ ಅಂತೇಳಿ ತಲೆದಂಡಕ್ಕೆ ಸಿದ್ಧನಾಗುತ್ತಾನೆ. ಆಗ ಅಲ್ಲಿರುವ ಬಿಜ್ಜಳ, ಮಂಚಣ್ಣ ಕ್ರಮಿತ ಮತ್ತು ಕಲ್ಲಪ್ಪ ಎಂಬ ಪಾತ್ರಗಳು ಬಸವಣ್ಣನ ಪವಾಡದ ಸಾದೃಶ್ಯವನ್ನು ಕಂಡು ಆಶ್ಚರ್ಯಚಕಿತರಾಗಿ ನಿಲ್ಲುತ್ತಾರೆ. ಈಗಾಗಲೇ ಗಮನಿಸಿರುವಂತೆ ಬಸವಣ್ಣನವರು ಮಹಾಮನೆಯ ಮೂಲಕ ಆರ್ಥಿಕ ಸುಧಾರಣೆಯನ್ನು ತರುವಲ್ಲಿ ಮುಂದಾದದ್ದು ಗಮನೀಯವಾಗಿದೆ. ಮಂತ್ರಿಗಳು, ಜನಸಾಮಾನ್ಯರು ಹಾಗೂ ಕಳ್ಳರ ಕಣ್ಣಿಗೆ ಅಪರಾಧಿಯಾಗಿ ನಿಂತ ಬಸವಣ್ಣ ಮಹಾಮನೆಯಲ್ಲಿ ಶರಣರ ದಾಸೋಹಕ್ಕೆ ಬೆನ್ನೆಲುಬಾಗಿ ನಿಂತಿರುವುದನ್ನು ಕಾಣುತ್ತಾರೆ. ಅಷ್ಟೇ ಅಲ್ಲದೇ ಕಳ್ಳರು ಶರಣರ ವೇಷ ಧರಿಸಿ ಮಹಾಮನೆಗೆ ಬಂದು ಅಲ್ಲಿರುವ ದಾಸೋಹಕ್ಕೆ ಬಿಟ್ಟಿ ಕೂಳು ಎಂದು ಹೀಯಾಳಿಸಿ ಮಹಾಮನೆ ಸೇರುವ ಮುಂಚೆ ಮಾತನಾಡುವ ಕಳ್ಳಪಾತ್ರದಾರಿಗಳ ವಿಚಾರ ಹೀಗಿವೆ.

"**ಬಂಟರು** : ದಾಸೋಹದ ನಿತ್ಯ ಬಿಟ್ಟಿ ಕೂಳು ಕಬಳಿಸೋದನ್ನು ಬಿಟ್ಟರೆ ಅಲ್ಲಿ ನಮಗೆ ಇನ್ನೇನು ಕೆಲಸ ಇರತೈತಣ್ಣ?

**ಮಾರಿ** : ಬಿಟ್ಟಿಕೂಳು ಕಬಳಸೋ ಕೆಲಸ ಅಲ್ಲ. ಮಹಾಮನಿ ಒಳಗ ಅಡಗಿಸಿಟ್ಟುಕೊಂಡಿರೋ ಕಳ್ಳ ಸಂಪತ್ತನ್ನು ಹುಡುಕಿ ನಮ್ಮ ವಶಮಾಡಿಕೊಳ್ಳೋ ಕೆಲಸ... ನಿತ್ಯ ದಾಸೋಹದ ಗುಟ್ಟನ್ನು ಭೇದಿಸೋ ಕೆಲಸ... ನಿತ್ಯ ದಾಸೋಹದ ಗುಟ್ಟನ್ನು ಭೇದಿಸಿ ಲೋಕಕ್ಕೆ ಬಟ್ಟ ಬಯಲು ಮಾಡೋ ಕೆಲಸ... ಆಸೆಯಿಲ್ಲದ ನರರಿಲ್ಲ. ಮೋಸವಿಲ್ಲದ ಸಿರಿಯಿಲ್ಲ. ಆ ಭೋಳೇ ಜಂಗಮರು ನಮಗೆ ಬೋಧಿಸಲಿಕ್ಕೆ ಹೊರಟಿದ್ದರಲ್ಲ, ಅವರ ಮಹಾತ್ಮನ ಮುಖವಾಡ ಕಳಚಿ, ಯಾರು ಕಳ್ಳರು – ಯಾರು ಬಲುಗಳ್ಳರೆಂಬುದನ್ನು ಲೋಕಕ್ಕೇ ಬಯಲು ಮಾಡಿ ತೋರಿಸೋಣ.[೬೨]

ಹೀಗೆ ಬಂದ ಕಳ್ಳರು ಜಂಗಮರ ವೇಷ ಧರಿಸಿ ಮಹಾಮನೆಯಲ್ಲಿರುವ ಒಡವೆಗಳನ್ನು ಕದಿಯಲು ಮುಂದಾಗುತ್ತಾರೆ. ಈ ಕಳ್ಳ ವೇಷ ಶರಣರ ಬಗ್ಗೆ ಬಸವಣ್ಣನವರಿಗೆ ಗೊತ್ತಿದ್ದರೂ ಅವರಿಗೆ ಏನೂ ಅನ್ನದೇ ಶರಣರ ದಾಸೋಹಕ್ಕೆ ಮುಂದಾಗುತ್ತಾನೆ. ಆಗ ಕಾಲುದಾರಿಯಲ್ಲಿ ನಡೆಯುತ್ತಿದ್ದ ವೇಷಧಾರಿ ಜಂಗಮನೊಬ್ಬ ಅಲ್ಲಿರುವ ಮಹಿಳೆಗೆ ಹುಲ್ಲಿನ ಹೊರೆಯನ್ನು ಹೋರಿಸಿ ಬಸವಣ್ಣನ ತತ್ವವನ್ನು ಆಕೆಯಿಂದ ತಿಳಿದುಕೊಳ್ಳುತ್ತಾನೆ. ಮಲ್ಲವ್ವ ಎನ್ನುವವಳು

ಬಸವಣ್ಣನ ಹತ್ತಿರ ಬಂದು ಆ ಕಳ್ಳ ವೇಷಧಾರಿಯ ಬಗ್ಗೆ ಪ್ರಸ್ತಾಪಿಸುತ್ತಾರೆ. ಆಗ ಬಸವಣ್ಣನವರು ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ... ಎಂದು ಹೇಳುವುದರ ಮೂಲಕ ಆ ಕಳ್ಳನಿಗೆ ಲಿಂಗಧಾರಣೆ ಮಾಡಿಸಿ ಬದಲಾವಣೆ ಮಾಡುತ್ತಾನೆ. ಹೀಗೆ ಬಸವಣ್ಣನವರು ಕಳ್ಳನ ಮನಸ್ಸನ್ನು ತಿದ್ದಬೇಕೆಂಬ ವಿಚಾರಕ್ಕೆ ಮುಂದಾದಾಗ ಮತ್ತೊಬ್ಬ ಕಳ್ಳ ಮಹಾಮನೆಯಲ್ಲಿ ಏನೂ ಸಿಗದಿದ್ದಾಗ ಬಸವಣ್ಣನ ಪತ್ನಿಯ ಮಾಂಗಲ್ಯವನ್ನು ಕದಿಯುತ್ತಾನೆ. ಎಚ್ಚರಗೊಂಡ ಗಂಗಾಂಬಿಕೆ ಕೂಗಿಕೊಳ್ಳಲಾಗಿ ಕಳ್ಳನನ್ನು ಕರೆಯಿಸಿದ ಬಸವಣ್ಣ, ನಾನೇ ಸಜೀವನಾಗಿರುವಾಗ ಆ ಚಿನ್ನದ ತಾಳಿಗೇಕೆ ಮೋಹಪಡುವೆ ಎಂದು ಹೇಳುವುದರ ಮೂಲಕ ಉಳಿದೆಲ್ಲ ಒಡವೆಗಳನ್ನು ಕಳ್ಳನಿಗೆ ಅರ್ಪಿಸುತ್ತಾನೆ. ಅಲ್ಲದೇ ಕಳ್ಳನನ್ನು ವಿಚಾರ ಮಾಡಲಾಗಿ ಆಗ ಕಳ್ಳನು ಇದಕ್ಕೆ ಕಾರಣ ನನ್ನ ಬಡತನವೆಂದು ಉತ್ತರಿಸುತ್ತಾನೆ. ಬಡತನವೆಂಬುದು ಆರ್ಥಿಕತೆಯ ಒಂದು ಭಾಗ ಎಂದು ತಿಳಿದ ಬಸವಣ್ಣ ಬಡತನದ ಬವಣೆಯನ್ನು ನಿವಾರಿಸಬೇಕೆಂದು ಹೇಳುತ್ತಿದ್ದಂತೆಯೇ ಕಳ್ಳನ ಮನಸ್ಸು ಪರಿವರ್ತನೆಯಾಗಿ ನಾನು ನಿಜವಾದ ಜಂಗಮನಲ್ಲ. ನೀವು ನನ್ನನ್ನು ಜಂಗಮನೆಂದು ಕರೆದು ಪಾಪಕುಂಡಕ್ಕೆ ಎಳೆಯಬೇಡಿ ಎಂದು ಅಂಗಾಲಾಚುತ್ತಾನೆ. ಹಾಗಾದರೆ ನಿನ್ನ ಕೊರಳಲ್ಲಿರುವ ಲಿಂಗ ಜಂಗಮವಲ್ಲದೇ ಮತ್ತೇನು ಎಂದು ಪ್ರಶ್ನಿಸಿದಾಗ ಕಳ್ಳ ಇದು ಲಿಂಗವಲ್ಲ. ನಾನು ಕಟ್ಟಿರುವ ಸೋಗಿನ ಕಲ್ಲು ಎನ್ನುತ್ತಾನೆ. ಆಗ ಬಸವಣ್ಣನವರು ಆತನನ್ನು ಪರಿವರ್ತನೆ ಮಾಡುತ್ತಾರೆ. ಬಸವಣ್ಣನ ದಯಾಳು ಗುಣದಿಂದ ಎಚ್ಚೆತ್ತ ನಿಜ ಕಳ್ಳನು ಬುದ್ಧನಿಂದ ಅಂಗುಲಿಮಾಲಾ ಎಂಬ ರಾಕ್ಷಸ ಹೇಗೆ ಪರಿವರ್ತನೆಯಾದನೋ, ಹಾಗೇ ಬಸವಣ್ಣನಿಂದ ಕಳ್ಳ ಪರಿವರ್ತನೆಯಾಗುವುದರ ಮೂಲಕ ಜಂಗಮತತ್ವವನ್ನು ಪರಿಪಾಲಿಸುತ್ತಾನೆ. ಇನ್ನು ಕೆಲವು ನಾಟಕಗಳಲ್ಲಿ ಬಸವಣ್ಣನವರ ಮಹಾಮನೆಗೆ ಶರಣರಾಗಿ ಬಂದು ಮೇಯಲು ಹೋದ ದನಗಳನ್ನು ಹೊಡೆದುಕೊಂಡು ಹೋದಾಗ ಕಾಯಲು ಹೋದ ವ್ಯಕ್ತಿ ಓಡಿ ಬಂದು ಬಸವಣ್ಣನಿಗೆ ತಿಳಿಸುತ್ತಾನೆ. ಆಗ ಬಸವಣ್ಣ ದನಗಳ ಜೊತೆಗೆ ಮನೆಯಲ್ಲಿರುವ ಕರುಗಳನ್ನು ಬಿಚ್ಚಿ ಬಿಡಿ ತಾಯಿ ಮತ್ತು ಮಕ್ಕಳನ್ನು ಅಗಲಿಸುವುದು ಮಹಾಪಾಪ ಎಂದಾಗ ಅಲ್ಲಿ ಕೂಡ ಬಸವಣ್ಣನವರ ನೈತಿಕತೆಗೆ ಕಳ್ಳ ವೇಷಧಾರಿಗಳು ಬದಲಾಗುತ್ತಾರೆ.

ಈ ಎಲ್ಲಾ ಅಂಶಗಳು ಬಸವಣ್ಣನ ಮಾನವೀಯತೆಯ ಅಂಶವನ್ನು ಎತ್ತಿ ಹಿಡಿಯುತ್ತವೆ. ಏಕೆಂದರೆ ಬಸವಣ್ಣ ಶರಣನಾಗಿ, ಭಕ್ತನಾಗಿ, ಮಹಾಮಂತ್ರಿಯಾಗಿ ಮತ್ತು ಅರ್ಥಮಂತ್ರಿಯಾಗಿ ಆ ರಾಜ್ಯದಲ್ಲಿರುವ ಬಡತನದ ಬವಣೆಯನ್ನು ನೀಗಿಸಲು ಪ್ರಯತ್ನಿಸಿರುವುದು ಸ್ವಾಗತಾರ್ಹವಾದುದು. ಇಂತಹ ತತ್ವ ಮತ್ತು ಆದರ್ಶಗಳನ್ನು ಪ್ರತಿಯೊಬ್ಬರು ಜೀವನದಲ್ಲಿ ಅಳವಡಿಸಿಕೊಂಡರೆ ಈ ದೇಶದಲ್ಲಿ ಎನ್ನುವುದಕ್ಕಿಂತ ಈ ಜಗತ್ತಿನಲ್ಲಿಯೇ ಬರಗಾಲ, ಕ್ಷಾಮ, ಮಿಗಿಲಾಗಿ ಬಡತನವೆಂಬ ಆರ್ಥಿಕ ಅಸಮಾನತೆಯು ತೊಲಗುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ. ಆದರೂ ಭಾರತ ಅಭಿವೃದ್ಧಿ ಹೊಂದಿದ ರಾಷ್ಟ್ರವೆಂದು ಹೇಳಿಕೊಳ್ಳುವ ಮೂಲಭೂತವಾದಿಗಳಿಗೆ ಬಸವಣ್ಣನವರ ತತ್ವ ಆಚಾರಕ್ಕೆ ಬಾರದೇ ಇರುವುದು ದುರಂತವೇ ಸರಿ. ಅರಮನೆಯ ಜೊತೆಗೆ ಮಹಾಮನೆಯ

ಮೂಲಕ ಬಸವಣ್ಣನವರು ಮಾಡಿರುವ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸುಧಾರಣೆಗಳಿಗೆ ಮಹತ್ವ ಬೀರಿರುವ ಅಂಶ ಮಹತ್ವದ್ದಾಗಿದೆ.

### ೩.೪. ರಾಜಕೀಯಕ್ಕೆ ಸಂಬಂಧಿಸಿ ಗ್ರಹಿಕೆಗಳು

೧೨ನೇ ಶತಮಾನದ ಸಾಮಾಜಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಯನ್ನು ಗಮನಿಸಿದ ಬಸವಾದಿ ಶಿವಶರಣರು ಅಮೂಲಾಗ್ರವಾಗಿ ಸಮಾಜವನ್ನು ಬದಲಾಯಿಸಬೇಕೆಂಬ ನಿಟ್ಟಿನಲ್ಲಿ ಸಾಕಷ್ಟು ಹೋರಾಟಗಳನ್ನು ಮಾಡಿದರು. ಏಕೆಂದರೆ ರಾಜಕೀಯ ಮತ್ತು ಪ್ರಭುತ್ವ ಆಗಿನ ಆಳರಸರ ಧ್ಯೇಯವಾಗಿತ್ತು. ಹೀಗಾಗಿ ಬಸವಣ್ಣನವರು ಸಮಾಜದ ಅನಿಷ್ಟಗಳನ್ನು ಹೋಗಲಾಡಿಸಲು ಪ್ರಭುತ್ವದೊಡನೆ ಹೋರಾಟಕ್ಕಿಳಿಯುವಂತಹ ಸಂದರ್ಭ ಬಂದರೂ ಅದರ ವಿರುದ್ಧ ಹೋರಾಟಕ್ಕಿಳಿಯದೇ ಸಮಾಜಪರ ಚಿಂತನೆಯನ್ನು ಮುಂದಿಟ್ಟರು. ಈ ಮುಂಚೆ ಪ್ರಚಲಿತದಲ್ಲಿದ್ದ ರಾಜವರ್ಗ, ಪ್ರಜಾವರ್ಗ ಮತ್ತು ಪುರೋಹಿತವರ್ಗ ಮುಖ್ಯವಾಗಿದ್ದಂತಹ ಕಾಲದಲ್ಲಿ ಭಕ್ತಿವರ್ಗ ಎಂಬ ಪ್ರಭುತ್ವವನ್ನು ಸ್ಥಾಪಿಸುವುದರ ಮೂಲಕ ಸಮಾನತೆಗೆ ಮಾಡಿದ ಕ್ರಾಂತಿ ಶ್ಲಾಘನೀಯ ವಾದುದು. ಅಂದರೆ ಮಂತ್ರಿಯಾದ ಬಸವಣ್ಣನಲ್ಲಿ ರಾಜಕೀಯದ ರಾಜಸತ್ತೆಯ ಪರ್ಯಾಯ ವಾಗಿರುವ ಪ್ರಭುತ್ವ ಇರುವುದು ಕಂಡುಬಂದರೂ ಅದನ್ನು ಪ್ರತ್ಯೇಕವಾಗಿ ಕಾಣದೇ ಧರ್ಮ ಮತ್ತು ಸಮಾಜಮುಖಿಯಾಗಿ ನಿಂತು ತಮ್ಮ ತತ್ವಗಳನ್ನು ಬೋಧಿಸಿರುವುದು ನಿದರ್ಶನವಾಗಿದೆ. ಅಂದರೆ ಹೀಗಾಗಲೇ ಮಂತ್ರಿಯಾಗಿರುವ ಬಸವಣ್ಣ ಅರಸನ ಕಾಲದ ರಾಜಕೀಯ ವ್ಯವಸ್ಥೆಯಿಂದಲೇ ತಾನು ಬಯಸಿದ ಕ್ರಾಂತಿಯಾಗಬೇಕೆಂದು ಕನಸು ಕಂಡವನೇ ಹೊರತು ಪರ್ಯಾಯ ರಾಜಕೀಯ ವ್ಯವಸ್ಥೆಯನ್ನು ರೂಪಿಸಲಿಲ್ಲ. ಕಾರಣ ಅಂದಿನ ರಾಜಸತ್ತೆಯ ಸಂವಿಧಾನ ಅರಸರಿಗೆ ಮೀಸಲಾಗಿದ್ದು, ಪ್ರಜೆಗಳೆಲ್ಲರೂ ಅರಸರ ಕೈಕೆಳಗೆ ಇರಬೇಕೆಂಬ ನಿಲುವು ಅಲ್ಲಿತ್ತು. ಅಂತಹ ಸಂದರ್ಭದಲ್ಲಿ ಬಸವಣ್ಣನವರು ಮಂತ್ರಿಯಾಗಿ ಪ್ರಜೆಗಳ ಪರವಾಗಿ ಮಾತನಾಡುವುದರ ಮೂಲಕ ಅಧಿಕಾರ ಎಂಬ ಗದ್ದುಗೆಯನ್ನು ಕೊಟ್ಟಿದ್ದು ಪ್ರಜೆಗಳೇ ಹೊರತು ರಾಜಕೀಯ ಸಂವಿಧಾನವಲ್ಲ ಎಂದು ತಿಳಿದ ಬಸವಣ್ಣ ಅಧಿಕಾರ ಕೇಂದ್ರಿತ ರಾಜಕಾರಣದ ವಿರುದ್ಧ ಸಿಡಿದೇಳುವುದರ ಮೂಲಕ ಪ್ರಜೆಗಳ ಹಿತಕ್ಕೆ ಬದ್ಧನಾಗುತ್ತಾನೆ.

ಈಗಾಗಲೇ ಬಸವಣ್ಣನವರು ಅರಮನೆಯಲ್ಲಿದ್ದುಕೊಂಡು ಮಹಾಮನೆ ಅಥವಾ ಅನುಭವ ಮಂಟಪವನ್ನು ಸ್ಥಾಪನೆ ಮಾಡುವುದರ ಮೂಲಕ ಅದರಿಂದ ಸಮಾಜ ಸುಧಾರಣೆಯಾಗಬೇಕೆಂಬ ಕನಸು ಅವರದ್ದಾಗಿತ್ತು. ಹೀಗಾಗಿ ಇತ್ತೀಚಿನ ವಿಚಾರವಂತರು ಅನುಭವಮಂಟಪವನ್ನು ಈಗಿನ ಸಂಸತ್ತಿಗೆ ಹೋಲಿಸಿ ಬಸವಣ್ಣನವರ ಜೀವಪರ ಕಾಳಜಿಯನ್ನು ಎತ್ತಿಹಿಡಿದಿದ್ದಾರೆ. ಹಾಗೇ ನೋಡಿದರೆ ಬಸವಣ್ಣನವರು ಬಾಲ್ಯದಿಂದಲೂ ನಿರಾಕರಿಸಿದ್ದು ಸಂಪ್ರದಾಯ, ಅನಿಷ್ಟ ಪದ್ಧತಿಗಳಾದ ಜಾತಿ, ಮೂಢನಂಬಿಕೆ, ಆಚಾರ ವಿಚಾರಗಳು, ಲಿಂಗ-ತಾರತಮ್ಯ ಮುಂತಾದವುಗಳ ವಿರುದ್ಧ ತನ್ನ ಜ್ಞಾನದ ಮೂಲಕ ಪ್ರತಿಭಟಿಸಿದ ಬಸವಣ್ಣ ಮಂತ್ರಿಯಾಗಬೇಕೆಂಬ ಕನಸು ಕಂಡವನಲ್ಲ. ಆದರೆ ಕೂಡಲಸಂಗಮದಲ್ಲಿ ತನ್ನ ಜ್ಞಾನಚಿತ್ತದಿಂದ ಮತ-ಮಾನ್ಯಗಳ ಭ್ರಷ್ಟಾಚಾರವನ್ನು

ಬಯಲಿಗೆಳೆದಾಗ ತನ್ನ ಗುರು ಜಾತವೇದ ಮುನಿಗಳ ಮಾತುಗಳನ್ನು ಕೇಳಿ ತನ್ನ ಮಾವನಾದ ಜಗದೇವನಲ್ಲಿಗೆ ಬರುತ್ತಾನೆ. ಆಗಾಗಲೇ ಜಗದೇವನು ಬಿಜ್ಜಳನ ಮಂತ್ರಿಯಾಗಿ ಸೇವೆ ಸಲ್ಲಿಸುತ್ತಿದ್ದನೆಂಬುದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಜಗದೇವನ ಜೊತೆಗಿದ್ದ ಬಸವಣ್ಣನ ಬುದ್ಧಿವಂತಿಕೆಯನ್ನು ಮೆಚ್ಚಿದ ಬಿಜ್ಜಳ ಅರಸನು ಕರಣಿಕನನ್ನಾಗಿ ನೇಮಿಸಿಕೊಳ್ಳುತ್ತಾನೆ. ಕಾಯಕವನ್ನು ಹರಸಿ ಬಂದ ಬಸವಣ್ಣನಿಗೆ ರಾಜಕೀಯದ ಮೂಲಕ ಮಹಾಮಂತ್ರಿಯಾಗಿ ಕಾರ್ಯತತ್ಪರನಾಗುತ್ತಾನೆ ಎಂದರೆ ಬಹಳ ಆಶ್ಚರ್ಯದ ಸಂಗತಿಯಾಗಿದೆ. ಅಂದರೆ ಬಸವಣ್ಣನಿಗೆ ಅಧಿಕಾರ ದಾಹವೆಂಬುದು ಇಲ್ಲ. ಮುಖ್ಯವಾದ ಸಂಗತಿಯೆಂದರೆ ಆತನಲ್ಲಿ ಅಡಗಿರುವುದು ಕಾಯಕಪ್ರಜ್ಞೆ ಮತ್ತು ಸೇವಾ ಮನೋಭಾವನೆ. ಇದರಿಂದಲೇ ಧರ್ಮ, ಸಮಾಜ ಎಷ್ಟು ಮುಖ್ಯವೋ, ಅಷ್ಟೇ ರಾಜಕೀಯದಿಂದ ಜನರ ಸೇವೆ ಸಲ್ಲಿಸಬೇಕೆಂಬ ಅಭಿಲಾಷೆಯನ್ನು ಹೊತ್ತ ಬಸವಣ್ಣ ಕುರಿತ ನಾಟಕಗಳು ತಮ್ಮ ವಾಸ್ತವಿಕ ಅಂಶಗಳನ್ನು ಮುಂದಿಡುತ್ತವೆ.

ಈ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಬಸವಣ್ಣನವರು ಕರಣಿಕನಾಗಿ ಮಾಡುವ ಕಾಯಕ ಮತ್ತು ಆತನ ವಿಚಾರಗಳು ಬಿಜ್ಜಳನಿಗೆ ಆಶ್ಚರ್ಯದಂತೆ ಕಂಡರೂ ಅಂತರಂಗದಲ್ಲಿ ಅವು ಬಿಜ್ಜಳನನ್ನು ವಿಚಾರಕ್ರಾಂತಿಗೆ ಎಳೆದೊಯ್ಯುತ್ತವೆ. ಬಸವಣ್ಣ ಹೇಳಿದ ಒಂದೊಂದು ಮಾತುಗಳು ಬಿಜ್ಜಳನ ಮನಸ್ಸನ್ನು ಚರ್ಚಿಸುವಂತೆ ಮಾಡುತ್ತವೆ. ಆಗ ಬಿಜ್ಜಳ ಅರಸನು ಬಸವಣ್ಣನನ್ನು ಕರೆಯಿಸಿ ತಾವು ಹೇಳಿದ ಅರ್ಹತೆಯಿಂದ ಅಧಿಕಾರ ಎಂಬ ಮಾತಿನ ವಿವರಣೆ ಸರಿಯಾಗಿ ಅರ್ಥಮಾಡಿಸಬೇಕು. ಏಕೆಂದರೆ ಅರ್ಹತೆ ಎನ್ನುವ ಪದ ಅವನ ಯೋಗ್ಯತೆಯನ್ನು ಗುರುತಿಸುತ್ತದೆ. ಅದಕ್ಕಾಗಿ ಈ ಪದದ ಅರ್ಥ ವಿವರಣೆ ನನಗೆ ಮೊದಲು ತಿಳಿಯಬೇಕು ಎಂದಾಗ ಬಸವಣ್ಣನವರು ಅರ್ಹತೆಯುಳ್ಳವರು ರಾಜ್ಯಾಧಿಕಾರ ಪಡೆಯಬಹುದು ಎಂಬ ಮಾತಿಗೆ ಬಸವಣ್ಣನವರ ವಿಚಾರ ಈ ಕೆಳಗಿನಂತೆ ವ್ಯಕ್ತವಾಗಿದೆ.

"**ಬಸವಣ್ಣ** : ಅಧಿಕಾರ ಯಾರೊಬ್ಬರ ಸ್ವತ್ತಲ್ಲ ಪ್ರಭು. ಅರ್ಹತೆಯಿಲ್ಲದಿದ್ದರೂ ರಾಜನ ಮಗನೆಂಬ ಒಂದೇ ಕಾರಣಕ್ಕೆ ಅವನ ರಾಜ್ಯಾಧಿಕಾರ ಮನ್ನಿಸಿದರೆ ನಾಡಿನ ಹಿತವಾಗದು. ಜಾತಿ, ವಂಶ ಅಥವಾ ಪರಂಪರೆಯ ಆಧಾರದ ಮೇಲೆ ಅಧಿಕಾರಕ್ಕೆ ಬಂದರೆ ಜನರ ಕ್ಷೇಮವಾಗದು. ದುರ್ವ್ಯಸನ, ದುರಭ್ಯಾಸಗಳಲ್ಲಿ ಮುಳುಗಿ ಪ್ರಜಾಹಿತವನ್ನು ಕಡೆಗಣಿಸುವ ರಾಜನನ್ನು ಸಿಂಹಾಸನದಿಂದ ಕೆಳಗಿಳಿಸಿ ಅರ್ಹರು ಆ ಸ್ಥಾನವನ್ನು ತುಂಬಬೇಕು.

**ಬಿಜ್ಜಳ** : ಸಂಪ್ರದಾಯ ಎನ್ನುವುದೊಂದು ಇದೆಯಲ್ಲಾ?

**ಬಸವಣ್ಣ** : ಸಂಪ್ರದಾಯವನ್ನು ಪ್ರಶ್ನಿಸಬೇಕು ಪ್ರಭು. ಯಾರು ಏನು ಹೇಳುತ್ತಾರೆ ಎನ್ನುವುದು ಮುಖ್ಯವಲ್ಲ. ವಿವೇಕ ಹೇಳಿದಂತೆ ನಡೆಯಬೇಕು. ಆತ್ಮವಂಚನೆ ಮಾಡಿ ಕೊಳ್ಳಬಾರದು".[೬೩]

ಅಂದರೆ ಇಲ್ಲಿ ಮುಖ್ಯವಾಗಿರುವ ಸಂಗತಿ ಪ್ರಜೆಗಳ ಮತ್ತು ಜನಸಾಮಾನ್ಯರ ಹಿತದೃಷ್ಟಿ, ಏಕೆಂದರೆ ಅಧಿಕಾರ ಆಳುವ ವರ್ಗಕ್ಕೆ ಸೇರಿದರೆ ಅಧಿಕಾರವನ್ನು ಕೊಟ್ಟ ಪ್ರಜೆಗಳು ಆಳಿಸಿಕೊಳ್ಳುವ ವರ್ಗಕ್ಕೆ ಸೇರಿಕೊಳ್ಳುತ್ತಾರೆ. ಹೀಗಾಗಿ ಬಸವಣ್ಣನವರು ಆಳುವ ಮತ್ತು ಅಳಿಸಿಕೊಳ್ಳುವವರ ನಡುವಿನ ವ್ಯತ್ಯಾಸವನ್ನು ಕಡೆಗಣಿಸಿ ಸಮಾನತೆಗಾಗಿ ಹಾತೊರೆದಿದ್ದಾರೆ. ಇಂತಹ ಬಸವಣ್ಣನಿಗೆ ಈಗಾಗಲೇ ರಾಜ್ಯಮಂತ್ರಿಯಾದ ಬಲದೇವನು ಬಸವಣ್ಣನನ್ನು ಕುರಿತು ರಾಜ್ಯಸೇವೆ ಮಾಡಿದ ತಾನು ಹಣ್ಣಾದ ಸಂದರ್ಭದಲ್ಲಿ ನನ್ನ ಆತ್ಮಕ್ಕೆ ಶಾಂತಿ ದೊರೆಯಬೇಕಾದರೆ ರಾಜ್ಯದ ಅಧಿಕಾರ ವಹಿಸಿಕೊಂಡ ನೀನು ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಸೇವೆಸಲ್ಲಿಸಬೇಕು. ಏಕೆಂದರೆ ಮಂಚಣ್ಣನಂತಹ ಕುಟೀಲ ಮಂತ್ರಿಗಳು ಹೇಳುವ ಅವಿವೇಕಿತನದ ಪರಮಾವಧಿಗೆ ಕಿವಿಗೊಡದೇ ರಾಜ್ಯಸೇವೆಯೇ ಜನಸೇವೆ ಎಂದು ಪರಿಪಾಲಿಸಬೇಕು. ಜನಸೇವೆಯೇ ಜನಾರ್ದನನ ಸೇವೆ, ದೇಶಸೇವೆ ಎಂಬ ಮಾತುಗಳು ನಿನ್ನ ಸೇವೆಗೆ ಸಾಕ್ಷಿಯಾಗಬೇಕು. ಇದಕ್ಕೆ ಮುಖ್ಯ ಕಾರಣವೆಂದರೆ ಕಾಯಕನಿಷ್ಠೆ. ಇದೆಲ್ಲಾ ಬಸವಣ್ಣನಿಗೆ ಗೊತ್ತಿದ್ದರೂ ಎನಗಿಂತ ಕಿರಿಯರಿಲ್ಲ ಎಂಬ ಮಾತಿನಂತೆ ಹಿರಿಯರ ಮಾರ್ಗದರ್ಶನವನ್ನು ಪಡೆದ ಬಸವಣ್ಣ ಅದಕ್ಕೆ ಸಮ್ಮತಿಯನ್ನು ಸೂಚಿಸುತ್ತಾನೆ. ಇದರ ಹಿಂದೆ ಮಹಾಮಂತ್ರಿಯಾಗಿದ್ದ ಬಲದೇವನು ಅಸುನೀಗುವ ಸಂದರ್ಭವೊದಗಿ ಬಂದಾಗ ಬಸವಣ್ಣನಿಗೆ ಈ ಮೇಲಿನಂತೆ ಉಪದೇಶ ನೀಡುತ್ತಾನೆ. ಕೊನೆಗೆ ಈ ಸಂಭಾಷಣೆಯಲ್ಲಿದ್ದಾಗ ಬಲದೇವನು ಅಸುನೀಗುತ್ತಾನೆ. ಗಂಗಾಂಬಿಕೆಯು ತಂದೆಯನ್ನು ಕಳೆದುಕೊಂಡ ದುಃಖದಲ್ಲಿದ್ದಾಗ ಬಸವಣ್ಣನವರು ಶರಣರ ಮರಣಕ್ಕೆ ಕಣ್ಣೀರು ಸುರಿಸಬಾರದು. ಈಗಾಗಲೇ ವಿಮುಕ್ತ ಜೀವನವನ್ನು ಸವೆಸಿದ ಮಹಾಮಂತ್ರಿಗಳಿಗೆ ಕರ್ಮದ ಬಂಧನಕ್ಕೆ ತರಿಸುವುದು ಬೇಡ, ಶಾಂತಳಾಗು ಎಂದು ಹೇಳುವುದರ ಮೂಲಕ ಸಾವು ಖಚಿತ ಎಂಬುದನ್ನು ಒತ್ತಿ ಹೇಳುತ್ತಾನೆ. ಅದು ಏನೇ ಇರಲಿ ಬಲದೇವನ ಮಂತ್ರಿ ಪದವಿಗೆ ಅರ್ಹತೆಯುಳ್ಳ ವ್ಯಕ್ತಿಯನ್ನು ನೇಮಿಸಬೇಕು ಎಂಬ ಪ್ರಶ್ನೆ ಬಂದಾಗ ಮೂಲಭೂತವಾದಿಗಳು ಮತ್ತು ಬಿಜ್ಜಳರ ನಡುವೆ ಸಂಭಾಷಣೆ ಏರ್ಪಡುತ್ತದೆ. ಅಲ್ಲದೇ ಸುಮಾರು ೪೦ ವರ್ಷಗಳ ಕಾಲ ಮಹಾಮಂತ್ರಿಯಾಗಿ ಸೇವೆ ಸಲ್ಲಿಸಿದ ಬಲದೇವ ಮಂತ್ರಿಗಳು ನಮ್ಮಿಂದ ದೂರವಾಗಿರೋದಕ್ಕೆ ಸಂತಾಪ ಸೂಚಿಸುವುದಲ್ಲದೇ ಇಡೀ ಕಲ್ಯಾಣವೇ ಅನಾಥವಾಗಿದೆ ಎಂಬ ಮಾತುಗಳನ್ನು ಆಡುತ್ತಾನೆ. ಹೀಗೆ ಬಲದೇವರನ್ನು ಕಳೆದುಕೊಂಡ ಬಿಜ್ಜಳನು ತೆರವಾಗಿದ್ದ ಮಂತ್ರಿ ಸ್ಥಾನಕ್ಕೆ ಯಾರನ್ನು ನೇಮಿಸಬೇಕು ಎಂಬ ವಿಚಾರದಲ್ಲಿದ್ದಾಗ ಅನೇಕ ರೀತಿಯ ಪರ ಮತ್ತು ವಿರೋಧಗಳು ಘಟಿಸುತ್ತವೆ. ಇದಕ್ಕೆ ಉದಾಹರಣೆ ಎಂಬಂತೆ ಹಲವಾರು ನಾಟಕಗಳು ಸಾಕ್ಷಿಯಾಗಿವೆ.

ತೆರವಾಗಿದ್ದ ಬಲದೇವನ ಮಂತ್ರಿಸ್ಥಾನಕ್ಕೆ ಯಾರನ್ನು ನೇಮಿಸಬೇಕೆಂಬ ವಿಚಾರದನ್ವಯ ಸಭೆಯನ್ನು ಕರೆದ ಬಿಜ್ಜಳನು ಸಭೆಯಲ್ಲಿದ್ದ ಎಲ್ಲರ ವಿಚಾರಗಳನ್ನು ಕೇಳಿಕೊಳ್ಳುತ್ತಾನೆ. ಈಗಾಗಲೇ ಆ ಸ್ಥಾನವನ್ನು ತುಂಬಲು ಬಸವಣ್ಣ ಅರ್ಹನಿದ್ದಾನೆ ಎಂಬುದು ಬಿಜ್ಜಳನಿಗೆ ಗೊತ್ತಿದ್ದರೂ ರಾಜಸತ್ತೆಯ ನಿಯಮದ ಪ್ರಕಾರ ಸಭೆಯನ್ನು ಕರೆದು ಕೇಳುವಾಗ ಕ್ರಮಿತ ಎಂಬ ಹಿರಿಯ ವ್ಯಕ್ತಿಗೆ ಬಿಜ್ಜಳ ಆ ಪದವಿಯನ್ನು ಸೂಚಿಸುತ್ತಾನೆಯಾದರೂ ಆಗ ಕ್ರಮಿತ ನನಗೆ ಪರಿಣತಿ

ಇರುವುದು ಪುರೋಹಿತದಲ್ಲಿಯೇ ಹೊರತು ರಾಜ್ಯದ ಆಡಳಿತದಲ್ಲಿ ಅಲ್ಲ. ಮಹಾಮಂತ್ರಿ ಸ್ಥಾನವೆಂಬುದು ಮಹತ್ತರವಾದ ಹೊಣೆಗಾರಿಕೆ. ಅಷ್ಟೇ ಜವಾಬ್ದಾರಿಯುತವಾದ ಸ್ಥಾನ. ಅನುಭವ, ದಕ್ಷತೆ, ಚಾಣಾಕ್ಷತೆ ಮತ್ತು ವಿವೇಚನೆ ಇವು ನಾಲ್ಕು ಗುಣಗಳು ಇದ್ದವರು ಮಾತ್ರ ಈ ಪದವಿಗೆ ಅರ್ಹರು ಎಂದು ಹೇಳುತ್ತಾನೆ. ಆಗ ಬಿಜ್ಜಳರು ಈ ನಾಲ್ಕು ಗುಣಗಳನ್ನು ಒಳಗೊಂಡವರು ಯಾರು ಎಂಬುದನ್ನು ಹೇಳದೇ ಮರೆಮಾಚುವಿರೆಲ್ಲಾ ಕ್ರಮಿತರೇ, ಎಂಬುದಾಗಿ ನುಡಿದು ಕೊನೆಗೆ ಮಧುವರಸರನ್ನು ಕೇಳಲಾಗಿ ಕ್ರಮಿತರ ವಿಚಾರವನ್ನು ಮುಂದಿಡುತ್ತಾನೆ. ಮುಂದುವರೆದು ಅರಸನು ಬಸವಣ್ಣನನ್ನು ಕೇಳಿದಾಗ ಕ್ರಮಿತ ಮತ್ತು ಮಧುವರಸರ ಮಾತುಗಳಿಗೆ ಪುಷ್ಠಿ ಕೊಡುತ್ತಾನೆ. ಕೊನೆಗೆ ಮಂಚಣ್ಣನವರು ಕೇಳಿದಾಗ ಮಂಚಣ್ಣನವರು ಬಿಜ್ಜಳರ ಮಾತನ್ನು ಅರ್ಥೈಸದೇ ತನಗೆ ಈ ಸ್ಥಾನವನ್ನು ನೀಡುತ್ತಾರೆ ಎಂಬ ಭ್ರಮೆಯಲ್ಲಿ ಮುಳುಗಿ ತಾವು ಒಂದು ವೇಳೆ ಈ ಜವಾಬ್ದಾರಿಯನ್ನು ವಹಿಸಿಕೊಟ್ಟಿದ್ದೇ ಆದರೆ ಅದನ್ನು ತಮ್ಮ ಆಜ್ಞೆಯಂತೆ ನಿರ್ವಹಿಸುತ್ತೇನೆ ಎಂಬುದರಲ್ಲಿ ಆ ಮಂತ್ರಿ ಸ್ಥಾನ ತನಗೆ ಸಿಗಬೇಕೆಂಬ ಬಯಕೆಯನ್ನು ಮುಂದಿಟ್ಟಿರುವ ವಿಚಾರ ಸ್ಪಷ್ಟವಾಗುತ್ತದೆ. ಇವರೆಲ್ಲರ ಅಭಿಪ್ರಾಯಗಳನ್ನು ಗಮನಿಸಿದ ಬಿಜ್ಜಳನು ಈ ಸ್ಥಾನಕ್ಕೆ ಹಿರಿಯರು, ಹಿರಿಯರಿಗಿಂತಲೂ ಅನುಭವಿಗಳಿಗೆ ಕೊಡುವುದು ಸೂಕ್ತ ಎನ್ನುತ್ತಾನೆ. ಹಾಗಾದರೆ ಅಂತಹ ಅನುಭವಿಗಳು, ಚತುರರು, ದಕ್ಷರು ಯಾರಿದ್ದಾರೆ ಪ್ರಭು? ಎಂಬುದಾಗಿ ಮಂಚಣ್ಣನವರ ಮಾತಿಗೆ ಬಿಜ್ಜಳ ಪ್ರತ್ಯುತ್ತರವಾಗಿ ಬಸವಣ್ಣನವರ ಹೆಸರನ್ನು ಪ್ರಸ್ತಾಪಿಸುತ್ತಾನೆ. ಆಗ ಎಲ್ಲರೂ ದಿಗ್ಭ್ರಾಂತರಾಗಿ ಬಸವಣ್ಣನ ಇರುವ ಜವಾಬ್ದಾರಿಯೇ ಸಾಕು. ಆತ ವಲ್ಲೆ ಎಂದರೂ ಅರಸರು ಒತ್ತಾಯಿಸುವುದು ಸೂಕ್ತವಲ್ಲ ಪ್ರಭು. ಏಕೆಂದರೆ ಬಸವಣ್ಣನಿಗೆ ಆ ಶಕ್ತಿ ಸಾಲದು ಎಂಬುದಾಗಿ ಮಂಚಣ್ಣನವರ ಮಾತಿಗೆ .

"ಬಿಜ್ಜಳ : ಮಂಚಣ್ಣನವರೇ, ಕ್ರಮಿತರೇ, ಅವರಿಗೆ ಇಷ್ಟವಿಲ್ಲದಿದ್ದರೂ ರಾಜ್ಯದ ಮತ್ತು ಪ್ರಜೆಗಳ ಹಿತದೃಷ್ಟಿಯಿಂದ ಬಸವಣ್ಣನವರೇ ಆ ಸ್ಥಾನಕ್ಕೆ ಸೂಕ್ತವೆಂದು ರಾಜ್ಯದ ಬಹುತೇಕ ಪ್ರಜೆಗಳ ಮನಸ್ಸಿನಲ್ಲಿ ಮೂಡಿರುವುದನ್ನು ನಮ್ಮ ಗೂಢಚರ್ಯೆಯ ವಿಭಾಗದಿಂದ ನಮ್ಮ ಗಮನಕ್ಕೆ ಬಂದಿರುತ್ತೆ ಮತ್ತು ನಮ್ಮ ಅನಿಸಿಕೆಯೂ ಅದೇ ಆಗಿರುತ್ತೆ. ಆದ್ದರಿಂದ ನಾವು ಅವರಿಗೆ ಒತ್ತಾಯಪೂರ್ವಕವಾಗಿ ಈ ಸ್ಥಾನವನ್ನು ವಹಿಸಿಕೊಳ್ಳಲೇಬೇಕೆಂದು ಕೇಳುವುದರಲ್ಲಿ ತಪ್ಪೇನಿಲ್ಲ... ಬಸವಣ್ಣಾ, ಇದು ನಮ್ಮ ಆಜ್ಞೆ ಎಂದು ತಿಳಿದು ಈಗ ನಾವು ವಹಿಸಲಿರುವ ಅಧಿಕಾರವನ್ನು ಸ್ವೀಕರಿಸಲೇ ಬೇಕು".[೬೪]

ಹೀಗೆ ಬಿಜ್ಜಳನ ಬಯಕೆಯಂತೆಯೇ ಮಹಾಮಂತ್ರಿ ಸ್ಥಾನವನ್ನು ಸ್ವೀಕರಿಸಿದ ಬಸವಣ್ಣ ತಮ್ಮ ಪ್ರೀತಿ-ವಿಶ್ವಾಸಗಳು ನನ್ನನ್ನು ಮೇಲೆತ್ತಿವೆ. ತಮ್ಮ ಆಜ್ಞೆಯನ್ನು ನಮ್ಮ ತಲೆಯ ಮೇಲೆ ಹೊತ್ತುಕೊಂಡಿದ್ದೇನೆ. ಆದರೆ ಒಂದು ವಿನಂತಿ ಏನೆಂದರೆ,

"ಬಸವಣ್ಣ : ಮಾನವನ ಆತ್ಮೋನ್ನತಿಯ ಮಾರ್ಗದಲ್ಲಿ ಧರ್ಮ ಒಂದು, ಆ ಧರ್ಮ ರಕ್ಷಣೆಯಲ್ಲಿ ಯಾವ ಆತಂಕ ಬಾರದಿದ್ದರೆ ನಾನು ಕಲ್ಯಾಣದ ಪ್ರಜಾ ಸೇವೆಗೆ ಈ ದೇಹವನ್ನು ಮುಡುಪಿಡುವೆನು.

ಬಿಜ್ಜಳ : ನಿಮ್ಮ ಮಾರ್ಗದಲ್ಲಿ ಯಾವ ಆತಂಕ ಬಾರದು, ಅದಕ್ಕೆ ಭಗವಂತನೇ ಸಾಕ್ಷಿ! ಮಂತ್ರಿಗಳೇ, ಪ್ರಜಾಪ್ರಮುಖರೇ, ನಮ್ಮ ನಾಡಿನ ಉನ್ನತಿಗಾಗಿ ಶ್ರೀ ಬಸವಂಣನವರನ್ನು ಮಹಾಮಂತ್ರಿಗಳನ್ನಾಗಿ ನೇಮಿಸಿದ್ದೇವೆ ಬನ್ನಿ ಬಸವಂಣ ನವರೇ, ಮಂತ್ರಿ ಪೀಠವನ್ನಲಂಕರಿಸಿರಿ."೬೨

ಹೀಗೆ ಬಿಜ್ಜಳನ ಹಾಗೂ ಜನರ ಅಭಿಪ್ರಾಯದಂತೆ ಬಸವಣ್ಣನು ಮಹಾಮಂತ್ರಿ ಸ್ಥಾನವನ್ನು ಅಲಂಕರಿಸುತ್ತಾನೆ. ಆದರೆ ಇಡೀ ರಾಜ್ಯದ ಮಂತ್ರಿಗಳು ರಾಜಾಜ್ಞೆಯನ್ನು ಮೀರದೇ ಒಪ್ಪಿಕೊಂಡರು. ಅಂತರಂಗದಲ್ಲಿ ಬಸವಣ್ಣನು ಮಂತ್ರಿಯಾಗಿ ಮುಂದುವರಿಯುವುದು ಉಳಿದ ಮಂತ್ರಿಗಳಿಗೆ ಇಷ್ಟವಿರಲಿಲ್ಲ. ಮುಂದೆ ಬಸವಣ್ಣನ ಸುಧಾರಣೆಗೆ ಅನೇಕ ಅಡ್ಡಿ ಆತಂಕಗಳು ಉಂಟಾಗಲು ಕಾರಣವಾಗುತ್ತವೆ ಎನ್ನುವುದನ್ನು ಗಮನಿಸಬಹುದು.

ಅಧಿಕಾರ ದಾಹವೆಂಬುದು ಪ್ರತಿಯೊಬ್ಬ ಮನುಷ್ಯನಿಗೂ ಇರುತ್ತದೆ. ಆದರೆ ಅದರಲ್ಲೂ ಈಗಾಗಲೇ ಸನಾತನ ಕಾಲದಿಂದಲೂ ನಡೆದುಬಂದಿರುವ ರಾಜಕೀಯ ಸ್ಥಿತ್ಯಂತರಗಳನ್ನು ಗಮನಿಸಿದಾಗ ೧೨ನೇ ಶತಮಾನದ ಸಂದರ್ಭದಲ್ಲಿ ಅಧಿಕಾರದ ಮೂಲಕ ಸಮಾನತೆಯನ್ನು ತರುವುದು ಒಂದೆಡೆಯಾದರೆ ಅಧಿಕಾರ ಬೇಡವೆಂದರೂ ಅರ್ಹತೆ ಆಧಾರದ ಮೇಲೆ ಬಂದ ಅಧಿಕಾರದಿಂದ ಸಮಾಜವನ್ನು ಪರಿವರ್ತನೆ ಮಾಡುವುದು ಇನ್ನೊಂದೆಡೆ. ಆ ಸ್ಥಾನವನ್ನು ತುಂಬಿಸಲು ಅರ್ಹತೆಯಿಲ್ಲದಿದ್ದರೂ ಆ ಸ್ಥಾನ ನನಗೆ ಬೇಕೆಂಬ ಅಸೂಯೆ ಗುಣಗಳನ್ನು ವ್ಯಕ್ತಪಡಿಸುವ ಮಂಚಣ್ಣನಂತವರು ಇನ್ನೊಂದೆಡೆ. ಈಗಾಗಲೇ ಬಸವಣ್ಣನವರು ಅಧಿಕಾರವೆಂಬುದು ಅವರವರ ಗುಣಕ್ಕೆ ಮತ್ತು ಮಾನವೀಯತೆಗೆ ಧಕ್ಕಿದ ಪರಿಹಾರ. ಆದರೂ ನಾನು ಈ ಅಧಿಕಾರ ನನ್ನಿಂದಾಗದು. ಅಧಿಕಾರವಿದ್ದರೂ, ಅಧಿಕಾರ ಇಲ್ಲದಿದ್ದರೂ ಜನರ ಹಿತವೇ ನಮ್ಮ ಹಿತ ಎಂಬ ಅಭಿಪ್ರಾಯವಾಗಿತ್ತು. ಆದರೆ ಬಸವಣ್ಣನ ದಯಾಳ, ದಯೆ ಮತ್ತು ದಕ್ಷತೆಗೆ ಧಕ್ಕಿದ ಮಹಾಮಂತ್ರಿ ಪದವಿಯನ್ನು ಸಹಿಸದ ಮಂಚಣ್ಣನವರು ಇದು ಸನಾತನ ಧರ್ಮಕ್ಕೊಂದು ಕಳಂಕವೇ ಆಗಿದೆ ಏಕೆಂದರೆ ಬಸವಣ್ಣನಿಗೆ ಮಹಾಮಂತ್ರಿ ಸ್ಥಾನ ಧಕ್ಕಿಸಬಾರದು ಎಂದು ಏನೆಲ್ಲಾ ಕುಟೀಲ ನೀತಿಗಳನ್ನು ಅನುಸರಿಸಿದರೂ ಅವೆಲ್ಲ ವ್ಯರ್ಥವಾಗುತ್ತಾ ಹೋಗುತ್ತವೆ. ಇಲ್ಲಿ ಮುಖ್ಯ ಸಂಗತಿಯೆಂದರೆ ಬಸವಣ್ಣನವರಿಗಿದ್ದ ಜೀವಾತ್ಮವಾಗಿದೆ. ಹೀಗೆ ಮಂಚಣ್ಣ, ಕ್ರಮಿತ ಏನೆಲ್ಲಾ ಪ್ರಯತ್ನ ಮಾಡಿ ಬಸವಣ್ಣನವರನ್ನು ಮಂತ್ರಿಸ್ಥಾನದಿಂದ ಕೆಳಗಿಳಿಸಬೇಕೆಂಬ ಕುಟೀಲೋಪಾಯಗಳು ನಡೆಸಿರುವ ಪ್ರಯತ್ನ ವಿಫಲವಾಗುತ್ತಾ ಹೋಗುತ್ತದೆ. ಇದಕ್ಕೆ ಕಾರಣವೆಂಬಂತೆ ಶಿವಭಕ್ತ ಹರಳಯ್ಯ ಮತ್ತು ಮಧುವರಸ ತಮ್ಮಿಬ್ಬರ ಮಕ್ಕಳಿಗೆ ಅಂತರ್ಜಾತಿ ವಿವಾಹಕ್ಕೆ ಒಪ್ಪಿ ಬಸವಣ್ಣನ ಮುಂದೆ ಪ್ರಸ್ತಾಪಿಸಿದಾಗ ಮಾನವೀಯ ಗುಣಗಳನ್ನು ಒಳಗೊಂಡ ಬಸವಣ್ಣ ನಮ್ಮ ಕಾಲದಲ್ಲಿಯೇ ಸಮಾನತೆ ಬಯಸಿರುವುದು ಸ್ವಾಗತಾರ್ಹವಾದುದು ಎಂಬುದಾಗಿ ಸೂಚಿಸಿ ನೀವಿರ್ವರೂ ಒಪ್ಪಿಕೊಂಡು ಈ ವಿವಾಹ ಮಾಡಿಸುವುದಾದರೆ ನನ್ನದೇನೂ ಅಭ್ಯಂತರವಿಲ್ಲ. ಇದು ಹೊಲೆ ಮತ್ತು ಬ್ರಾಹ್ಮಣರ ನಡುವೆ ನಡೆದ ಮದುವೆಯಲ್ಲ. ಶರಣ

ಕುಲದ ಮದುವೆ ಎಂದು ಒಪ್ಪಿಗೆ ಸೂಚಿಸುತ್ತಾನೆ. ಈ ವಿಷಯ ಗೊತ್ತಿರದ ಮಂಚಣ್ಣನಂತಹ ಮಂತ್ರಿಗಳಿಗೆ ಬಸವಣ್ಣನೇ ಮುಂದೆ ನಿಂತು ಈ ಅಂತರ್‌ಜಾತಿ ವಿವಾಹಕ್ಕೆ ಅಣಿ ಮಾಡಿಸಿದ್ದಾನೆ ಎಂಬ ಅಪವಾದವನ್ನು ಹೋರಿಸಿ ಅಪರಾಧಿಯನ್ನಾಗಿ ಮಾಡುತ್ತಾನೆ. ಅಲ್ಲದೇ ಸಂಪ್ರದಾಯ, ನಂಬಿಕೆಗಳನ್ನು ಸನಾತನ ಕಾಲದಿಂದಲೂ ರೂಢಿಸಿಕೊಂಡು ಬಂದ ವೈದಿಕ ಧರ್ಮಕ್ಕೆ ಮಸಿ ಬಳಿಯುವಂತಹ ಕೆಲಸ ಮಾಡುತ್ತಾನೆ ಎಂಬ ವಿಚಾರಗಳನ್ನು ಈ ಕೆಳಗಿನ ಸಂಭಾಷಣೆಯಿಂದ ತಿಳಿಯಬಹುದಾಗಿದೆ.

**"ಮಹಂತ** : ಇಂತಹ ಇನ್ನೂ ಏನೇನೋ ಅಕಾರ್ಯಗಳನ್ನು ಬಸವನು ಮಾಡಿಸಿ, ನಮ್ಮ ಸನಾತನ ಧರ್ಮವನ್ನು ಹಾಳು ಮಾಡುತ್ತಿದ್ದಾನೆ. ಮಂತ್ರಿಗಳೇ, ಇದನ್ನು ಹೀಗೆಯೇ ಬೆಳೆಯ ಬಿಡಬಾರದು.

**ಮಂಚಣ್ಣ** : (ಸ್ವಗತ) ಒಳ್ಳೆಯ ಕಾರಣ ಸಿಕ್ಕಿತು. ಇಂಥ ಅವಕಾಶ ಮತ್ತೆ ಸಿಗಲಾರದು. (ಪ್ರಕಾಶ) ಮಹಂತರೇ, ದೊರೆಗೆ ಈ ಅನ್ಯಾಯವನ್ನು ವಿವರಿಸಿ ಆ ಬಸವನನ್ನು ಸ್ಥಾನ ಭ್ರಷ್ಟನನ್ನಾಗಿ ಮಾಡಿಸಿಯೇ ತೀರುತ್ತೇನೆ. ಆ ಬಸವನಿಗೆ ಇನ್ನು ಕಲ್ಯಾಣದ ಋಣ ತೀರಿತು. ಶರಣರು ಕಲ್ಯಾಣದಿಂದ ಕಾಲ್ತೆಗೆಯಲೇಬೇಕು. ನೀವು ಚಿಂತಿಸಬೇಡಿ".[೬೬]

ಈ ಮೇಲಿನ ಮಂಚಣ್ಣನವರ ಮಾತಿನಲ್ಲಿ ಬಸವಣ್ಣನ ನ್ಯಾಯಸಮ್ಮತಕ್ಕೆ ವಿರೋಧ ಕಂಡುಬಂದರೆ ಇನ್ನೊಂದು ಕಡೆ ಶರಣರನ್ನು ಕಲ್ಯಾಣದಿಂದಲೇ ಓಡಿಸಬೇಕೆಂಬ ನಿಲುವು. ಇದರ ಹಿಂದೆ ಪಟ್ಟಭದ್ರ ಹಿತಾಸಕ್ತಿ ಎದ್ದು ಕಾಣುತ್ತದೆ. ಹೀಗೆ ಬಿಜ್ಜಳ ಮತ್ತು ಮಂಚಣ್ಣ ಕಲ್ಯಾಣದಲ್ಲಿ ನಡೆಯುವ ವಿಚಾರಗಳ ಬಗ್ಗೆ ಪ್ರಸ್ತಾವನೆಗೆ ಕೂತಾಗ ಮಂಚಣ್ಣನವರು ಇಂದು ನಮ್ಮ ಕಲ್ಯಾಣ ಬಸವಣ್ಣನಿಂದಾಗಿ ಹೊಲೆ-ಮಾದಿಗರ ಪಟ್ಟಣವಾಗಿದೆ. ಅಲ್ಲದೇ ನೀಚ ಕುಲದವರಿಗೆ ಶಿವದೀಕ್ಷೆಯನ್ನು ನೀಡುವುದರ ಮೂಲಕ ಇಷ್ಟಲಿಂಗಕ್ಕೆ ಒತ್ತುಕೊಟ್ಟು ವೀರಶೈವ ತತ್ವವನ್ನು ಬಿತ್ತರಿಸುತ್ತಿದ್ದಾರೆ. ಇದರಿಂದಾಗಿ ಬಸವಣ್ಣನವರು ರಾಜಕೀಯ ಆಡಳಿತದಲ್ಲಿ ಅಲಕ್ಷ್ಯದಿಂದ ಆಡಳಿತ ಕೆಡುತ್ತಿರುವುದಲ್ಲದೇ ಗಲಭೆಗೆ ಕಾರಣನಾಗುತ್ತಿದ್ದಾನೆ. ಅಲ್ಲದೇ ಹೊಲೆ-ಮಾದಿಗರಿಗೆ ಶಿವಮಂದಿರ ಪ್ರವೇಶ ಮಾಡಿಸಿ ರಾಜ್ಯದಲ್ಲಿ ಅನಾಚಾರ-ಅನಾಹುತಗಳಿಗೆ ಕಾರಣನಾಗಿದ್ದಾನೆ ಎಂದು ಹೇಳುವ ಮಂಚಣ್ಣ ಮತ್ತು ಶೆಟ್ಟಿ ಪಾತ್ರಗಳು ಬಸವಣ್ಣನು ಸಮ ಸಮಾಜವನ್ನು ಕಟ್ಟಲು ಮಾಡುವ ಪ್ರಯತ್ನಕ್ಕೆ ಇವರ ವಿಚಾರಗಳು ವಿರೋಧವಾಗಿ ನಿಲ್ಲುತ್ತವೆ. ಆಗ ಬಿಜ್ಜಳನು ಬಸವಣ್ಣನನ್ನು ಕರೆಯಿಸಿ ಹೊಲೆ ಮಾದಿಗರ ಜೊತೆಗೆ ಸಹಪಂಕ್ತಿ ಭೋಜನವನ್ನು ಮಾಡಿದ ಅಪವಾದ ನಿಮ್ಮ ಮೇಲಿದೆ ಎಂದಾಗ ಬಸಣ್ಣನವರು ಹೊಲೆ-ಮಾದಿಗರಿಗೆ ಊರಲ್ಲಿ ಸ್ಥಳವಿಲ್ಲದ್ದಕ್ಕಾಗಿ ಊರು ಬಿಟ್ಟು ಹೊಲಿಗೇರೆ ಸೇರಿದ್ದಾರೆ. ಅಲ್ಲದೇ ನಿಜವಾದ ಹೊಲೆ-ಮಾದಿಗರೆಂದರೆ ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೆ ಹೊಲೆಯ ಎಂದಾಗ ಮಂಚಣ್ಣನವರು ಇಂತಹ ಕೀಳು ಕುಲದವರಿಗೆ ನಮಸ್ಕರಿಸುವುದು ಸರಿಯೇ? ಎಂದಾಗ ಬಸವಣ್ಣನವರು ಅವರು ಕೀಳು ಕುಲದವರಲ್ಲ.

ಶಿವಶರಣರು ಎಂದೇ ತಿಳಿದು ನಮಸ್ಕರಿಸುತ್ತೇನೆ. ಅಷ್ಟೇ ಅಲ್ಲದೇ ಹೊಲೆ ಮಾದಿಗರೇ ವೀರಶೈವದ ಮತೋದ್ಧಾರಕರು. ಏಕೆಂದರೆ ಅವರಲ್ಲಿ ಆತ್ಮಶುದ್ಧಿ ಇದೆಯೇ ಹೊರತು ನಿಮ್ಮಂತೆ ಬಹಿರಂಗದ ಬೂಟಾಟಿಕೆಗಳ ಭಕ್ತಿಯಿಲ್ಲ ಎಂದು ಹೇಳಿದ ಬಸವಣ್ಣನ ಮಾತಿಗೆ ಭಟ್ಟರು ಸನಾತನದ ಧರ್ಮದ ಪರವಾಗಿ ನಿಂತು ಬಿಜ್ಜಳನ ಮುಂದೆ ಅನುಮಾನವನ್ನು ವ್ಯಕ್ತಪಡಿಸುತ್ತಾರೆ. ಆಗ ಬಿಜ್ಜಳನು ಪಂಡಿತರೇ ಆ ಅನುಮಾನವನ್ನು ಬಹಿರಂಗಪಡಿಸಿರಿ ಎಂದಾಗ ಪಂಡಿತರಾದ ಭಟ್ಟರು ಅದೊಂದು ಮಹಾಪಾಪ ಎನ್ನುತ್ತಾನೆ. ಹಾಗಾದರೆ ಈ ಅನುಮಾನವನ್ನು ಬಸವಣ್ಣನವರು ಹೇಳಿದ ಮೇಲೆ ಒಪ್ಪುವಿರಾ ಎಂಬುದಕ್ಕೆ ಭಟ್ಟರು ಒಪ್ಪುವಂತಿದ್ದರೆ ಒಪ್ಪಬಹುದು ಎಂದು ನಯವಾಗಿ ಬಸವಣ್ಣನವರನ್ನು ವಿರೋಧಿಸುತ್ತಾರೆ. ಆಗ ಬಿಜ್ಜಳನು ಇದರಿಂದ ಪರಿಹಾರ ವಾಗುವುದಾದರೆ ನೀವು ಹೇಳಬಹುದು ಎಂದಾಗ,

"**ಬಸವಣ್ಣ** : ಪ್ರಭುಚಿತ್ತ, ಅಯ್ಯಾ ಕೇಳಿ, ವ್ಯಾಸನು ಬೆಸ್ತನ ಮಗನು, ಕೌಂಡಿನ್ಯನು ಕ್ಷೌರಿಕನು, ದೂರ್ವಾಸನು ಮೋಚಿಯ ಮಗನು. ಮಾತಂಗಮುನಿಯು ಮಾದಿಗಿತ್ತಿಯ ಮಗನು, ವಶಿಷ್ಠನು ವೇಶ್ಯೆಯ ಮಗನು, ವಾಲ್ಮೀಕಿ ಬೇಡರವನು. ಅಂದ ಮೇಲೆ ಇನ್ನುಳಿದವರ ಕುಲಜಾತಿಯನ್ನೆತ್ತುವುದರಲ್ಲಿ ಅರ್ಥವಿಲ್ಲ. ನದಿಯ ಮೂಲ, ಋಷಿಯ ಮೂಲ, ಶಿವಶರಣರ ಮೂಲ ಇವುಗಳನ್ನೆತ್ತಿ ಮಾತಾಡುವುದು ಮಹಾಪಾಪ."[೬]

ಇದಕ್ಕೆ ಬಿಜ್ಜಳನು ನಿಮ್ಮ ಸ್ವತಂತ್ರ ಇಚ್ಛೆಗೆ ಅರಮನೆಯ ಆಸ್ಥಾನದ ಆತಂಕವೇನಿಲ್ಲ. ಆದರೆ ನಿಮ್ಮ ಜಂಗಮ ಶರಣರು ಸೈನ್ಯವಾಗಿ ಮಾರ್ಪಡುತ್ತಿರುವ ಸುದ್ಧಿ ನನಗೆ ಮುಟ್ಟಿದೆ. ಇದು ನಿಜವೇ? ಎಂದಾಗ ಬಸವಣ್ಣನವರು ನಿಜ. ಆದರೆ ಅವರೆಲ್ಲಾ ಸಂಗಮನಾಥನ ಸೈನಿಕರು ಎಂದಾಗ ಬಿಜ್ಜಳನು ಒಂದು ವೇಳೆ ನಿಮ್ಮ ಶರಣರ ಸೈನ್ಯ ಒಂದುಗೂಡಿ ಕಲ್ಯಾಣದ ರಾಜಮುಕುಟವನ್ನು ಅನುಸರಿಸುವುದಾದರೆ ಅದರಿಂದ ರಾಜ್ಯದ ಅಧಿಕಾರ ನಿಮ್ಮದಾಗುವುದು ಎಂಬ ಸಂಶಯ ನನಗಿದೆ ಎಂದಾಗ ಬಸವಣ್ಣನವರು ಇದಕ್ಕೆ ಸಂದೇಹವೇಕೆ? ಉಳಿದ ಮಂತ್ರಿಗಳ ಮಾತನ್ನು ಕೇಳಿ ನನ್ನ ಮೇಲೆ ಸಂಶಯಪಡುವ ನಿಮಗೆ ನಾನು ಮಂತ್ರಿಯಾಗಿರುತ್ತೇನೆಯೇ ಹೊರತು ಆ ಮಂತ್ರಿಯಾಗಿ ಇರುವುದರಲ್ಲಿಯೇ ರಾಜ್ಯದ ಸರ್ವಸ್ವವನ್ನು ಬಯಸುತ್ತೇನೆಯೇ ಹೊರತು ರಾಜನಾಗಲು ಆಸೆಪಡುವುದಿಲ್ಲ. ಒಂದು ವೇಳೆ ನೀವು ಅನುಮಾನ ಪಟ್ಟದ್ದೇ ಆದರೆ ಅವತ್ತು ನನ್ನ ಮಂತ್ರಿಪದವಿಗೆ ರಾಜೀನಾಮೆ ನೀಡಿ ಕಲ್ಯಾಣವನ್ನು ಬಿಟ್ಟು ಹೊರ ನಡೆಯುತ್ತೇನೆ ಎಂದಾಗ ಬಿಜ್ಜಳರು ಅನುಮಾನ, ಅಧೈರ್ಯ ಯಾವುದು ಇಲ್ಲ, ಬಸವೇಶ, ಇದೆಲ್ಲಾ ಉಳಿದ ಮಂತ್ರಿಗಳ ಸಮಾಧಾನಕ್ಕಾಗಿ ನಿನ್ನನ್ನು ವಿಚಾರಿಸಿದ್ದೇನೆಯೇ ಹೊರತು ನಿನ್ನ ಬಗ್ಗೆ ಯಾವ ಕೆಟ್ಟ ಅಭಿಪ್ರಾಯವೂ ಇಲ್ಲ ಎಂದು ಸ್ಪಷ್ಟಪಡಿಸುತ್ತಾನೆ. ಆಗ ಬಸವಣ್ಣನವರು ನಿಮ್ಮ ದಯೆ ಹಾಗೂ ಉದಾರ ನೀತಿ ನನ್ನ ಮೇಲೆ ಇರುವವರೆಗೂ ನಾನು ಯಾವತ್ತು ನಿಷ್ಠೆಯಿಂದ ತಾವು ಕೊಟ್ಟ ಪದವಿಗೆ ಚ್ಯುತಿ ಬಾರದಂತೆ ಕರ್ತವ್ಯದಿಂದ ನಡೆಯುತ್ತೇನೆ ಎಂದಾಗ ಬಿಜ್ಜಳನು ಸಮ್ಮತಿಸುತ್ತಾನೆ. ಈ ಸಂದರ್ಭದಲ್ಲಿಯೇ ಬಸವಣ್ಣನ ಮೇಲೆ ಮತ್ತೊಂದು

ಅಪವಾದ ಬೇರೆ ರೀತಿಯಲ್ಲಿ ನಡೆಯುತ್ತದೆ. ಈಗಾಗಲೇ ಬಿಜ್ಜಳ ಸಿಂಹಾಸನವನ್ನು ಅಲಂಕರಿಸಿದ್ದಾನೆ. ಉಳಿದೆಲ್ಲ ಮಂತ್ರಿಗಳೊಂದಿಗೆ ವಿಷಯ ಚರ್ಚಿಸಲಾಗಿ ಸಭೆ ಮುಗಿದ ಮೇಲೆ ಎಲ್ಲಾ ಮಂತ್ರಿಗಳು ಅವರವರ ಸಿಂಹಾಸನಕ್ಕೆ ನಮಸ್ಕರಿಸುತ್ತಾರೆ. ಆದರೆ ಬಸವಣ್ಣನವರು ತಮ್ಮ ಕೈ ಬೆರಳಲ್ಲಿರುವ ಉಂಗುರಕ್ಕೆ ನಮಸ್ಕರಿಸಿ ಸಿಂಹಾಸನದ ಕಡೆಗೆ ತಲೆ ಬಾಗಿಸುತ್ತಾರೆ. ಇದೇ ಅಪವಾದವೆಂಬಂತೆ ಮಂಚಣ್ಣನವರು ಬಸವಣ್ಣ ಸಿಂಹಾಸನಕ್ಕೆ ಮಣಿಯದೇ ತನ್ನ ಕೈ ಬೆರಳಲ್ಲಿರುವ ನಂದಿ ಉಂಗುರಕ್ಕೆ ನಮಸ್ಕರಿಸಿ ಸಿಂಹಾಸನವನ್ನು ಅಪವಾದಗೊಳಿಸಿದ್ದಾನೆ ಎಂದಾಗ ಬಿಜ್ಜಳನು ಮಂಚಣ್ಣನವರ ಮಾತಿಗೆ ಪುಷ್ಠಿ ಕೊಟ್ಟು ಬಸವಣ್ಣನನ್ನು ಕೇಳಿದಾಗ ಸಿಂಹಾಸನದ ಅಸಮಾನಕ್ಕಾಗಿ ಹೀಗೆ ಮಾಡಲಿಲ್ಲ. ಒಂದು ವೇಳೆ ಹೀಗೆ ಮಾಡಿದ್ದೇ ಆದರೆ ಸಿಂಹಾಸನ ಸುಟ್ಟು ಹೋಗುತ್ತದೆ ಎಂದಾಗ ಎಲ್ಲರೂ ಅಪಹಾಸ್ಯದಿಂದ ನಗುತ್ತಾರೆ. ಅಲ್ಲದೇ ಅವರವರು ಮಾತಾಡಿಕೊಳ್ಳುವ ಸಂಭಾಷಣೆ ಹೀಗಿದೆ.

"**ಪೆದ್ದರಸ** : (ಚೇಷ್ಠೆಯಿಂದ) ಅಹಹ! ಸಿಂಹಾಸನ ಸುಡುವುದಂತೆ ನೋಡಿ ನೋಡಿ ಹೇಗೆ ಬುರುಡೀ ಉರುಳಿಸುತ್ತಾರೆ, ಸುಡಾಕ ಅದೇನ ಬಣಿವೇನ್ರಿ?

**ಕಲ್ಯಾಣಶೆಟ್ಟಿ** : ಅದೇನು ಹಪ್ಪಳೇ ನ್ರಿ?

**ಪೆದ್ದರಸ** : ಹ್ಯಾಂಗ ಸುಡತದ ಸುಡ್ಲಿ. ನಾವು ಇಲ್ಲೇ ನಿಂತು ನೋಡತೀವಿ.

**ಕಲ್ಯಾಣಶೆಟ್ಟಿ** : ಭಟ್ಟರೇ! ಸುಟ್ಟ ಮ್ಯಾಲೆ ಏನ ನೋಡತೀರಿ.

**ಪೆದ್ದರಸ** : ಅದು ಹ್ಯಾಂಗ ಸುಡತದ ಸುಟ್ಟರ ಸುಡ್ಲಿ ನಿಂದ್ರಬಾರದ, ಸುಮ್ಮನ ನಿಂತಗೊಂಡು ನೋಡಾಕ ನಮ್ಮದೇನ ಹೋಗೇದ?

**ಕಲ್ಯಾಣಶೆಟ್ಟಿ** : ಭಟ್ಟರೇ! ಸುಟ್ಟ ಮ್ಯಾಲೆ ಅಳ್ಳ ಮುಕ್ಕುವವರು

**ಪೆದ್ದರಸ** : ಅಲ್ರೀ! ದೆವ್ವನಾಂಗ ನಾವು ಇದರಿಗೆ ನಿಂತಿರಲಿಕ್ಕೆ ಸುಡತೈತಂತೆ! ಶೆಟ್ರ, ಈ ಬಾರಾಬಂಗಾಲ ವಿದ್ಯಾ ನಮ್ಮ ಮುಂದ ನಡದೀತ್ರ್ಯಾ".[೨೦]

ಈ ಮೇಲಿನ ಸಂಭಾಷಣೆಯನ್ನು ಗಮನಿಸಿದಾಗ ಬಿಜ್ಜಳನು ಬಸವಣ್ಣನವರನ್ನು ಕೇಳಲಾಗಿ ಆಗ ಬಸವಣ್ಣನವರು ಈ ಉಂಗುರವನ್ನು ತೆಗೆದಿಟ್ಟು ಸಿಂಹಾಸನಕ್ಕೆ ಮಣಿಯಬೇಕೆನ್ನುವುದಾದರೆ ತಾವು ಸಿಂಹಾಸನದಿಂದ ಕೆಳಗಿಳಿಯಬೇಕು. ಇದರಿಂದ ತಮಗೂ, ನಾಡಿಗೂ ಕ್ಷೇಮ ಎಂದಾಗ ಪೆದ್ದರಸ ಮತ್ತು ಕಲ್ಯಾಣಶೆಟ್ಟಿ ಇಬ್ಬರೂ ರಾಜರನ್ನು ಕೆಳಗಿಳಿಸುವುದೇ ಎಂದು ಮಾತನಾಡಿ ಬಸವಣ್ಣನವರನ್ನು ಅಪಹಾಸ್ಯಕ್ಕೆ ಈಡು ಮಾಡುತ್ತಾರೆ. ಆಗ ಬಸವಣ್ಣನವರು ತಮ್ಮ ವಿನಂತಿಯ ಮೇರೆಗೆ ಬಿಜ್ಜಳರನ್ನು ಕೆಳಗಿಳಿಸಿ ತಮ್ಮ ಉಂಗುರವನ್ನು ಸಿಂಹಾಸನದ ಮೇಲೆ ಇಟ್ಟಾಗ ಉರಿ ಹತ್ತುತ್ತದೆ. ಇದರಿಂದ ಬಿಜ್ಜಳ ಗಾಬರಿಗೊಂಡು ಬಸವಣ್ಣನವರಿಗೆ ಈ ಉರಿಯನ್ನು ಶಾಂತಿ ಮಾಡಿ ಎಂದು ಕೈಮುಗಿದು ಕೇಳಿಕೊಳ್ಳುತ್ತಾನೆ. ಇದು ಒಂದು ರೀತಿಯಲ್ಲಿ ಬಸವಣ್ಣನವರ

ಪವಾಡವನ್ನು ತಿಳಿಸುತ್ತದೆ. ಆದರೆ ಒಬ್ಬ ಮಂತ್ರಿಯನ್ನು ಅಪಮಾನಕ್ಕೆ ಈಡು ಮಾಡಬೇಕೆಂಬ ಉಳಿದ ಕುಟಿಲ ಮಂತ್ರಿಗಳ ರಾಜಕೀಯ ಅನೈತಿಕತೆಗೆ ಬಸವಣ್ಣ ತನ್ನ ನೈತಿಕತೆಯನ್ನು ಬಿಂಬಿಸಿ ಮಾನವೀಯ ಗುಣಗಳಿಗೆ ಪ್ರತಿಯೊಬ್ಬರೂ ತಲೆ ಬಾಗುವಂತೆ ಮಾಡುತ್ತಾನೆ. ಅಲ್ಲದೆ ಅಂತರಂಗದ ಭಕ್ತಿಯಿಂದ ಶಿವನನ್ನು ಒಲಿಸಿಕೊಳ್ಳಬಹುದೆಂಬ ತತ್ವ ಒಂದು ಕಡೆಯಾದರೆ ಇನ್ನೊಂದು ಕಡೆ ರಾಜಕೀಯ ಕುಟಿಲ ನೀತಿಗಳಿಗೆ ನಿಷ್ಠೆಯಿಂದಲೇ ತಂತ್ರವನ್ನು ರೂಪಿಸಬಹುದು ಎಂಬ ವಿಚಾರಗಳು ಇಲ್ಲಿ ವ್ಯಕ್ತವಾಗಿವೆ.

ಇಷ್ಟಾದರೂ ಇನ್ನೂ ಬಸವಣ್ಣನ ವಿರುದ್ಧ ಸಿಡಿದೇಳುವಂತ ಪ್ರಸಂಗಗಳು ಅನೇಕ ಇವೆ. ಏಕೆಂದರೆ ಈಗಾಗಲೇ ಹೇಳಿರುವಂತೆ ಮಧುವರಸ ಮತ್ತು ಹರಳಯ್ಯನ ಅಂದರೆ ಬ್ರಾಹ್ಮಣ ಮತ್ತು ಹೊಲೆಯರ ಕುಟುಂಬಗಳ ನಡುವೆ ವಿವಾಹ ಏರ್ಪಟ್ಟು ಅದರಿಂದ ರಾಜದ್ರೋಹ, ಜಾತಿದ್ರೋಹ ಮತ್ತು ವರ್ಣದ್ರೋಹ ಮಾಡಿದಂತೆ ಆಗುತ್ತದೆಂಬ ಮೇಲ್ವರ್ಗದ ಮಂತ್ರಿಗಳ ವಿಚಾರಗಳಿಗೆ ಕಿವಿಗೊಟ್ಟ ಬಿಜ್ಜಳನು ಹರಳಯ್ಯ ಮತ್ತು ಮಧುವರಸರಿಗೆ ಶಿಕ್ಷೆಯಾಗಬೇಕೆಂಬ ನಿಲುವನ್ನು ತಾಳುತ್ತಾನೆ. ಉಳಿದಂತೆ ಎಲ್ಲರೂ ಇವರಿಬ್ಬರಿಗೆ ಶಿಕ್ಷೆ ವಿಧಿಸಬೇಕು. ಇದರಿಂದ ಜಾತಿಯ ಮಹತ್ವ ತಿಳಿಯುತ್ತದೆ ಎಂಬುದಾಗಿ ಬಿಜ್ಜಳನಿಗೆ ದೂರು ಸಲ್ಲಿಸುತ್ತಾರೆ. ಆಗ ಮಹಾಮಂತ್ರಿಯಾದ ಬಸವಣ್ಣನವರನ್ನು ಕರೆಯಿಸಿದ ಬಿಜ್ಜಳರು ಈ ವಿಷಯವಾಗಿ ಚರ್ಚಿಸಿದಾಗ ಮಧುವರಸ ಮತ್ತು ಹರಳಯ್ಯನವರು ಅಪರಾಧಿಗಳಲ್ಲ. ಏಕೆಂದರೆ ಜಾತಿಯನ್ನು ಮೀರಿ ಶರಣರಾದ ನಂತರ ಒಪ್ಪಿ ತಮ್ಮ ತಮ್ಮ ಆಪೇಕ್ಷೆಯ ಮೇರೆಗೆ ಮದುವೆಗೆ ಸಿದ್ಧತೆ ಮಾಡಿಕೊಂಡಿದ್ದಾರೆ. ಅಲ್ಲದೇ ಈ ಮುಂಚೆ ಹರಳಯ್ಯನ ಮಗ ಮತ್ತು ಮಧುವರಸರ ಮಗಳು ಪ್ರೀತಿ ಮಾಡುತ್ತಿದ್ದರೆಂಬ ಅಂಶವನ್ನು ತಿಳಿದದ್ದಾಗಿದೆ. ಇದೇನೇ ಇರಲಿ ಇದೇ ನೆನಪನ್ನೊಡ್ಡಿದ ಮಂಚಣ್ಣ ಇನ್ನು ಮುಂತಾದ ಮಂತ್ರಿಗಳು ಇದಕ್ಕೆಲ್ಲ ಕಾರಣ ಬಸವಣ್ಣನವರೇ ಎಂದಾಗ ಬಸವಣ್ಣನವರು ಇದು ಶರಣರ ತತ್ವ, ಆ ತತ್ವದ ನಿಯಮದಂತೆ ಶರಣರೆಲ್ಲರೂ ಸೇರಿದ್ದಾರೆ. ಹೀಗಾಗಿ ಇವರಿಬ್ಬರೂ ಅಪರಾಧಿಗಳಲ್ಲ ಎಂಬುದಾಗಿ ನುಡಿಯುತ್ತಾನೆ. ಆಗ ಬಿಜ್ಜಳರು ನಿಮ್ಮ ತತ್ವ ಎಂತಹದ್ದೇ ಇರಲಿ, ಅದು ಆಂದೋಲನಕ್ಕೆ ಕಾರಣವಾಗಿದೆ. ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತರ ನಡುವೆ ಈ ವಿಷಯವಾಗಿ ಅಲ್ಲೋಲ ಕಲ್ಲೋಲವೆದ್ದಿದೆ. ಅಷ್ಟೇ ಅಲ್ಲ ನೀವು ತತ್ವದ ಭಕ್ತರಾದರೆ ನಾವು ಪ್ರಜೆಗಳ ಭಕ್ತರು. ನಮ್ಮ ನಿಮ್ಮ ಕವಲೊಡೆದು ಜನಗಳ ಮಧ್ಯೆ ವರ್ಣ ಬೇರೂರಿ ಬಿಟ್ಟಿದೆ. ಈ ನಿಮ್ಮ ತತ್ವದಿಂದ ಕೆರಳಿ ಕೂಗುತ್ತಿರುವ ಲಕ್ಷಾಂತರ ಪ್ರಜೆಗಳ ಗೋಳನ್ನು ಕೇಳಬೇಕಾದುದು ರಾಜ್ಯದ ನನ್ನ ಕರ್ತವ್ಯ ಎಂದಾಗ ಮಧುವರಸರು ನಾವೂ ನಿಮ್ಮ ಪ್ರಜೆಗಳಲ್ಲವೇ ಪ್ರಭು... ಎಂದಾಗ ಬಿಜ್ಜಳನು ನಾನು ನಿಮ್ಮನ್ನು ಅಲ್ಲಗಳೆಯುವುದಿಲ್ಲ. ಆದರೆ ಬಹುಸಂಖ್ಯಾತರ ಕೂಗನ್ನು ರಾಜಧರ್ಮವು ಗಮನಿಸುತ್ತದೆ. ಹೀಗಾಗಿ ನೀವು ಅಪರಾಧಿಗಳು ಎಂದಾಗ ಬಸವಣ್ಣನವರು ಅಲ್ಪ ಮತ್ತು ಬಹುಸಂಖ್ಯಾತ ಎಂಬುದಾಗಿ ಸೃಷ್ಟಿಸಿ ರಾಜಶಾಸನ ಮುಂದುವರಿಯುವುದಾದರೆ ಸತ್ಯ ಮತ್ತು ತತ್ವದ ಹೊಣೆಗಾರಿಕೆ ರಾಜ್ಯ ಧರ್ಮಕ್ಕೆ ಇಲ್ಲದಂತಾಗುತ್ತದೆ. ವಿಶ್ವದ ಮಾನವ ವರ್ಗಕ್ಕೆ ಕಲ್ಯಾಣವನ್ನು ಬಯಸುವ ರಾಜಕೀಯ ತತ್ವದ ಮಾನವಧೀಶರಾದ

ನೀವು ಇದನ್ನು ತಿರಸ್ಕರಿಸಿದರೆ ರಾಜಧರ್ಮಕ್ಕೆ ಮಾಡಿದ ಅಪಾಯವೆನಿಸುತ್ತದೆ. ಏಕೆಂದರೆ ಮನುಷ್ಯ-ಮನುಷ್ಯರ ನಡುವೆ ನಿಕಟ ಸಂಬಂಧ ಬೆಳೆಸುವುದೇ ನಿಜವಾದ ಲಾಭ ಧರ್ಮ. ಅಂದರೆ ಅರ್ಥಾತ್ ದಯವೇ ಧರ್ಮದ ಮೂಲ ಎಂದಾಗ ಬಿಜ್ಜಳರು ನಮಗಾಗಿ ನಾನು ರಾಜ್ಯವಾಳುವುದಿಲ್ಲ. ಪ್ರಜೆಗಳ ಹಿತವೇ ನಮ್ಮ ಹಿತ ಎನ್ನುತ್ತಾನೆ. ಮುಂದುವರೆದು ಅಪರಾಧಿಗಳಿಗೆ ಶಿಕ್ಷೆ ಆಗಲೇಬೇಕು ಎಂದಾಗ ಬಸವಣ್ಣನವರು ದಯೆ ಬೇಕು ಸಕಲ ಪ್ರಾಣಿಗಳಲ್ಲಿ ಎನ್ನುತ್ತಾನೆ. ಆಗ ಶೆಟ್ಟಿ ಅಪರಾಧಿಗಳನ್ನು ಕುರಿತು ಕ್ಷಮಾಯಾಚನೆ ಮಾಡುವುದೇ ನಿಜವಾದ ರಾಜದ್ರೋಹ ಎಂದು ಹೇಳುತ್ತಾನೆ. ಮಿಗಿಲಾಗಿ ನಾನೊಬ್ಬ ಉಚ್ಚ ವೀರಶೈವ ಎಂಬ ಮಾತಿಗೆ ಬಸವಣ್ಣನವರು ಶೆಟ್ಟರೇ ವೀರಶೈವ ತತ್ವದ ಉಪದೇಶ ಮಾಡಲು ಬಂದಿರುವಿರೋ, ಆ ವೀರಶೈವ ಗುಣಗಳು ತಮ್ಮಲ್ಲಿ ಇದೆಯೇ? ಎಂಬ ಪ್ರಶ್ನೆಯನ್ನು ಮುಂದಿಡುತ್ತಾನೆ. ಹೀಗೆ ಸಂಭಾಷಣೆ ನಡೆಯುತ್ತಾ ಇರುವಾಗ ಮಂಚಣ್ಣನವರು ಪ್ರವೇಶಿಸಿ ಬಸವಣ್ಣನವರು ದಂಡಾಧೀಶರಾಗಿರಬಹುದು. ಆದರೆ ಅವರೊಬ್ಬ ಸಿಂಹಾಸನದ ಸೇವಕರು ಎಂಬುದನ್ನು ಮರೆತಿದ್ದಾರೆ ಎಂದಾಗ ಬಿಜ್ಜಳನು ಮೂಲಭೂತವಾದದ ಪರವಾಗಿ ನಿಂತು ಬಸವಣ್ಣನವರಿಗೆ ನಿಮ್ಮ ಹಠವನ್ನು ಬಿಡಲೇಬೇಕು. ಇದಕ್ಕೆ ಕೂಡಲಸಂಗಮನಾಥನ ಆಣೆ ಎನ್ನುತ್ತಾನೆ. ಆಗ ಬಸವಣ್ಣನವರು ತಾವು ದುಡುಕಿ ಅನರ್ಥ ಮಾಡಿದಿರಿ ಎಂದು ಹೇಳಿ ದಯಮಾಡಿ ಆಣೆಯನ್ನು ಹಿಂತೆಗೆದುಕೊಳ್ಳಿರಿ ಎಂದಾಗ ಮಂಚಣ್ಣನವರು ಪ್ರಭು ಆಜ್ಞೆಯನ್ನು ಪಾಲಿಸಲಾರದೇ ಇರುವುದು ತಮ್ಮ ವ್ಯಕ್ತಿತ್ವಕ್ಕೆ ಶೋಭೆ ತರಲಾರದು ಎನ್ನುತ್ತಾನೆ. ಆಗ ಬಿಜ್ಜಳರು ನಾನು ನನ್ನ ನಿರ್ಣಯವನ್ನು ಬದಲಿಸಲಾರೆ ಎಂದು ಹೇಳುವಲ್ಲಿ ಧರ್ಮದ ಸಿದ್ಧಾಂತಕ್ಕೆ ಬದ್ಧನಾಗುತ್ತಾನೆ. ಹೀಗೆ ವಾದ-ವಿವಾದಗಳ ನಡುವೆ ಕೊನೆಗೆ ಬಸವಣ್ಣನವರು ಮಹಾಮಂತ್ರಿ ಪದವಿಯನ್ನು ಕಳೆದುಕೊಳ್ಳುತ್ತೇನೆಯೇ ಹೊರತು ನನ್ನ ಶರಣ ಧರ್ಮದ ತತ್ವ ಬಿಡಲಾರೆ ಎನ್ನುತ್ತಿದ್ದಂತೆಯೇ ಬಿಜ್ಜಳ ಆಲೋಚಿಸಿ ಈ ನಿರ್ಧಾರದಿಂದ ನಿನಗಾಗುವ ಲಾಭವೇನು? ಎನ್ನುತ್ತಾನೆ. ಆಗ ಬಸವಣ್ಣನವರು

"ಬಸವಣ್ಣ : ಹೌದು ಮಹಾಪ್ರಭು, ಕೈವಲ್ಯ, ಹಿಂದೊಮ್ಮೆ ನಾನು ನಿಮಗೆ ತಿಳಿಸಿದ್ದೆ. ಯಾವ ದಿನ ನನ್ನ ವಿಷಯವಾಗಿ ತಮಗೆ ಸಂಶಯ ಬರುವುದೋ ತಿಳುಹಿಸಬೇಕು. ಆವಾಗಲೇ ಈ ಅಮಾತ್ಯಾಧಿಕಾರವನ್ನು ತಮಗೊಪ್ಪಿಸಿ, ಕಲ್ಯಾಣಪಟ್ಟಣವನ್ನು ಬಿಟ್ಟು, ದೂರ ಬಹುದೂರ ಹೊರಟು ಹೋಗುವೆನೆಂದು ಪ್ರಭುಗಳಿಗೆ ವಿಜ್ಞಾಪಿಸಿಕೊಂಡಿದ್ದೆ. ಮಹಾಪ್ರಭು, ಶರಣದ್ರೋಹವಾಗುವುದನ್ನು ನಾನು ನೋಡಲಾರೆ. ಶರಣ ದ್ರೋಹವಾಗುವುದನ್ನು ನಾನು ಕೇಳಲಾರೆ. ಅದಕ್ಕಾಗಿ ಮಹಾಮಂತ್ರಿತ್ವವನ್ನು ತ್ಯಜಿಸುತ್ತಿದ್ದೇನೆ. ಪ್ರಭುಗಳು ಸಂತೋಷದಿಂದ ಸ್ವೀಕರಿಸಿ, ನನಗೆ ಹೋಗಲು ಅಪ್ಪಣೆಯನ್ನೀಯಬೇಕು (ಕೈಯಲ್ಲಿಯ ಕಿರೀಟವನ್ನು, ಖಡ್ಗವನ್ನು ಆಸನದ ಮೇಲಿರಿಸುವನು) ಆಯಿತು ಪ್ರಭು. ನಾನಿನ್ನು ಬರುವೆ, ಶರಣು."[೬೯]

ಈ ಮೇಲಿನ ವಿಚಾರವಾಗಿ ಗಮನಿಸಿದರೆ ಬಿಜ್ಜಳನ ಮನಸ್ಸು ಬಸವನ ಕಡೆಗೆ ವಾಲಿದಂತೆ ಕಂಡುಬರುತ್ತದೆ. ಯಾಕೆಂದರೆ ಬೇಡ ಬೇಡವೆಂದರೂ ದುರಾಡಳಿತ ರಾಜಕೀಯ ವ್ಯವಸ್ಥೆಗೆ

ಬೇಸತ್ತು ಬಸವಣ್ಣ ಮಹಾಮಂತ್ರಿ ಪದವಿಗೆ ರಾಜೀನಾಮೆ ನೀಡಿ ಹೋಗುತ್ತಾನೆ ಎಂಬ ಈ ವಿಚಾರವನ್ನು ಕೆಲವು ನಾಟಕಗಳು ವ್ಯಕ್ತಪಡಿಸುತ್ತವೆ. ಇನ್ನು ಕೆಲವು ನಾಟಕಗಳು ಬಸವಣ್ಣ ರಾಜೀನಾಮೆ ಕೊಡದೇ ಇದ್ದ ಪಕ್ಷದಲ್ಲಿ ಬಿಜ್ಜಳನು ಒತ್ತಾಯಪೂರ್ವಕವಾಗಿ ಕೊಡಿಸುತ್ತಾನೆ ಎಂಬ ವಿಚಾರ ವ್ಯಕ್ತವಾಗಿದೆ. ಅಂದರೆ ಬಿಜ್ಜಳನ ಮನಸ್ಸಿಗೆ ಉಳಿದ ಮಂತ್ರಿಗಳು ತುಂಬಿರುವ ವಿಚಾರಕ್ಕೆ ಬಿಜ್ಜಳನು ಬಸವಣ್ಣನನ್ನು ವಿರೋಧಿಸುತ್ತಾನೆ. ಅಂತರ್‌ಜಾತಿ ವಿವಾಹಕ್ಕೆ ಪುಷ್ಠಿ ಕೊಟ್ಟಿರುವುದು ತಪ್ಪು ಎನ್ನುತ್ತಾನೆ. ಆಗ ಬಸವಣ್ಣ ವರ್ತಮಾನದಲ್ಲಿ ಸತ್ಯಕ್ಕೆ ಅವಮಾನ ಮಾಡಿದವರು ಭವಿಷ್ಯತ್ತಿನಲ್ಲಿ ಶಾಶ್ವತ ಅವಮಾನಕ್ಕೆ ಗುರಿಯಾಗುತ್ತಾರೆ ಎಂದಾಗ ಬಿಜ್ಜಳನು ನಾಲಿಗೆ ಬಿಗಿ ಹಿಡಿದು ಮಾತನಾಡು ನನ್ನ ಅಧಿಕಾರವನ್ನು ನಾಶ ಮಾಡಿ ಅವಮಾನಿಸಿದ ನೀನು. ಅಲ್ಲದೇ ನೀನು ರಾಜ್ಯವನ್ನು ಪ್ರೀತಿಸುವವನಾದರೆ ನಾನು ಅಧಿಕಾರವನ್ನು ಪ್ರೀತಿಸುವವ ಎಂದಾಗ ಬಸವಣ್ಣನವರು ರಾಜ್ಯವನ್ನು ಪ್ರೀತಿಸುವವರ ಅಧಿಕಾರವೇ ಹೊರತು, ಅಧಿಕಾರವನ್ನು ಪ್ರೀತಿಸುವವರ ಅಧಿಕಾರವಲ್ಲ ಎಂದು ಖಾರವಾಗಿ ನುಡಿಯುತ್ತಾನೆ. ಈ ಮಾತಿಗೆ ಶರಣರೆಲ್ಲರೂ ಸಹಮತ ಸೂಚಿಸುತ್ತಾರೆ. ಆಗ ಬಿಜ್ಜಳನು ನಿನ್ನ ಧಾರ್ಮಿಕ ಸುಧಾರಣೆಗೆ ನನ್ನ ಸಮ್ಮತಿ ಇದೆ. ಆದರೆ ಆರ್ಥಿಕ ಮತ್ತು ಸಾಮಾಜಿಕ ಸಮಾನತೆಗೆ ಇರುವ ವಿಚಾರಗಳನ್ನು ಕೈಬಿಡು ಎಂದಾಗ ಬಸವಣ್ಣನವರು ಸತ್ಯವನ್ನು ಕೈ ಬಿಡುವುದು ನನ್ನಿಂದ ಸಾಧ್ಯವಿಲ್ಲ. ಹಾಗಾದರೆ ಬಸವ, ಇದು ನಿನ್ನ ಅಂತಿಮ ನಿರ್ಧಾರವಾಗಿದ್ದರೆ ನಿನ್ನ ಮಂತ್ರಿ ಪದವಿಯನ್ನು ಬಿಡಬೇಕಾಗುತ್ತದೆ. ಎಂದಾಗ ಬಸವಣ್ಣನವರು ಪ್ರಾಣವನ್ನು ಬಿಡಲು ಸಿದ್ಧ. ಆದರೆ ಆರ್ಥಿಕ, ಸಾಮಾಜಿಕ ಹಾಗೂ ಪ್ರಜೆಗಳ ಸಮಾನತೆಯನ್ನು ಕೈಬಿಡಲಾರೆನೆಂದು ಹೇಳುತ್ತಾನೆ. ಆಗ ಬಿಜ್ಜಳನು ಬೇರೆಯವರ ಮಾತುಗಳನ್ನು ಕೇಳಿ ಬಸವಣ್ಣನ ವಿರುದ್ಧ ಹೀಗೆ,

"ಬಿಜ್ಜಳ : (ಕಿವಿಮುಚ್ಚಿಕೊಳ್ಳುತ್ತ) ಸಾಕು, ಸಾಕು. ಅಪಶಕುನ ಕೇಳಲಾರೆ. ಮಾತು ಹೆಚ್ಚು ಬೆಳೆಸಬೇಡಿರಿ. (ಗಂಭೀರವಾಗಿ) ಇದು ಚಕ್ರವರ್ತಿಯ ತೀರ್ಪು. ರಾಜಸತ್ತೆ ಧರ್ಮಸತ್ತೆಗಳನ್ನು ಮೀರಿದ ಬಸವಣ್ಣನವರನ್ನು ಮಂತ್ರಿಪದವಿಯಿಂದ ಚ್ಯುತಿಗೊಳಿಸಿ, ಗಡಿಪಾರು ಶಿಕ್ಷೆ ನೀಡಲಾಗಿದೆ. ವರ್ಣವ್ಯವಸ್ಥೆಯನ್ನು ಧಿಕ್ಕರಿಸಿದ ಹರಳಯ್ಯ-ಮಧುವಯ್ಯನವರ ನ್ಯಾಯ ವಿಚಾರಣೆಯನ್ನು ನಾಳೆಗೆ ಮುಂದೂಡಲಾಗಿದೆ... (ತಟ್ಟನೆ ಬಿಜ್ಜಳ ಎದ್ದು ಹೋಗುವಷ್ಟರಲ್ಲಿ).

ಬಸವಣ್ಣ : ಪ್ರಭೂ, ಪ್ರಭೂ. (ಎನ್ನುವಷ್ಟರಲ್ಲಿ ಬಿಜ್ಜಳ ಕಿವಿಯಲ್ಲಿ ಹಾಕಿಕೊಳ್ಳದೇ ಎದ್ದು ಹೋಗುತ್ತಾನೆ. ಸೈನಿಕರು ತಕ್ಷಣ ಖಡ್ಗ ಇರಿದು ಬಸವಣ್ಣನ ಸುತ್ತ ನಿಲ್ಲುತ್ತಾರೆ. ಹರಳಯ್ಯ-ಮಧುವಯ್ಯಗಳನ್ನು ಎಳೆದುಕೊಂಡು ಹೋಗುತ್ತಾರೆ. ಬಿಜ್ಜಳನಿಗೆ ಜಯವಾಗಲಿ, ಬಸವಣ್ಣನಿಗೆ ಜಯವಾಗಲಿ, ಬಿಜ್ಜಳನಿಗೆ ಧಿಕ್ಕಾರ. ಬಸವಣ್ಣನವರಿಗೆ ಧಿಕ್ಕಾರ ಎಂಬ ಪರ-ವಿರೋಧದ ಘೋಷಣೆಗಳು ಕೇಳಿಸುತ್ತವೆ. 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ವಾಕ್ಯ ದೊಡ್ಡ ದನಿಯಲ್ಲಿ ಪದೇ ಪದೇ ಕೇಳಿಸುತ್ತದೆ. ಕೊನೆಗೆ ಪ್ರತಿಧ್ವನಿ ರೂಪದಲ್ಲಿ ಕ್ಷೀಣವಾಗುತ್ತ ಹೋಗುತ್ತದೆ.)"[೨೦]

ಈ ಸಂಭಾಷಣೆಯನ್ನು ಗಮನಿಸಿದಾಗ ಮಕ್ಕಳ ಮದುವೆಯ ಮೂಲಕ ವರ್ಣಧರ್ಮವನ್ನು ನಾಶ ಮಾಡಿದ ಎಂದು ತಿಳಿದ ಮೂಲಭೂತವಾದಿಗಳು ಬಸವಣ್ಣನವರನ್ನು ಹೀನಾಯವಾಗಿ ಮಂತ್ರಿಪದವಿಗೆ ರಾಜೀನಾಮೆ ಕೊಡಿಸುತ್ತಾರೆ. ಬಸವಣ್ಣ ಮಂತ್ರಿಪದವಿಯಿಂದ ರಾಜೀನಾಮೆ ಹೊಂದಿದ ತಡವೇ ರಾಜಸತ್ತೆಯ ಪ್ರಭುತ್ವವು ಬಸವಣ್ಣನಿಂದ ತೆರವಾದ ಸ್ಥಾನಕ್ಕೆ ಮಂಚಣ್ಣ ಮಂತ್ರಿಯಾಗಿ ಮಧುವರಸ ಮತ್ತು ಹರಳಯ್ಯನವರಿಗೆ ಎಳೆಹೂಟೆ ಶಿಕ್ಷೆಯನ್ನು ವಿಧಿಸುತ್ತಾರೆ. ನಂತರದಲ್ಲಿ ಶರಣರ ವಚನಕಟ್ಟುಗಳನ್ನು ಪುರೋಹಿತರು ಹುಡುಕುವುದರ ಮೂಲಕ ಅವುಗಳನ್ನು ನೀಡುವಲ್ಲಿ ಮುಂದಾಗುತ್ತಾರೆ. ಅಷ್ಟೇ ಅಲ್ಲದೇ ಬಸವಣ್ಣನನ್ನು ಗಡಿಪಾರುಗೊಳಿಸಿ ಮಹಾಮನೆಗೆ ಹೊಕ್ಕು ಅಲ್ಲಿನ ಶರಣರನ್ನು ಹೊಡೆದು – ಬಡಿದು ಅವರ ತತ್ವಗಳಿಗೆ ಅಪಮಾನ ಮಾಡುವುದರ ಮೂಲಕ ರಕ್ತವನ್ನೇ ಹರಿಸುತ್ತಾರೆ. ಬಿಜ್ಜಳನ ಸೈನ್ಯ ಶರಣರನ್ನು ಬೆನ್ನಟ್ಟಿ ಬೇಟೆಯಾಡುತ್ತದೆ. ಇದರಿಂದ ಶರಣರ ಶವ ಬೀಳುತ್ತವೆ. ಇದು ದೊಡ್ಡ ದುರಂತವೆಂದೇ ಹೇಳಬೇಕು. ಏಕೆಂದರೆ ಅರಮನೆಯ ಅಗ್ರಹಾರ ಸಂಸ್ಕೃತಿಯಿಂದ ಜನರನ್ನು ಬಿಡುಗಡೆಗೊಳಿಸಬೇಕೆಂದು ಪ್ರಯತ್ನಿಸಿದ ಬಸವಣ್ಣನನ್ನು ಒಳಗೊಂಡ ಶರಣರ ಚಿಂತನೆಗಳು ವೈದಿಕ ಅವಿವೇಕತನದ ಪರಮಾವಧಿಗೆ ದಿಕ್ಕು ಪಾಲಾಗುತ್ತವೆ. ಯಾವ ಬಸವಣ್ಣ ಮಹಾಮಂತ್ರಿಯಾಗಿ ಮಹಾಮನೆಯ ಮೂಲಕ ಜನಸಾಮಾನ್ಯರನ್ನು ಒಂದೂಗೂಡಿಸಬೇಕೆಂದು ಪ್ರಯತ್ನಿಸಿದನೋ, ಆದರೆ ಅದು ಸಫಲವಾಗದೇ ಮತಾಂಧರ ಕೈಗೆ ಸಿಕ್ಕು ಶರಣರ ಪ್ರಯತ್ನವೆಲ್ಲವು ವ್ಯರ್ಥವಾಗಿ ಬಸವಣ್ಣನ ನಂತರ ಅದೇ ಸನಾತನ ರಾಜಕೀಯ ಮುಂದುವರಿಯಲಿಕ್ಕೆ ಕಾರಣವಾಯಿತು.

ಬಿಜ್ಜಳನ ತಂಗಿ ನೀಲಾಂಬಿಕೆ ಅಂದರೆ ಬಸವಣ್ಣನ ಎರಡನೇ ಪತ್ನಿ. ಬಸವಣ್ಣ ಮಂತ್ರಿ ಪದವಿಯಿಂದ ರಾಜೀನಾಮೆ ನೀಡಿ ವೈದಿಕ ವ್ಯವಸ್ಥೆಯ ಅಡಿಯಲ್ಲಿ ಬಹಿಷ್ಕಾರಕ್ಕೆ ಒಳಗಾದಾಗ ನೀಲಾಂಬಿಕೆಯು ಅಣ್ಣನಾದ ಬಿಜ್ಜಳನಲ್ಲಿಗೆ ಬಂದು ಮಾನವೀಯ ಮೌಲ್ಯಗಳನ್ನು ಬಸವಣ್ಣನ ಚಿಂತನೆಗಳನ್ನು ಜೊತೆಗೆ ಬಸವಣ್ಣನಿಗೆ ಹಾಕಿರುವ ಬಹಿಷ್ಕಾರವನ್ನು ಹಿಂದಕ್ಕೆ ತೆಗೆದುಕೊಳ್ಳಿ ಎಂಬುದಾಗಿ ಕೇಳಿಕೊಳ್ಳುತ್ತಾಳೆ. ಆಗ ಬಿಜ್ಜಳನು ಆಕೆಯನ್ನು ಸಮಾಧಾನಪಡಿಸುತ್ತಾ ಬಸವಣ್ಣನ ರಕ್ಷಣೆಗಾಗಿ ಯಾರಿಗೂ ಅರಿವಿಲ್ಲದಂತೆ ಅಲ್ಲಲ್ಲಿ ನಮ್ಮವರನ್ನು ನೇಮಿಸಿದ್ದೇನೆ. ನೀನಿನ್ನು ನಿಶ್ಚಿಂತಳಾಗಿರು ಎಂಬುದಾಗಿ ಹೇಳುತ್ತಾನೆ. ಆದರೆ ಈಗಾಗಲೇ ಕಲ್ಯಾಣ ತೊರೆಯಲಿರುವ ಬಸವಣ್ಣನವರು ಬಿಟ್ಟು ಹೋಗುವಂತಹ ಸಂದರ್ಭದಲ್ಲಿ ಉಳಿದ ಶರಣರೆಲ್ಲರೂ ಬೀಳ್ಕೊಡಲು ಆಗಮಿಸಿ ಬಸವಣ್ಣನ ದಯಾಳು ಗುಣಗಳನ್ನು ಅರಸುತ್ತಾರೆ. ಆದರೆ ಬಸವಣ್ಣನವರು ತಾವು ಬಹಿಷ್ಕಾರಗೊಂಡರೂ ಶರಣರಿಗೆ ಹೇಳುವ ವಿಚಾರಗಳು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ. ಅಂದರೆ ಚಕ್ರವರ್ತಿಗಳು ದೂರದೃಷ್ಟಿಯುಳ್ಳವರು. ಒಳಸಂಚಿನ ಸನ್ನಿವೇಶಕ್ಕೆ ಸಿಲುಕಿ ಅರಸರಿಗೆ ಏನಾದರೂ ಕೇಡು ಸಂಭವಿಸುವ ಸಂದರ್ಭ ಬಂದರೆ ನೀವು ಅವರನ್ನು ರಕ್ಷಿಸಬೇಕು. ನೀವೇ ಧೈರ್ಯ ಕಳೆದುಕೊಂಡರೆ ಕಲ್ಯಾಣದ ಶರಣರ ಗತಿ ಅಧೋಗತಿಯಾಗುತ್ತದೆ ಎಂದು ತೆರಳುತ್ತಾರೆ.

ಬಸವಣ್ಣನವರು ಕಲ್ಯಾಣವನ್ನು ತ್ಯಜಿಸಿದ ನಂತರ ಉಳಿದ ಶರಣರು ತಮ್ಮ ವಿರುದ್ಧ ನಡೆದ ಅನ್ಯಾಯಗಳನ್ನು ಪ್ರತಿಭಟಿಸಲು ಮುಂದಾಗುತ್ತಾರೆ. ಮಂಚಣ್ಣನ ಕುತಂತ್ರ ನೀತಿಯನ್ನು ಅರಿಯದೇ ಈ ಎಲ್ಲಾ ಅಪವಾದಗಳಿಗೆ ಬಿಜ್ಜಳನೇ ಕಾರಣ ಎಂದು ನಂಬುತ್ತಾರೆ. ಹೀಗೆ ಗ್ರಹಿಸಿದ ಜಗದೇವ ಮತ್ತು ಮಲ್ಲಿಬೊಮ್ಮರು ಕೊಲೆಗೈಯುತ್ತಾರೆ. ಕಲ್ಯಾಣ ರಾಜ್ಯದಲ್ಲಿ ಅರಾಜಕತೆ ಉಂಟಾಗುತ್ತದೆ. ಬಹುತೇಕ ನಾಟಕ ಪಠ್ಯಗಳು ಹೀಗೆ ಮುಕ್ತಾಯವಾಗುತ್ತವೆ. ಆದರೆ ಜನಪ್ರಿಯ ನಾಟಕಕಾರರು ನಾಟಕಗಳನ್ನು ಸುಖಾಂತವಾಗಿ ಮುಗಿಸುವ ಸಲುವಾಗಿ ಬಿಜ್ಜಳನ ಮರಣನಂತರ ಬಸವಣ್ಣನವರ ಅಪ್ಪಣೆಯಂತೆ ಯುವರಾಜನಾದ ಸೋವಿದೇವನನ್ನು ರಾಜನನ್ನಾಗಿ ಮಾಡಿ ಚೆನ್ನಬಸವಣ್ಣನು ಮಂತ್ರಿಯಾಗಿ ರಾಜ್ಯಭಾರವನ್ನು ವಹಿಸಿಕೊಂಡನು ಎಂದು ಹೇಳಿಸಲಾಗಿದೆ.

ಈ ಮೇಲಿನ ಅಂಶಗಳನ್ನು ಗಮನಿಸಲಾಗಿ ಒಂದು ಕಡೆ ಅಗ್ರಹಾರ ಸಂಸ್ಕೃತಿ, ಇನ್ನೊಂದು ಕಡೆ ಅರಮನೆಯ ಸಂಸ್ಕೃತಿ, ಮತ್ತೊಂದು ಕಡೆ ಮಹಾಮನೆಯ ಸಂಸ್ಕೃತಿ, ಜೊತೆಗೆ ಮೂಲಭೂತವಾದ ಸಂಸ್ಕೃತಿಗಳು ಸಮಾಜದಲ್ಲಿ ಅಂಧಕಾರ ವ್ಯವಸ್ಥೆಯನ್ನು ಸೃಷ್ಟಿ ಮಾಡಿದ್ದವು. ಇಂತಹ ಅಂಧಕಾರ ವ್ಯವಸ್ಥೆಯ ವಿರುದ್ಧ ಬಸವಣ್ಣ ೧೨ನೇ ಶತಮಾನದಲ್ಲಿ ಎದ್ದು ಬಂದ. ತನ್ನ ಹುಟ್ಟು ಏನೇ ಇರಲಿ ಆದರೆ ಕಟಿಬದ್ಧ ಸಂಸ್ಕೃತಿಯ ವಿರುದ್ಧ ಬಾಲ್ಯದಿಂದಲೂ ಸಿಡಿದೇಳುವ ಪ್ರಯತ್ನ ಅಮೂಲ್ಯವಾದುದು. ನಂತರದಲ್ಲಿ ಬಸವಣ್ಣನವರು ತಮ್ಮ ಜ್ಞಾನ, ನಿಷ್ಠೆ ಹಾಗೂ ಮಾನವೀಯ ಮೌಲ್ಯಗಳಿಗೆ ಜೀವ ತುಂಬುವ ಸಲುವಾಗಿ ಪ್ರತಿಯೊಂದು ಜೀವಿಯು ಸ್ವತಂತ್ರ ಮತ್ತು ಸ್ವಾಭಿಮಾನದಿಂದ ಬದುಕಬೇಕೆಂಬ ನಿಲುವಿಗೆ ಭಕ್ತಿಯೆಂಬ ತೈಲವನ್ನು ಎರೆದು ಅದರ ಮೂಲಕ ಅಂಧಶ್ರದ್ಧೆಯನ್ನು ಹೋಗಲಾಡಿಸಲು ಶರಣರು ಎಂಬ ಹೆಸರಿನ ಜಂಗಮತ್ವವನ್ನು ಪರಿಪಾಲಿಸಿ ಅದರ ಮೂಲಕ ದೇವಾಲಯ ಸಂಸ್ಕೃತಿಯನ್ನು ವಿಡಂಬಿಸಿ ಇಷ್ಟಲಿಂಗದ ಮೂಲಕ ಭಕ್ತಿಯನ್ನು ಕಾಣಬೇಕೆಂಬ ಆತನ ವಿಚಾರಗಳಿಗೆ ಪುಡಾರಿ ರಾಜಕೀಯ ವ್ಯಕ್ತಿಗಳು ಪ್ರತಿ ಕ್ಷಣ-ಕ್ಷಣಕ್ಕೂ ವಿರೋಧಿಸುತ್ತಾ ಬಂದಿದ್ದಾರೆ. ಅಲ್ಲದೇ ಸಮಾಜ, ಧರ್ಮ ಮತ್ತು ತನಗೆ ಬಯಸದೇ ಬಂದ ರಾಜಕೀಯ ವ್ಯವಸ್ಥೆಯನ್ನು, ಅಧಿಕಾರವನ್ನು ಅದರ ಮೂಲಕ ಸಮ ಸಮಾಜವನ್ನಾಗಿ ಮಾಡುವಲ್ಲಿ ಶ್ರಮಿಸುವಲ್ಲಿ ಪಟ್ಟಪಾಡು ಅಗಣನೀಯವಾದುದು. ಏಕೆಂದರೆ ಸ್ವತಃ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಬಸವಣ್ಣ ಬ್ರಾಹ್ಮಣರ ಅನೈತಿಕ ಗೊಡ್ಡು ಸಂಪ್ರದಾಯಗಳ ವಿರುದ್ಧ ಬಾಲ್ಯದಲ್ಲಿಯೇ ಧಿಕ್ಕರಿಸಿ ತನ್ನ ಗುರು ಜಾತವೇದ ಮುನಿಗಳಿಂದ ವಿದ್ಯಾ ಪಾರಂಗತನಾಗಿ ಆ ಜ್ಞಾನದಿಂದಲೇ ರಾಜಕೀಯ ಅಧಿಕಾರ ಸ್ವೀಕರಿಸಿ ಮತಾಂಧತೆಯನ್ನು ದೂರ ತಳ್ಳಲು ಪ್ರಯತ್ನಿಸುತ್ತಾನೆ. ಇದರಿಂದ ಬೇಸತ್ತ ಮತಾಂಧರರು ತಮ್ಮ ವೈದಿಕ ಸಂಸ್ಕೃತಿ ಹಾಳಾಗುತ್ತದೆ ಎಂಬ ಆಲೋಚನೆಯಿಂದ ಮಾನವೀಯ ಮೌಲ್ಯದ ಬಸವಣ್ಣನನ್ನು ಅಪರಾಧಿಯನ್ನಾಗಿ ಮಾಡುತ್ತಾರೆ. ಅಷ್ಟೇ ಅಲ್ಲದೇ ಅರಸನಾದ ಬಿಜ್ಜಳನೊಂದಿಗೆ ಬಹಿಷ್ಕಾರ ಹಾಕಿಸುತ್ತಾರೆ. ಇವೆಲ್ಲವೂ ಬಸವಣ್ಣನ ವ್ಯಕ್ತಿತ್ವಕ್ಕೆ ಧಕ್ಕೆ ತರುವಂತಹವುಗಳಾಗಿವೆ. ಏಕೆಂದರೆ ಯಾವ ಜಾತಿಗಳನ್ನು

ನಿಕೃಷ್ಟ ಸ್ಥಾನದಲ್ಲಿರಿಸಿದ್ದರೋ ಅಂತಹ ಜಾತಿಗಳಿಗೆ ಇಷ್ಟಲಿಂಗವನ್ನು ಕಟ್ಟಿಸಿ ಮನುಷ್ಯರನ್ನು ಶರಣರನ್ನಾಗಿ ಮಾಡಿ ಭ್ರಾತೃತ್ವ ಸಮಾಜ ಕಾಣಬೇಕೆಂಬ ಅಭಿಲಾಷೆಗೆ ಆಗಿನ ರಾಜಕೀಯ ಕಾನೂನುಗಳು ಅವನನ್ನು ಬಿಗಿದಪ್ಪಿ ಅಮಾನವೀಯತೆಗೆ ಕಾರಣವಾದವು. ಹೀಗೆ ಬಹಿಷ್ಕಾರಗೊಂಡ ಬಸವಣ್ಣ ಉಳಿದ ಶರಣರನ್ನು ಸಂತೈಸಿ ಹೋಗುವಂತಹ ಸಂದರ್ಭದಲ್ಲಿ ಶರಣರಷ್ಟೇ ಅಲ್ಲದೇ ಸಾಮಾನ್ಯ ಜನರು ಸಹ ಕಣ್ಣೀರು ಸುರಿಸುವಲ್ಲಿ ಅಂತಃಕರಣದ ದರ್ಶನವಾಗುತ್ತದೆ. ಈ ದೃಷ್ಟಿಯಿಂದಲೇ ಬಸವಣ್ಣನವರು ಅಂತರಂಗ ಶುದ್ಧಿಯಾಗಬೇಕೆಂಬ ನಿಲುವನ್ನು ತಾಳಿರಬೇಕು. ಹೀಗೆ ಮನುಷ್ಯನ ಹುಟ್ಟಿನಿಂದ ಹಿಡಿದು ಅವನ ಬೌದ್ಧಿಕತನ ಹೆಚ್ಚಾದಂತೆಲ್ಲಾ ಪ್ರತಿಭಟಿಸುವ ಮನುಷ್ಯನಿಗೆ ಬಸವಣ್ಣನ ಗತಿ ಆಗೇ ಆಗಿತ್ತು/ಈಗಲೂ ಆಗುತ್ತದೆ ಎಂದು ಬೇರೆ ಹೇಳಬೇಕಾಗಿಲ್ಲ.

ಹೀಗೆ ಬಸವಣ್ಣನನ್ನು ಕುರಿತ ಆಧುನಿಕ ಪಠ್ಯಗಳಲ್ಲಿ ಬಸವಣ್ಣನ ಚಳುವಳಿಯಲ್ಲಿನ ಪ್ರಗತಿಪರ ಆಶಯಗಳು ಲೇಖಕರಿಗೆ ಕೃತಿಗಳನ್ನು ರಚಿಸಲು ಪ್ರೇರಣೆ ನೀಡಿವೆ. ಆಧುನಿಕ ಚಿಂತನೆಗಳ ಮೂಲಕ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದರಿಂದ ಹೊಸ ರೀತಿಯ ಅನುಸಂಧಾನಕ್ಕೆ ಕಾರಣವಾಗಿವೆ.

**ಕೊನೆಟಿಪ್ಪಣಿಗಳು**

೧. ವ್ಯಾಸ ದೇಶಪಾಂಡೆ, ೨೦೦೬, **ಇವ ನಮ್ಮವ,** ಪುಟ ೩೨.

೨. ಡಾ. ಬಿ.ಬಿ. ಹೆಂಡಿ, **ಬಸವೇಶ್ವರ** ಪುಟ. ೩೨.

೩. ಏಣಗಿ ಬಾಳಪ್ಪ (ಸಂ), ೨೦೦೩, **ಜಗಜ್ಯೋತಿ ಬಸವೇಶ್ವರ,** ಪುಟ ೧-೨.

೪. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೨.

೫. **ಅದೇ** - ಪುಟ ೩.

೬. ಶ್ರೀಕಂಠಶಾಸ್ತ್ರಿ ನಲವಡಿ, ೧೯೮೩, **ಜಗಜ್ಯೋತಿ ಬಸವೇಶ್ವರ,** ಪುಟ ೩.

೭. ಅ.ನ.ಕೃ, ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೬.

೮. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೧೩-೧೪.

೯. **ಅದೇ** - ಪುಟ ೧೭.

೧೦. ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ೨೦೦೩, **ಜಂಗಮದೆಡೆಗೆ,** ಪುಟ ೪.

೧೧. **ಅದೇ** - ಪುಟ ೪.

೧೨. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೧-೨.

೧೩. ಎಂ.ಸಿ.ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೨೮.

೧೪. **ಅದೇ** - ಪುಟ ೨೯.

೧೫. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ (ಅರಿಕೆ),** ಪುಟ II.

೧೬. **ಅದೇ** - ಪುಟ ೧೨.

೧೭. **ಅದೇ** - ಪುಟ ೧೩.

೧೮. **ಅದೇ** - ಪುಟ ೨೦.

೧೯. **ಅದೇ** - ಪುಟ ೨೧.

೨೦. ಶ್ರೀಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ೨೦೦೩, **ಜಂಗಮದೆಡೆಗೆ,** ಪುಟ ೩೯.

೨೧. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೨೪.

೨೨. **ಅದೇ** - ಪುಟ ೨೫.

೨೩. **ಅದೇ** - ಪುಟ ೨೮.

೨೪. **ಅದೇ** - ಪುಟ ೩೧.

೨೫. ಅ.ನ.ಕೃ, ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೧೧.

೨೬. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೩೫.

೨೭. ಅ.ನ.ಕೃ. ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೩೬-೩೭.

೨೮. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೮೫.

೨೯. ಶ್ರೀಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ೨೦೦೩, **ಜಂಗಮದೆಡೆಗೆ,** ಪುಟ ೪೧.

೩೦. ಗಿರೀಶ ಕಾರ್ನಾಡ, ೨೦೦೫, **ತಲೆದಂಡ,** ಪುಟ ೧೭.

೩೧. ಅ.ನ.ಕೃ, ೧೯೪೯, **ಜಗಜ್ಜೋತಿ ಬಸವೇಶ್ವರ,** ಪುಟ. ೮೪.

೩೨. ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಚಾರ್ಯ ಮಹಾಸ್ವಾಮಿಗಳು, ೧೯೮೩, **ಮರಣವೇ ಮಹಾನವಮಿ.** ಪುಟ ೧೪.

೩೩. ಡಾ. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೫೭.

೩೪. ಶಂಕರಾನಂದ ಉತ್ಲಾಸರ, ೨೦೦೨, **ಬಸವಣ್ಣನನ್ನು ಬದುಕಿಸಿ,** ಪುಟ ೮-೯.

೩೫. ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಚಾರ್ಯ ಮಹಾಸ್ವಾಮಿಗಳು, ೧೯೮೩, **ಮರಣವೇ ಮಹಾನವಮಿ,** ಪುಟ ೭೭-೭೮,.

೩೬. ಶ್ರೀಕಂಠಶಾಸ್ತ್ರಿ ನಲವಡಿ, ೧೯೮೩, **ಜಗಜ್ಯೋತಿ ಬಸವೇಶ್ವರ,** ಪುಟ ೧೦೫.

೩೭. ಜೋಳದರಾಶಿ ದೊಡ್ಡನಗೌಡ, ೧೯೮೬, **ಕ್ರಾಂತಿಪುರುಷ ಬಸವಣ್ಣ,** ಪುಟ ೧೦೮.

೩೮. ಗಿರೀಶ ಕಾರ್ನಾಡ, **ತಲೆದಂಡ,** ೨೦೦೫, ಪುಟ ೪೫.

೩೯. ಚಂದ್ರಶೇಖರ ಕಂಬಾರ, ೨೦೧೧, **ಶಿವರಾತ್ರಿ,** ಪುಟ ೬೪.

೪೦. ಪಿ. ಲಂಕೇಶ, ೨೦೦೦, **ಸಂಕ್ರಾಂತಿ,** ಪುಟ ೭೪.

೪೧. ಏಣಗಿ ಬಾಳಪ್ಪ (ಸಂ), ೨೦೦೩, **ಜಗಜ್ಯೋತಿ ಬಸವೇಶ್ವರ,** ಪುಟ ೯.

೪೨. ಚಂದ್ರಶೇಖರ ಕಂಬಾರ, ೨೦೧೧, **ಶಿವರಾತ್ರಿ,** ಪುಟ ೪೬.

೪೩. **ಅದೇ** - ಪುಟ ೫೯-೬೦.

೪೪. ಏಣಗಿ ಬಾಳಪ್ಪ (ಸಂ), ೨೦೦೩, **ಜಗಜ್ಯೋತಿ ಬಸವೇಶ್ವರ,** ಪುಟ ೧೭.

೪೫. ಶ್ರೀ ಪಂಡಿತಾರಾಧ್ಯ ಶಿವಚಾರ್ಯಸ್ವಾಮಿ, ೨೦೦೩, **ಜಂಗಮದೆಡೆಗೆ.** ಪುಟ ೧೫.

೪೬. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೭೦.

೪೭. **ಅದೇ** - ಪುಟ ೬೬.

೪೮. ಎಂ.ಸಿ.ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೫೪-೫೫,

೪೯. ಅನಕೃ, ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೨೦.

೫೦. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೫೩.

೫೧. ಅ.ನ.ಕೃ., ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೭೬.

೫೨. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೭೭.

೫೩. ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಚಾರ್ಯ ಮಹಾಸ್ವಾಮಿಗಳು, ೧೯೮೩, **ಮರಣವೇ ಮಹಾನವಮಿ,** ಪುಟ ೪೪.

೫೪. **ಅದೇ** - ಪುಟ ೬೬.

೫೫. ಶ್ರೀಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, **ಜಂಗಮದೆಡೆಗೆ,** ಪುಟ ೩೯.

೫೬. ಏಣಗಿಬಾಳಪ್ಪ (ಸಂ), **ಜಗಜ್ಯೋತಿ ಬಸವೇಶ್ವರ,** ಪುಟ ೬೬-೬೭.

೫೭. ಶ್ರೀಪಂಡಿತಾರಾಧ್ಯ ಸ್ವಾಮೀಜಿ, **ಜಂಗಮದೆಡೆಗೆ,** ಪುಟ ೧೦.

೫೮. ಏಣಗಿ ಬಾಳಪ್ಪ (ಸಂ), **ಜಗಜ್ಯೋತಿ ಬಸವೇಶ್ವರ,** ಪುಟ ೧೫.

೫೯. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೪೯.

೬೦. **ಅದೇ** - ಪುಟ ೧೮.

೬೧. ಗಿರೀಶ ಕಾರ್ನಾಡ, ೨೦೦೫, **ತಲೆದಂಡ,** ಪುಟ ೨೬.

೬೨. ವ್ಯಾಸ ದೇಶಪಾಂಡೆ, ೨೦೦೬, ಇವ ನಮ್ಮವ, ಪುಟ ೨೫.

೬೩. ಶ್ರೀಪಂಡಿತಾರಾಧ್ಯ ಸ್ವಾಮೀಜಿ, **ಜಂಗಮದೆಡೆಗೆ,** ಪುಟ ೧೩.

೬೪. ಎಂ.ಸಿ. ರಾಮಲಿಂಗಯ್ಯ, **ಕ್ರಾಂತಿಯೋಗಿ ಬಸವಣ್ಣ,** ಪುಟ ೧೦೮.

೬೫. ಶ್ರೀಕಂಠಶಾಸ್ತ್ರಿ, ನಲವಡಿ, **ಜಗಜ್ಯೋತಿ ಬಸವೇಶ್ವರ,** ಪುಟ ೨೯.

೬೬. ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಚಾರ್ಯ ಮಹಾಸ್ವಾಮಿಗಳು, ೧೯೮೩, **ಮರಣವೇ ಮಹಾನವಮಿ,** ಪುಟ ೮೨.

೬೭. ಏಣಗಿ ಬಾಳಪ್ಪ (ಸಂ), **ಜಗಜ್ಯೋತಿ ಬಸವೇಶ್ವರ,** ಪುಟ ೪೩.

೬೮. ಶ್ರೀಕಂಠಶಾಸ್ತ್ರಿ ನಲವಡಿ, **ಜಗಜ್ಯೋತಿ ಬಸವೇಶ್ವರ,** ಪುಟ ೬೭.

೬೯. ಏಣಗಿ ಬಾಳಪ್ಪ (ಸಂ), **ಜಗಜ್ಯೋತಿ ಬಸವೇಶ್ವರ,** ಪುಟ ೬೯.

೭೦. **ಅದೇ** - ಪುಟ ೭೪.

❑❑❑

ಅಧ್ಯಾಯ : ನಾಲ್ಕು

# ಬಸವಣ್ಣನನ್ನು ಕುರಿತ ನಾಟಕಗಳಲ್ಲಿ ಪ್ರಧಾನ ಪಾತ್ರಗಳ ಹಾಗೂ ಸಂಗತಿಗಳ ಚಿತ್ರಣ

---

೪.೧. ಬಸವಣ್ಣ ಮತ್ತು ಕಾಯಕತತ್ವ

೪.೨. ಬಸವಣ್ಣ ಮತ್ತು ಬಿಜ್ಜಳ

೪.೩. ಬಸವಣ್ಣ ಮತ್ತು ಅಕ್ಕಮಹಾದೇವಿ

೪.೪. ಬಸವಣ್ಣ ಮತ್ತು ಚಳುವಳಿ

### ಅಧ್ಯಾಯ : ನಾಲ್ಕು

# ಬಸವಣ್ಣನನ್ನು ಕುರಿತ ನಾಟಕಗಳಲ್ಲಿ ಪ್ರಧಾನ ಪಾತ್ರ ಹಾಗೂ ಸಂಗತಿಗಳ ಚಿತ್ರಣ

**ಪೀಠಿಕೆ**

೧೨ನೇ ಶತಮಾನದ ಶರಣರ ಕೊಡುಗೆ ಮಹತ್ತರವಾದುದು. ವಚನ ಸಾಹಿತ್ಯ ಚಳುವಳಿಯಲ್ಲಿ ಬಸವಣ್ಣನವರು ಪ್ರಧಾನವಾಗಿ ಕಾಣಿಸಿಕೊಂಡಿರುವ ವಿವಿಧ ರೀತಿಯ ವ್ಯಾಖ್ಯಾನಗಳಿಗೆ ಒಳಗಾಗಿದ್ದಾರೆ. ಕಾದಂಬರಿಗಳು ಬಸವಣ್ಣನ ಬಗ್ಗೆ ಅಪಾರ ಭಕ್ತಿಯನ್ನು ಹೊಂದಿರುವುದರಿಂದ ಹಾಗೂ ಆತನನ್ನು ಯಾವುದೇ ಪ್ರಶ್ನೆಗಳಿಗೆ, ವಾಗ್ವಾದಗಳಿಗೆ ಒಳಪಡಿಸದೇ ರಚಿತವಾದಂತಿವೆ. ಆದರೆ ನಾಟಕ ಪಠ್ಯಗಳು ಅನೇಕ ಲೇಖಕರಿಗೆ ಕೃತಿಗಳನ್ನು ರಚಿಸಲು ಪ್ರೇರಣೆ ನೀಡಿವೆ. ಹೀಗಾಗಿ ಲೇಖಕರು ಪಾತ್ರಗಳು ಹಾಗೂ ಕೆಲವು ಸಂಗತಿಗಳ ಚಿತ್ರಣಗಳ ಮೂಲಕ ವಾಸ್ತವಿಕ ಜಗತ್ತಿನ ವಿಚಾರಗಳನ್ನು ಹೇಳುತ್ತಿರುತ್ತಾರೆ. ನಾಟಕಕಾರರಿಗೆ ಚರಿತ್ರೆಯನ್ನು ಹೇಳುವುದು ಮುಖ್ಯವಲ್ಲ. ವಾಸ್ತವಿಕ ಸಮಾಜದ ಸಮಸ್ಯೆಯನ್ನು, ಸಂದಿಗ್ಧತೆಯನ್ನು ಪಠ್ಯದಲ್ಲಿ ನೋಡುವುದರ ಮೂಲಕ ತಾರ್ಕಿಕ ಹುಡುಕಾಟದ ಕ್ರಿಯೆ ನಡೆದಿರುತ್ತದೆ. ಬಸವಣ್ಣನವರ ಕಾಯಕತತ್ವವನ್ನು ಕುರಿತು ತರಳಬಾಳು ಜಗದ್ಗುರು ಶಿವುಕುಮಾರ ಶಿವಾಚಾರ್ಯ ಸ್ವಾಮೀಜಿಯವರ ಮರಣವೇ ಮಹಾನವಮಿ, ವ್ಯಾಸ ದೇಶಪಾಂಡೆಯವರ ಇವ ನಮ್ಮವ, ಎಂ.ಸಿ. ರಾಮಲಿಂಗಯ್ಯನವರ ಕ್ರಾಂತಿಯೋಗಿ ಬಸವಣ್ಣ ಹಾಗೂ ಇತ್ತೀಚಿನ ಚಂದ್ರಶೇಖರ ಕಂಬಾರರವರ ಶಿವರಾತ್ರಿ ನಾಟಕ ಹೀಗೆ ಮುಂತಾದವು ಹೊಸ ಬೆಳಕನ್ನು ಚೆಲ್ಲುವಂತೆ ನಿರ್ಮಿತಗೊಂಡಿವೆ.

## ೪.೧. ಬಸವಣ್ಣ ಮತ್ತು ಕಾಯಕತತ್ವ

> ಸತ್ಯ ಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ
> ಚಿತ್ತ ವಿಚ್ಚಂದವಾಗದಿರಬೇಕು
> ನೇಮದ ಕೂಲಿಯೆಂದಿನ ನಿತ್ಯ ನೇಮದಲ್ಲಿ ಸಂದಿಲ್ಲದಿರಬೇಕು.
> ನೇಮದ ಕೂಲಿಯ ಬಿಟ್ಟು
> ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದಡೆ

ತಾ ಮಾಡುವ ಸೇವೆ ನಷ್ಟವಯ್ಯ
ನಿನ್ನಾಸೆಯ ವೇಷದ ಪಾಶಕ್ಕೆ ನೀನೇ ಹೋಗು
ನನಗೆ ನಮ್ಮ ಜಂಗಮದ ಪ್ರಸಾದದಾಗೆ
ಚಂದೇಶ್ವರ ಲಿಂಗಕ್ಕೆ ಪ್ರಾಣವಯ್ಯಾ.

೧೨ನೇ ಶತಮಾನದ ಶಿವಶರಣರು ಕಾಯಕವೇ ಕೈಲಾಸವೆಂಬ ಸಿದ್ಧಾಂತವನ್ನು ಪ್ರತಿಪಾದಿಸಿದವರು. ಮನುಷ್ಯ ಹುಟ್ಟುವುದು ಒಂದು ಜೈವಿಕ ಕ್ರಿಯೆ ಸಾಯುವುದು ಅನಿವಾರ್ಯದ ಖಚಿತತೆ ಆಗಿದೆ. ಹುಟ್ಟು ಮತ್ತು ಸಾವುಗಳ ನಡುವೆ ಬದುಕುವ ಪ್ರತಿಯೊಬ್ಬ ಮನುಷ್ಯನಲ್ಲಿ ಬದುಕುವ ರೀತಿ ಭಿನ್ನವಾಗಿರುತ್ತದೆ. ಕಾರಣ ನಮ್ಮ ಧರ್ಮಗಳು, ಶಾಸ್ತ್ರಗಳು, ವೇದಗಳು ಮತ್ತು ಆಗಮಗಳು ಜೊತೆಗೆ ಪುರಾಣಗಳನ್ನು ಒಳಗೊಂಡಂತೆ ಹೇಳುವ ಶ್ರೇಣೀಕೃತ ಸಮಾಜ ವರ್ಗ ಮತ್ತು ವರ್ಣಗಳನ್ನು ಸೃಷ್ಟಿಸಿ ಅವರವರ ವರ್ಗಗಳಿಗೆ ಅನುಗುಣವಾಗಿ ದುಡಿಮೆಗೆ ಕಾರಣಕರ್ತರಾದರು. ನಾವು ಈ ಹಿನ್ನೆಲೆಯಲ್ಲಿ ಇತಿಹಾಸವನ್ನು ಅವಲೋಕಿಸಬೇಕಾಗುತ್ತದೆ. ಏಕೆಂದರೆ ಆಧುನಿಕ ಮಹಾಮಾನವತಾವಾದಿ ಡಾ. ಬಿ.ಆರ್. ಅಂಬೇಡ್ಕರ್‌ರವರು 'ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು' ಎಂದು ಹೇಳಿದ ಮಾತು ಗಂಭೀರವಾದ ಆಲೋಚನಾಲಹರಿಯನ್ನು ತಿಳಿಸುತ್ತದೆ. ಮನುಷ್ಯ ಹುಟ್ಟಿನಿಂದ ಬದುಕಬೇಕಾದರೆ ಪ್ರಾರಂಭದಲ್ಲಿ ಬೇಟೆಯಾಡುವುದರ ಮೂಲಕ ಜೀವನ ಸಾಗಿಸುತ್ತಿದ್ದನು. ಅದು ಒಂದು ರೀತಿಯಲ್ಲಿ ಕಾಯಕವೇ ಆಗಿತ್ತು. ಬರುಬರುತ್ತಾ ಬೌದ್ಧಿಕಮಟ್ಟ ಬೆಳೆದಂತೆಲ್ಲಾ ಬದುಕುವ ರೀತಿ ವಿಭಿನ್ನವಾಯಿತು. ಈ ದೇಶದ ಮೂಲ ನಿವಾಸಿಗಳಾದ ದ್ರಾವಿಡರು ಆಗಿನ ಕಾಲದ ಅರಸರಾಗಿದ್ದರು. ನಂತರದಲ್ಲಿ ಬಂದ ಆರ್ಯರು, ದ್ರಾವಿಡರ ಮಧ್ಯೆ ಕಲಹಗಳನ್ನು ಸೃಷ್ಟಿಸಿ ಅವರ ಅಧಿಕಾರವನ್ನು ತಾವು ಪಡೆದುಕೊಳ್ಳುವುದರ ಮೂಲಕ ವೇದಗಳನ್ನು ಹುಟ್ಟು ಹಾಕಿದರು. ಆ ವೇದಗಳಿಂದ ಕವಲೊಡೆದ ದ್ರಾವಿಡರಲ್ಲಿ ಭಯವನ್ನು ಹುಟ್ಟಿಸಿ ಅವರ ಭೂಮಿಗೆ ತಾವೇ ವಾರಸುದಾರರಾದರು. ಯಾವಾಗ ಆರ್ಯರಿಂದ ಕವಲೊಡೆದ ದ್ರಾವಿಡರು ಬದುಕುವ ಸಲುವಾಗಿ ವೃತ್ತಿಯನ್ನು ಕೈಗೊಂಡರೋ ಆ ವೃತ್ತಿಗಳಿಗನುಗುಣವಾಗಿ ಜಾತಿಗಳನ್ನು ಸೃಷ್ಟಿಸಿದರು. ಹೀಗೆ ವೃತ್ತಿಗಳಿಗನುಗುಣವಾಗಿ ಬಂದ ಜಾತಿಪದ್ಧತಿ ಶ್ರೇಣೀಕೃತ ಸಮಾಜವನ್ನು ನಿರ್ಮಿಸಲು ಮುಂದಾಯಿತು. ಆಗ ಇಂತಹ ಜಾತಿಗಳ ನಿಕೃಷ್ಟತನವನ್ನು ಹೋಗಲಾಡಿಸಲು ಸನಾತನ ಧರ್ಮದ ಕಟ್ಟುಪಾಡುಗಳ ವಿರುದ್ಧ ಬೌದ್ಧ ಧರ್ಮದ ಮೂಲಕ ಬುದ್ಧ ಶಾಂತಿ, ಕರುಣೆ ಹಾಗೂ ಪ್ರಜ್ಞೆಯನ್ನು ತುಂಬಿದನು. ನಂತರದಲ್ಲಿ ಬುದ್ಧನ ಮಾರ್ಗವನ್ನು ಚಕ್ರವರ್ತಿಯಾದ ಅಶೋಕ ಅನುಸರಿಸಿರುವುದು ಮಾನವೀಯ ಮೌಲ್ಯವನ್ನು ಬಿತ್ತರಿಸಿರುವುದು ಶ್ಲಾಘನೀಯ. ಬುದ್ಧನ ತರುವಾಯ ಸುಮಾರು ಶತಮಾನಗಳ ಕಾಲ ಶ್ರೇಣೀಕೃತ ಸಮಾಜ ನಿರ್ಮಾಣವಾಗುತ್ತ ನಡೆದಂತಹ ಸಂದರ್ಭದಲ್ಲಿ ಮತ್ತೊಂದು ಬೆಳಕಿನ ಶತಮಾನದ ಯುಗ ಪ್ರಾರಂಭವಾಯಿತು. ಅದುವೇ ವಚನ ಚಳುವಳಿ. ಇದು ಹಿಂದೆಂದೂ ಕಾಣದೇ ಇರುವಂತಹ ಚಳುವಳಿಯಾಗಿ ಆಗಿನ ಕಾಲದಲ್ಲಿ ನಡೆದು ಹೋಯಿತು. ಚಳುವಳಿಯ

ಪ್ರತೀಕವಾಗಿ ಕ್ರಾಂತಿ, ಆಂದೋಲನ ಎಂಬುದಾಗಿ ಕರೆದು ಆ ಕಾಲದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಪರಿವರ್ತನೆ ಆಗುವ ನಿಟ್ಟಿನಲ್ಲಿ ಮಾಡಿದ ಮಹಾಮಾನವತಾ ವಾದಿಗಳೆಂದರೆ ಶಿವಶರಣರು. ಈಗಾಗಲೇ ಹೇಳಿದಂತೆ ವೃತ್ತಿ ಆಧಾರದ ಮೇಲೆ ಜಾತಿಗಳು ಹುಟ್ಟಿಕೊಂಡಿವೆ ಎಂಬುದಕ್ಕೆ ವಿಶ್ವಪುರುಷ ಬಸವಣ್ಣನವರು ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ ಎಂಬುದಾಗಿ ನುಡಿದಿರುವಲ್ಲಿ ಅರಿವಿನ ಪ್ರಜ್ಞೆ ಗೋಚರಿಸುತ್ತದೆ.

ದುಡಿಮೆ ಎಂಬ ಪದಕ್ಕೆ 'ಕಾಯಕ' ಎಂಬ ವಿಶಾಲ ಅರ್ಥವನ್ನು ಕೊಟ್ಟು ಪ್ರತಿಯೊಬ್ಬರು ಅದರಿಂದ ಜೀವನ ಸಾಗಿಸಬೇಕೆಂಬ ನಿಲುವನ್ನು ತಾಳಿದವರೆಂದರೆ ಬಸವಾದಿ ಪ್ರಮಥರು. ಈ ಮುಂಚೆ ವೇದಗಳು ಬ್ರಾಹ್ಮಣನನ್ನು ಬ್ರಹ್ಮನ ತಲೆಯಿಂದಲೂ, ಕ್ಷತ್ರಿಯನನ್ನು ಬ್ರಹ್ಮನ ತೋಳು ಗಳಿಂದಲೂ, ವೈಶ್ಯನನ್ನು ಬ್ರಹ್ಮನ ತೊಡೆಯಿಂದಲೂ, ಶೂದ್ರನನ್ನು ಬ್ರಹ್ಮನ ಪಾದಗಳಿಂದಲೂ ಹುಟ್ಟಿಸಿ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ೩ ವರ್ಣಗಳು ಬ್ರಾಹ್ಮಣನ ಸೇವೆಯಲ್ಲಿ ನಿರತರಾಗಬೇಕು. ಅದುವೇ ಅವರ ದುಡಿಮೆ ಮತ್ತು ಸೇವೆ ಎಂಬುದಾಗಿ ಸೃಷ್ಟಿ ಮಾಡಿದ್ದರು. ಕಾಲ ಒಂದೇ ರೀತಿಯಾಗಿರಬಹುದು. ಆದರೆ ಮನುಷ್ಯನ ಬೌದ್ಧಿಕತೆ, ವಿಚಾರ ಒಂದೇ ರೀತಿಯಾಗಿರಲು ಸಾಧ್ಯವಿಲ್ಲ ಎಂಬುದಕ್ಕೆ ೧೨ನೇ ಶತಮಾನದ ವಚನಕಾರರೇ ಸಾಕ್ಷಿಯಾಗಿದ್ದಾರೆ. ಆದ್ಯ ವಚನಕಾರ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ ಮುಂತಾದವರ ನಂತರ ಬಸವಣ್ಣನವರ ಉದಯವಾಗುತ್ತದೆ. ಈ ಉದಯ ಆ ಕಾಲದ ಸುದೈವವೆಂದೇ ಹೇಳಬೇಕು. ಯಾವ ವೇದಗಳು ವೃತ್ತಿಗಳಿಗನುಗುಣವಾಗಿ ಜಾತಿಗಳನ್ನು ನಿರ್ಮಿಸಿತ್ತೋ, ಅಂತಹ ವೃತ್ತಿಗೆ ಬಸವಣ್ಣನವರು 'ಕಾಯಕ' ಎಂಬ ಪ್ರಜ್ಞೆಯನ್ನು ಕೊಟ್ಟು ಅರಸನಾಗಲಿ, ಪ್ರಜೆಗಳಾಗಲಿ ಮತ್ತು ಜನಸಾಮಾನ್ಯರಾಗಲಿ, ಕಾಯಕವನ್ನು ಅನುಸರಿಸಿ ಬದುಕಬೇಕೆಂದು ತಿಳಿಸಿದರು.

> "ಗುರುವಾದಡೂ ಕಾಯಕದಿಂದಲೆ ಜೀವನ್ಮುಕ್ತಿ
> ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲವು ಹರಿವುದು
> ಜಂಗಮವಾದಡೂ ಕಾಯಕದಿಂದಲೇ ವೇಷದ ಪಾಶ ಹರಿವುದು
> ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು"[೧]

ಹೀಗೆ ಹೇಳುವುದಲ್ಲದೇ ಕಾಯಕ್ಕೆ ಸಂಬಂಧಿಸಿದ ಕಾರ್ಯವೇ ಕಾಯಕ. ಕಾಯಕವೆಂದರೆ ಬೌದ್ಧಿಕ ಮತ್ತು ಭೌತಿಕ ಎರಡನ್ನು ಒಳಗೊಂಡು ಪರಿಶ್ರಮದ ಮೂಲವಾಗಬಹುದು. ಅಂದರೆ ಹೊಟ್ಟೆ ಇದ್ದವನು ಉಣ್ಣುವುದು ಎಷ್ಟು ಮುಖ್ಯವೋ, ಮೈಯಲ್ಲಿ ಶಕ್ತಿ, ಕೈಯಲ್ಲಿ ರಟ್ಟೆ ಇದ್ದವನು ದುಡಿಯುವುದು ಅಷ್ಟೇ ಮುಖ್ಯ. ಏಕೆಂದರೆ ಈ ಕಾರ್ಯಕ್ಕೆ ಲಿಂಗಭೇದ, ವರ್ಗಭೇದ ಮತ್ತು ವರ್ಣಭೇದ ಎನ್ನುವಂತಹ ಸಂಕರಗಳು ಕಾರಣವಾಗುವುದಿಲ್ಲ. ಅದಕ್ಕಾಗಿ ಈ ಮೇಲಿನ ವಚನವೇ ಸಾಕ್ಷಿ. ಹೀಗೆ ಮುಂದುವರಿದು ಬಸವಣ್ಣ ಪ್ರತಿಯೊಬ್ಬರೂ ತನ್ನ ನಿಷ್ಠೆ ಹಾಗೂ ಪ್ರಮಾಣಿಕತೆಯಿಂದ ಕಾಯಕವನ್ನು ಪ್ರತಿಪಾದಿಸಿದ್ದೇ ಆದರೆ ಅದರಿಂದ ಶ್ರೇಷ್ಠತೆಯನ್ನು ಪಡೆದುಕೊಳ್ಳ ಬಹುದು ಎಂಬ ನಿಲುವು ಬಸವಣ್ಣನವರದಾಗಿದ್ದರಿಂದಲೇ ಕಾಯಕಕ್ಕೆ ಮೊದಲ ಸ್ಥಾನ ನೀಡಿದ್ದಾರೆ.

ಆಸೆಯೆಂಬುದು ಅರಸಂಗಲ್ಲದೇ ಶಿವಭಕ್ತರಿಗುಂಟೇನಯ್ಯ ಎಂದು ಹೇಳುವ ಶರಣರು ಆಸೆಗಾಗಿ ದುಡಿಯುವ ಕಾಯಕ ಕೇವಲ ಹೊಟ್ಟೆಪಾಡಿಗಾಗಿ ಎನ್ನುತ್ತಾರೆ.

"ಬಸವಣ್ಣ : ಅದೇ ಶಿವನಿಗೆ ಅರ್ಪಣೆ ಮಾಡಿ ಲೋಕದ ಲೇಸಿಗಾಗಿ ಗೆಯ್ದರೆ ಆಗ ಅಂಥಾ ಕಾಯಕ ಶಿವನ ಪೂಜೆ ಕಾಣವ್ವ, ಉಣ್ಣದ ಕಲ್ಲಿಗೆ ಬೋನವನ್ನು ಹಿಡಿದರೆ, ಮೂಸದ ಕಲ್ಲಿಗೆ ಪರಿಮಳವನ್ನು ಮುಡಿಸಿದರೆ ಆ ಪೂಜೆ ಶಿವನಿಗೆ ಹ್ಯಾಗೆ ಸಲ್ಲತೈತಿ? ಕಾಯಕ ಮಾತ್ರ ಶಿವನಿಗೆ ಸಲ್ಲಬಲ್ಲ ನಿಜವಾದ ಪೂಜೆ. ನಾನಿನ್ನು ನಡೆಯತೀನವ್ವ, ಅಪ್ಪಣೆ ಕೊಡು. ಇಲ್ಲಿ ನಮ್ಮ ದಾರಿ ಹೊರಳ್ತದೆ. ಇಂದು ನಿಮ್ಮೆಲ್ಲರ ಕಾಯಕದಿಂದಾಗ್ತಿರೋ ಲೇಸನ್ನು ಕಣ್ಣಾರೆ ನೋಡಿ ಮನಸ್ಸಿಗೆ ಹಿತ ಆತು. ಮಹಾಮನೆಯ ಹಿರಿಯರಾದರೂ ಹೇಳ್ತಿರ್ತಾರು ಕಾಯಕದಲ್ಲಿಯೇ ಸುಖ ಐತಿ."[೨]

ಹೀಗೆ ಕಾಯಕದ ಪ್ರಜ್ಞೆಯನ್ನು ಹೇಳಿದ ಬಸವಣ್ಣ ನೀವು ಭಾವ ಶುದ್ಧಿಯಿಂದ ಮಾಡಿದ ಕಾಯಕ ಮೈಯಷ್ಟನ್ನೇ ಅಲ್ಲ. ಮನಸ್ಸನ್ನು ದುಡಿಸುವುದು ಎಂದರ್ಥ. ತಾನು ಬದುಕಲು ದುಡಿಯುವುದು ಒಂದು ರೀತಿಯ ಕಾಯಕವಾದರೆ ಸಮಾಜ ಬದುಕಲು ದುಡಿಯುವುದು ಸತ್ಯದ ಕಾಯಕ. ಎಂದಾಗ ಉಳಿದ ಶರಣರಾದ ಕುಂಬಾರ, ಕಂಬಾರ, ಸಮಗಾರ, ಬಡಿಗೇರ, ಮಡಿವಾಳ, ಡೋಹರ, ಮುಂತಾದವರ ಕಾಯಕ ಒಂದು ರೀತಿಯಿಂದ ವೃತ್ತಿಯಾದರೆ ಶ್ರದ್ಧೆಯಿಂದ ಮಾಡಿದ್ದೇ ಆದರೆ ಅದು ಶ್ರದ್ಧೆಯಿಲ್ಲದೇ ಮಾಡಿದ ಪೂಜೆಗಿಂತ ಶ್ರೇಷ್ಠ ಎಂದ ಬಸವಣ್ಣ. ಅವರವರ ಇಷ್ಟ ವೃತ್ತಿಗಳನ್ನು ಅನುಸರಿಸಿಕೊಂಡು ಆ ವೃತ್ತಿಗಳನ್ನು ಕಾಯಕವನ್ನಾಗಿ ಪರಿವರ್ತಿಸಿಕೊಂಡ ಎಲ್ಲರೂ ಭೂಮಿಯ ಮೇಲಿನ ದೇವರು. ಎಂದಾಗ ಮೂಲದಿಂದ ಬಂದಿರುವ ಬ್ರಾಹ್ಮಣರು ತಾವು ಮಾತ್ರ ಭೂಮಿಯ ಮೇಲಿನ ದೇವರೆಂದು ಹೇಳಿಕೊಳ್ಳುವ ಬೂಟಾಟಿಕೆಗೆ ಬಸವಣ್ಣನವರು ಇವೆಲ್ಲಾ ಭಯ ಹುಟ್ಟಿಸುವ ಹುಸಿ ಕಲ್ಪನೆಗಳೇ ಹೊರತು ಕಾಯಕನಿಷ್ಠೆಯಲ್ಲ. ನಿಜವಾದ ಕಾಯಕದ ಸಾರ್ಥಕತೆ ಇರುವುದು. ಜಂಗಮ ದಾಸೋಹ ಮಾಡುವಲ್ಲಿ ಎಂದಾಗ ಜಂಗಮನು ದುಡಿದು ಗಳಿಸಿದರಲ್ಲಿ ಒಂದಿಷ್ಟು ದಾನ ಮಾಡಬೇಕಲ್ಲವೇ? ಅಂದಾಗ ಬಸವಣ್ಣ ದಾನ ಮಾಡುವುದು ಅಲ್ಲ. ದಾನವೇ ಬೇರೆ, ದಾಸೋಹವೇ ಬೇರೆ. ನಮ್ಮ ಒಡೆತನದ ವಸ್ತುವನ್ನು ಇನ್ನೊಬ್ಬರಿಗೆ ಅರ್ಪಿಸುವುದು ದಾನವಾದರೆ, ನಮ್ಮ ಶ್ರಮದಿಂದ ಮಾಡುವುದು ಕಾಯಕವೆನಿಸುತ್ತದೆ. ನಮ್ಮದು ಏನಿದ್ದರೂ ಕಾಯಕತತ್ವದ ಜೊತೆಗೆ ದಾಸೋಹ ತತ್ವವೂ ಮುಖ್ಯ. ಇದರಿಂದ ಸುಖ ಸಂತೃಪ್ತಿಗಳು ತಾವಾಗಿಯೇ ಲಭಿಸುತ್ತವೆ. ತನು-ಮನ ಹಾಗೂ ಧನ ಇವುಗಳಿಂದ ಒಂದು ವೇಳೆ ಕಾಯಕವನ್ನು ಆಚರಿಸಿದ್ದೇ ಆದರೆ ಅರ್ಥ ಮೂಲ ಸಾಮಾಜಿಕ ಸಿದ್ಧಾಂತವಾಗಿ ಮಾರ್ಪಡುತ್ತದೆ.

ಬಸವಣ್ಣನವರು ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯ ನೆಮ್ಮಯ್ಯ ಕಿನ್ನರಿ ಬೊಮ್ಮಯ ಎನ್ನನೇತಕ್ಕರಿಯಿರಿ ನಾನು ಹಾರವನೆಂದರೆ

ಕೂಡಲಸಂಗಮದೇವಾ-ನಗುವನಯ್ಯಾ ಎಂದು ಹೇಳುವಲ್ಲಿ ಮಾದಿಗ, ಡೋಹರ, ಕಿನ್ನರಿ ಮತ್ತು ಹಾರುವ ಎಂಬ ೪ ಜಾತಿಗಳು ವೃತ್ತಿಯನ್ನೇ ಅವಲಂಬಿಸಿವೆ. ಹೀಗಾಗಿ ಬಸವಣ್ಣನವರು ಅವರ ವೃತ್ತಿಯನ್ನು ಅವಲೋಕಿಸಿ ಅವರನ್ನು ಹತ್ತಿರಕ್ಕೆ ಕರೆದುಕೊಳ್ಳುತ್ತಾನೆ. ಅಲ್ಲದೇ ಲಿಂಗ-ದೀಕ್ಷೆ ನೀಡಿ ಶರಣರನ್ನಾಗಿ ಪರಿವರ್ತಿಸುತ್ತಾನೆ. ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಡೋಹರ ಕಕ್ಕಯ್ಯ, ಹಡಪದ ಅಪ್ಪಣ್ಣ, ಆಯ್ದಕ್ಕಿ ಲಕ್ಕಮ್ಮ, ಆಯ್ದಕ್ಕಿ ಮಾರಯ್ಯ, ಜೇಡರ ದಾಸಿಮಯ್ಯ ಹೀಗೆ ಜಾತಿಗನುಗುಣವಾಗಿ ಶರಣರ ಪಟ್ಟಿ ಬೆಳೆದುಕೊಂಡು ಹೋಗುತ್ತದೆ. ಬಸವಣ್ಣ ಹೇಳಿದ ಹಾಗೇ ಪ್ರತಿಯೊಬ್ಬರೂ ಕಾಯಕದಿಂದಲೇ ಶ್ರೇಷ್ಠರಾಗಬೇಕೆಂಬ ನಿಲುವಿಗೆ ಈ ಮೇಲಿನವರು ಎಲ್ಲರೂ ಶರಣರಾದರೂ ಸಹ ತಮ್ಮ ತಮ್ಮಲ್ಲಿ ಕಾಯಕ ಪ್ರಜ್ಞೆಯನ್ನು ಕುರಿತು ಮಾತನಾಡುತ್ತಾರೆ. ಶರಣರಲ್ಲಿ ಒಬ್ಬರಾದ ಸೊನ್ನಲಿಗೆ ಸಿದ್ಧರಾಮರು ಕರ್ಮಯೋಗಿ ಧರ್ಮದಿಂದಲೇ ಕರ್ಮ ಮೂಲವಾಗಿದೆ. ಕರ್ಮಯೋಗದಿಂದ ಮುಕ್ತಿಯನ್ನು ಸಂಪಾದಿಸುವುದೇ ಮಾನವ ಧರ್ಮ. ಅಂದ ಮೇಲೆ ಅಲ್ಲಿರುವ ಸದಾಚಾರ ಕಾಯಕದ ಇನ್ನೊಂದು ರೂಪ ಎಂಬುದಾಗಿ ನುಡಿಯುತ್ತಾನೆ. ನಂತರದಲ್ಲಿ ಹಡಪದ ಅಪ್ಪಣ್ಣನವರು ನನ್ನ ವೃತ್ತಿ ಹಡಪಿಗ, ನಾನು ಭಕ್ತರ ತಲೆಯ ಮೇಲೆ ಹೊಲಸು ತೆಗೆಯುವ ಕೈಗೂಲಿ. ದೇವರ ಸೃಷ್ಟಿಯಲ್ಲಿ ಹುಟ್ಟಿ ಬಂದವರಿಗೆಲ್ಲ ಒಂದೇ ರೀತಿಯ ಕಾಯಕವನ್ನು ಅನುಸರಿಸಿ ಕಾಯಕನಿಷ್ಠೆಗೆ ಬದ್ಧನಾಗಿದ್ದೇನೆ ಎಂದು ಹೇಳುವಲ್ಲಿ ಅದೊಂದು ಶಿವಶರಣರ ಕಾಯಕವೇ ಹೊರತು ಮತ್ತೇನಲ್ಲ. ಆಗ ಮಡಿವಾಳ ಮಾಚಿದೇವರು ಕಾಯಕವೇ ಜೀವನದ ಸ್ವತ್ತು ಹೊಟ್ಟೆಯ ದುಡಿಮೆಯೇ ಕಾಯಕ. ಪ್ರತಿಯೊಬ್ಬರು ಕಾಯಕ ಜೀವಿಯಾಗಬೇಕು ಎಂದು ಹೇಳಿ ಮುಂದುವರಿದ ಮಡಿವಾಳ ಮಾಚಯ್ಯನು -

"**ಮಡಿವಾಳ ಮಾಚಯ್ಯ :** ದುಡಿಯದೇ ಉಣ್ಣುವ ಪಾಪಿ ತುಡುಗಿನ ಅನ್ನ ತಿಂದಂತೆ, ನಾನು ಮಡಿವಾಳ. ಭಕ್ತರ ಬಟ್ಟೆ ತೊಳೆವುದ ನನ್ನ ಭವಿತನ ಕುಟ್ಟಿ ಹಾಕುವುದೇ ನನ್ನ ವಿಧಾಯಕ. ತನಗನ್ಯವಾದುದ ನೋಡಿದೊಡೆ ಭವಿತನ! ಕಂಡವ ತಿಂದು ಹೆಂಡವ ಕುಡಿದು ತಪ್ಪಿಗೆ ದಂಡವ ಕೊಡುವ ಜಗ ಭಂಡರನೆನೇಂಬೆನಯ್ಯ. ಆ ಭವಿತನ ಬಿಡುವುದೇ ಸತ್ಯ ಸನಾತನ ಧರ್ಮ."[೨]

ಇಲ್ಲಿ ನಮಗೆ ಗೋಚರಿಸುವ ಸಂಗತಿಯೆಂದರೆ ಬಟ್ಟೆ ತೊಳೆಯುವುದು, ತಲೆಯ ಮೇಲಿನ ಕೂದಲು ಕತ್ತರಿಸುವುದು ಕಾಯಕವಾಗಿ ಕಾಡುವ ಸಂಗತಿ ಗಮನಾರ್ಹವಾದುದು. ಇವೆಲ್ಲವನ್ನು ಆಲೋಚಿಸಿದ ಬಸವಣ್ಣ ಕಾಯಕ ಎಂಬ ಚಿಂತನೆಗೆ ಒಂದು ರೂಪ ಕೊಟ್ಟು ಸಾಂಕೇತಿಕವಾಗಿ ಗಮನಿಸುವಲ್ಲಿ ಔದಾರ್ಯತೆ ಎದ್ದು ಕಾಣುತ್ತದೆ. ಆಗ ಬಸವಣ್ಣನವರು ನಿಮ್ಮ ಅನುಭವ ಮುಂದಿನ ಜಗತ್ತಿಗೆ ದೀಪವಾಗಲಿ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಹೊಲೆಯ, ಮಾದಿಗ

ಮತ್ತು ಸಮಗಾರ ಅಲ್ಲದೇ ಸ್ಪೃಶ್ಯ ಮತ್ತು ಅಸ್ಪೃಶ್ಯ ಮೊದಲಾದ ಎಲ್ಲಾ ಕುಲಬಾಂಧವರು ಕಾಯಕವನ್ನು ಅರಸಿ ಒಂದೇ ಮಹಾವರ್ಣದಲ್ಲಿ ಒಂದುಗೂಡುವುದೇ ಕಾಯಕ.

ಶರಣರೆಂದರೆ ಕಾಯಕ. ಕಾಯಕವೆಂದರೆ ಶರಣರು ಎಂಬ ಮಾತು ಸುಮಾರು ಎಂಟು ಶತಮಾನಗಳ ಹಿಂದೆಯೂ ಮತ್ತು ಇಂದಿನ ಕಾಲದ ಚಿಂತಕರು ಒಪ್ಪಿಕೊಳ್ಳುವಂತಹದ್ದು ಗಮನಾರ್ಹವಾದ ಸಂಗತಿ. ಏಕೆಂದರೆ ಬಸವಣ್ಣನ ಅಂತರಂಗದ ಶುದ್ಧಿಯ ಮೂಲಕ ಪರಿವರ್ತನೆಗೊಂಡ ಪ್ರತಿಯೊಬ್ಬ ಶರಣರು ತಮ್ಮ ಜೀವನದುದ್ದಕ್ಕೂ ಕಾಯಕ ನಿಷ್ಠೆಯಿಂದ ಬದುಕಿ ಬಾಳಿದ್ದಾರೆ. ಇದರ ಮೂಲಕ ಭವಿಷ್ಯತ್ತಿನ ದಿನಗಳಿಗೆ ನಿದರ್ಶನರಾಗಿದ್ದಾರೆ. ಇದಕ್ಕೆ ಉದಾಹರಣೆ ಎಂಬಂತೆ ಶರಣರಲ್ಲಿ ಮಹಾಶರಣನಾದ ಹರಳಯ್ಯನವರ ಕಾಯಕ ವಿಶಿಷ್ಟವಾಗಿ ಗುರುತಿಸಿಕೊಂಡಿದೆ. ಏಕೆಂದರೆ ಜಾತಿಯೆಂಬ ಹುಚ್ಚು ನಾಯಿ ಯಾರನ್ನೂ ಎಲ್ಲಿ ಇಡಬೇಕಾಗಿತ್ತೊ ಅಂತಹ ಸಂದರ್ಭದಲ್ಲಿ ಆ ಹುಚ್ಚು ನಾಯಿಗೆ ಹೊಡೆತ ಕೊಟ್ಟ ಬಸವಣ್ಣ ಮಾನವೀಯತೆಗೆ ಜೀವವನ್ನು ತುಂಬಿದ್ದಾನೆ. ಒಂದು ದಿನ ಹರಳಯ್ಯನವರು ಬಸವಣ್ಣನವರ ಎದುರಿಗೆ ಬಂದಾಗ ಶರಣು ಎಂದು ಸಂಬೋಧಿಸಿದಾಗ ಬಸವಣ್ಣನವರು ಶರಣು ಶರಣಾರ್ಥಿ ಹರಭಕ್ತ ಹರಳಯ್ಯನವರಿಗೆ ಎಂದುದ್ದಕ್ಕಾಗಿ ಹರಳಯ್ಯನವರು ಗಂಭೀರವಾಗಿ ಆಲೋಚನೆಗೆ ತೊಡಗುತ್ತಾರೆ. ಬಸವಣ್ಣನ ಮಾತಿನಿಂದ ಕಸಿವಿಸಿಗೊಂಡ ಹರಳಯ್ಯನವರು ಮನೆಗೆ ಬಂದು ತನ್ನ ಹೆಂಡತಿಯ ಜೊತೆಗೆ ವಿಚಾರಿಸಲಾಗಿ ಹರಳಯ್ಯನವರ ಪತ್ನಿ ಕಲ್ಯಾಣಮ್ಮ ಮೇಧಾವಿ ಬಸವಣ್ಣನವರು ಶರಣು ಶರಣಾರ್ಥಿ ಎಂದಾಗ ನಮಗೆ ಆಶ್ಚರ್ಯದ ಸಂಗತಿ. ಇದಕ್ಕೆ ಈ ಮಾತಿಗೆ ಪ್ರತಿಫಲವೆಂಬಂತೆ ನಾವು ಏನಾದರೂ ಅವರಿಗೆ ಅರ್ಪಿಸಬೇಕು ಎಂದು ತಿಳಿದು ನಿನ್ನ ಎಡತೊಡೆಯ ಹಾಗೂ ನನ್ನ ಬಲತೊಡೆಯ ಚರ್ಮವನ್ನು ಕೊಯ್ದು ಚಮ್ಮಾವಿಗೆಗಳನ್ನು ಮಾಡಿ ಅವರಿಗೆ ಮುಟ್ಟಿಸಿ ನಮ್ಮ ಮೇಲಿರುವ ಪಾಪವನ್ನು ಪರಿಹಾರಗೊಳಿಸಿಕೊಳ್ಳಬೇಕು ಎಂದು ತಯಾರಾಗುತ್ತಾರೆ.

"ಹರಳಯ್ಯ : ಹೌದು ಕಲ್ಯಾಣಿ, ಹಾಗೆ ಮಾಡಿದರೆ ನಾವು ಅವರ ವಾದದ ಕೆಳಗಾಗುತ್ತೇವೆ ನಡೆ ಈಗಾಲೇ. ಈ ಕೆಲಸ ಮಾಡುವ ಬೇಗ ಸ್ನಾನ ಮಾಡಿ ಶಿವ ಪೂಜೆ ಮುಗಿಸಿ ನಮ್ಮ ಕಾಯಕದಲ್ಲಿ ನಿರತರಾಗುವ (ಹೋಗುವರು) ಕತ್ತಲೆ ಹರಳಯ್ಯನ ಮನೆಯಲ್ಲಿ ಹರಳಯ್ಯನ ಕಲ್ಯಾಣಮ್ಮ ರೆಂಪಿಗೆಯಿಂದ ತೊಡೆ ಕೊಯ್ದು ಜೋಡು ಹೊಳೆಯುತ್ತಿರುವ ದೃಶ್ಯ! ಕೊಯ್ದು ಚರ್ಮವನ್ನು ಬಾನಿಯಲ್ಲಿ ಎದ್ದಿ ತೆಗೆಯುವುದು. ಚರ್ಮ ಬಡಿದು ಕೂಡಿಸುವುದು, ಹೊಡೆಯುವುದು ಆ ಬಳಿಕ ತಯಾರಾದ ಜೋಡನ್ನು ಹರಳಯ್ಯ, ಕಲ್ಯಾಣಮ್ಮನ ಕೈಯಲ್ಲಿ ಕೊಡುವನು. ಕಲ್ಯಾಣಮ್ಮ ನಮಸ್ಕರಿಸಿ ತೆಗೆದುಕೊಂಡು ಬರುವಳು."[೪]

ಹೀಗೆ ಮುಂದುವರಿದ ಹರಳಯ್ಯ ದಂಪತಿಗಳು ಕಾಯಕದ ನಿಷ್ಠೆಯನ್ನು ಹೇಳುತ್ತಾ ಕಾಯಕವು ಕನ್ನಡಿಯ ರಾಟಿಯಿದ್ದಂತೆ. ಬಸವಣ್ಣನವರ ವಿಚಾರದ ಕಾಯಕನಿಷ್ಠೆ ನಮ್ಮನ್ನು ಕಾಯಕಕ್ಕೆ ವಾಲಿಸಿ ತೃಪ್ತಿಪಡುವಂತಹ ಜೀವನವನ್ನು ಮಾಡಿದ್ದಾರೆ. ಈ ಕಾಯಕತತ್ವವನ್ನು ಕುರಿತು ಅಕ್ಕಮಹಾದೇವಿಯವರು 'ಕಾಯ ಕರ್ರನೇ ಕಂದಿದರೇನಯ್ಯ, ಮಿರ್ರನೆ ಮಿಂಚಿದರೇನಯ್ಯ' ಎಂದು ಹೇಳುವಲ್ಲಿ ಅಂತರಂಗದ ಕಾಯಕದ ಶುದ್ಧತೆ ಪ್ರಜ್ಞೆ ಮೂಡಿಸುತ್ತದೆ. ಹೀಗೆ ಕಾಯಕ ಪ್ರಜ್ಞೆಯನ್ನು ಬಸವಾದಿ ಶಿವಶರಣರೆಲ್ಲರೂ ತಮ್ಮ ತಮ್ಮ ಕುಲಧರ್ಮಗಳಿಗನುಗುಣವಾಗಿ ಮಾಡುವುದರ ಮೂಲಕ ಕಾಯಕವೇ ಕೈಲಾಸ ಎಂಬ ಉಕ್ತಿಗೆ ಪ್ರಚೋದನೆ ಕೊಟ್ಟು ಕಾಯಕತ್ವವನ್ನು ಮೆರೆದಿದ್ದಾರೆ. ದುಡಿದು ಉಂಡರೆ ಅದು ಕಾಯಕ. ಅದರಿಂದಲೇ ನಮಗೆ ಮುಕ್ತಿ ದೊರೆಯುತ್ತದೆ. ಈ ಕಾಯಕವನ್ನು ಪರಿಪಾಲಿಸಬೇಕಾದರೆ ನಮ್ಮ ಮನ ಪರಿವರ್ತನೆಯಾಗುತ್ತದೆ. ಕಾಯಕದಿಂದಲೇ ಅರಿವು ಮತ್ತು ಗುರುವು ಎರಡೂ ದೊರಕುತ್ತದೆ. ಅರಿವು ಅಜ್ಞಾನದ ಕೇಡನ್ನು ಹೋಗಲಾಡಿಸಿದರೆ ಕಾಯಕನಿಷ್ಠೆ ಸೋಮಾರಿತನಕ್ಕೆ ಅಂತ್ಯ ಹೇಳುತ್ತದೆ. ಈ ರೀತಿಯಾಗಿ ಕಾರ್ಯನಿಷ್ಠೆಯನ್ನು ಮೆರೆದ ಶಿವಶರಣರು. ಅದೊಂದು ಜೀವನದ ಒಡಂಬಡಿಕೆ ಎಂದು ನಂಬಿದ್ದರು. ಇಲ್ಲಿ ಮುಖ್ಯವಾಗುವ ಸಂಗತಿಯೆಂದರೆ ಮೇಲು-ಕೀಳು ಎಂಬ ಅಡ್ಡಗೋಡೆಗಳನ್ನು ಕೆಡವುಬೇಕಾದರೆ ಕಾಯಕ ಮೊದಲಾಗಬೇಕು. ಇಲ್ಲದೇ ಹೋದರೆ 'ಖಾಲಿ ಕುಳಿತವ ಊರೆಲ್ಲ ಸುಟ್ಟ' ಎನ್ನುವ ಹಾಗೆ ಸಮಾಜದ ಅನೈತಿಕತೆಗೆ ಮುಂದಾಗುತ್ತಾರೆ. ಇಂತಹ ವ್ಯವಸ್ಥೆ ಹದಗೆಡಬಾರದೆಂಬ ಉದ್ದೇಶದಿಂದಲೇ ಬಸವಾದಿ ಶಿವಶರಣರು ಭಕ್ತಿಯ ಸಿದ್ಧಾಂತದ ಜೊತೆಗೆ ಕಾಯಕ ಸಿದ್ಧಾಂತವನ್ನು ಅಪ್ಪಿಕೊಂಡರು.

### ೪.೨. ಬಸವಣ್ಣ ಮತ್ತು ಬಿಜ್ಜಳ

೧೨ನೇ ಶತಮಾನವು ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಹಿತ್ಯಿಕವಾಗಿ ಕರ್ನಾಟಕದ ಇತಿಹಾಸದಲ್ಲಿ ಅಷ್ಟೇ ಅಲ್ಲ. ಜಗತ್ತಿನಾದ್ಯಂತ ಪಸರಿಸಿದ ಕಾಲವದು. ಕರ್ನಾಟಕದಲ್ಲಿ ಇತಿಹಾಸದ ದೃಷ್ಟಿಯಿಂದ ಉಜ್ವಲ ಪರಂಪರೆಯನ್ನು ಹೊಂದಿದೆ. ಏಕೆಂದರೆ ಮೌರ್ಯರು, ಶಾತವಾಹನರು, ಬನವಾಸಿಯ ಕದಂಬರು, ತಲಕಾಡಿನ ಗಂಗರು, ರಾಷ್ಟ್ರಕೂಟರು ಆಳ್ವಿಕೆ ಮಾಡಿದ್ದರು. ಕಲ್ಯಾಣದ ಕಲಚೂರಿಗಳ ಆಡಳಿತದ ಸಂದರ್ಭದಲ್ಲಿ ವಚನ ಸಾಹಿತ್ಯದ ಹುಟ್ಟಿಗೆ ಕಾರಣವಾಯಿತು. ರಾಷ್ಟ್ರಕೂಟರ ಕಾಲದಲ್ಲಿ ಲಕ್ಷಣ ಗ್ರಂಥವಾದ 'ಕವಿರಾಜಮಾರ್ಗ'ವು ಸಾಹಿತ್ಯದ ಸೃಷ್ಟಿಗೆ ನಾಂದಿಯಾಯಿತು. ಒಂದು ದೃಷ್ಟಿಯಿಂದ ಕಲ್ಯಾಣದ ಕಲಚೂರಿಗಳು ರಾಜಕೀಯಕ್ಕೆ ಸಂಬಂಧಪಟ್ಟಂತೆ ಚರ್ಚೆಗಿಳಿದಾಗ ಸಮಾಜ, ಧರ್ಮ ಮತ್ತು ಸಾಹಿತ್ಯ ಒಂದು ಯುಗವನ್ನೇ ಪ್ರಾರಂಭಿಸಿತು. ಹೀಗೆ ನೋಡಿದರೆ ಕರ್ನಾಟಕ ಇತಿಹಾಸದಲ್ಲಿ ಕಲ್ಯಾಣ ಚಾಲುಕ್ಯರು ಆಳಿದ ಕಾಲ ವಿಸ್ಮಯವನ್ನು ಉಂಟು ಮಾಡುತ್ತದೆ. ರಾಷ್ಟ್ರಕೂಟರನ್ನು ಸೋಲಿಸಿ ಕಲ್ಯಾಣ ಚಾಲುಕ್ಯ ವಂಶವನ್ನು ಸ್ಥಾಪನೆ ಮಾಡಿದ ತೈಲಪನಿಂದ ಹಿಡಿದು ವಿಕ್ರಮಾದಿತ್ಯನವರೆಗೆ ತನ್ನ ಆಡಳಿತವನ್ನು ರಾಜ್ಯಾಭಾರವನ್ನಾಗಿಸಿತು. ಈ ವಿಕ್ರಮಾದಿತ್ಯನ ಸಾವಿನ ನಂತರ ಬಹುತೇಕ ಅರಸರು ಅಷ್ಟೇನು

ಒಳ್ಳೆಯ ಆಡಳಿತ ನಡೆಸಲಿಲ್ಲ. ಕಾಲಕ್ರಮೇಣದಲ್ಲಿ ಮೂರನೇ ತೈಲಪನ ಕಾಲದಲ್ಲಿ ಬಿಜ್ಜಳನು ಕ್ರಮೇಣ ಪ್ರಬಲನಾಗುತ್ತಾ ಬಂದು ಕೊನೆಗೆ ಆ ತೈಲಪನನ್ನು ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡನು. ಅಂದರೆ ಬಿಜ್ಜಳ ಚಾಲುಕ್ಯರ ಸಾಮಂತನೂ ಹೌದು. ಕಲಚೂರಿ ವಂಶದವನು ಹೌದು. ಹೀಗೆ ಕಲ್ಯಾಣದಲ್ಲಿ ರಾಜ್ಯಭಾರ ಮಾಡುವ ಬಿಜ್ಜಳನು ಅನೇಕ ಮಂತ್ರಿಗಳು, ಸೈನಿಕರು, ದಂಡಾಧೀಶರು ಎಲ್ಲರನ್ನು ಒಳಗೊಂಡಂತೆ ತನ್ನದೇ ರೀತಿಯಲ್ಲಿ ಅಗ್ರಹಾರ ಸಂಸ್ಕೃತಿಯಡಿಯಲ್ಲಿ ಆಳ್ವಿಕೆಯನ್ನು ನಡೆಸಿದ್ದನು. ಈತನ ಆಸ್ಥಾನದ ಮಂತ್ರಿಗಳಲ್ಲಿ ಮಹಾಮಂತ್ರಿಯೆಂದರೆ ಜಗದೇವ. ಬಸವಣ್ಣನು ಜಗದೇವನ ಅಳಿಯ. ಬಸವಣ್ಣ ಈಗಾಗಲೇ ಹೇಳಿದಂತೆ ಅಗ್ರಹಾರ ಸಂಸ್ಕೃತಿಯ ವಿರುದ್ಧ ಹೋರಾಡಿ ತನ್ನ ಗುರು ಜಾತವೇದ ಮುನಿಯಿಂದ ವಿದ್ಯೆಯನ್ನು ಕಲಿತು ಪಾರಂಗತನಾಗಿ ಗುರುವಿನ ಆಜ್ಞೆಯಂತೆ ಮಂಗಳವೇಡೆಗೆ ಬಂದು ತನ್ನ ಸೋದರಮಾವನಾದ ಜಗದೇವನ ಸಹಾಯದಿಂದ ಸಾಮಾನ್ಯ ಕರಣಿಕನಾಗಿ ಬಿಜ್ಜಳನ ರಾಜ್ಯಭಾರದಲ್ಲಿ ಸೇರಿಕೊಳ್ಳುತ್ತಾನೆ. ಹೀಗೆ ಬಸವಣ್ಣ ಮತ್ತು ಬಿಜ್ಜಳರ ನಡುವೆ ಒಂದು ರೀತಿಯಲ್ಲಿ ಸಂಬಂಧವು ಮತ್ತೊಂದು ರೀತಿಯಲ್ಲಿ ಅಧಿಕಾರವೂ, ಇನ್ನೊಂದು ರೀತಿಯಲ್ಲಿ ಸಮಾಜ ಮತ್ತು ಧಾರ್ಮಿಕ ಚಿಂತನೆಯು ನಡೆದು ಹೋಗುತ್ತದೆ.

ಬಿಜ್ಜಳ ಮತ್ತು ಬಸವಣ್ಣನವರು ಒಂದು ನಾಣ್ಯದ ಎರಡು ಮುಖಗಳಂತೆ ನಾಟಕಗಳಲ್ಲಿ ಚರ್ಚೆಯಾಗಿವೆ. ಬಿಜ್ಜಳ ಕ್ಷತ್ರಿಯ ಕುಲಕ್ಕೆ ಸೇರಿದ ಅರಸ. ಬಸವಣ್ಣ ಬ್ರಾಹ್ಮಣರ ಕುಲದಲ್ಲಿ ಜನಿಸಿ ಕಟ್ಟುಪಾಡುಗಳ ವಿರುದ್ಧ ಸಿಡಿದೆದ್ದ ಮಹಾಪುರುಷ. ಇವರಿಬ್ಬರನ್ನು (ಬಸವಣ್ಣ ಮತ್ತು ಬಿಜ್ಜಳರನ್ನು) ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕವಾಗಿ ಗಮನಿಸಿದಾಗ ೧೨ನೇ ಶತಮಾನದಲ್ಲಿ ನಡೆದ ಕಲ್ಯಾಣ ಕಲಚೂರಿಗಳ ಇತಿಹಾಸ ಸ್ಪಷ್ಟವಾಗಿ ಅರಿವಿಗೆ ಬರುತ್ತದೆ. ಬಸವಣ್ಣನವರು ಬಾಲ್ಯದಲ್ಲಿಯೇ ಬ್ರಾಹ್ಮಣರ ಜನಿವಾರ ಸಂಸ್ಕೃತಿಯನ್ನು ಧಿಕ್ಕರಿಸಿ ಜ್ಞಾನಕ್ಕಾಗಿ ಕೂಡಲಸಂಗಮಕ್ಕೆ ಬರುತ್ತಾನೆ. ಅಲ್ಲಿಂದ ಗುರುವಿನ ಆಜ್ಞೆಯಂತೆ ಮಂಗಳವೇಡೆಗೆ ಬರುತ್ತಾನೆ. ಬಿಜ್ಜಳ ಮತ್ತು ಇತರ ಕರಣಿಕರ ನಡುವೆ ಲೆಕ್ಕ ತಪ್ಪಿದಾಗ ಬಸವಣ್ಣನವರು ತಮ್ಮ ಬುದ್ಧಿವಂತಿಕೆ ಯಿಂದ ಲೆಕ್ಕವನ್ನು ಸರಿಪಡಿಸುತ್ತಾರೆ. ಆಗ ಬಸವಣ್ಣನವರ ಚಾಣಾಕ್ಷತನ ಮತ್ತು ಪಾಂಡಿತ್ಯವನ್ನು ಗಮನಿಸಿದ ಬಿಜ್ಜಳನು ಅವನಿಗೆ ಕರಣಿಕನನ್ನಾಗಿ ನೇಮಿಸುವ ಸಂದರ್ಭದ ಮುಂಚೆ ಬಲದೇವನ ಜೊತೆಗಿದ್ದ ಬಸವಣ್ಣನನ್ನು ಕಂಡು ಬಿಜ್ಜಳನು ಬಸವಣ್ಣನನ್ನು ಕುರಿತು ಸೂರ್ಯನೇ ಚಂದ್ರನಾಗಿ ಅವತರಿಸಿದಂತಹ ಅಷ್ಟೇ ಅಲ್ಲದೇ ಕರುಣೆಯ ಜೀವ ಪಡೆದ ವ್ಯಕ್ತಿ. ಇಂತಹ ಬಸವಣ್ಣನನ್ನು ನಿನ್ನ ಅಳಿಯನನ್ನಾಗಿ ಮಾಡಿಕೊಂಡಿರುವುದು ಮತ್ತು ನಿನ್ನ ಮಗಳು ಗಂಗಾಂಬಿಕೆ ಮಾಡಿದ ಪುಣ್ಯದ ಫಲ. ಏನೇ ಇರಲಿ. ಹಾಗಾದರೆ ಬಸವಣ್ಣನವರು ಈಗ ಯಾವ ವೃತ್ತಿಯನ್ನು ಮಾಡುತ್ತಿದ್ದಾರೆ ಎಂದು ಕೇಳಿದಾಗ ಬಲದೇವನು ವೃತ್ತಿಯ ವಿಷಯವಾಗಿ ತಮ್ಮಲ್ಲಿ ಕರೆದುಕೊಂಡು ಬಂದಿದ್ದೇನೆ ಎಂದಾಗ ಬಿಜ್ಜಳನು ಹೀಗೆ ಹೇಳುತ್ತಾನೆ.

"ಬಿಜ್ಜಳ : ಮಾತಾನಾಡುವುದೇನಿದೆ? ಗಣಕ ಶಾಲೆಯನ್ನು ಸುಧಾರಿಸುವುದಾಗಿ ಹೇಳುತ್ತಿದ್ದಾನೆ. ತುಂಬ ಆತ್ಮವಿಶ್ವಾಸ ವ್ಯಕ್ತಿಯೆಂದು ಕಾಣುತ್ತದೆ. ನಮ್ಮಲ್ಲಿ ಗಣಕಾಧಿಕಾರಿಯಾಗಿರಲಿ. (ಬಸವಣ್ಣನ ಕಡೆ ಹೊರಳಿ) ಏನು ಬಸವಣ್ಣಾ, ನಿನ್ನ ಅರ್ಹತೆಗಳೇನು?

ಬಸವಣ್ಣ : ಪ್ರಾಮಾಣಿಕತೆ, ಪರಿಶ್ರಮ

ಬಿಜ್ಜಳ : ಹಾಂ! ಆಸಕ್ತಿ?

ಬಸವಣ್ಣ : ಕಾರ್ಯಗಳನ್ನು ಯೋಜಿಸುವುದು. ಯೋಜನೆಗಳನ್ನು ಕಾರ್ಯಗತಗೊಳಿಸುವುದು.

ಬಿಜ್ಜಳ : ಭಲೇ ಸೋಮವಾರದಿಂದ ಕೆಲಸಕ್ಕೆ ಬಂದು ಬಿಡು.

ಬಸವಣ್ಣ : ಪ್ರಭೂ, ಕೆಲಸಗಾರರಿಗೆ ಮುಖ್ಯವಾದುದು ದಿವಸವಲ್ಲ; ಕೆಲಸ.

ಬಿಜ್ಜಳ : ನಿನ್ನ ಇಚ್ಛೆ. ಇಂದೇ ಕೆಲಸ ಪ್ರಾರಂಭಿಸು. ಗಣಕಾಧಿಕಾರಿಯಾಗಿ ಅಲ್ಲ. ಮಹಾಗಣಕಾಧಿಕಾರಿಯಾಗಿಯೇ ಪ್ರಾರಂಭಿಸು.

ಬಸವಣ್ಣ : ಆಗಲಿ ಪ್ರಭು."[೫]

ಹೀಗೆ ಬಸವಣ್ಣನವರು ಮಹಾಗಣಕಾಧಿಕಾರಿಯಾಗಿ ಕಾಯಕ ಮತ್ತು ವೃತ್ತಿಯನ್ನು 'ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದು ಬರುವುದು ನಮಗೀಗಲೇ ಬರಲಿ' ಎಂಬ ನೀತಿಯನ್ನು ಅನುಸರಿಸಿ ಪ್ರಾರಂಭಿಸುತ್ತಾರೆ. ಬಿಜ್ಜಳ ಮತ್ತು ಆತನ ಹೆಂಡತಿ ರಂಭಾವತಿ ಇಬ್ಬರು ಮಾತನಾಡು ವಾಗ ಬಿಜ್ಜಳನು ನಾನು ಪ್ರಜೆಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದರೆ ನನಗೆ ಒಬ್ಬ ಪ್ರಭಾವಶಾಲಿ ವ್ಯಕ್ತಿಯ ವರ್ಚಸ್ಸು ಅವಶ್ಯಕವಿದೆ ಎಂದಾಗ ರಂಭಾವತಿಯವರು ಯಾರು ಅವರು? ಎಂದು ಕೇಳಿದಾಗ ನಮ್ಮ ಮಹಾಗಣಕಾಧಿಕಾರಿ ಬಸವಣ್ಣನೇ ಆ ವ್ಯಕ್ತಿ ಎನ್ನುತ್ತಾನೆ. ಆಗ ರಂಭಾವತಿ ಬಸವಣ್ಣನವರು ಸಾತ್ವಿಕ ವ್ಯಕ್ತಿಯೆಂದು ಮಾತನಾಡುವುದನ್ನು ಕೇಳಿದ್ದೇನೆ ಎಂದಾಗ ಬಿಜ್ಜಳನು ಬಸವಣ್ಣ ಕೇವಲ ಸಾತ್ವಿಕನಲ್ಲ. ಅದನ್ನು ಮೀರಿದ ದೈವಶಕ್ತಿ. ವಿಶ್ವಾಸಕ್ಕೆ ಬರೆದ ವ್ಯಾಖ್ಯಾನ. ಅಷ್ಟೇ ಅಲ್ಲದೇ ಪ್ರಾಮಾಣಿಕತೆಗೆ ಹೆಸರಾದ ಬಹುಮುಖ ಪ್ರತಿಭೆಯ ವ್ಯಕ್ತಿ. ಅಷ್ಟೇ ಅಲ್ಲ ಬಸವಣ್ಣ ಕಲ್ಯಾಣ ನಗರಕ್ಕೆ ಬಂದಾಗಿನಿಂದ ಕುಂತಳ ನಾಡಿಗೆ ಬೆಳಕು ಬಂದಂತಾಗಿದೆ ಎಂದು ಹೇಳುವಾಗ ಬಲದೇವ ಹಾಗೂ ಬಸವಣ್ಣನವರನ್ನು ಬಿಜ್ಜಳ ಕರೆಸುತ್ತಾನೆ. ಆಗ ಮಹಾಮಂತ್ರಿಯಾದ ಬಲದೇವರು ನನ್ನ ಮತ್ತು ಬಸವಣ್ಣನವರನ್ನು ಕರೆಸಿದ ಕಾರಣವೇನು ಪ್ರಭು ಎಂದಾಗ ಕುಂತಳ ನಾಡಿನ ಹಣೆಯ ಬರಹ ಬದಲಾಗುತ್ತಾ ಬರುತ್ತಿರುವ ಲಕ್ಷಣಗಳು ಕಾಣುತ್ತಿವೆ. ಏಕೆಂದರೆ ಮಾಂಡಲೀನಾಗಿದ್ದ ನಾನು ಚಕ್ರವರ್ತಿಯಾದರೂ ಬಸವಣ್ಣನವರಿಂದ ಭಂಡಾರ ಸುಧಾರಿಸುತ್ತಿರುವುದು ಕಂಡು ಬಸವಣ್ಣನನ್ನು ಹೊಗಳುತ್ತಾರೆ. ಅಲ್ಲದೇ ನಮ್ಮ ಪ್ರಾಮಾಣಿಕತೆಯೇ ನಮ್ಮ ಅಸ್ತಿ. ನಿಮ್ಮ ನಡತೆಯಿಂದಾಗಿ ರಾಜ್ಯ ಭಂಡಾರದ ಕೌರ್ಯ ಕಲಾಪಗಳು ಸುಧಾರಿಸಿದ್ದನ್ನು ಕಂಡು ನನಗೆ ಹೆಮ್ಮೆಯಾಗಿದೆ. ಆದುದರಿಂದ ಭಂಡಾರದ ಸಚಿವರಾಗಿದ್ದ ಸಿದ್ಧರಸರು ತೀರಿಕೊಂಡಿದ್ದಾರೆ. ಆ ಸ್ಥಾನವನ್ನು ನಿಭಾಯಿಸಲು ಸಾಮರ್ಥ್ಯವಿರುವುದು ಬಸವಣ್ಣನವರಿಗೆ

ಮಾತ್ರ. ಅದಕ್ಕಾಗಿ ಈ ಹೊಣೆಯನ್ನು ನೀವೇ ಹೊರಬೇಕು ಎಂದು ಅಧಿಕಾರ ಪತ್ರಗಳನ್ನು ಬಸವಣ್ಣನವರಿಗೆ ನೀಡುತ್ತಾನೆ. ಅಧಿಕಾರ ಪತ್ರಗಳನ್ನು ಸ್ವೀಕರಿಸಿದ ಬಸವಣ್ಣ ನಾನೊಬ್ಬ ಸಾಮಾನ್ಯ ಮನುಷ್ಯ ಆದರೂ ತಾವು ವಹಿಸಿಕೊಟ್ಟ ಈ ಜವಾಬ್ದಾರಿಯನ್ನು ಪ್ರಾಮಾಣಿಕವಾಗಿ ನಿರ್ವಹಿಸುತ್ತೇನೆ. ಎಂದಾಗ

"**ಬಿಜ್ಜಳ** : ಬಸವಣ್ಣಾ, ಈವರೆಗೆ ನಿಮ್ಮ ಕೈ ರಾಜ್ಯದ ಕಡತಗಳ ಮೇಲೆ, ಇನ್ನು ಮೇಲೆ ರಾಜ್ಯ ಸಂಪತ್ತು ನಿಮ್ಮ ಕೈಮೇಲೆ. ಅದರ ನೇರ ವಿನಿಯೋಗದ ಪರಮಾವಧಿ ಅಧಿಕಾರ ನಿಮ್ಮದು. ಇದೊಂದು ಅಗ್ನಿಪರೀಕ್ಷೆ.

**ಬಸವಣ್ಣ** : ನನಗೆ ಅಗ್ನಿ ಪರೀಕ್ಷೆಗಳೆಂದರೆ ಯಾವಾಗಲೂ ಪ್ರಿಯವಾದವು. ಹಣದ ಮಧ್ಯೆ ಇದ್ದು ಶುದ್ಧವಾಗಿರುವುದು ಒಂದು ರೀತಿ ನನ್ನನ್ನು ನಾನು ಪರೀಕ್ಷೆಗೆ ಒಡ್ಡಿಕೊಂಡಂತೆ. ಇದು ಒಂದು ಬಗೆಯ ಆತ್ಮಶುದ್ಧಿಯ ಪ್ರಯೋಗವೆಂದೇ ಭಾವಿಸುತ್ತೇನೆ."[3]

ಹೀಗೆ ಬಸವಣ್ಣನವರು ಬಹಿರಂಗ ಶುದ್ಧಿಗಿಂತ ಆತ್ಮಶುದ್ಧಿಯ ಕೆಲಸವನ್ನು ಬಯಸುವುದರ ಮೂಲಕ ಬಿಜ್ಜಳನ ಆಸ್ಥಾನದಲ್ಲಿ ಕಾರ್ಯತತ್ಪರನಾಗುತ್ತಾನೆ. ಬಸವಣ್ಣನವರು ಕರಣಿಕನಾಗಿ ನಂತರದಲ್ಲಿ ಭಂಡಾರದ ಮಂತ್ರಿಯಾಗಿ ಸಮಾಜಪರ ಚಿಂತನೆಗಿಂತ ಜೀವಪರ ಚಿಂತನೆಗೆ ಮುಂದಾಗುತ್ತಾನೆ. ಕಾಯಕವೇ ಕೈಲಾಸ ಎಂಬ ಸಿದ್ಧಾಂತಕ್ಕೆ ಒತ್ತು ಕೊಟ್ಟ ಬಸವಣ್ಣ ದುಡಿಮೆಯೇ ಅದರ ಪ್ರತಿಫಲ ಎಂಬುದಾಗಿ ಅಭಿವ್ಯಕ್ತಿಸುತ್ತಾನೆ. ಅಷ್ಟೇ ಅಲ್ಲದೇ ಅಗ್ರಹಾರದ ಸಂಸ್ಕೃತಿಯಿಂದ ಬೇಸತ್ತ ಬಸವಣ್ಣ ಇದಕ್ಕೆ ಮೂಲ ಕೇಂದ್ರವಾಗಿರುವ ದೇವಾಲಯಗಳು ಹಾಗೂ ಮಠಮಾನ್ಯಗಳ ಸಂಸ್ಕೃತಿಯನ್ನು ವಿರೋಧಿಸುತ್ತಾನೆ ಎನ್ನುವುದಕ್ಕಿಂತ ದೇಹವೇ ದೇಗುಲ ಎಂಬುದಾಗಿ ನುಡಿಯುತ್ತಾನೆ. ಏಕೆಂದರೆ ರಾಜ್ಯ ಬೊಕ್ಕಸದಿಂದ ಅಂದಿನ ಕಾಲದಲ್ಲಿ ಮಠಮಾನ್ಯಗಳಿಗೆ ಕೊಡುವ ಹಣವನ್ನು ತಾನು ಅಧಿಕಾರ ಸ್ವೀಕರಿಸಿದ ಮೇಲೆ ಮೊದಲ ಅರ್ಧದಷ್ಟು ಕಡಿತಗೊಳಿಸುತ್ತಾನೆ. ಇದರಿಂದ ಪುರೋಹಿತಶಾಹಿವರ್ಗ ಮತ್ತು ಮೂಲಭೂತವಾದಿಗಳು ಬಸವಣ್ಣನಿಂದಾಗಿ ಅಗ್ರಹಾರಗಳೆಲ್ಲವೂ ತಮ್ಮ ವೈಭವವನ್ನು ಕಳೆದುಕೊಳ್ಳುತ್ತವೆ ಎಂದು ವಾದಿಸುತ್ತಾರೆ. ಚಕ್ರವರ್ತಿಗಳು ದೇವಾಲಯಗಳನ್ನು ಕಟ್ಟಿಸಿ ದೇವಾಲಯ ಸಂಸ್ಕೃತಿ ವೈಭವಕ್ಕೆ ಕಾರಣರಾದರೆ ಬಸವಣ್ಣನವರು ಆ ಸಂಸ್ಕೃತಿಯ ವಿರುದ್ಧ ಇಷ್ಟಲಿಂಗ ಕ್ರಮವನ್ನು ಅನುಸರಿಸಿ ದೇವಾಲಯ ಸಂಸ್ಕೃತಿ ವೈಭವ ಮುಖ್ಯವಲ್ಲ. ಜನಸಾಮಾನ್ಯರ ಬದುಕಿನ ವೈಭವವೇ ಮುಖ್ಯ ಎಂಬುದಾಗಿ ಚಿಂತನೆ ಮಾಡುತ್ತಾನೆ. ಇದನ್ನು ಕೇಳಿದ ಬಿಜ್ಜಳ ದೇವಾಲಯಗಳು ಸುಖವಾಗಿದ್ದರೆ ರಾಜ್ಯ ಸುಖವಾಗಿರುತ್ತದೆ ಎಂಬ ಮೂಲಭೂತವಾದಕ್ಕೆ ಗಂಟು ಬಿದ್ದು ಇತರ ಮಂತ್ರಿಗಳ ಹೇಳಿಕೆಗೆ ಜೋತು ಬೀಳುತ್ತಾನೆ. ಮುಂದುವರಿದ ಬಿಜ್ಜಳ ಬೊಕ್ಕಸದ ಹಣವನ್ನೆಲ್ಲ ಜನಸಾಮಾನ್ಯರಿಗಾಗಿ ಖರ್ಚು ಮಾಡುವ ಬಸವಣ್ಣನಿಗೆ ನಾನು ಲೆಕ್ಕವೇ ಇಲ್ಲವೇ ಎಂದು ನುಡಿಯುತ್ತಾನೆ. ಹೀಗೆ ಕೇಶವಭಟ್ಟ ಮತ್ತು ಮಂಚಣ್ಣನ ಮಾತುಗಳನ್ನು ಆಲಿಸಿದ ಬಿಜ್ಜಳ ಬೊಕ್ಕಸದ ಹಣ ಬಸವಣ್ಣನ ಸ್ವಂತ ಆಸ್ತಿಯೆ? ಕರೆಯಿರಿ ಅವನನ್ನು ಎಂಬುದಾಗಿ ಏಕವಚನದಿಂದ ಸಂಬೋಧಿಸುವಾಗ ಅಷ್ಟರಲ್ಲಿ ಭಕ್ತಿ ಭಂಡಾರಿ ಬಸವಣ್ಣನವರು ಆಗಮಿಸುತ್ತಾರೆ. ಅಲ್ಲಿ ನೆರೆದಿರುವ ಬ್ರಾಹ್ಮಣರು ಕುಲಗುರುಗಳು

ಮತ್ತು ಆಡಳಿತದ ಅಧಿಕಾರಿಗಳನ್ನು ಕಂಡ ಬಸವಣ್ಣ ಬಿಜ್ಜಳನಿಗೆ ನಾನು ಯಾವುದೇ ರೀತಿಯಾಗಿ ತಾವು ನೀಡುವ ಹಣವನ್ನು ಕಡಿಮೆಯಾಗಿದ್ದನ್ನು ಸರಿಪಡಿಸಿದ್ದೇನೆಯೇ ಹೊರತು ಯಾವುದೇ ರೀತಿಯ ಅಹಿತಕರವಾಗಿ ದುರುಪಯೋಗಪಡಿಸಿಲ್ಲ ಎಂದಾಗ ಬಿಜ್ಜಳನು ಯಾರನ್ನು ಕೇಳಿ ಈ ಕೆಲಸಕ್ಕೆ ಕೈ ಹಾಕಿದೀಯಾ? ಎಂದಾಗ ಬಸವಣ್ಣನವರು ನನ್ನ ವಿವೇಕದಿಂದಲೇ ಎಂದು ಹೇಳಿ ಮುಂದುವರಿದು ಈಗಾಗಲೇ ಒಂದೆರಡು ಸಲ ತಮ್ಮನ್ನು ಕೇಳಿದ್ದು ಆಗಿತ್ತು. ಆದರೆ ಪ್ರಯೋಜನವಾಗಲಿಲ್ಲ. ಏಕೆಂದರೆ ಭಂಡಾರದ ಒಡೆಯರು ರಾಜರಲ್ಲ. ಪ್ರಜೆಗಳು ಎಂದು ನನ್ನ ವಿವೇಕ ಹೇಳಿದಾಗ ಈ ಕೆಲಸವನ್ನು ಮಾಡಿದ್ದೇನೆ ಎನ್ನುತ್ತಾರೆ. ಆಗ ಕೇಶವಭಟ್ಟರು ಬಸವಣ್ಣನಿಂದ ಈಗಿರುವ ಆರ್ಥಿಕ ವ್ಯವಸ್ಥೆ ಹಾಳಾಗಿ ಹೋಗುತ್ತದೆ ಎನ್ನುವಾಗ ಬಿಜ್ಜಳ ಮಹಾರಾಜರು ನಾನು ಕಷ್ಟಪಟ್ಟು ಗೆದ್ದಿರುವ ಈ ಕಲ್ಯಾಣದ ಬಗ್ಗೆ ಅಪಶಕುನ ನುಡಿಯದಿರಿ ಎಂದು ಆಶ್ಚರ್ಯನಾಗಿ ಸೂಕ್ತ ಕಾಲದಲ್ಲಿ ನಿರ್ಣಯವನ್ನು ತೆಗೆದುಕೊಳ್ಳುತ್ತೇನೆ ಎನ್ನುತ್ತಾನೆ. ಬಿಜ್ಜಳನಿಗೆ ಒಂದು ಕಡೆ ತನ್ನ ರಾಜ್ಯವನ್ನು ಶಾಂತಿಯುತವಾಗಿಡಬೇಕೆಂಬ ಮಹಾದಾಸೆಯು ಇತ್ತು ಎಂಬುದು ಒಂದು ಬಗೆಯ ಚಿಂತನೆಯಾದರೆ ಇನ್ನೊಂದು ಕಡೆ ಬಸವಣ್ಣನವರು ಶರಣರನ್ನು ಒಳಗೊಂಡಂತೆ ಪ್ರಜೆಗಳೆಲ್ಲರು ಸುಖವಾಗಿರಬೇಕೆಂಬ ಹಂಬಲವಾದರೆ ಮತ್ತೊಂದೆಡೆ ಶಾಸ್ತ್ರಿಗಳು ಪಂಡಿತರು ಆಗಿರುವ ಬ್ರಾಹ್ಮಣರು ತಮ್ಮ ಅಗ್ರಹಾರದ ಸಂಸ್ಕೃತಿಯನ್ನು ಮೇಲೆತ್ತಬೇಕೆಂಬ ಚಿಂತನೆಗಳು ಇಲ್ಲಿ ಕಂಡುಬರುತ್ತವೆ. ಹೀಗಾದಾಗ ಇಡೀ ಕಲ್ಯಾಣದ ರಾಜನಾದ ಬಿಜ್ಜಳನಿಗೆ ಗೊಂದಲ ವುಂಟಾಗುತ್ತದೆ. ಏಕೆಂದರೆ ಸನಾತನ ಕಾಲದಿಂದ ಬಂದಿರುವ ಸಂಪ್ರದಾಯ ಸಂಸ್ಕೃತಿಗಳು ಪುರೋಹಿತಶಾಹಿ ವ್ಯವಸ್ಥೆಯ ಪರವಾಗಿ ನಿಂತು ದೇವಾಲಯಗಳಿಗೆ ಮತ್ತು ಅದರ ಜವಾಬ್ದಾರಿ ಯನ್ನು ಹೊತ್ತ ಪುರೋಹಿತಶಾಹಿಗಳಿಗೆ ಐಷರಾಮ ಜೀವನಕ್ಕೆ ದಾರಿ ಮಾಡಿಕೊಟ್ಟಿದ್ದವು. ಅಂತಹ ಸಂದರ್ಭದಲ್ಲಿ ಬಸವಣ್ಣನವರು ಮಾನವಪರ ನಿಂತು ಮಾನವ ಸಂಸ್ಕೃತಿಗೆ ಜಯವಾಗಬೇಕೆಂಬ ಬಯಕೆಗೆ ಅಗ್ರಹಾರ ಸಂಸ್ಕೃತಿಗಳು ಬಿಗಿದಪ್ಪುತ್ತವೆ. ಇವೆಲ್ಲವುಗಳನ್ನು ಆಲೋಚಿಸಿದ ಬಿಜ್ಜಳ ಎರಡು ಗುಂಪುಗಳಲ್ಲಿ ಅಂದರೆ ಒಂದು ಶರಣರ ಗುಂಪು ಮತ್ತೊಂದು ಪುರೋಹಿತಶಾಹಿಗಳ ಗುಂಪು ಇವುಗಳಲ್ಲಿ ಒಂದು ಜನಸಾಮಾನ್ಯರ ಪರವಾಗಿದ್ದರೆ ಇನ್ನೊಂದು ಪುರೋಹಿತ ಸಂಸ್ಕೃತಿಗೆ ಪುಷ್ಠಿ ಕೊಡುತ್ತಾ ಹೋಗುತ್ತದೆ. ಹೀಗೆ ಇರುವಾಗ ಬಸವಣ್ಣನ ಮೇಲೆ ಪುರೋಹಿತಶಾಹಿಗಳು ಅಪವಾದಗಳನ್ನು ಹೋರಿಸುವಂತಹ ಸಂದರ್ಭದಲ್ಲಿ ಚಕ್ರವರ್ತಿಯಾದ ಬಿಜ್ಜಳನಿಗೆ ಒಂದು ಕಡೆ ಆವೇಶಕ್ಕೆ ಮತ್ತೊಂದು ಕಡೆ ಗೊಂದಲಕ್ಕೆ ಈಡಾಗುತ್ತಾನೆ. ಪುರೋಹಿತ ಸಂಸ್ಕೃತಿಯ ಆಚರಿಸುವ ಪುರೋಹಿತ ಮಂತ್ರಿಗಳ ಬಸವಣ್ಣನ ಮೇಲಿರುವ ಹೇಳಿಕೆಗಳ ಅಥವಾ ಅಪವಾದಗಳಿಗೆ ಬಿಜ್ಜಳನು ಬಸವಣ್ಣನನ್ನು ಕರೆಯಿಸಿ ಕೇಳಿದಾಗ ಶಾಂತಮೂರ್ತಿಗಳಾಗಿದ್ದ ಬಸವಣ್ಣ ಗಂಭೀರವಾಗಿ ಗೊಂದಲದ ವೇಳೆಯಲ್ಲಿ ಸಂಗಮನಾಥನನ್ನು ನೆನೆಯುತ್ತೇನೆ. ಎಂದಾಗ

"**ಬಿಜ್ಜಳ** :ಆದರೆ ನಾನು ನಿಮ್ಮ ಕೂಡಲ ಸಂಗಮನನ್ನು ನೆನೆದರೆ ಬ್ರಾಹ್ಮಣರ ಗುಂಪು ಬೊಬ್ಬೆ ಹಾಕುತ್ತದೆ; ಅವರ ಶ್ರೀಹರಿಯನ್ನು ನೆನೆದರೆ ನಿಮ್ಮ ಶರಣರು ಬೊಬ್ಬೆ ಹಾಕುತ್ತಾರೆ. ಏನು ಮಾಡುವುದೆಂದು ಗೊತ್ತಿಲ್ಲದೆ ನಾನು ನನ್ನನ್ನೇ ನೆನೆದುಕೊಳ್ಳುತ್ತೇನೆ."[೨]

ಹೀಗೆ ಶುರುವಾದ ಬಿಜ್ಜಳನ ಗೊಂದಲವು ಬಸವಣ್ಣನ ಜೊತೆಗಿನ ಅನನ್ಯ ಬಾಂಧವ್ಯದಲ್ಲಿ ಬಿರುಕುಗಳು ಕಾಣಿಸಿಕೊಳ್ಳಲಿಕ್ಕೆ ಶುರುವಾಗುತ್ತದೆ. ಪುರೋಹಿತಶಾಹಿಗಳ ಮೂಲಭೂತವಾದದ ವಿಚಾರಗಳು ಬಿಜ್ಜಳನಿಗೆ ಒಂದು ಕಡೆಯಾದರೆ, ಬಸವಣ್ಣನ ಸಾಮಾಜಿಕ ಸುಧಾರಣೆಯ ಚಿಂತನೆಗಳು ಮತ್ತೊಂದೆಡೆಯಲ್ಲಿ ಬಿಜ್ಜಳನಿಗೆ ಕಾಡುತ್ತವೆ. ಈ ಎರಡರ ತೊಡಕುಗಳು ಬಿಜ್ಜಳನ ಆಡಳಿತವನ್ನು ದುರ್ಬಲಗೊಳಿಸುತ್ತವೆ.

ಬಿಜ್ಜಳ ಆತನೊಬ್ಬ ರಾಜಕಾರಣಿ. ಆತನಿಗೆ ರಾಜ್ಯದ ಎಲ್ಲರ ಹಿತ ಕಾಪಾಡುವುದು ಆತನ ಕರ್ತವ್ಯವಾಗಿತ್ತು. ಅಲ್ಲದೇ ಆತನಿಗೆ ಅಧಿಕಾರದ ಆಸೆಗಳೂ ಇವೆ. ಹೀಗಾಗಿ ಆತ ಯಾರನ್ನು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಎರಡೂ ಗುಂಪುಗಳನ್ನು ಸಮಾಧಾನಪಡಿಸಿ ಅಧಿಕಾರವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಈ ಎರಡು ಗುಂಪುಗಳಲ್ಲಿ ಯಾವುದಾದರೂ ಒಂದನ್ನು ನಿರಾಕರಿಸಿದರೂ ತನ್ನ ಅಧಿಕಾರವನ್ನು ಕಳೆದುಕೊಳ್ಳುತ್ತೇನೆ ಎಂಬ ಭೀತಿ ಸದಾ ಅವನನ್ನು ಕಾಡುತ್ತಲಿರುತ್ತದೆ. ಹೀಗಾಗಿ ಅಂತರ್‌ಜಾತಿ ವಿವಾಹದ ಸುದ್ದಿ ತಿಳಿದ ಬಿಜ್ಜಳ ಅರಮನೆಯಿಂದ ಮಹಾಮನೆಗೆ ಧಾವಿಸಿ ಬಂದು ವರ್ಣಸಂಕರ ವಿವಾಹವನ್ನು ತಡೆಯಲು ಮುಂದಾಗುತ್ತಾನೆ. ಬಸವಣ್ಣನಿಗೆ ವರ್ಣಸಂಕರದ ವಿವಾಹದ ಕುರಿತು ಹೀಗೆ ಅಭಿವ್ಯಕ್ತಿಸುತ್ತಾನೆ.

“**ಬಿಜ್ಜಳ** : ನಿನಗೆ ಗೊತ್ತೈತಿ ಈ ಲಗ್ನ ಆದರ ಸವರ್ಣೀಯರು ಸುಮ್ಮಕ ಕುಂಡ್ರೂದಿಲ್ಲ. ಲಗ್ನ ಮಂಟಪ ರಣರಂಗ ಆಕ್ಕೇತಿ. ಕಲ್ಯಾಣದ ಬೀದ್ಯಾಗ ಹೆಣ ಬೀಳತಾವು.

**ಬಸವಣ್ಣ** : ಯಾರ ತಪ್ಪಿಗಾಗಿ ಯಾರಿಗೆ ಶೂಲ? ಹಾವಿಗೆ ಹೊಟ್ಟೆಕಿಚ್ಚು ಆಗತದಂತ ಹಕ್ಕಿ ಹಾರ್‍ಯಾಡತಕ್ಕದಲ್ಲ ಅನ್ನೋದು ಯಾವ ನ್ಯಾಯಾ?

**ಬಿಜ್ಜಳ** : ಈ ಲಗ್ನ ಆಗತಕ್ಕದ್ದಲ್ಲ! ತಿಳೀತ? ಇದು ನನ್ನ ಕಟ್ಟಾಜ್ಞೆ, ನೀ ಇನ್ನೇನು ಹೇಳಬ್ಯಾಡ. ನಾ ಕೇಳಾಕ ಒಲ್ಲೆ.”[೮]

ಶರಣರನ್ನು ಸಮಾಧಾನಪಡಿಸಿ ಅಂತರ್‌ಜಾತಿಯ ವಿವಾಹವನ್ನು ನಿಲ್ಲಿಸುವುದರ ಮೂಲಕ ರಾಜ್ಯದ ಯಥಾಸ್ಥಿತಿಯನ್ನು ಕಾಪಾಡಲು ಪ್ರಯತ್ನಿಸುತ್ತಾನೆ. ಅದಕ್ಕೆ ಬಸವಣ್ಣನವರು ನೀಡಿದ ಉತ್ತರಕ್ಕೆ ಅವಕಾಶ ಕೊಡದೇ ಬಿಜ್ಜಳ ಮದುವೆಯಾಗತಕ್ಕದ್ದಲ್ಲ ಎಂಬ ರಾಜಾಜ್ಞೆಯನ್ನು ವಿಧಿಸುತ್ತಾನೆ.

ಬಸವಣ್ಣನು ಬಿಜ್ಜಳನ ಮಾತುಗಳನ್ನು ಕೇಳಿದ ನಂತರವೂ ಉಳಿದ ಮಹಾಮನೆಯ ಶರಣರೊಂದಿಗೆ ಚರ್ಚಿಸಿ ವಿವಾಹಕ್ಕೆ ಮುಂದಾಗುತ್ತಾನೆ. ಏಕೆಂದರೆ ಶರಣರಿಗೆ ಇದು ವರ್ಣಸಂಕರ ವಿವಾಹವಲ್ಲ. ಇದು ಶರಣರ ಮದುವೆಯೆಂದು ಗ್ರಹಿಸುತ್ತಾರೆ. ಹೀಗಾಗಿ ಶರಣರಿಗೆ ರಾಜಾಜ್ಞೆಯೆನ್ನುವುದು ಮುಖ್ಯವಾಗುವುದಿಲ್ಲ. ಆದರೆ ಬಿಜ್ಜಳನಿಗೆ ಶರಣರು ನನ್ನ ಆಜ್ಞೆಯನ್ನು ಉಲ್ಲಂಘಿಸಿದ್ದಾರೆ. ನನ್ನ ವಿರುದ್ಧ ದಂಗೆಯೇಳಲು ಸನ್ನದ್ಧರಿದ್ದಾರೆ ಎಂಬ ಭಯವು ಬಿಜ್ಜಳನನ್ನು ಕಾಡುತ್ತದೆ. ಆದ್ದರಿಂದ ವರ್ಣಸಂಕರ ವಿವಾಹವಾದ ಮೇಲೆ ಬಿಜ್ಜಳನು ಸಂಪ್ರದಾಯವಾದಿಗಳ ಪರವಾಗಿ ನಿಲ್ಲುತ್ತಾನೆ. ಬಸವಣ್ಣನಿಗೆ ಸಂಗಮನ ಆಣೆಯನ್ನು ಹೇಳಿ ತಟಸ್ಥನನ್ನಾಗಿ ಮಾಡಿ

ಹರಳಯ್ಯ ಮತ್ತು ಮಧುವರಸರಿಗೆ ಶಿಕ್ಷೆಯನ್ನು ವಿಧಿಸುತ್ತಾನೆ. ಇದರಿಂದ ಬಸವಣ್ಣನು ಬಿಜ್ಜಳನ ಅರಮನೆಯಿಂದ ಹೊರ ನಡೆಯುತ್ತಾನೆ. ಇಲ್ಲಿ ಬಿಜ್ಜಳ ಮತ್ತು ಬಸವಣ್ಣನ ನಡುವಿನ ಸಂಬಂಧಗಳು ಬಹಿರಂಗವಾಗಿ ಕಡಿತಗೊಳ್ಳುತ್ತವೆ. ಆಂತರ್ಯದಲ್ಲಿ ಬಸವಣ್ಣನವರಿಗೆ ಬಿಜ್ಜಳನ ಬಗ್ಗೆ ಅಪಾರವಾದ ಒಲವಿತ್ತು ಎನ್ನುವುದನ್ನು ಬಹುತೇಕ ನಾಟಕಗಳು ಒತ್ತಿ ಹೇಳಿವೆ. ಆದರೆ ಅವರಿಬ್ಬರ ಸಂಬಂಧವು ಮತ್ತೇ ಕೂಡುವಂತಹ ಸಂದರ್ಭಗಳು ನಾಟಕಗಳಲ್ಲಿ ಕಾಣಸಿಗುವುದಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ಬಸವಣ್ಣನಿಗೆ ಸಮಾಜ ಬಹಳ ಮುಖ್ಯ. ಆದರೆ ಬಿಜ್ಜಳನಿಗೆ ಸಾಮಾಜಿಕ ಸುಧಾರಣೆಯ ಜೊತೆಗೆ ಅಧಿಕಾರ ಮುಖ್ಯವಾಗಿತ್ತು. ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಬಿಜ್ಜಳನಿಗೆ ಬಸವಣ್ಣನು ಅನಿವಾರ್ಯವಾಗಿದ್ದಂತೆ, ಬಸವಣ್ಣನಿಗೆ ತನ್ನ ಸಾಮಾಜಿಕ, ಧಾರ್ಮಿಕ ಸುಧಾರಣೆಗೆ ಬಿಜ್ಜಳನ ಅಗತ್ಯವಿತ್ತು. ಆದರೆ ಇವರಿಬ್ಬರ ಸಂಬಂಧಗಳು ವಿಘಟನೆ ಉಂಟಾದುದರಿಂದಾಗಿ ಕಲ್ಯಾಣದ ಕ್ರಾಂತಿ ನಡೆದು ಅರಾಜಕತೆ ಸೃಷ್ಟಿಯಾಯಿತು ಎನ್ನುವ ಮಹತ್ವದ ಸಂಗತಿಗಳನ್ನು ನಾಟಕಗಳು ಬಿತ್ತರಿಸುತ್ತವೆ.

### ೪.೩. ಬಸವಣ್ಣ ಮತ್ತು ಅಕ್ಕಮಹಾದೇವಿ

ಪುರೋಹಿತಶಾಹಿ ವ್ಯವಸ್ಥೆ ಯಾವಾಗ ತನ್ನ ಪ್ರಭುತ್ವವನ್ನು ಸ್ಥಾಪಿಸಿತೋ ಅಂದಿನಿಂದಲೇ ವರ್ಗ-ವರ್ಣ ವ್ಯವಸ್ಥೆಯ ಜೊತೆಗೆ ಮಹಿಳೆ ಮತ್ತು ಪುರುಷ ಎನ್ನುವ ಲಿಂಗತಾರತಮ್ಯವನ್ನು ಹುಟ್ಟು ಹಾಕಿತು. ಅಷ್ಟೇ ಅಲ್ಲ ಇತಿಹಾಸವನ್ನು ಗಮನಿಸಿದಾಗ ಪ್ರಾರಂಭದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇದ್ದು ಕಾಲಾಂತರದಲ್ಲಿ ಪಿತೃಪ್ರಧಾನ ವ್ಯವಸ್ಥೆಯಾಗಿ ಮಾರ್ಪಟ್ಟಿತು. ಆಗ ಪುರುಷ ಮೇಲು, ಸ್ತ್ರೀ ಕೀಳು ಎಂಬ ಭಾವನೆಯು ಬೆಳೆಯಿತು. ಸಮಾಜದ ಶೂದ್ರರಂತೆ ಸ್ತ್ರೀಯರನ್ನು ಕೀಳಾಗಿ ಕಾಣಲು ಪ್ರಾರಂಭಿಸಿದರು. ಏಕೆಂದರೆ ಈ ಮೂಲಭೂತವಾದಿಗಳು ತಮ್ಮ ಸಂಸ್ಕೃತಿಯನ್ನು ಬಿತ್ತುವಾಗ ಸುಮಾರು ಶತಮಾನಗಳ ಕಾಲ ನಡೆಯುವಂತೆ ಘೋಷಿಸಿಕೊಂಡರು. ಆದರೆ ೧೨ನೇ ಶತಮಾನಕ್ಕೆ ಬಂದಾಗ ಈ ಶತಮಾನವು ಸಮಾನತೆಯ ದ್ಯೋತಕವಾಗಿ ಕಾಣಿಸುವಲ್ಲಿ ಪ್ರಜ್ವಲವಾಗಿ ಕಂಡಿತು. ಈ ಶತಮಾನವು ಸ್ತ್ರೀ ಮತ್ತು ಪುರುಷರನ್ನು ಒಳಗೊಂಡಂತೆ ಸರ್ವಮಾನವ ಜಾತಿಗೂ ಸಮಾನತೆಯ ಸಿದ್ಧಾಂತವನ್ನು ಬೋಧಿಸಿ ಸುವರ್ಣಯುಗ ಎಂದು ಪ್ರಸಿದ್ಧಿಯಾಯಿತು. ಏಕೆಂದರೆ ಸನಾತನವಾದ ಹಿಂದೂ ಧರ್ಮ ಹಲವಾರು ಶಾಸ್ತ್ರಗಳನ್ನು ಹುಟ್ಟು ಹಾಕಿ ಸ್ತ್ರೀಯರನ್ನು ಕೇವಲ ಅಡುಗೆ ಮನೆಯ ಸೇವಕಿಯನ್ನಾಗಿಸಿತು. ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ ಎಂಬ ಮನುವಿನ ವಾದವನ್ನು ಮುಂದಿಟ್ಟುಕೊಂಡು ಆಕೆಯನ್ನು ಕೀಳಾಗಿ ಕಾಣಿಸುತ್ತಾ ಬಂದಿತು. ಇಂತಹ ಸಂದರ್ಭದಲ್ಲಿ ೧೨ನೇ ಶತಮಾನ ಶರಣ ಮತ್ತು ಶರಣೆಯರನ್ನು ಹುಟ್ಟು ಹಾಕಿ ಸ್ತ್ರೀಪರ ಚಿಂತನೆಗೆ ದಾರಿ ಮಾಡಿಕೊಟ್ಟಿತು. ಅಲ್ಲದೇ ಸ್ತ್ರೀಯರು ಪುರುಷರಂತೆ ಸರಿಸಮಾನರು ಎಂಬ ತತ್ವವನ್ನು ಬೋಧಿಸಿ ಸ್ತ್ರೀಯರಿಗೆ ಮುಕ್ತ ಸ್ವಾತಂತ್ರ್ಯವನ್ನು ಕಲ್ಪಿಸಿತು. ಈ ದೃಷ್ಟಿಯಿಂದಲೇ ಅಕ್ಕಮಹಾದೇವಿ, ಸೂಳೆ ಸಂಕವ್ವೆ, ಕಾಳವ್ವೆ, ಆಯ್ದಕ್ಕಿ ಲಕ್ಕಮ್ಮ, ಗಂಗಾಂಬಿಕೆ ಮುಂತಾದವರು ಆ ಶತಮಾನದಲ್ಲಿ ತಮ್ಮ ಸ್ತ್ರೀಪರ ಆಲೋಚನೆಗಳನ್ನು ಬಿತ್ತುವುದರ ಮೂಲಕ ಶರಣ ಭಕ್ತಿಯ

ತತ್ವವನ್ನು ಅರಿತುಕೊಂಡು ಬಾಳುವಲ್ಲಿ ಮುಂದಾದರು. ಅಷ್ಟೇ ಅಲ್ಲದೇ ಸ್ತ್ರೀಯರಲ್ಲೂ ಮೇಲ್ಜಾತಿಯ ಸ್ತ್ರೀಯರು ಮತ್ತು ಕೆಳಜಾತಿಯ ಸ್ತ್ರೀಯರು ಎಂಬ ಭೇದ ಆ ಕಾಲದಲ್ಲಿದ್ದಾಗ ಬಸವಾದಿ ಪ್ರಮಥರು ಈ ಭೇದವನ್ನು ಖಂಡಿಸಿ ಕೆಳಜಾತಿಯ ಸ್ತ್ರೀಯರಾದ ಕಾಳವ್ವೆ ಮತ್ತು ಸೂಳೆ ಸಂಕವ್ವೆರಂತಹ ಸ್ತ್ರೀಯರಿಗೆ ಸಮಾನವಾದ ಅವಕಾಶಗಳನ್ನು ಕೊಟ್ಟು ಭಕ್ತಿ ಪರಂಪರೆಯ ಮೂಲಕ ಶರಣೆಯರನ್ನಾಗಿ ಮಾಡಿದ ಶಿವಶರಣರವರು. ನಾವು ಮುಖ್ಯವಾಗಿ ಅಕ್ಕಮಹಾದೇವಿ ಯನ್ನು ಕುರಿತು ಮಾತನಾಡುವಾಗ ಆ ಕಾಲದ ಸ್ತ್ರೀಶರಣೆಯರಲ್ಲಿ ಅತ್ಯಂತ ಪ್ರಸಿದ್ಧ ಶಿವಶರಣೆಯಾಗಿ ಕಾಣಿಸಿಕೊಳ್ಳುತ್ತಾಳೆ. ಇದಕ್ಕೆಲ್ಲಾ ಕಾರಣ ಭಕ್ತಿ ಭಂಡಾರಿ ಬಸವಣ್ಣನವರ ಪ್ರಧಾನತ್ವದಲ್ಲಿ ನಡೆದ ಸಮಾಜೋ-ಧಾರ್ಮಿಕ ಆಂದೋಲನವಾಗಿದೆ.

ಅಕ್ಕಮಹಾದೇವಿ ಚರಿತ್ರೆ ಮತ್ತು ಪುರಾಣಕಾರರ ಪ್ರಕಾರ ಈಕೆಯ ಜೀವನ ಅತ್ಯಂತ ಪವಿತ್ರ ಮತ್ತು ಕಲ್ಪನೆಗಳ ನಡುವೆ ವರ್ಣಿತವಾಗಿದೆ. ಈಕೆಯ ಹುಟ್ಟೂರು ಉಡುತಡಿ. ಈ ಗ್ರಾಮ ಕರ್ನಾಟಕದ ಶಿವಮೊಗ್ಗ, ಗುಲ್ಬರ್ಗಾ ಜಿಲ್ಲೆಗಳ ಬಳಿ ಇರುವ ಉಡುತಡಿ ಎಂಬ ಗ್ರಾಮಗಳು ಈಕೆಯ ಹುಟ್ಟೂರು ಆಗಿದ್ದವು ಎಂಬ ಸಂಶಯಾಸ್ಪದ ಚರಿತ್ರೆ ಇರುವುದರಿಂದ ಚರಿತ್ರೆಕಾರರು ಕೊನೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಮಹಾಗಾಂವ್ ಎಂಬ ಗ್ರಾಮಕ್ಕೆ ಸಮೀಪವಿರುವ ಉಡುತಡಿಯೇ ಈಕೆಯ ಜನ್ಮಸ್ಥಳ. ಏಕೆಂದರೆ ಇದು ಕಲ್ಯಾಣಕ್ಕೆ ಸಮೀಪವಾಗಿರುವುದರಿಂದ ಕಲ್ಯಾಣದಲ್ಲಿಯೇ ಈ ಕ್ರಾಂತಿಯಾಗಿದ್ದರಿಂದ ಇದೇ ಗ್ರಾಮ ಇರಬಹುದು ಎಂದು ಊಹಿಸಿದ್ದಾರೆ. ಅದು ಏನೇ ಇರಲಿ ಅಕ್ಕಮಹಾದೇವಿ ಪ್ರಸಿದ್ಧ ಶಿವಶರಣೆಯೆಂಬುದನ್ನು ಮರೆಯುವಂತಿಲ್ಲ. ಚರಿತ್ರೆಯ ಪ್ರಕಾರ ಆ ಊರನ್ನು ಆಳುತ್ತಿದ್ದ ಸಾಮಂತ ಅರಸ ಕೌಶಿಕ ಅಕ್ಕಮಹಾದೇವಿಯ ರೂಪಕ್ಕೆ ಮರುಳಾಗಿ ವಿವಾಹವಾಗಲು ಬಯಸುತ್ತಾನೆ. ಆಗ ಅಕ್ಕಮಹಾದೇವಿಯು ವಿವಾಹಕ್ಕೆ ಸಿದ್ಧಳಾಗಲಿಲ್ಲ. ಏಕೆಂದರೆ ಕೌಶಿಕನು ಜೈನಧರ್ಮದ ಮತಾವಲಂಬಿಯಾಗಿದ್ದರಿಂದ ಈಕೆ ಒಪ್ಪಿಕೊಳ್ಳಲಾರದಾಗ ಕೊನೆಗೆ ಕೌಶಿಕ ಶೆಟ್ಟಿಯು ಶಿವಭಕ್ತನಾಗಬೇಕು ಎಂಬ ನಿಬಂಧನೆ ಮುಂದಿಟ್ಟಾಗ ವಿವಾಹಕ್ಕೆ ಒಪ್ಪಿಗೆ ನೀಡಿದಳು. ಆದರೆ ಅಕ್ಕಮಹಾದೇವಿಯು ಲೌಕಿಕ ಸಂಸಾರದ ಚಿಂತನೆಗಿಂತ ಅಲೌಕಿಕ ಚಿಂತನೆಯೇ ಮುಖ್ಯ ಎಂದು ತಿಳಿದು ಭಕ್ತಿ ಪರಂಪರೆಗೆ ತನ್ನನ್ನು ತಾನು ಅರ್ಪಿಸಿಕೊಂಡಳು. ಏಕೆಂದರೆ ಆಕೆಯದು ಪಾರಮಾರ್ಥಿಕ ಗಂಡನ ಮೇಲೆ ಒಲವು ತೀವ್ರವಾಗಿದ್ದರಿಂದ ಪ್ರಾಪಂಚಿಕ ಗಂಡನ ಮನೆಯನ್ನು ತೊರೆದು ಕಲ್ಯಾಣದ ಶರಣರ ಸಮುದಾಯ ವನ್ನು ಸೇರಿಕೊಂಡಳು. ಒಂದು ಕಡೆ ಪುರಾಣ ಕತೆಗಳ ಪ್ರಕಾರ ಪ್ರಾಪಂಚಿಕ ಗಂಡನ ಕಾಮುಕತನಕ್ಕೆ ರೋಸಿ ಹೋದ ಆಕೆ ದಿಗಂಬರೆಯಾಗಿ ಆಧ್ಯಾತ್ಮಿಕ ಚಿಂತನೆಯತ್ತ ತನ್ನ ದಾಪುಗಾಲು ಹಾಕಿದಳು. ಕೌಶಿಕ ಶೆಟ್ಟಿಯು ಈಕೆಯ ರೂಪಕ್ಕೆ ಮರುಳಾಗಿದ್ದನೇ ಹೊರತು ಆಕೆಯ ಆಧ್ಯಾತ್ಮಿಕತೆಯ ಬಗ್ಗೆ ಕಿಂಚಿತ್ತೂ ಗೌರವ ಕೊಡದೇ ಆಕೆಯ ಮೇಲೆ ಕಾಮಾತುರನಾಗಿ ಮೇಲೆರಗಿದಾಗ ಉಟ್ಟ ಸೀರೆಯನ್ನು ಆತನ ಕೈಯಲ್ಲಿ ಕೊಟ್ಟು ಶರಣೆಯಾಗಿ ನಡೆದಿರುವುದು ಸಂಪ್ರದಾಯದ ಪ್ರಕಾರ ವಿರೋಧದ ನಿಲುವಾಗಿತ್ತು. ಏಕೆಂದರೆ ಅಕ್ಕಮಹಾದೇವಿಯ ಅಂತರಂಗದಲ್ಲಿ

ಮನೆ ಮಾಡಿರುವುದು ಭಕ್ತಿಯೇ ಹೊರತು ಲೌಕಿಕ ಸಂಸಾರವಲ್ಲ. ಹೀಗೆ ೧೨ನೇ ಶತಮಾನದಲ್ಲಿ ಸಾಮಾಜಿಕ ಮತ್ತು ಸಮಷ್ಟಿ ನಿಲುವುಗಳನ್ನು ಬಿತ್ತುವುದರ ಸಲುವಾಗಿ ಶಿವಶರಣೆಯಾದ ಅಕ್ಕಮಹಾದೇವಿಯು ಶಿವಶರಣರ ಗುಂಪಿನಲ್ಲಿ ಶಿವಶರಣೆಯಾಗಿ ನಿಲ್ಲುತ್ತಾಳೆ. ಹೀಗೆ ಅಕ್ಕಮಹಾದೇವಿಯು ಅಲೌಕಿಕ ಗಂಡನಾದ ಚೆನ್ನಮಲ್ಲಿಕಾರ್ಜುನನನ್ನು ನಂಬಿ ಆತನ ಅಂಕಿತದಲ್ಲಿಯೇ ಅನೇಕ ವಚನಗಳನ್ನು ರಚಿಸಿ ಸಾಹಿತ್ಯ ಮತ್ತು ಸಾಂಸ್ಕೃತಿಕವಾಗಿ ಭಕ್ತಿಪರ ಚಿಂತನೆಗಳನ್ನು ಮುಂದಿಡುತ್ತಾಳೆ. ಸುಮಾರು ೧೨೦೦ ವರ್ಷಗಳ ಹಿಂದೆ ಮಹಿಳೆಯರನ್ನು ಕೀಳಾಗಿ ಕಾಣುವಂತಹ ಸಂಸ್ಕೃತಿಗೆ ಧಿಕ್ಕರಿಸಿದ ಈ ಶತಮಾನದ ಭಕ್ತಿ ಭಂಡಾರಿ ಬಸವಣ್ಣನವರ ಚಿಂತನೆಗಳಿಗೆ ಒಳಗಾದ ಅಕ್ಕಮಹಾದೇವಿಯು ವೈರಾಗ್ಯವನ್ನು ತಾಳಿ ಬಸವಣ್ಣನು ನಿರ್ಮಿಸಿದ ಅನುಭವಮಂಟಪಕ್ಕೆ ಬರುತ್ತಾಳೆ. ಹೀಗೆ ಮಹಾಮನೆಗೆ ಬಂದ ಮಹಾದೇವಿಯು ಹಲವು ಶರಣರೊಂದಿಗೆ ಚರ್ಚೆಗಿಳಿದಾಗ ಕೆಲವು ಶರಣರು ಆಕೆಯ ಭಕ್ತಿಯ ವಿಸ್ತಾರವನ್ನು ಕಂಡು ಪ್ರಭುದೇವರು ಮತ್ತು ಬಸವಣ್ಣನವರು ಅನುಭವಮಂಟಪಕ್ಕೆ ಬರಲು ಆಜ್ಞೆ ಮಾಡಿದ್ದಾರೆ. ಅವರ ಬರುವಿಕೆಗಾಗಿ ನಾನು ಎದುರು ನೋಡುತ್ತೇವೆ. ಏಕೆಂದರೆ ಮಹಾದೇವಿಯು ಗೃಹತ್ಯಾಗಿನಿ. ಅಷ್ಟೇ ಅಲ್ಲ. ಅಂತಃಪುರದ ಐಶ್ವರ್ಯವನ್ನು ತೊರೆದು ಏಕಾಂಗಿಯಾಗಿ ಬರುತ್ತಿದ್ದಾಳೆ. ವೈರಾಗ್ಯದ ಮೂರ್ತಿ, ಭಕ್ತಿಯ ಪುತ್ಥಳಿ. ಅಕ್ಕ ಮುಟ್ಟಿದ್ದೆಲ್ಲ ಪಾವನ. ನೋಡಿದ್ದುದೆಲ್ಲ ಪವಿತ್ರ ಮತ್ತು ನಡದದ್ದೆಲ್ಲ ಶಿವಮಾರ್ಗ ಹಾಗೂ ನುಡಿದುದ್ದೆಲ್ಲ ಶಿವತತ್ವ ಎಂಬುದಾಗಿ ಕಿನ್ನರಯ್ಯ ಮತ್ತು ಮಧುರಯ್ಯ ಮಾತನಾಡಿಕೊಳ್ಳುವಾಗ ಅಕ್ಕಮಹಾದೇವಿಯ ಆಗಮನವಾಗುತ್ತದೆ. ಆಗ ಮಧುರಯ್ಯ ಯಾರು ಬರುತ್ತಿದ್ದಾರೆ, ಆಕೆ ಮಹಾರಾಣಿ ಇರಬಹುದೇ ಎಂದಾಗ ಆಗ ಕಿನ್ನರಯ್ಯನವರು ಆಕೆಯ ಮುಖದ ತೇಜಸ್ಸನ್ನು ನೋಡಿದರೆ ಮಹಾದೇವಿಯೇ ಇರಬಹುದು. ಎಂದಾಗ,

"**ಮಧುರಯ್ಯ** : ತೇಜಸ್ಸಿಗಿಂತ ನನಗೆ ಚಲುವೇ ಹೆಚ್ಚಿಗೆ ಕಾಣುತ್ತಿದೆ. ಕಾವಿಯ ವಸ್ತ್ರವನ್ನುಟ್ಟು ಹಣ್ಣೆಲೆಯ ನಡುವಿನ ಹೂವಿನಂತಿದ್ದಾಳೆ.

**ಅಕ್ಕಮಹಾದೇವಿ** : (ಬರ ಬರುತ್ತಾ) ಮನದ ವೈರಾಗ್ಯವೇ ಆತ್ಮದ ಕಲ್ಯಾಣ. ಇಂತಪ್ಪ ಕಲ್ಯಾಣಕ್ಕೆ ಬಂದ ನಾನು ಎನ್ನ ತಂದೆ ಬಸವರಾಜದೇವರ ಅರಸುತ್ತಿದ್ದೇನೆ. ನನ್ನನ್ನು ಅವರತ್ತ ಕರೆದೊಯ್ಯುವವರಾರೂ ಇಲ್ಲವೇ?

**ಕಿನ್ನರಯ್ಯ** : ತಾಯಿ ನೀನಾರು? ಕುಂತಳದ ರಾಣಿಯೇ?

**ಮಹಾದೇವಿ** : ರಾಣಿಯಾದರೇನು? ಅಲ್ಲದಿದ್ದರೇನು? ನಾನಾರೆಂಬುದನ್ನು ಬಸವರಾಜದೇವರು ಬಲ್ಲರು. ಪ್ರಭುದೇವರೂ ಬಲ್ಲರು. ನಾನು ಅವರ ಮುಂದೆ ತಿಳಿಸುತ್ತೇನೆ."[೯೯]

ಹೀಗೆ ಅನುಭವಮಂಟಪಕ್ಕೆ ಬಂದ ಅಕ್ಕಮಹಾದೇವಿಯ ವಿಚಾರಗಳು ಚರಿತ್ರಾರ್ಹವಾಗಿವೆ. ಈಗಾಗಲೇ ಅನುಭವಮಂಟಪದಲ್ಲಿ ಚೆನ್ನಬಸವಣ್ಣ, ಹರಳಯ್ಯ, ಮಡಿವಾಳ ಮಾಚಿದೇವ, ನಾಗಲಾಂಬಿಕೆ, ಗಂಗಾಂಬಿಕೆ, ನೀಲಾಂಬಿಕೆ, ಕಲ್ಯಾಣಿ, ಬಸವಣ್ಣ ಮತ್ತು ಅಲ್ಲಮಪ್ರಭುದೇವರು

ನೆರೆದಿದ್ದಾರೆ. ಆಗ ಬಸವಣ್ಣನವರು ಅಧ್ಯಕ್ಷರಾದ ಪ್ರಭುದೇವರಿಗೆ ತಮ್ಮ ಬಿನ್ನಪವನ್ನು ಹೀಗೆ ಬಿತ್ತರಿಸುತ್ತಾರೆ. ಏನೆಂದರೆ ಉಡುತಡಿಯ ಮಹಾಗಾಂವ್‌ದಿಂದ ಶರಣ ಮಹಾಜ್ಯೋತಿಯೊಂದು ತಮ್ಮೆಲ್ಲರ ದರ್ಶನಕ್ಕಾಗಿ ಹೊರಗಡೆ ಕಾಯುತ್ತಿದ್ದಾರೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಅಕ್ಕಮಹಾದೇವಿಯನ್ನು ಬಸವಣ್ಣನವರು ಮಹಾಜ್ಯೋತಿಗೆ ಹೋಲಿಸಿರುವುದು ಮಾನವೀಯತೆ ಹಿಡಿದ ಕೈಗನ್ನಡಿಯಾಗಿದೆ. ಏಕೆಂದರೆ ನಮ್ಮ ಸಂಪ್ರದಾಯವು ಗಂಡನನ್ನು ಬಿಟ್ಟವರಿಗೆ 'ಗಯ್ಯಾಳಿ' ಎಂದು ಸಂಬೋಧಿಸಿ ಮಾನಸಿಕವಾಗಿ ಮತ್ತು ದೈಹಿಕವಾಗಿ ದೂರುತ್ತದೆ. ಆದರೆ ಮಹಾಮಾನವತಾ ವಾದಿಯಾದ ಬಸವಣ್ಣನವರು ಅಂತಹ ಅಕ್ಕಮಹಾದೇವಿಗೆ ಜ್ಯೋತಿಯೆಂದು ಕರೆಯುವುದರ ಮೂಲಕ ಸ್ತ್ರೀಪರ ಚಿಂತನೆಗೆ ಮುಂದಾಗುತ್ತಾನೆ. ಆಗ ಪ್ರಭುದೇವರು ಯಾರೇ ಆಗಿರಲಿ ಅನುಭವಮಂಟಪದ ಸದಸ್ಯತ್ವ ಪಡೆಯಬೇಕಾದರೆ ಶರಣರೆಲ್ಲರ ಸವಾಲುಗಳನ್ನು ಸ್ವೀಕರಿಸಿ ತೇರ್ಗಡೆಯಾದರೆ ಮಾತ್ರ ಸದಸ್ಯರಾಗಬಹುದು ಎಂದಾಗ ಬಸವಣ್ಣನವರು ಹೊರಗಡೆ ನಿಂತಿದ್ದ ಅಕ್ಕಮಹಾದೇವಿಯನ್ನು ಕರೆತರುತ್ತಾನೆ. ಆಗ ಮಹಾದೇವಿಯು ತನ್ನ ಮೌನದಿಂದಲೇ ವಂದಿಸುತ್ತಾಳೆ. ಪ್ರಭುದೇವರು ಆಗ ನಿಮ್ಮ ನಾಮವನ್ನು ಬಿತ್ತರಿಸಲು ಅಂಜಿಕೆಯೇ? ಎಂದಾಗ ಚೆನ್ನಬಸವಣ್ಣನವರು ಪ್ರಭುದೇವರ ಮಾತಿಗೆ ಪುಷ್ಠಿ ಕೊಡುವುದರ ಮೂಲಕ ತಾಯಿ ಭಯಪಡದೇ ನಿಮ್ಮ ನಾಮವನ್ನು ಬಿತ್ತರಿಸು ಎನ್ನುತ್ತಾನೆ. ಆಗ ಮಹಾದೇವಿಯು ನಾನು ದಿಕ್ಕು ಕಾಣದೇ ಕಲ್ಯಾಣಕ್ಕೆ ಬಂದಿಲ್ಲ. ಶರಣರನ್ನು ಕಾಣಲು ಬಂದಿರುವೆ ಆದರೆ ನೀವು ದಿಗಂಬರಳಾಗಿ ಬಂದೆ ಎಂದಿರುವಿರಿ. ನಾನು ದಿಗಂಬರಳಲ್ಲ. ನನ್ನ ಕೇಶರಾಶಿಯೇ ಕವಚವಾಗಿದೆ ಎನ್ನುತ್ತಾಳೆ. ಆಗ ಮಾಚಿದೇವರು ಈಕೆ ಶರಣೆಯಲ್ಲ. ಯಾವುದೋ ಮನೋದೌರ್ಬಲ್ಯಕ್ಕೆ ತುತ್ತಾಗಿ ದಾರಿ ಕಾಣದೇ ಬಂದ ಈಕೆಗೆ ಅನುಭವಮಂಟಪದ ಸದಸ್ಯತ್ವ ಧರ್ಮ ಬಾಹಿರವಾದುದು ಎನ್ನುತ್ತಾನೆ. ಆಗ ಹರಳಯ್ಯನವರು ಇದು ಅನುಭವಮಂಟಪವಲ್ಲ ತಾಯಿ ವಿರಹಿಗಳ ವಾಸಸ್ಥಾನ. ನೀನು ವಿರಹವೇದನೆಯನ್ನು ನೀಗಿಸಿಕೊಳ್ಳಲು ಬೇರೆಯಲ್ಲಾದರೂ ತೆರಳಬಹುದು ಎಂದಾಗ ಪ್ರಭುದೇವರು ಕೊಂಕು ನುಡಿಗೆ ಬೇಸರವಾಗದಿರು. ನಿನ್ನ ಹೆತ್ತವರಾರು? ಎನ್ನುತ್ತಾನೆ. ಆಗ ಅಕ್ಕಮಹಾದೇವಿಯು ನನ್ನ ತಂದೆ ಶರಣ ಬಸವಣ್ಣ ಎಂದಾಗ ಎಲ್ಲರೂ ದಿಗ್ಭ್ರಾಂತರಾಗುತ್ತಾರೆ. ಹೀಗೆ ಪ್ರಭುದೇವ ಮತ್ತು ಅಕ್ಕಮಹಾದೇವಿಯರ ನಡುವೆ ಚರ್ಚೆ ನಡೆದಾಗ ಪ್ರಭುದೇವರು ಶರಣಸತಿ ಲಿಂಗಪತಿ ಎಂಬುದು ಶರಣರ ವಾಣಿ. ನೀನು ಒಂದು ವೇಳೆ ನಿನ್ನ ಪತಿ ಯಾರು? ಎಂಬುದನ್ನು ಸರಿಯಾಗಿ ಹೇಳದಿದ್ದರೆ ಇಲ್ಲಿಂದ ನಿರ್ಗಮಿಸು ಎಂದಾಗ ಅಕ್ಕಮಹಾದೇವಿಯು ನನಗೆ ಚೆನ್ನಮಲ್ಲಿಕಾರ್ಜುನ ನೊಡನೆ ವಿವಾಹವಾಗಿದೆ ಇದು ನನ್ನ ಮನದ ಸಾಕ್ಷಿ. ಏಕೆಂದರೆ ನನ್ನ ಗಂಡ ಸರ್ವಾಂತರ್ಯಾಮಿ. ನನ್ನನ್ನು ಬಲತ್ಕಾರವಾಗಿ ಕೌಶಿಕನೊಂದಿಗೆ ಮದುವೆ ಮಾಡಿದರು. ಇದಕ್ಕೆ ನನ್ನ ಮನ ಒಪ್ಪಲಿಲ್ಲ. ಅದಕ್ಕಾಗಿ ನನ್ನ ಮನೆಯ ಬಿಟ್ಟು ಬಂದಿರುವುದು ನಿಜ ಎಂದಾಗ

"**ಚೆನ್ನಬಸವಣ್ಣ** : ಗಂಡನನ್ನು ತೊರೆದು ಬಂದದ್ದು ಮಹಿಳಾ ಸಂಸ್ಕೃತಿಗೇ ಏನು ಇಡೀ ಶರಣ ಸಂಸ್ಕೃತಿಯನ್ನೇ ಮಣ್ಣುಪಾಲು ಮಾಡಿದಂತಾಗಲಿಲ್ಲವೇ?

**ಪ್ರಭುದೇವ** : ಚೆನ್ನಬಸವಣ್ಣಾ ತಾಳ್ಮೆಗೆಟ್ಟು ತಾಳ್ಮೆಗೆಡಿಸದಿರು.

**ಮಹಾದೇವಿ :** ನಾನು ಕೌಶಿಕನನ್ನು ವಿವಾಹವಾಗಿರಬಹುದೆಂದು ನೀವು ತಿಳಿದಿರಬಹುದು. ಆದರೆ ನಾನು ನನ್ನ ಮನಸಾರೆ ಚೆನ್ನಮಲ್ಲಿಕಾರ್ಜುನಯ್ಯ ನನ್ನಲ್ಲದೇ ಕೌಶಿಕನನ್ನು ಕಣ್ಣೆತ್ತಿಯೂ ನೋಡಿಲ್ಲ. ಕೌಶಿಕ ಅರಮನೆಗೆ ಹೋಗಿದ್ದು ನಿಜ. ದೇಹವನ್ನು ಅರ್ಪಿಸಲೋಸುಗವಲ್ಲ, ನಿಜಸ್ಥಿತಿಯ ತಿಳಿಸಿ ಬಿಡುಗಡೆಯ ಪಡೆಯಲೆಂದು."[೧೦]

ಹೀಗೆ ಅಕ್ಕಮಹಾದೇವಿಯು ಕೌಶಿಕ ಹಾಕಿರುವ ಮೂರು ನಿಬಂಧನೆಗಳನ್ನು ಮೀರಿ ಬರುತ್ತಾಳೆ. ಚೆನ್ನಬಸವಣ್ಣನವರ ಮಾತಿನಲ್ಲಿ ಸಂಪ್ರದಾಯ ಗಟ್ಟಿಯಾಗಿ ನಿಲ್ಲುತ್ತದೆ. ಮಹಾದೇವಿಯು ನಾನು ನನಗಾಗಿ ಅಲ್ಲ, ಚೆನ್ನಮಲ್ಲಿಕಾರ್ಜುನನಿಗೋಸ್ಕರ ಮನೆಯನ್ನು ತೊರೆದು ಬಂದಿರುವುದಾಗಿ ಮುಂದುವರಿದ ಆಕೆ ನನಗೆ ಸೌಂದರ್ಯದ ಮೋಹ ಇಲ್ಲ. ಅದಕ್ಕಾಗಿ ದೇಹವನ್ನು ಕೇಶರಾಶಿಯಿಂದ ಮುಚ್ಚಿ ನನ್ನ ಅಂತರಂಗದ ಶುದ್ಧಕ್ಕೆ ಭಕ್ತಿಯನ್ನು ಅರಸಿ ಬಂದಿದ್ದೇನೆಯೇ ಹೊರತು ನಿಮ್ಮ ಕಟುನಿಂದೆಗಳಿಗೆ ಕಿಂಚಿತ್ತೂ ಮನವು ಅಳುಕದು ಎಂದಾಗ ಬಸವಣ್ಣನವರು ಅಲ್ಲಿಯವರೆಗೆ ಸುಮ್ಮನೆ ಕುಳಿತು ಅಕ್ಕಮಹಾದೇವಿಯ ಮಾತಿಗೆ ನೋಯದಿರು ತಾಯಿ ಅನುಭವಮಂಟಪಕ್ಕೆ ಸೇರುವ ಮುನ್ನ ಪರೀಕ್ಷೆಯನ್ನು ಎದುರಿಸಲೇಬೇಕು ಎಂದು ಹೇಳುತ್ತಾ ಮುಂದುವರಿದ ಬಸವಣ್ಣನವರು

"ಹೆಂಗಸಿನಂಗವ ನೋಡಿದರೆ ಪುರಾತನರು
ಬಾಲತನದಂಗವ ನೋಡಿದರೆ ಪುರಾತನರು
ಬ್ರಹ್ಮವನಾಚರಿಸಿ ತನ್ನ ಮೆರೆದಿಪ್ಪವ
ನೋಡಿದರೆ ಲಿಂಗವಂತರು
ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ
ಬೀಸರ ಪೋಗದೇ ಇಪ್ಪ ಇರವು ಕೂಡಲಸಂಗಮ
ದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತು".[೧೧]

ಅಕ್ಕಮಹಾದೇವಿ ಮತ್ತು ಬಸವಣ್ಣರನ್ನು ಜೊತೆಯಾಗಿ ನೋಡುವಂತಹ ಸಂದರ್ಭದಲ್ಲಿ ಗಂಭೀರ ನಾಟಕಗಳು ಅಷ್ಟೊಂದು ಆಸಕ್ತಿಯನ್ನು ತೋರಿಸಿಲ್ಲ. ಆದರೆ ಜನಪ್ರಿಯ ನಾಟಕಗಳು ಅನುಭವಮಂಟಪವನ್ನು ಚಿತ್ರಿಸುವಂತಹ ಸಂದರ್ಭದಲ್ಲಿ ಅಲ್ಲಿ ನೆಪ ಮಾತ್ರಕ್ಕೆ ಎಲ್ಲರನ್ನು ಪರಿಚಯಿಸಬೇಕಾದ ಅನಿವಾರ್ಯತೆಯಿಂದ ಅಥವಾ ವೈಭವೀಕರಣದ ಹಿನ್ನೆಲೆಯಲ್ಲಿ ಅಕ್ಕಮಹಾದೇವಿಯನ್ನು ಕಾಣಿಸಿದ್ದಾರೆ.

### ೪.೪. ಬಸವಣ್ಣ ಮತ್ತು ಚಳುವಳಿ

ಬಸವಣ್ಣ ಮತ್ತು ಚಳುವಳಿ ಒಂದು ನಾಣ್ಯದ ಎರಡು ಮುಖಗಳು. ಏಕೆ ಈ ಮಾತು ಇಲ್ಲಿ ಪ್ರಸ್ತುತವೆಂದರೆ ಬುದ್ಧನ ಶಾಂತಿ ಚಳುವಳಿ ನಂತರದಲ್ಲಿ ಬಸವನ ಸಮಾಜೋ–ಧಾರ್ಮಿಕ ಚಳುವಳಿ ಇದು ನಡೆದದ್ದು ೧೨ನೇ ಶತಮಾನ. ಈ ಕಾಲ ರಾಜರ ಆಳ್ವಿಕೆಗೆ ಒಳಪಟ್ಟ ಕಾಲವಾಗಿತ್ತು. ರಾಜರು ನುಡಿದ ಆಜ್ಞೆಯೇ ಅವತ್ತಿನ ಪ್ರಮುಖ ಉದ್ದೇಶವಾಗಿತ್ತು.

ಏಕೆಂದರೆ ಅವತ್ತಿನ ಪ್ರಜೆಗಳೆಲ್ಲರೂ ರಾಜರನ್ನೇ ದೇವರು ಎಂದು ಭಾವಿಸಿದ್ದರು. ಅಲ್ಲದೇ ರಾಜ ವಿಧಿಸಿದ ಆಜ್ಞೆಗಳನ್ನು ಯಾರೂ ಮೀರುವಂತಿರಲಿಲ್ಲ. ಅದಕ್ಕೆ ಬಲವಾದ ಕಾರಣಗಳೂ ಇವೆ. ಸನಾತನ ಸಂಸ್ಕೃತಿಯ ಪರಧಿಯು ಅದರ ಒಳಗಡೆಯೇ ಅನೇಕ ಪದರುಗಳನ್ನಾಗಿ ನಿರ್ಮಿಸಿ ಅದರಿಂದ ಒಂದು ಆಳುವ ವರ್ಗ ಮತ್ತೊಂದು ಆಳಿಸಿಕೊಳ್ಳುವ ವರ್ಗ ಎಂಬುದಾಗಿ ರಚನೆಯಾಗಿತ್ತು. ಮೌರ್ಯರು, ಬನವಾಸಿಯ ಕದಂಬರು, ತಲಕಾಡಿನ ಗಂಗರು ಮಾನ್ಯಖೇಟದ ರಾಷ್ಟ್ರಕೂಟರು ನಂತರದಲ್ಲಿ ಕಲ್ಯಾಣದ ಕಲಚೂರಿಗಳವರೆಗೂ ಅಂದಿನ ಸಂಸ್ಕೃತಿ ಮತ್ತು ಸಂಪ್ರದಾಯಗಳು ಬೇರು ಬಿಟ್ಟು ಜನಸಾಮಾನ್ಯರಲ್ಲಿ ಇಬ್ಭಾಗವನ್ನು ಉಂಟು ಮಾಡಿದ್ದರು. ಇದಕ್ಕೆಲ್ಲ ಕಾರಣ ಸಾಹಿತ್ಯ ಮತ್ತು ಚರಿತ್ರೆಗಳು. ಸಮಾಜದ ಅತ್ಯಂತ ತಳಸ್ತರದಲ್ಲಿರುವ ಜನಸಾಮಾನ್ಯರು/ಬಹುಸಂಖ್ಯಾತರು ಮೇಲ್ವರ್ಗದವರ ಸೇವೆಯೇ ದೇವರ ಸೇವೆ ಎಂದು ನಂಬಿದ್ದರು. ಆಗಾಗ ಅರಸರುಗಳ ಮಧ್ಯೆ ಹೋರಾಟ, ಸಂಘರ್ಷ ನಡೆದರೂ ಅವು ಅರಸರ ಏಳಿಗೆಯನ್ನೇ ಬಯಸಿದವೇ ವಿನಃ ಜನಸಾಮಾನ್ಯರ ಹಿತವನ್ನು ಬಯಸುವಲ್ಲಿ ಹಿಂದೆ ಬಿದ್ದಿದ್ದವು. ಆದರೆ ದುರದೃಷ್ಟವಶಾತ್ ಕಲ್ಯಾಣದ ಕಲಚೂರಿಗಳ ಆಳ್ವಿಕೆಯ ಸಂದರ್ಭದಲ್ಲಿ ಸಾಕ್ಷಾತ್ ಶಿವನೇ ಬಸವಣ್ಣನ ರೂಪದಲ್ಲಿ ಬರುವುದರ ಮೂಲಕ ಚಳುವಳಿ ಎಂಬ ಪದಕ್ಕೆ ಹೊಸ ಅರ್ಥವನ್ನು ನೀಡಿ ಆ ಚಳುವಳಿಗೆ ನೇತಾರನಾಗಿ ಬಸವಣ್ಣನನ್ನು ನೇಮಿಸಿದಂತೆ ಭಾಸವಾಗುತ್ತದೆ. ಏಕೆಂದರೆ ಬಸವಣ್ಣನವರು ಆ ಕಾಲದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಹಿತದೃಷ್ಟಿಯಿಂದ ತಮ್ಮ ಜ್ಞಾನದ ಮೂಲಕ ಅನಿಷ್ಟ ಪದ್ಧತಿಯನ್ನು ಹೋಗಲಾಡಿಸಲು ಕ್ರಾಂತಿಯ ಮಹತ್ವ ಶೀಘ್ರವಾಗಬೇಕೆಂದು ಅರಿತು ಮುಂದಾಗಿರುವುದು ಗಮನಾರ್ಹವಾದ ಸಂಗತಿ.

ಈಗಾಗಲೇ ಬೌದ್ಧ, ಜೈನ ಮತ್ತು ಶೈವ ಧರ್ಮಗಳು ಅಹಿಂಸೆಯ ವಿರುದ್ಧ ತಮ್ಮ ತತ್ವಗಳನ್ನು ಬೋಧಿಸಿದ್ದರೂ ಆಚರಣೆ ತರುವಲ್ಲಿ ವಿಫಲವಾಗಿವೆ ಎಂಬುದನ್ನು ಹೇಳಲೇಬೇಕು. ಏಕೆಂದರೆ ಆ ಧರ್ಮಗಳು ತತ್ವಗಳನ್ನು ಬೋಧಿಸಿದವೇ ಹೊರತು ಚಳುವಳಿ ಎಂಬ ಹೆಸರಿನ ಸ್ಪಷ್ಟ ರೂಪ ಕೊಡಲು ಸಾಧ್ಯವಾಗಲಿಲ್ಲ. 'ನೋಯುವ ಹಲ್ಲಿಗೆ ನಾಲಿಗೆಯು ಮತ್ತೆ ಮತ್ತೆ ಹೊರಳುವಂತೆ' ಎಂಬ ಗಿರೀಶ್ ಕಾರ್ನಾಡರ ಮಾತಿನಂತೆ ಆಧುನಿಕ ಲೇಖಕರು ವಚನ ಚಳುವಳಿಯನ್ನು ಕುರಿತು ತಮ್ಮ ಪಠ್ಯಗಳಲ್ಲಿ ಪ್ರಗತಿಪರ ಆಶಯಗಳನ್ನು ಕಂಡುಕೊಳ್ಳಲಿಕ್ಕೆ ಪ್ರಯತ್ನಿಸಿದ್ದಾರೆ. ಕ್ರಮೇಣ ವಚನ ಚಳುವಳಿ ನಂತರದ ಅವಧಿಯಲ್ಲಿ ಮತ್ತಷ್ಟು ಶೀಘ್ರವಾದ ರೂಪವನ್ನು ತಾಳಿತು. ಇದಕ್ಕೆ ಕಾರಣ ಭಕ್ತಿ ಭಂಡಾರಿ ಬಸವಣ್ಣ. ಈತನು ಮಾಡಿರುವ ಅಥವಾ ಕಲ್ಪಿಸಿಕೊಂಡಿರುವ ಕ್ರಾಂತಿ ಆಂದೋಲನಗಳು ಜನಪರವಾಗಿದ್ದವು. ಈ ಮುಂಚೆ ಇವು ಒಂದು ವರ್ಗದ ಪ್ರತಿನಿಧಿಯಾಗಿದ್ದವು. ಹೀಗಾಗಿ ೧೨ನೇ ಶತಮಾನದಲ್ಲಿ ವಚನ ಸಾಹಿತ್ಯದ ಮೂಲಕ ಬಿಗಿಯಾದ ಸಂಸ್ಕೃತ ಸಾಹಿತ್ಯವನ್ನು ಧಿಕ್ಕರಿಸಿ ಸರಳ ಸಾಹಿತ್ಯದ ಮೂಲಕ ಪದ್ಯಗಳನ್ನು ವಚನ ರೂಪದಲ್ಲಿ ರಚಿಸಿದರು. ಏಕೆಂದರೆ ಶರಣರು ಸಮಾಜವನ್ನು ನವ ಸಮಾಜವನ್ನಾಗಿ ಮಾಡುವಲ್ಲಿ ಪ್ರಯತ್ನಿಸುವ ಚಿಂತನೆ ಚರಿತ್ರೆಯಾಗಿ ಗೋಚರಿಸಿದೆ. ಈ

ಚಳುವಳಿಯ ಕೇಂದ್ರ ಬಿಂದುವಾದ ಬಸವಣ್ಣ ಅಂತರಂಗದ ಮೂಲಕ ಅನನ್ಯತೆಯನ್ನು ತರಲು ಪ್ರಯತ್ನಿಸಿದರು. ಇಲ್ಲಿ ಸಮುದಾಯದ ಲೌಕಿಕ ಜೀವನ ಮುಖ್ಯವಾಗಿತ್ತೇ ಹೊರತು ಸಮುದಾಯವನ್ನು ಕದಡುವ ತುಡಿತ ಇರಲಿಲ್ಲ. ಹೀಗಾಗಿ ಅಂತರಂಗದ ಕುಲುಮೆಯ ಮೂಲಕ ಲೌಕಿಕ ಬದುಕಿನ ಮುಖಗಳನ್ನು ಅನಾವರಣ ಮಾಡುವ ಸಲುವಾಗಿ ಪ್ರಯತ್ನಿಸಿರುವುದು ಸ್ವಾಗತಾರ್ಹವಾದ ಸಂಗತಿ.

ಈ ಚಳುವಳಿಗೆ ಚಿಂತನೆಕಾರರು ಸಮಾಜೋ–ಧಾರ್ಮಿಕ ಆಂದೋಲನವೆಂದು ಕರೆದು ಅದಕ್ಕೊಂದು ಅರ್ಥಕೊಟ್ಟಿದ್ದಾರೆ. ಇದು ಬಸವಣ್ಣನವರಿಗೆ ಅನಿವಾರ್ಯವಾಗಿತ್ತು. ಉಚ್ಚ ಮತ್ತು ನೀಚ ಎಂಬ ವರ್ಗಗಳು ಸಮಾಜ ಮತ್ತು ಧರ್ಮದ ಅನೈತಿಕತೆಗೆ ಒಳಗಾಗಿ ತಮ್ಮ ತಮ್ಮಲ್ಲಿಯೇ ಅಡ್ಡಗೋಡೆಗಳನ್ನು ನಿರ್ಮಿಸಿಕೊಂಡಿದ್ದು ಒಂದು ಕಡೆಯಾದರೆ, ಇದಕ್ಕೆ ಕಾರಣವಾದ ಅಗ್ರಹಾರ ಸಂಸ್ಕೃತಿ ಮತ್ತೊಂದು ಕಡೆಯಾಗಿದೆ. ಈಗಾಗಲೇ ಹೇಳಿರುವಂತೆ ಬಸವಣ್ಣನವರು ಅಗ್ರಹಾರ ಸಂಸ್ಕೃತಿಯ ಕುಟುಂಬದಲ್ಲಿ ಜನಿಸಿ ಮಾನವೀಯ ಸಂಸ್ಕೃತಿಯನ್ನಾಗಿಸುವುದಕ್ಕೆ ಒಂದೇ ದಾರಿ ಎಂದರೆ ಅದು ಚಳುವಳಿ ಎಂಬುದನ್ನು ಅರಿತು ಬಾಲ್ಯದಿಂದಲೇ ಈ ಚಳುವಳಿಗೆ ನೀರು ಹಾಕಿ ಬೆಳೆಸಿರುವುದು ಮನಗಾಣಬಹುದು. ನಮ್ಮ ಹಿರಿಯರು ಬರುವಾಗ ಬೆತ್ತಲೆ ಹೋಗುವಾಗ ಬೆತ್ತಲೆ ನಡುವೆಲ್ಲಾ ಕತ್ತಲೆ ಎಂಬುದನ್ನು ಒಂದು ವೇಳೆ ಬಸವಣ್ಣ ಅನುಸರಿಸಿದ್ದೇ ಆದರೆ ಚಳುವಳಿ, ಆಂದೋಲನ ಮತ್ತು ಕ್ರಾಂತಿ ಎಂಬ ಪದಗಳೇ ಹುಟ್ಟುತ್ತಿರಲಿಲ್ಲ ಎಂದೆನಿಸುತ್ತದೆ. ಹೀಗಾಗಿ ಭಾರತದ ಅದರಲ್ಲೂ ಕರ್ನಾಟಕದಲ್ಲಿ ಮಹತ್ವಪೂರ್ಣವಾದ ಧಾರ್ಮಿಕ ಚಳುವಳಿ ಭಕ್ತಿಯ ಮೂಲಕ ಹುಟ್ಟಿಕೊಂಡು ವೈಜ್ಞಾನಿಕ ತಳಹದಿಯಾಗಿ ನಿಂತು ಸಮಾಜ ಪರಿವರ್ತನೆಗೆ ಶ್ರಮಿಸಿರುವುದು ಗಣನೀಯವಾದುದು.

ಚಳುವಳಿಯ ಮೂಲ ಉದ್ದೇಶ ದೇವರು ಒಬ್ಬನೇ ನಾಮ ಹಲವು ಎಂಬಂತೆ ಮನುಷ್ಯನೊಬ್ಬನೇ. ಜಾತಿಗಳು ಮಾತ್ರ ಬೇರೆ ಎಂಬುದನ್ನು ಒತ್ತಿ ಹೇಳುತ್ತಾ ಪಂಪ ಹೇಳುವ ಹಾಗೇ ಮಾನವ ಜಾತಿ ತಾನೊಂದೇ ವಲಂ ಎಂಬುದನ್ನು ಪ್ರತಿಪಾದಿಸಿತು. ಪ್ರಧಾನ ಸಂಸ್ಕೃತಿಯ ಪ್ರತಿಯಾಗಿ ಮತ್ತು ಪರ್ಯಾಯವಾಗಿ ಈ ಭಕ್ತಿ ಚಳುವಳಿ ಹೊಸ ಆದರ್ಶಗಳನ್ನು ಹುಟ್ಟು ಹಾಕುವುದರ ಮೂಲಕ ನೈಜ ಹಾಗೂ ವಾಸ್ತವಿಕ ಸಂಗತಿಗಳಿಗೆ ದಾರಿ ಮಾಡಿಕೊಟ್ಟಿತು. ಜೊತೆಗೆ ಆಧ್ಯಾತ್ಮ, ಅನುಭವ ಮತ್ತು ಆದರ್ಶಗಳನ್ನೊಳಗೊಂಡ ಈ ಚಳುವಳಿ ಸಾಹಿತ್ಯ ಸಿದ್ಧವಾಗಿ ಮಾರ್ಪಟ್ಟು ನೈತಿಕ ನೆಲೆಗಳ ವಿಚಾರಗಳ ಮೇಲೆ ಬೆಳಕು ಚೆಲ್ಲಿತು.

ಶೈವ ಧರ್ಮ ಇರುವಂತಹ ಸಂದರ್ಭದಲ್ಲಿ ಎರಡನೆಯ ವಾದದಲ್ಲಿ ವೀರಶೈವ ಚಳುವಳಿ ಬಸವಣ್ಣನಿಂದ ಉದಯವಾಯಿತು. ಇದು ಜಾತಿ ವ್ಯವಸ್ಥೆ, ಕಾಯಕ ಸೇವೆ ಮತ್ತು ಮಹಿಳೆಯರ ಸ್ಥಾನಮಾನ ಜೊತೆಗೆ ಮಾನವೀಯ ಧರ್ಮ ಸಿದ್ಧಾಂತವನ್ನು ಬೋಧಿಸುವ ನಿಟ್ಟಿನಲ್ಲಿ ಹುಟ್ಟಿಕೊಂಡಿತು. ಹೀಗೆ ವೀರಶೈವ ಚಳುವಳಿ ವರ್ಷದಿಂದ ವರ್ಷಕ್ಕೆ ಅನೇಕ ಬದಲಾವಣೆಗಳನ್ನು ಕಾಣಿಸಬೇಕೆಂಬ ನಿಲುವುಗಳನ್ನು ಸ್ಪಷ್ಟಪಡಿಸಿತು. ಈಗಾಗಲೇ ಬಸವಣ್ಣ ಕೂಡಲ ಸಂಗಮದಲ್ಲಿ

ವಿದ್ಯಾ ಪಾರಂಗತನಾಗಿ, ಮಂತ್ರಿಯಾದ ಬಲದೇವನ ಸಹಾಯದಿಂದ ಬಿಜ್ಜಳನ ಆಸ್ಥಾನದಲ್ಲಿ ಸಾಮಾನ್ಯ ಕರಣಿಕನಾಗಿ ಸೇವೆಯನ್ನು ಸಲ್ಲಿಸುತ್ತಾನೆ. ವಿದ್ಯೆ ಕಲಿಯುವಂತಹ ಸಂದರ್ಭದಲ್ಲಿ ಮತ–ಮಾನ್ಯಗಳು ಅನುಸರಿಸುತ್ತಿರುವ ಅಧರ್ಮ, ಅನೀತಿಯ ವಿರುದ್ಧ ಸಿಡಿದೆದ್ದು ಕರಣಿಕನಾದರೂ ಸಹ ಸುಮ್ಮನೇ ಕುಳಿತುಕೊಳ್ಳಲಾರದೇ ಅರಮನೆಯ ಘೋರವಾದ ಆಜ್ಞೆಗಳ ವಿರುದ್ಧ ಪ್ರತಿಭಟಿಸುತ್ತಾನೆ. ಈ ಪ್ರತಿಭಟನೆಯೇ ಚಳುವಳಿಯ ಮೂಲ. ಇದು ಬಸವಣ್ಣನಿಗೆ ಬಾಲ್ಯದಿಂದಲೇ ಬಂದ ಬಳುವಳಿ ಎಂದು ಹೇಳಬೇಕು. ಪ್ರತಿಯೊಬ್ಬ ಮನುಷ್ಯನು ಜನ್ಮ ತಾಳುತ್ತಾನೆ. ಆದರೆ ಅಂಧಕಾರ ಸಮಾಜದ ಅಡಿಯಲ್ಲಿ ಬದುಕುವವರು ಬಹುಸಂಖ್ಯಾತರಾದರೆ, ಅಲ್ಪಸಂಖ್ಯಾತರಲ್ಲಿ ಕೆಲವು ಬುದ್ಧಿವಂತವರು ಅನ್ಯಾಯ, ಅಧರ್ಮಗಳ ವಿರುದ್ಧ ಪ್ರತಿಭಟಿಸುತ್ತಾರೆ. ಆ ಪ್ರತಿಭಟನೆಯ ಕೇಂದ್ರಬಿಂದು ಬಸವಣ್ಣ. ನಾವು ಇಲ್ಲಿ ತಿಳಿಯಬೇಕಾದ ಅಗತ್ಯವಾದ ಸಂಗತಿಯೆಂದರೆ ಬಸವಣ್ಣ ಶ್ರೇಷ್ಠ ಕುಲದಲ್ಲಿ ಜನಿಸಿದ್ದರಿಂದ ಆಚಾರ–ವಿಚಾರಗಳನ್ನು ನಂಬಬಹುದಿತ್ತು. ಆದರೆ ಅವುಗಳನ್ನು ಭೇದಿಸಿ ಅದರಿಂದ ಸಾಮಾನ್ಯ ಜನರು ಮುಕ್ತಿ ಕಾಣಬೇಕೆಂಬ ಬಯಕೆಯನ್ನು ವ್ಯಕ್ತಪಡಿಸಿ ಅಂಧಕಾರ ಸಮಾಜಕ್ಕೆ ಭದ್ರಬುನಾದಿಯಾಗಿರುವ ಶಾಸ್ತ್ರಗಳನ್ನು ಹೀಗೆ ಟೀಕಿಸುತ್ತಾನೆ. ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ, ಆಗಮದ ಮೂಗ ಕೊಯ್ಯುವೆ ಎಂದು ನುಡಿವಲ್ಲಿ ಆಘಾತಕಾರಿ ವಿಷಯಗಳನ್ನು ಹುಸಿಗೊಳಿಸುತ್ತಾನೆ. ಶರಣರಲ್ಲಿ ಮಹಾಶರಣನಾದ ಬಸವಣ್ಣ ಜಾತಿ–ಮತ ಎನ್ನದೇ ಚಳುವಳಿಗೆ ಮುಂದಾದಾಗ ಆತನ ತತ್ವದಿಂದ ಪರಿವರ್ತನೆಯಾದ ಶಿವಶರಣರು ಚಳುವಳಿಗೆ ಪುಷ್ಠಿ ಕೊಡುತ್ತಾರೆ. ಇಂತಹ ಆಂದೋಲನದ ಮೂಲಕ ಕೆಳಕುಲದವರಿಗೆ ಲಿಂಗದೀಕ್ಷೆ ನೀಡಿ ಇಷ್ಟಲಿಂಗಕ್ಕೆ ಅವರನ್ನು ಅಣಿಗೊಳಿಸಿ ದೇವಾಲಯ ಸಂಸ್ಕೃತಿಯನ್ನು ಅಲ್ಲಗಳೆದು ಆತ್ಮದಲ್ಲಿಯೇ ದೇವರಿದ್ದಾನೆ ಎಂದು ಪ್ರತಿಪಾದಿಸುತ್ತಾನೆ. ಹೀಗೆ ಚಳುವಳಿಯನ್ನು ಮುನ್ನಡೆಸುವಾಗ ಅರಮನೆಯ ಮಂತ್ರಿಗಳು ಈತನಿಗೆ ಇಲ್ಲ ಸಲ್ಲದ ಅಪರಾಧಗಳನ್ನು ಹೊರಿಸಿ ಅಪರಾಧಿಯನ್ನಾಗಿ ಮಾಡುತ್ತಾರೆ. ಆಗ ಬಸವಣ್ಣನವರು ಅರಮನೆಯಿಂದ ಚಳುವಳಿ ಮಾಡಲು ಸಾಧ್ಯವಿಲ್ಲ ಎಂದು ಅರಿತು ಮಹಾಮನೆಯನ್ನು ಸೃಷ್ಟಿಸಿ ಅದರ ಒಳಗಡೆಯೇ ಅನುಭವ ಮಂಟಪವನ್ನು ಸ್ಥಾಪನೆ ಮಾಡುತ್ತಾರೆ. ಈ ಅನುಭವ ಮಂಟಪಕ್ಕೆ ತಾನೇ ಪೀಠಾಧೀಪತಿಯಾಗಬಹುದಿತ್ತು. ಆದರೆ ಜ್ಞಾನಿಯಾದ ಪ್ರಭುದೇವರಿಗೆ ವಹಿಸಿಕೊಟ್ಟು ಅದರ ಮೂಲಕ ಚಳುವಳಿಗೆ ನಾಂದಿ ಹಾಡುತ್ತಾನೆ. ಬಸವಣ್ಣನ ತತ್ವದಿಂದ ಎಚ್ಚೆತ್ತ ಪ್ರತಿಯೊಬ್ಬರೂ ಶರಣರಾಗಿ ಮಾರ್ಪಾಡುಗೊಂಡು ಚಳುವಳಿಯ ಸದಸ್ಯರಾಗಿ ಅನ್ಯಾಯ, ಅಧರ್ಮಗಳ ವಿರುದ್ಧ ಸಿಡಿದೇಳುತ್ತಾರೆ. ಅಲ್ಲದೇ ಮಹಿಳೆಯರಿಗೂ ಸರಿಸಮಾನವಾದ ಹಕ್ಕುಗಳನ್ನು ನೀಡಿ, ವೇಶ್ಯೆ ಪದ್ಧತಿಗೆ ಇಳಿದ ಸೂಳೆ ಸಂಕವ್ವೆಯಂತಹ ಮನೆಯಲ್ಲಿ ಇಷ್ಟಲಿಂಗ ಧಾರಣವನ್ನು ಮಾಡಿಸುತ್ತಾರೆ. ಅಲ್ಲದೇ ಕೆಳಗಿನ ಜಾತಿಯವರ ಮನೆಯಲ್ಲಿ ಸಹಪಂಕ್ತಿ ಭೋಜನ ಮಾಡಿ ಜಾತಿಯನ್ನು ತೊಲಗಿಸುತ್ತಾರೆ. ಇನ್ನೂ ಮುಖ್ಯವಾದ ಸಂಗತಿಯೆಂದರೆ ಮನುಷ್ಯರನ್ನು ಮನುಷ್ಯರಾಗಿ ಕಾಣದ ವ್ಯವಸ್ಥೆಯಲ್ಲಿ ಬ್ರಾಹ್ಮಣ ಮತ್ತು ಹೊಲೆಯರ ನಡುವೆ ಅಂತರ್‌ಜಾತಿ ವಿವಾಹಕ್ಕೆ ಅಣಿಗೊಳಿಸುತ್ತಾರೆ. ಹೀಗೆ ಬಸವಣ್ಣನವರು ಸಮಯಕ್ಕನುಗುಣವಾಗಿ ಸಮಾನತೆಯನ್ನು ತರಬೇಕೆಂಬ ನಿಲುವನ್ನು ತಾಳುತ್ತಾರೆ.

"ವೀರಶೈವ ಚಳುವಳಿಯ ಜನಪ್ರಿಯತೆಯ ಬೆಳವಣಿಗೆಯನ್ನು ಪ್ರತಿಯೊಬ್ಬರೂ ಮೆಚ್ಚಿಕೊಂಡಿದ್ದರು ಎಂದು ಹೇಳಲು ಸಾಧ್ಯವಿಲ್ಲ. ಈ ಚಳುವಳಿಗೆ ಅನುಯಾಯಿಗಳ ಸಂಖ್ಯೆ ಹೆಚ್ಚಿದಂತೆ ಅದಕ್ಕೆ ವಿರೋಧವೂ ತೀವ್ರಗೊಂಡಿತು. ಶಕ್ತಿಶಾಲಿ ಸಮುದಾಯವೊಂದು ಧಾರ್ಮಿಕ ಆಚರಣೆಗಳನ್ನು ಧಿಕ್ಕರಿಸಿದ್ದರಿಂದ ಬ್ರಾಹ್ಮಣ ವರ್ಗವು ಮೂಲೆಗೆ ಸೇರುವಂತಾಯಿತು. ಪ್ರಾರಂಭದಲ್ಲಿ ಬಸವಣ್ಣನನ್ನು ಮೆಚ್ಚಿಕೊಂಡಿದ್ದ ಬಿಜ್ಜಳನು ಕಾಲಕ್ರಮೇಣ ಬೆಳೆಯುತ್ತಿದ್ದ ಬಸವಣ್ಣನ ಜನಪ್ರಿಯತೆಯಿಂದ ತಲ್ಲಣಗೊಂಡನು. ಅವನ ಸಮಾನತೆ ವಿಚಾರಗಳನ್ನು ಅಲ್ಲಗಳೆಯತೊಡಗಿದನು. ಮೂಲತಃ ಶೈವನಾಗಿದ್ದ ಬಿಜ್ಜಳನು ಬಸವಣ್ಣನ ಜಾತಿ ನಿಯಮವನ್ನು ಮೀರಬೇಕೆಂಬ ವಿಚಾರವನ್ನು ಒಪ್ಪಿಕೊಳ್ಳಲಿಲ್ಲ. ಇದು ಕೊನೆಗೆ ೧೧೬೭ರಲ್ಲಿ ಕ್ರಾಂತಿಗೆ ಕಾರಣವಾಯಿತು."[೨]

ಹೀಗಾಗಿ ಬಸವಣ್ಣನ ತತ್ವಗಳನ್ನು ಮೆಚ್ಚದ ವಿರೋಧ ಇಷ್ಟಲಿಂಗಧಾರಣೆಯ ಮೂಲಕ ಸಮಾನತೆ, ವರ್ಣಸಂಕರ ವಿವಾಹದ ಮೂಲಕ ಸಮಾಪದ ಏಳಿಗೆ ಎನ್ನುವ ಆಶಯಗಳು ಪಠ್ಯಗಳ ಮೂಲಕ ಲೇಖಕರು ವಾಸ್ತವಿಕ ಸಮಸ್ಯೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಕಾಯಕತತ್ವವನ್ನು ಬಸವಣ್ಣ ಕಂಡುಕೊಂಡುದರ ಪರಿಣಾಮ ತಾರ್ಕಿಕ ನಿಲುವನ್ನು ಸೃಜನಶೀಲ ಬರಹಗಾರರು ಚರ್ಚಿಸುತ್ತಾ ಹೋಗಿದ್ದಾರೆ. ಬಸವಣ್ಣ ಮತ್ತು ಬಿಜ್ಜಳ ಪಾತ್ರಗಳನ್ನು ನೋಡುವಾಗ ಪ್ರಜಾಪ್ರಭುತ್ವ ಸಂವಿಧಾನಿಕ ವ್ಯವಸ್ಥೆಯಲ್ಲಿ ನಮ್ಮ ಸ್ಥಿತಿಗತಿಗಳು ಹಾಗೂ ಅವಕಾಶಗಳ ಕಸಿದುಕೊಳ್ಳುವಿಕೆ ಈ ಎಲ್ಲಾ ಅಂಶಗಳು ಗಮನಾರ್ಹವಾಗುತ್ತವೆ. ಅಕ್ಕಮಹಾದೇವಿ ಇಡೀ ಸ್ತ್ರೀ ಸಮುದಾಯದ ಪ್ರಗತಿಪರ ಧ್ವನಿಯಾಗಿರುವುದರಿಂದ ಮುಖ್ಯವಾಗಿರಿಸಿಕೊಂಡು ಚರ್ಚಿಸಲಾಗಿದೆ. ಬಸವಣ್ಣ ಮತ್ತು ಚಳುವಳಿ ಅಂಶವನ್ನು ಕುರಿತಂತೆ ಬಹುತೇಕ ಪಠ್ಯಗಳು ಇದನ್ನೇ ಮುಖ್ಯವಾಗಿಟ್ಟು ಕೊಂಡು ರಚಿತವಾದಂತಿವೆ. ಈ ಮೂಲಕ ಪ್ರಗತಿಪರ ಆಶಯಗಳ ಹೊತ್ತ ನಾಟಕಕಾರರು ತಮ್ಮ ಕಲ್ಪನೆಯ ಪಾತ್ರಗಳನ್ನು ಸೃಷ್ಟಿಸಿ ಸೈದ್ಧಾಂತಿಕ ಪ್ರಶ್ನೆಗಳನ್ನು ಎತ್ತುವುದರ ಮೂಲಕ ವಿಶಿಷ್ಟರಾಗಿದ್ದಾರೆ.

**ಕೊನೆಟಿಪ್ಪಣಿಗಳು**


೧. ತರಳಬಾಳು ಜಗದ್ಗುರು ಶಿವಕುಮಾರ ಶಿವಾಚಾರ್ಯ, ೧೯೮೩, **ಮರಣವೇ ಮಹಾನವಮಿ,** ಪುಟ ೨೪,

೨. ವ್ಯಾಸ ದೇಶಪಾಂಡೆ, ೨೦೦೬, **ಇವ ನಮ್ಮವ,** ಪುಟ ೩೨.

೩. ಶ್ರೀಕಂಠಶಾಸ್ತ್ರಿ ನಲವಡಿ ಒಡೆಯರು, ೧೯೮೩, **ಜಗಜ್ಯೋತಿ ಬಸವೇಶ್ವರ,** ಪುಟ ೯೩.

೪. **ಅದೇ** - ಪುಟ ೪೧-೪೨.

೫. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೩೫-೩೬.

೬. **ಅದೇ** - ಪುಟ ೩೯.

೭. ಪಿ. ಲಂಕೇಶ, ೧೯೯೭, **ಸಂಕ್ರಾಂತಿ,** ಪುಟ ೪೧.

೮. ಗಿರೀಶ ಕಾರ್ನಾಡ, ೨೦೦೫, **ತಲೆದಂಡ,** ಪುಟ ೫೫-೫೬

೯. ಏಣಗಿ ಬಾಳಪ್ಪ(ಸಂ), ೨೦೦೩, **ಜಗಜ್ಯೋತಿ ಬಸವೇಶ್ವರ** ಪುಟ ೪೯.

೧೦. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೯೭-೯೮.

೧೧. **ಅದೇ** - ಪುಟ ೯೯.

೧೨. ಜಾನ್ ಪೀಟರ್ ಶೌಟನ್(ಮೂಲ), ಟಿ.ಆರ್. ಚಂದ್ರಶೇಖರ (ಕನ್ನಡಕ್ಕೆ), **ಅನುಭಾವಿಗಳ ಕ್ರಾಂತಿ,** ೨೦೦೦, ಪುಟ ೬.

❑❑❑

ಅಧ್ಯಾಯ : ಐದು

# ಬಸವಣ್ಣನನ್ನು ಕುರಿತ ಕಾದಂಬರಿಗಳು

---

೫.೧. ಧಾರ್ಮಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೫.೨. ಸಾಮಾಜಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೫.೩. ಆರ್ಥಿಕತೆಗೆ ಸಂಬಂಧಿಸಿ ಗ್ರಹಿಕೆಗಳು

೫.೪. ರಾಜಕೀಯಕ್ಕೆ ಸಂಬಂಧಿಸಿ ಗ್ರಹಿಕೆಗಳು

## ಅಧ್ಯಾಯ : ಐದು

# ಬಸವಣ್ಣನನ್ನು ಕುರಿತ ಕಾದಂಬರಿಗಳು

ಆಧುನಿಕ ಕನ್ನಡ ಸಾಹಿತ್ಯವು ಹಲವಾರು ರೂಪಗಳನ್ನು ತನ್ನದಾಗಿಸಿಕೊಂಡಿದೆ. ಅದು ತನ್ನದೇ ಆದ ವೈಶಿಷ್ಟ್ಯತೆಯನ್ನು ಮರೆದಿದೆ. ಕಾವ್ಯ, ಕಥೆ, ನಾಟಕ, ಮುಂತಾದ ಸೃಜನಶೀಲ ಪ್ರಕಾರಗಳಲ್ಲಿ ಒಂದಾಗಿರುವ ಕಾದಂಬರಿಯು ದೀರ್ಘಕಾಲದ ಅನುಭವಗಳನ್ನು ವ್ಯಕ್ತಪಡಿಸುತ್ತವೆ. ಏಕೆಂದರೆ ಇದು ಸರಳ ಹಾಗೂ ಸ್ಪಷ್ಟತೆಯಿಂದ ಕೂಡಿದ್ದು ಉಳಿದ ಪ್ರಕಾರಗಳಿಗಿಂತ ಭಿನ್ನವಾಗಿ ರೂಪತಾಳಿದೆ. ಬಸವಣ್ಣ ೧೨ನೇ ಶತಮಾನದಲ್ಲಿ ವಿಶೇಷವಾಗಿ ಗುರುತಿಸಿಕೊಂಡ ವ್ಯಕ್ತಿ ಅಂದಿನ ಸಮಾಜ ಮತ್ತು ಧಾರ್ಮಿಕವಾಗಿ ಎಂದೆಂದು ಕಾಣದ ಚಳುವಳಿ ನಡೆದು ಹೋಯಿತು. ಈ ಚಳುವಳಿ ಕ್ರಾಂತಿಯಾಗಿ, ಶರಣರಿಂದ ಜಗತ್ತಿನಾದ್ಯಂತ ಪಸರಿಸಿತು. ಚಳುವಳಿ, ಕ್ರಾಂತಿ ಹಾಗೂ ಆಂದೋಲನ ಎಂಬ ಹೆಸರನ್ನು ಪಡೆದ ಕಲ್ಯಾಣ ಕ್ರಾಂತಿಯು ಸಮಾಜ ಪರಿವರ್ತನೆಗಾಗಿ ಶ್ರಮಿಸಿದ್ದನ್ನು ಕಾಣುತ್ತೇವೆ.

ಶರಣರು ದೇವರು ಮತ್ತು ಭಕ್ತರ ನಡುವೆ ಇರುವಂತ ಪುರೋಹಿತಶಾಹಿ ವ್ಯವಸ್ಥೆಯನ್ನು ವಿರೋಧಿಸಿ ಶೋಷಣೆಯ ಕೇಂದ್ರಗಳಾದ ದೇವಾಲಯಗಳನ್ನು ನಿರಾಕರಿಸಿ, 'ದೇಹವೇ ದೇಗುಲ ಆತ್ಮವೇ ಲಿಂಗ' ಎಂದು ಪ್ರತಿಪಾದಿಸಿದರು. ಅಷ್ಟೇ ಅಲ್ಲದೆ ಇಷ್ಟಲಿಂಗವನ್ನು ಪ್ರಧಾನವಾಗಿಟ್ಟುಕೊಂಡು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂಬ ತತ್ವವನ್ನು ಜಗತ್ತಿನಾದ್ಯಂತ ಸಾರಿದರು. ಜನಸಾಮಾನ್ಯರ ಮನದಾಳದಲ್ಲಿ ಅಡಗಿದ್ದ ಅಜ್ಞಾನವನ್ನು ಹೊಡೆದೋಡಿಸಿ ಜ್ಞಾನವನ್ನು ತುಂಬುವಲ್ಲಿ ಶ್ರಮಿಸಿದರು. ಅಲ್ಲದೇ ಜಾತಿಸಹಿತ ಸಮಾಜವನ್ನು ಜಾತಿರಹಿತ ಸಮಾಜವನ್ನಾಗಿ ಮಾಡಲು ಪಣತೊಟ್ಟರು. ಇಂತಹ ಶರಣರನ್ನು ಕುರಿತ ಸಾಹಿತ್ಯವನ್ನು ಅಲೋಕನ ಮಾಡಿದಾಗ ಸಂಸ್ಕೃತ ಸಾಹಿತ್ಯವನ್ನು ಧಿಕ್ಕರಿಸಿ ಸರಳ ಸುಂದರವಾದ ಭಾಷೆಯಲ್ಲಿಯೇ ವಚನಗಳನ್ನು ರಚಿಸಿದರು.

ಹೊಸದನ್ನು ಉತ್ತಿ ಭಿತ್ತಿ ಬೆಳೆದ ಆಂದೋಲನ ಇತಿಹಾಸದ ಪುಟಗಳಲ್ಲಿ ಬರೆದಿಡುವಂತ ಕಾಲವದು. ಈಗಿನ ಬೀದರ ಜಿಲ್ಲೆಯ ಬಸವಕಲ್ಯಾಣ ಶರಣರ ಚಳುವಳಿಯ ಕೇಂದ್ರವಾಗಿತ್ತು. ಈ ಆಂದೋಲನದ ಚುಕ್ಕಾಣಿ ಹಿಡಿದವನು ಎಂದರೆ ಬಸವಣ್ಣ. ಅಂದಿನ ಕಾಲದಲ್ಲಿ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಏನೆಲ್ಲ ಬದಲಾವಣೆಗಳನ್ನು

ತರಬೇಕು ಎಂದು ಕನಸು ಕಂಡವರಲ್ಲಿ ಬಸವಣ್ಣ ಒಬ್ಬ. ಈತನು ಜಾತಿ, ಮತಗಳನ್ನು ಧಿಕ್ಕರಿಸಿ, ೬೩ ಜಾತಿಯ ಸಕಲ ಪುರಾತನರನ್ನು, ಶರಣರನ್ನು ಒಂದುಗೂಡಿಸಿ ಭಕ್ತಿಭಾವದಿಂದ ಸಮಾಜವನ್ನು ತಿದ್ದುವ ಕೆಲಸಕ್ಕೆ ಅಣಿಯಾದವನು. ಅವತ್ತಿನ ಕಾಲದಲ್ಲಿ ಅನುಭವ ಮಂಟಪವನ್ನು ಸ್ಥಾಪನೆ ಮಾಡುವುದರ ಮೂಲಕ ಶರಣರನ್ನು ಒಂದುಗೂಡಿಸಿ ಜಗತ್ತಿನ ಅನುಭವ ಒಂದಾಗಬೇಕು ಎಂಬ ನಿಲುವನ್ನು ತೊಟ್ಟ ಬಸವಣ್ಣ ಅನೇಕ ರೀತಿಯ ಚರಿತ್ರೆಗೆ ಕಾರಣನಾಗಿದ್ದಾನೆ.

ಬಸವಣ್ಣನಿಗೆ ಭಕ್ತಿಭಂಡಾರಿ, ಅರ್ಥಮಂತ್ರಿ, ಕ್ರಾಂತಿಕಾರಿ, ಐತಿಹಾಸಿಕ ಪುರುಷ, ಕಾಯಕನಿಷ್ಠ, ಸಮಾಜ ಸುಧಾರಕ ಮತ್ತು ಯುಗಪ್ರವರ್ತಕ ಎಂಬ ಹೆಸರುಗಳನ್ನು ಪಡೆದ ಬಸವಣ್ಣನ ಬಗ್ಗೆ ಚರಿತ್ರೆಗಳು ಅಲ್ಲದೆ ೧೧ ಶಾಸನಗಳು ಕೂಡ ಈತನ ವ್ಯಕ್ತಿತ್ವವನ್ನು ತಿಳಿಸುತ್ತವೆಂದು ಡಾ.ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ. ಬಸವಣ್ಣ ಪೌರಾಣಿಕ ವ್ಯಕ್ತಿಯಲ್ಲ ಎಂಬ ವಾದ ಇವತ್ತಿನ ಕಾಲದಲ್ಲೂ ಚರ್ಚೆಯಾಗಿ ಉಳಿದಿದೆ.

ಬಸವಣ್ಣ ಕನ್ನಡನಾಡು ಕಂಡ ಒಂದು ಅಪೂರ್ವ ಚೇತನ, ಅಲ್ಲದೆ ಉಳಿದ ಶರಣರು ಪ್ರತಿಪಾದಿಸಿರುವ ದಾರ್ಶನಿಕ. ಇಂತಹ ವ್ಯಕ್ತಿಯ ಕುರಿತು ಕನ್ನಡ ಕಾವ್ಯಗಳು ತಮ್ಮ ವಿಚಾರಗಳನ್ನು ವ್ಯಕ್ತಪಡಿಸುತ್ತವೆ. ಹರಿಹರ ಬಸವಣ್ಣನ ಚರಿತ್ರೆಯನ್ನು ತಿಳಿಸುವುದರ ಜೊತೆಗೆ ಆತನ ಹೆಸರಲ್ಲೇ ಒಂದು ರಗಳೆಯನ್ನು ರಚನೆ ಮಾಡಿದ್ದಾನೆ. ಹರಿಹರನ ಬಸವಣ್ಣ ಮೂಲತಃ ಭೂಲೋಕದವನಲ್ಲ, ಕೈಲಾಸದಿಂದಲೇ ಬಂದವರು ಎಂಬ ವಾದವನ್ನು ಮಂಡಿಸುತ್ತಾನೆ. ಇದೇ ಮಾತನ್ನು 'ಭೀಮಕವಿಯ ಬಸವಪುರಾಣದಲ್ಲಿ' ಕಾಣಬಹುದು. ಹೀಗೆ ಬಸವಣ್ಣನು ಶಿವನ ಪ್ರಭುವಾಗಿ, ಭಕ್ತಗಣ ಶರಣರಾಗಿ, ಬಿಜ್ಜಳ ಕರಣದೇವರಾಗಿ, ಭೂಲೋಕದಲ್ಲಿ ಅವತರಿಸುತ್ತಾರೆ ಎಂಬ ವಾದವಿವಾದಗಳು ರಚನೆಯಾಗಿವೆ.

ಬಸವಣ್ಣನವರ ಜೀವನ ಸಂಕೀರ್ಣವಾದದ್ದು, ೧೨ನೇ ಶತಮಾನವೆಂದರೆ ಬಸವಯುಗ, ಎನ್ನುವಷ್ಟರಮಟ್ಟಿಗೆ ಅವರ ವ್ಯಕ್ತಿತ್ವ ಕಾಣಿಸಿಕೊಂಡಿದೆ. ಬಸವಣ್ಣನವರ ಕಾರ್ಯಕ್ಷೇತ್ರ ಆ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ವಿಶಾಲವಾಗಿ ಹರಡಿಕೊಂಡಿದೆ. ಇಂತಹ ಬಸವಣ್ಣನವರ ಕುರಿತು ಕಾದಂಬರಿಗಳನ್ನು ರಚನೆ ಮಾಡಿ ತಮ್ಮ ವಿಚಾರಗಳನ್ನು ಸ್ಪಷ್ಟಪಡಿಸಿ ಆ ಕಾಲದ ವಾಸ್ತವಿಕ ಸ್ಥಿತಿಯನ್ನು ಅರ್ಥೈಸುವ ರೀತಿಯಲ್ಲಿ ಅನೇಕ ಕಾದಂಬರಿಕಾರರು ಕಾದಂಬರಿಗಳನ್ನು ರಚಿಸಿದ್ದಾರೆ.

ಬಿ. ಪುಟ್ಟಸ್ವಾಮಯ್ಯನವರ 'ಉದಯರವಿ'(೧೯೫೧), 'ರಾಜ್ಯಪಾಲ'(೧೯೬೦), 'ಕಲ್ಯಾಣೇಶ್ವರ' (೧೯೬೦), 'ನಾಗಬಂಧ'(೧೯೬೨), 'ಮುಗಿಯದ ಕನಸು'(೧೯೬೨), 'ಕ್ರಾಂತಿಕಲ್ಯಾಣ'(೧೯೬೨), ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ'(೧೯೭೨), ಜಿ.ಎಚ್. ಹನ್ನೆರಡುಮಠರವರ 'ಕೂಗಿತ್ತು ಕೂಡಲಸಂಗಮ'(೧೯೮೨), 'ಯೋಗಿ ಕಂಡ ಯೌವನ'(೧೯೮೨), 'ಗುರುವೆಂದರ್ಯಾರೊ ಹರವೆಂದರ್ಯಾರೊ'(೧೯೮೨), 'ಯೋಗಿಗೆ ಯೋಗಿಣಿ ಕಾಡಿತ್ತು'(೧೯೮೨),

‘ಭೃಂಗ ಬಂದವೊ ಲಿಂಗ ತುಂಬ್ಯಾವೊ’(೧೯೮೨), ‘ಕಲ್ಯಾಣ ಕೂಗೈತೊ’(೧೯೮೮), ‘ತೇರು ಸಾಗಿತಣ್ಣಾ ಬಸವನ ಪಾಜ ಬಂದಿತಣ್ಣ’(೧೯೮೮), ಉಳವಿಯಲ್ಲಿ ಓಂಕಾರ(೧೯೮೫). ಈ ರೀತಿಯಾಗಿ ಒಟ್ಟು ಹದಿನೈದು ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಧಾರ್ಮಿಕ ಹಿತಾಸಕ್ತಿ, ಸಾಮಾಜಿಕ ಹಿತಾಸಕ್ತಿ, ಆರ್ಥಿಕ ಹಾಗೂ ರಾಜಕೀಯ ಹಿತಾಸಕ್ತಿ ಎಂಬುದಾಗಿ ವರ್ಗೀಕರಿಸಿ ಅಧ್ಯಯನದ ದೃಷ್ಟಿಯಿಂದ ಅಭಿವ್ಯಕ್ತಪಡಿಸಲಾಗಿದೆ.

**೫.೧. ಧಾರ್ಮಿಕತೆಗೆ ಸಂಬಂಧಿಸಿ ಗ್ರಹಿಕೆಗಳು**

ಧರ್ಮವೆಂಬುದು ಜನರ ಜೀವನ ವಿಧಾನ. ಇದು ತನ್ನ ತತ್ವ ಮತ್ತು ಸಿದ್ಧಾಂತಗಳ ಮೂಲಕ ಜನರಲ್ಲಿ ಆದರ್ಶ ಮನೋಭಾವನೆಯನ್ನು ತುಂಬುವಲ್ಲಿ ಸಹಕಾರಿಯಾದದು. ಧರ್ಮ ಮತ್ತು ಸಮಾಜ ಒಂದು ನಾಣ್ಯದ ಎರಡು ಮುಖಗಳಂತೆ ಕಾಣಿಸಿದವು. ಅಂತರಂಗದಲ್ಲಿ ಇವೆರಡರ ನಡುವೆ ಸ್ವಲ್ಪ ವ್ಯತ್ಯಾಸವೇ ಕಂಡುಬರುತ್ತದೆ. ಜನರಲ್ಲಿರುವ ಅಜ್ಞಾನ ಮತ್ತು ಅಂಧಕಾರವನ್ನು ಹೊಡೆದೋಡಿಸಿ ಭೇದಭಾವಗಳನ್ನು ದೂರ ತಳ್ಳಿ ಸಮ-ಸಮಾಜ ಕಾಣಬೇಕು ಎಂಬ ಆಸೆಯನ್ನು ಇಟ್ಟುಕೊಂಡಿದ್ದೇ ಅನೇಕ ಧರ್ಮಗಳ ಹುಟ್ಟಿಗೆ ಕಾರಣವಾಯಿತು. ಪ್ರತಿಯೊಂದು ಧರ್ಮವು ತನ್ನ ಆದರ್ಶಗಳನ್ನು ಮತ್ತು ತತ್ವಗಳಲ್ಲಿ ಒಂದೇ ಸಿದ್ಧಾಂತವನ್ನು ಪ್ರತಿಪಾದಿಸಿ, ಅದರ ಅಡಿಯಲ್ಲಿ ಸಮಾಜ ಬದುಕಬೇಕು ಎನ್ನುವ ನಿಲುವನ್ನು ತಾಳಿದವು. ಹಿಂದು, ಬೌದ್ಧ, ಜೈನ, ಶೈವ, ವೈಷ್ಣವ ಹಾಗೂ ವೀರಶೈವ ಧರ್ಮಗಳು ಒಂದರ ನಂತರ ಮತ್ತೊಂದು ಹುಟ್ಟಿಕೊಂಡು ತಮ್ಮ ಕಾಲದ ವಾಸ್ತವಿಕ ಸ್ಥಿತಿಯನ್ನು ಅರಿವು ಮೂಡಿಸಲು ಪಣತೊಟ್ಟವು. ಹಾಗೆ ನೋಡಿದರೆ ಅತ್ಯಂತ ಪುರಾತನವಾದ, ಹಿಂದೂ ಧರ್ಮದ ಕಠಿಣಬದ್ಧ ನಿಯಮಗಳ ವಿರುದ್ಧ ಅನೇಕ ಧರ್ಮಗಳು ಹುಟ್ಟಿಕೊಳ್ಳುವುದರ ಮೂಲಕ ಪ್ರತಿಯೊಬ್ಬ ಮನುಷ್ಯನಿಗೆ ಆತ್ಮಗೌರವ ಹಾಗೂ ಸ್ವಾಭಿಮಾನ ತುಂಬುವಲ್ಲಿ ಶ್ರಮಿಸಿದವು.

ಶಾಂತಿ, ಕರುಣೆ, ಪ್ರಜ್ಞೆಯೆಂಬ ತತ್ವಗಳಿಂದ ಬುದ್ಧನಿಂದ ಬೌದ್ಧ ಧರ್ಮ ಉದಯವಾಯಿತು. ಅಹಿಂಸೆ ಎಂಬುದನ್ನು ಕೇಂದ್ರವಾಗಿಟ್ಟುಕೊಂಡು ಮಹಾವೀರರಿಂದ ಜೈನಧರ್ಮ ಉದಯವಾಯಿತು. ಹೀಗೆ ಶೈವ, ವೈಷ್ಣವ, ಧರ್ಮಗಳು ತಮ್ಮ ನಿಯಮಗಳನ್ನು ಜಗತ್ತಿಗೆ ಸಾರಿದವು. ೧೨ನೇ ಶತಮಾನದ ಹೊತ್ತಿಗೆ ಧರ್ಮದಲ್ಲಿ ವಿಶೇಷವಾಗಿ ಬದಲಾವಣೆ ಕಂಡುಬರುವಲ್ಲಿ ಯಶಸ್ವಿಯಾಯಿತು ಎಂಬುದಕ್ಕೆ ಆ ಶತಮಾನದಲ್ಲಿ ಪುನರ್‌ನಿರ್ಮಾಣ ಕಂಡ ವೀರಶೈವ ಧರ್ಮ ಶರಣರಿಂದ ದಶದಿಕ್ಕಿಗೆ ಹಬ್ಬಿತು. ಜಾತಿ, ಮತಗಳನ್ನು ಹೊಡೆದೋಡಿಸಿದ ಶಿವಶರಣರು ಬಸವಣ್ಣನ ಮೂಲಕ ವೀರಶೈವ ಧರ್ಮದ ತತ್ವಗಳನ್ನು ಸಾರುವಲ್ಲಿ ಶ್ರಮಿಸಿದರು. ಈ ಧರ್ಮ ಎಂದೆಂದೂ ಕಾಣದ ವಿಚಾರಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಅದರ ಮೂಲಕ ಜಗತ್ತಿಗೆ ದರ್ಶನ ಮೂಡಿಸುವ ನಿಟ್ಟಿನಲ್ಲಿ ಪ್ರಜ್ವಲಿಸಿತು. ಬಸವಣ್ಣನು ಈ ಧರ್ಮದ ಕೇಂದ್ರಬಿಂದು. ಆದರೆ ಬಸವಣ್ಣನ ಹುಟ್ಟು ಈ ಧರ್ಮದ್ದಲ್ಲ, ಅದು ಏನೇ ಇದ್ದರೂ ಬಸವಣ್ಣನ ಜನನ, ಕಾಲ ಚರಿತ್ರೆ ಬಗೆಗೆ ಭಿನ್ನಾಭಿಪ್ರಾಯಗಳು ಕಂಡುಬರುತ್ತವೆ. ನನ್ನ ಅಧ್ಯಯನದ ದೃಷ್ಟಿಯಿಂದ ಆಧುನಿಕ ಕಾದಂಬರಿಗಳಲ್ಲಿ

ವ್ಯಕ್ತಗೊಂಡಿರುವ ಬಸವಣ್ಣನವರ ಧಾರ್ಮಿಕ ಹಿತಾಸಕ್ತಿಯನ್ನು ಕುರಿತು ವಿವೇಚಿಸುವುದು ಬಹಳ ಮುಖ್ಯವೆನಿಸುತ್ತದೆ. ಸುಮಾರು ಕಾದಂಬರಿಗಳು ಈ ಹಿನ್ನೆಲೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಜನರ ಜೀವನಕ್ಕಾಗಿ ಧರ್ಮ, ಧರ್ಮದ ಮೂಲಕವಾಗಿ ಜನರ ಜೀವನ ವಿಧಾನವನ್ನು ಬದಲಾಯಿಸಬೇಕು ಎಂಬ ನಿಲುವನ್ನು ತಾಳಿದ ೧೨ನೇ ಶತಮಾನದ ಸಮಾಜೋಧಾರ್ಮಿಕ ಚಳುವಳಿ ಅಥವಾ ಆಂದೋಲನ ಈ ವೀರಶೈವ ಧರ್ಮವನ್ನು ಕಟ್ಟಿ ಬೆಳೆಸುವಲ್ಲಿ ಅನೇಕ ಜಾತಿಯ ಶರಣರ ಶ್ರಮವಿದೆ ಎಂಬುವುದಕ್ಕೆ ಹಲವಾರು ಪಠ್ಯಗಳೇ ಸಾಕ್ಷಿಯಾಗಿವೆ. ಭಕ್ತಿಯ ಮೂಲಕ ಶಿವಶರಣನಾಗಿ ಲಿಂಗವನ್ನು ಕಟ್ಟುವುದರ ಮೂಲಕ ವೀರಶೈವನಾಗಿ ಧರ್ಮವನ್ನು ಬೆಳಸುವಲ್ಲಿ ಶರಣರು ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ.

ಬಸವಣ್ಣನ ತಂದೆ ತಾಯಿಗಳು ಕೆಲವೊಂದು ಆಧಾರಗಳ ಪ್ರಕಾರ ಹಿಂದೂ ಧರ್ಮಕ್ಕೆ ಇನ್ನೂ ಕೆಲವು ಆಧಾರಗಳ ಪ್ರಕಾರ ಬೇರೆ ಬೇರೆ ಧರ್ಮಕ್ಕೆ ಸೇರಿದ್ದರು ಎಂದು ತಿಳಿದುಬಂದಿದೆ. ಚರಿತ್ರೆಯ ಪ್ರಕಾರ ಬಸವಣ್ಣ ಬಾಲ್ಯದಲ್ಲಿಯೇ ಅಂದರೆ ಎಂಟು ವರ್ಷದವನು ಆಗಿರುವಂತೆ ವರ್ಣಸಂಕರ ವ್ಯವಸ್ಥೆಯನ್ನು ಧಿಕ್ಕರಿಸಿ ಅಂದರೆ ಜನಿವಾರವನ್ನು ಕಿತ್ತುಹಾಕಿ ಸಮ-ಸಮಾಜವನ್ನು ನಿರ್ಮಾಣಮಾಡಬೇಕೆಂಬ ಕನಸ್ಸನ್ನು ಕಂಡ ಬಸವಣ್ಣನವರು ವೀರಶೈವ ಧರ್ಮವನ್ನು ಪುನರ್‌ಸ್ಥಾಪಿಸಿ ಅದರ ಮೂಲಕ ಆದರ್ಶ ಸಮಾಜ ಕಾಣಬೇಕು ಎಂಬ ನಿಲುವನ್ನು ತಾಳಿರುವುದು ಗಮನಾರ್ಹವಾಗಿದೆ.

ಸಾಹಿತ್ಯ ಜೀವನದ ನಾನಾ ಅನುಭವಗಳನ್ನು ಪ್ರತಿನಿಧಿಸುವ ಒಂದು ಸಂಕೇತವಾಗಿದೆ. ಆದ್ದರಿಂದ ಪರಿಸರದಲ್ಲಿ ಉಂಟಾಗುವ ಬದಲಾವಣೆಗಳು ಮಾನವನ ಜೀವನಕ್ಕೆ ಬೀರುವ ಪ್ರಭಾವ ಬರಹದ ಮೂಲಕ ವ್ಯಕ್ತವಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ನಾವು ನೋಡಿಕೊಂಡು ಬಂದಾಗ ಸಮಾಜದ ಸನ್ನಿವೇಶದಲ್ಲಿ ಸಾಹಿತ್ಯದ ವಸ್ತು ಬದಲಾಗುತ್ತಾ ಹೊಸ ರೂಪ ಪಡೆಯುತ್ತಾ ಬಂದಿರುವುದು ಕಂಡು ಬರುತ್ತದೆ. ಹೀಗಾಗಿ ಆರಂಭದ ಸಾಹಿತ್ಯದಲ್ಲಿ ಗಾಢವಾದಂತಹ ಮೌಲ್ಯಗಳ ಪರಂಪರೆಯನ್ನು ಕಾಣುತ್ತೇವೆ.

ಸಾಹಿತ್ಯ ಸಮೃದ್ಧವಾಗಿ ಬೆಳೆದು ನಿಲ್ಲಬೇಕಾದರೆ ಪೋಷಣೆ ರಕ್ಷಣೆ ಅತ್ಯಗತ್ಯ. ಏಕೆಂದರೆ ಹಳೆಗನ್ನಡ ಸಾಹಿತ್ಯ ಜೈನ ಧರ್ಮ ಮತ್ತು ರಾಜಾಶ್ರಯ ಎರಡರ ನೆರಳಿನಲ್ಲಿ ಹೆಮ್ಮರವಾಗಿ ಬೆಳೆದರೂ ಜನಸಾಮಾನ್ಯರಿಂದ ದೂರ ಉಳಿಯಿತು. ಏಕೆಂದರೆ ಅದು ಪಂಡಿತ ಸಮ್ಮುಖ ವಾಗಿರುವುದರಿಂದ ಧರ್ಮದ ಋಣ, ರಾಜನ ಋಣವನ್ನು ತೀರಿಸಲು ಲೌಕಿಕ ಮತ್ತು ಆಗಮಿಕ ಎಂಬ ಸಾಹಿತ್ಯ ಮಾರ್ಗ ಪಂಥವನ್ನು ನಿರ್ಮಾಣ ಮಾಡಿಕೊಂಡು ಬೆಳೆದುಬಂತು.

ಆದರೆ ೧೨ನೇ ಶತಮಾನದಲ್ಲಿ ಸಮಾಜಮುಖಿಯಾದಂತಹ ಚಿಂತನೆಗಳು, ವಿಚಾರಗಳು ಅಭಿವ್ಯಕ್ತಿರೂಪ ಪಡೆಯಲು ಪ್ರಾರಂಭಿಸಿದವು. ಅದಕ್ಕಾಗಿ ಅಂದಿನ ಕಾಲಘಟ್ಟದ ಸಾಹಿತ್ಯ ರೂಪ ಬದಲಾವಣೆ ಆಯಿತು. ಜನಸಾಮಾನ್ಯರಿಗೆ ಅರ್ಥವಾಗುವ ಜನಸಾಮಾನ್ಯರ ಜೀವನವನ್ನೇ ಸಾಹಿತ್ಯ ವಸ್ತುವಾಗಿ ನಿರ್ಮಾಣಗೊಂಡ ಕಾಲಘಟ್ಟವೇ ವಚನ ಸಾಹಿತ್ಯ. ಇಲ್ಲಿಯೂ ಸಹ

ಧರ್ಮ ಸಾಹಿತ್ಯವನ್ನು ಬಿಡಲಿಲ್ಲ. ಏಕೆಂದರೆ ಜೈನ ಧರ್ಮ ರಾಜಾಶ್ರಯ ತಪ್ಪಿ ಕ್ಷೀಣಿಸುತ್ತಿರುವ ಸಂದರ್ಭದಲ್ಲಿ ವೀರಶೈವ ಧರ್ಮ ಪ್ರಬಲವಾಗತೊಡಗಿತು.

ವೀರಶೈವ ಧರ್ಮವನ್ನು ಸ್ಥಾಪಿಸುವುದರೊಂದಿಗೆ ಸಾಹಿತ್ಯದ ಕಾಲಘಟ್ಟ ಹೊಸ ರೂಪ ಪಡೆಯಿತು ಅದುವೇ ವಚನ ಸಾಹಿತ್ಯ. ಅದಕ್ಕೆ ಪ್ರೇರಣೆ ಶರಣರದ್ದು ಜನಸಾಮಾನ್ಯರು ಸೇರಿ ಅನುಭವ ಮಂಟಪ ನಿರ್ಮಾಣ ಮಾಡುವುದರೊಂದಿಗೆ ಜನಸಾಮಾನ್ಯರ ವಿಚಾರಗಳಿಗೆ ಮನ್ನಣೆ ಕೊಟ್ಟು ಅವರ ಬದುಕಿನ ಜೀವನದ ವಿಧಿ-ವಿಧಾನಗಳನ್ನು ವಿಮರ್ಶಾತ್ಮಕವಾಗಿ ವಿವೇಚಿಸಿ ತಾತ್ವಿಕ ಮೌಲ್ಯದ ಮೇಲೆ ಬದುಕನ್ನು ಕಟ್ಟಿಕೊಡಲು ಶ್ರಮಿಸಿದ ಅನೇಕ ಶರಣರು ಸಾಹಿತ್ಯ ರಚನೆಯನ್ನು ಮಾಡಿರುವುದು ಕಾಣುತ್ತೇವೆ. ಅಂತಹ ಶರಣರಲ್ಲಿ ಬಸವಣ್ಣನವರು ಅಗ್ರಗಣ್ಯರು. ಇವರು ಮಾಡಿದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಚಳುವಳಿಯಿಂದಾಗಿಯೇ ಇತಿಹಾಸದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದಾರೆ. ಅಂತಹ ಮಹಾನ್ ವ್ಯಕ್ತಿಯ ವಚನಗಳ ಮೂಲಕ ವ್ಯಕ್ತವಾದ ವಿಚಾರಗಳು. ಮುಂದಿನ ಕವಿಗಳಿಗೆ ಅವರು ಬೀರಿದ ಪ್ರಭಾವದಿಂದಾಗಿ ಬಸವಣ್ಣನವರ ಸಾಹಿತ್ಯದ ವಸ್ತುವಾಗಿ ರೂಪತಾಳಿತು. ಅದರಿಂದಾಗಿಯೇ ಕನ್ನಡದಲ್ಲಿ ಅವರ ಜೀವನ ಕುರಿತು ಮೊಟ್ಟಮೊದಲು ಚಿತ್ರತವಾದ ಗ್ರಂಥವೆಂದರೆ ಹರಿಹರನ ಬಸವದೇವರಾಜ ರಗಳೆ. ತದನಂತರ ಬಂದ ಭೀಮಕವಿಯ ಬಸವಪುರಾಣ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಷಡಕ್ಷರದೇವನ ಬಸವರಾಜವಿಜಯ, ಸಿಂಗಿರಾಜನ ಬಸವ ಪುರಾಣ, ವಿರುಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಚೆನ್ನಪ್ಪ ಕವಿಯ ಶರಣ ಲೀಲಾಮೃತ ಮುಂತಾದ ಕೃತಿಗಳು ನಡಗನ್ನಡ ಸಾಹಿತ್ಯ ಕಾಲಘಟ್ಟದಲ್ಲಿ ಮೂಡಿಬಂದ ಕೃತಿಗಳಾಗಿವೆ. ಅದೇ ರೀತಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸೃಜನಶೀಲ ಸಾಹಿತ್ಯ ಪ್ರಕಾರಗಳಾದ ಕಾವ್ಯ, ನಾಟಕ, ಕಥೆ, ಕಾದಂಬರಿ ಮುಂತಾದ ರೂಪಗಳಲ್ಲಿ ಬಸವಣ್ಣನವರ ವ್ಯಕ್ತಿತ್ವ ಜೀವನ ವಿಜೃಂಭಿತವಾಗಿ ಪ್ರತಿಬಿಂಬವಾಗಿದೆ. ಉದಾಹರಣೆಗಾಗಿ ಹರೇಡ್ಕರ್ ಮಂಜಪ್ಪ, ಮಲ್ಲನಗೌಡ ಪಾಟೀಲ್, ಡಾ. ಬಿ.ಬಿ. ಎನ್ಡ್‌ಶಾಸ, ಮಾಳವಾಲ್ಡ, ಡಾ. ಎಚ್. ತಿಪ್ಪೇರುದ್ರಸ್ವಾಮಿ ಸಿದ್ಧಯ್ಯ ಪುರಾಣಿಕ, ಎಂ.ಎಂ. ಕಲಬುರ್ಗಿ, ಎಂ. ಚಿದಾನಂದಮೂರ್ತಿ, ಬಿ.ವ್ಹಿ. ಶಿರೂರ್, ಹಂಪ ನಾಗರಾಜಯ್ಯ, ಬಂಜೆಗೆರೆ ಜಯಪ್ರಕಾಶ್, ಎಚ್.ಎಸ್. ಶಿವಪ್ರಕಾಶ್, ಪಿ. ಲಂಕೇಶ್, ಗಿರೀಶ್ ಕಾರ್ನಾಡ, ಚಂದ್ರಶೇಖರ ಕಂಬಾರ, ಅ.ನ.ಕೃ., ಮುಂತಾದ ಅನೇಕ ಕವಿಗಳು ಬಸವಣ್ಣನವರ ಜೀವನ ಕುರಿತು ಬರೆದಿದ್ದಾರೆ.

ಹಾಗಾಗಿ ಕಾದಂಬರಿ ಸಾಹಿತ್ಯ ಪ್ರಕಾರದಲ್ಲಿ ಬಸವಣ್ಣನವರ ಜೀವನವನ್ನು ಆಧರಿಸಿ ಅನೇಕ ಜನರು ಕಾದಂಬರಿಗಳನ್ನು ರಚಿಸಿದ್ದಾರೆ. ಈ ಕಾರಣದಿಂದ ವೀರಶೈವ ಧರ್ಮದ ಸ್ಥಾಪಕನಾದ ಬಸವಣ್ಣನವರ ಜೀವನ ಕುರಿತು ರಚಿತವಾದಂತಹ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಮೂಲತಃ ಬಸವಣ್ಣನವರು ಹಿಂದೂ-ಧರ್ಮದ ತಳಹದಿಯ ಮೇಲೆ ಜೀವನ ನಡೆಸಿದರೂ ಅದರ ಕೆಲವು ಕಟ್ಟುಪಾಡುಗಳನ್ನು ಬದಿಗೊತ್ತುವ ಉದ್ದೇಶದಿಂದ ವಿಶ್ವಧರ್ಮವಾದ ವೀರಶೈವ ಧರ್ಮವನ್ನು ಸ್ಥಾಪಿಸಿದರು. ಈ ಧರ್ಮ ಅವರ ಜೀವನದ

ಮೇಲೆ ಬೀರಿದ ಪ್ರಭಾವವನ್ನು ಆಧಾರವಾಗಿಟ್ಟುಕೊಂಡು ನೋಡಿದಾಗ ಸಾಹಿತ್ಯಿಕವಾಗಿ ಹೆಚ್ಚು ಪ್ರಚೋದಕವಾಗಿ ಬೆಳೆಯಿತು.

ಬಸವಣ್ಣನವರು ಧರ್ಮ ಸ್ಥಾಪನೆಯಲ್ಲಿ ಆಸಕ್ತಿ, ಒಲುಮೆ, ಇವುಗಳನ್ನು ನೋಡಿಕೊಂಡಾಗ ಈ ಮೇಲಿನ ಎಲ್ಲಾ ಅಂಶಗಳನ್ನು ಪ್ರತಿಬಿಂಬಿಸುವ ಕಾದಂಬರಿಗಳು ಯಾವುವೆಂದರೆ, ಬಿ. ಪುಟ್ಟಸ್ವಾಮಯ್ಯಯವರ ಉದಯರವಿ, ರಾಜ್ಯಪಾಲ, ಕಲ್ಯಾಣೇಶ್ವರ, ನಾಗಬಂಧ, ಮುಗಿಯದ ಕನಸು, ಕ್ರಾಂತಿಕಲ್ಯಾಣ ಮುಂತಾದವುಗಳು. ಎಚ್. ತಿಪ್ಪೇರುದ್ರಸ್ವಾಮಿಯವರ ಕರ್ತಾರನ ಕಮ್ಮಟ ಹಾಗೂ ಜಿ.ಎಚ್. ಹನ್ನೆರಡುಮಠರವರ ಕೂಗಿತ್ತು ಕೂಡಲಸಂಗಮ, ಯೋಗಿ ಕಂಡ ಯೌವ್ವನ, ಗುರುವೆಂದರ್‍ಯಾರೋ ಹರವೆಂದರ್‍ಯಾರೋ, ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ, ಭೃಂಗ ಬಂದಾವೋ ಲಿಂಗತುಂಬಾವೋ, ಕಲ್ಯಾಣಕೂಗೈತೋ, ತೇರು ಸಾಗಿತಣ್ಣ ಬಸವಣ್ಣನ ಪಾಜ ಬಂದಿತಣ್ಣ, ಉಳಿವಿಯಲ್ಲಿ ಓಂಕಾರ ಮುಂತಾದ ಕಾದಂಬರಿಗಳು ನನ್ನ ಅಧ್ಯಯನದ ವ್ಯಾಪ್ತಿಗೆ ಸೀಮಿತಪಡಿಸಿಕೊಂಡಿದ್ದೇನೆ. ಈ ಮೇಲಿನ ಕಾದಂಬರಿಗಳನ್ನು ಆಧಾರವಾಗಿ ಇಟ್ಟುಕೊಂಡು ಅಧ್ಯಯನದ ಅನುಕೂಲಕ್ಕಾಗಿ ಧಾರ್ಮಿಕ ಹಿತಾಸಕ್ತಿ, ರಾಜಕೀಯ ಹಿತಾಸಕ್ತಿ, ಸಾಮಾಜಿಕ ಹಿತಾಸಕ್ತಿ, ಆರ್ಥಿಕ ಹಿತಾಸಕ್ತಿ ಎಂಬ ವರ್ಗೀಕರಣ ಹಿನ್ನೆಲೆಯಲ್ಲಿ ವಿಂಗಡಿಸಿಕೊಂಡಿದ್ದೇನೆ.

ಕರ್ನಾಟಕ ಇತಿಹಾಸದಲ್ಲಿ ಅನುಭವಮಂಟಪ ಎಂಬ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿ, ಸಾಯುತ್ತಲಿದ್ದ ಧರ್ಮಕ್ಕೆ ಜೀವಕಳೆಯನ್ನು ಕೊಡಬೇಕೆಂಬುದು ಬಸವಣ್ಣನವರು ಸ್ಥಾಪಿಸಿದ ವೀರಶೈವ ಧರ್ಮದ ತಿರುಳಾಗಿತ್ತು. ನೈತಿಕ ಮತ್ತು ಧಾರ್ಮಿಕ ನಿಯಮಗಳಿಂದ ಸಮಾಜವನ್ನು ಕೆಲವು ಕಾಲ ನೋಡುವ ಹಾಗೆ ಬಸವಣ್ಣನವರು ಸ್ಥಾಪಿಸಿದ ವೀರಶೈವ ಧರ್ಮವನ್ನು ನೋಡುವಾಗ ಕೆಲವು ಅಂಶಗಳನ್ನು ನಾವು ಗಮನಿಸಲೇಬೇಕಾಗುತ್ತದೆ. ಜನತೆಯ ಜೀವನದಲ್ಲಿ ನಿಜವಾದ ಧಾರ್ಮಿಕ ಭಾವನೆಯನ್ನು ಬೆಳೆಸುವುದಕ್ಕೆ ಮುಖ್ಯವಾಗಿ ಕಂಡುಬಂದದ್ದು ಧರ್ಮದ ತತ್ವಗಳನ್ನು ಪ್ರತ್ಯಕ್ಷವಾಗಿ ಅನುಭವಿಸಿದ ವ್ಯಕ್ತಿಗಳ ಮೇಲೆಯೇ ಅನುಭವಿಸಬೇಕೆಂದು ಕಂಡುಕೊಂಡರು.

ಬಸವಣ್ಣನವರು ನಿರ್ಜೀವವಾದಂತಹ ಧರ್ಮಕ್ಕೆ ಜೀವಕಳೆಯನ್ನು ಕೊಟ್ಟಿದ್ದಲ್ಲದೇ ಅದನ್ನು ಎರಡು ತರಹದ ದೊಡ್ಡತನದ ಕುತ್ತುಗಳಿಂದ ಪಾರು ಮಾಡಿದರು. ಕೇವಲ ಕರ್ಮಟವಾಗಿದ್ದ ಬಾಹಿರಚಾರದ ವಿಧಿನಿಷೇಧ ಒಳಗಾದವರು ಮತ್ತು ಕೆಲವರು ಗುಡ್ಡದಂತೆ ಮಾತನಾಡುವ ತತ್ವದವರು. ಕಾಲದ ಪ್ರವಾಹದಲ್ಲಿ ಕೊಚ್ಚಿ ಹೋದರು. ಹೀಗೆ ಧರ್ಮ ಯಾಂತ್ರಿಕ ಸ್ವರೂಪವನ್ನು ಹೊಂದಿ ಒಂದು ಕಡೆ ಕರ್ಮದ ಮಾರ್ಗದಲ್ಲಿದ್ದರೆ ಇನ್ನೊಂದು ಕಡೆ ಕ್ರಿಯಾರಹಿತವಾದ ಹಾಗೂ ನಿವೃತ್ತಪರವಾದ ಧ್ಯಾನಮಾರ್ಗದ ಬಲೆಯಲ್ಲಿ ಸಿಕ್ಕಿಕೊಂಡಿತು. ಅದನ್ನು ಈ ಉಭಯ ಬಂಧನಗಳಿಂದ ಮುಕ್ತ ಮಾಡಿ ಅದನ್ನು ಚೈತನ್ಯಗೊಳ್ಳುವಂತೆ ಮಾಡಿದವರು ಬಸವಣ್ಣನವರು. ಇದರಿಂದಾಗಿಯೇ ೧೨ನೇ ಶತಮಾನದಲ್ಲಿ ಧರ್ಮವನ್ನು, ಜೀವನವನ್ನು ಸುಧಾರಿಸುವ ವಿಧಾನಗಳಲ್ಲಿ ಒಂದಾಗಿದೆ. ಧರ್ಮ ಮತ್ತು ದೇವರು ಮಾನವನ ರಕ್ಷಣೆಯ ಎರಡು ಕ್ಷೇತ್ರಗಳು ಒಂದು ಬಿಟ್ಟು ಒಂದು ಇರಲಾರದಷ್ಟು ಸಂಬಂಧವನ್ನು ಹೊಂದಿವೆ. ಆದ್ದರಿಂದಾಗಿ ಸಾಹಿತ್ಯದ

ಬೆಳವಣಿಗೆಯಲ್ಲಿ ಧರ್ಮದ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಹಾಗಾಗಿ ಸಾಹಿತ್ಯದ ಮೂಲಕ ಧರ್ಮ ಪ್ರಚಾರತೆಯನ್ನು ಪಡೆದರೆ ಧರ್ಮದ ಮೂಲಕ ಸಾಹಿತ್ಯ ಅಭಿವೃದ್ಧಿ ಹೊಂದಿದೆ. ವಿಧಾನದ ಮೂಲಕ ತಿಳಿಸಿದರು. ಜನರಿಗೆ ಉಣ್ಣದ ಕಲ್ಲಿಗೆ ನೈವೇದ್ಯ ಹಿಡಿಯದೇ ಹಸಿದು ಬಂದ ಜಂಗಮರಿಗೆ ಉಣಿಸಬೇಕೆಂದು ಹುತ್ತಕ್ಕೆ ಹಾಲೆರೆಯದೆ ನಿಜವಾದ ನಾಗರಹಾವಿಗೆ ಹಾಲು ಕುಡಿಸಬೇಕೆಂದು ತಿಳಿಸಿದರು. ದಯವೇ ಧರ್ಮದ ಮೂಲವೆಂದು ಸಾರಿದ ಅವರು ಶ್ರದ್ಧಾವಂತರಾಗಿ, ವಾಸ್ತವವಾದಿಗಳಾಗಿ, ವಿಚಾರವಾದಿಗಳಾಗಿ ಜನರಲ್ಲಿ ಪಾರಮಾರ್ಥದ ಪಥದ ಪ್ರಜ್ಞೆ ಮೂಡಿಸದರು. ಪೂಜೆಗೆಂದು ಗುಡಿಗೆ ಹೋಗುವುದಕ್ಕಿಂತ ತನ್ನ ಧ್ಯೇಯವನ್ನು ದಯೆವನ್ನಾಗಿ ಮಾಡಿಕೊಳ್ಳಬೇಕೆಂದು ತಿಳಿಸಿದರು. ದೇವರಿಗಾಗಿ ಗುಡಿಯನ್ನು ಕಟ್ಟಿಸುವುದಕ್ಕಿಂತ ಬಡವರಿಗೆ ಮನೆಯನ್ನು ಕಟ್ಟಿಸುವುದೇ ಮೇಲು ಎನ್ನುತ್ತಾರೆ.

ಎಲ್ಲಾ ಜಾತಿ ಮತದವರನ್ನು ಒಂದು ಗೂಡಿಸಿ ಒಂದೇ ಧರ್ಮದ ಬಾವುಟದ ಕೆಳಗೆ ನಿಲ್ಲಿಸಲು ಇಷ್ಟಲಿಂಗ ಪೂಜೆ ಯೋಗ್ಯ ಸಾಧನವೆಂದು ಭಾವಿಸಿದರು. ಅದರಂತೆ ಅಪೇಕ್ಷೆ ಇದ್ದವರಿಗೆ ಲಿಂಗದೀಕ್ಷೆ ನೀಡಿ ಅದರ ಮಹತ್ವವನ್ನು ತಿಳಿಸಿದರು. ವಿಶ್ವಧರ್ಮದ ತಿರುಳನ್ನು ಹೇಳುವ ಮೂಲಕ ಸಪ್ತಸೂತ್ರಗಳು ವ್ಯಕ್ತಿಯ ಅಂತರಂಗ-ಬಹಿರಂಗ ಶುದ್ಧಿಗೆ ಕಾರಣವಾಗುತ್ತವೆ ಎಂದು ಸಾರಿದರು.

ವೃತ್ತಿಯಲ್ಲಿಯೇ ಕೈಲಾಸ ಸುಖ ಇದೆಯೆಂದು ಎಲ್ಲರಿಗೂ ಉಪಯುಕ್ತವಾಗುವಂತಹ ಸಂಸಾರದ ಸಭ್ಯತೆಯನ್ನು ಪಡೆಯುವ ಸುವರ್ಣ ಸೂತ್ರವನ್ನು ತಿಳಿಸಿಕೊಟ್ಟರು. ಆ ತಿಳಿಸುವುದಕ್ಕಾಗಿಯೇ ಅನುಭವಮಂಟಪವನ್ನು ಸ್ಥಾಪಿಸಿ, ಅಲ್ಲಿ ಎಲ್ಲಾ ಜಾತಿಯ ಎಲ್ಲಾ ಸಮುದಾಯದ ಸ್ತ್ರೀಪುರುಷರು ಭಾಗವಹಿಸಿ ಹೊಸ ಸಮಾಜಕ್ಕೆ ನಾಂದಿ ಹಾಡಿದರು. ಅನುಭವಮಂಟಪದ ಮಹತ್ವದ ಬಗ್ಗೆ ಪ್ರಸಿದ್ಧ ಕಾದಂಬರಿಕಾರರಾದ ಅ.ನ.ಕೃ. ಅವರು ಈ ರೀತಿ ಅಭಿಪ್ರಾಯಪಡುತ್ತಾರೆ. "ವೀರಶೈವ ಧರ್ಮದ ಉನ್ನತ ತತ್ವಗಳಿಗೆ ಸಾರ್ವತ್ರಿಕ ಸ್ವರೂಪ ಕೊಡುವುದಕ್ಕೆ ಒಂದು ಉತ್ತರ ಮತ್ತು ದಕ್ಷಿಣ ಭಾಗಗಳಿಂದ ಅನೇಕ ಶಿವಶರಣರು, ಅರಸರು, ರಾಜಮಹಾರಾಜರು ಕಲ್ಯಾಣಕ್ಕೆ ಬಂದು ವೀರಶೈವ ಧರ್ಮವನ್ನು ಸ್ವೀಕರಿಸಿದರು. ವೀರಶೈವ ಧರ್ಮದಲ್ಲಿ ಪರಸ್ಥಳಗಳೆಂದರೆ ಆರು ಆಧ್ಯಾತ್ಮಕ ಸ್ಥಳಗಳು. ಅವು ಯಾವುವೆಂದರೆ, ಭಕ್ತಿ, ಮಹೇಶ, ಪ್ರಸಾದ, ಪ್ರಾಣಲಿಂಗ, ಶರಣ ಈ ಮುಂತಾದವುಗಳು. ಇದರಿಂದಾಗಿ ಈಶ್ವರನ್ನು ಹೊಸ ರೀತಿಯಿಂದ ಪೂಜಿಸುವುದಕ್ಕೆ ಹಚ್ಚಿತು. ಈ ಇಷ್ಟಲಿಂಗ ಪೂಜೆಯೆಂದು ಹೆಸರು ಪಡೆಯಿತು. ಉಪನಿಷತ್ತುಗಳಲ್ಲಿ ನಿರ್ದಿಷ್ಟವಾದ ನಿರಕಾರ ಬ್ರಹ್ಮವನ್ನು ಇಷ್ಟಲಿಂಗ ಆಕಾರದಲ್ಲಿ ರೂಪರಹಿತವಾದ ರೂಪದಲ್ಲಿ ಪೂಜಿಸಬೇಕೆಂಬುದು ಇದರರ್ಥ.

ಲಿಂಗದೀಕ್ಷೆಯ ಮೂಲಕವಾಗಿ ತನ್ನ ಧರ್ಮದ ದ್ವಾರವನ್ನು ಎಲ್ಲಾ ಜಾತಿಯ ಸ್ತ್ರೀಪುರುಷರಿಗೆ ತೆರೆದಿಟ್ಟರು. ಆದ್ದರಿಂದ ಹಿಂದೂ ಸಮಾಜದ ಜೀವನದಲ್ಲಿ ಅತಿದೊಡ್ಡ ಕ್ರಾಂತಿಯನ್ನು ಉಂಟುಮಾಡಿತು. ಷಟಸ್ಥಲ ಸಿದ್ಧಾಂತದ ಮೂಲಕ ಇದು ಕರ್ಮವಾದದ ಬೇರುಗಳನ್ನು

ಸಲಿಡಿಲಿಸಿ ಬಿಟ್ಟಿತು. ಇಂದಿನ ಜನ್ಮ ಉಂಟು, ಆದರೆ ಮುಂದಿನ ಜನ್ಮವಿಲ್ಲವೆಂಬುದೇ ವೀರಶೈವ ಸಿದ್ಧಾಂತದ ತಿರುಳು. ಮೋಕ್ಷ ವಿಚಾರದಲ್ಲಿ ದೇವರ ಕೃಪೆ ಮನುಷ್ಯರ ಪ್ರಯತ್ನ ಈ ಎರಡಕ್ಕೂ ಭೇದಭಾವ ಇಲ್ಲ ಎಂಬುದು ತೋರಿಸುವುದಾಗಿದೆ.

"ಬಸವಣ್ಣನವರು ಅಂದು ಸಮಾಜದಲ್ಲಿ ಬೇರೂರಿದ್ದ ಧಾರ್ಮಿಕ ಅಂಧಶ್ರದ್ಧೆಗಳನ್ನು ಮೂಢ ಸಂಪ್ರದಾಯಗಳನ್ನು ಕಿತ್ತೊಗೆದರು. ನಿಜವಾದ ಧರ್ಮದ ಮರ್ಮವನ್ನು, ದೇವರ ಅಸ್ತಿತ್ವವನ್ನು, ಸರಳವಾದ ಒಂದು ಅನುಭವಮಂಟಪವನ್ನು ಸ್ಥಾಪಿಸಿ ಅದನ್ನು ಆಧ್ಯಾತ್ಮಿಕ ಪರಮ ಅಂಶಗಳ ತಿಳಿವನ್ನಾಗಿ ಮಾಡಬೇಕೆಂದು ನಿಶ್ಚಯಿಸಿದರು. ತಮ್ಮ ಮಂಟಪ ಶಿವಜ್ಞಾನದ ಒಂದು ವಿಶ್ವವಿದ್ಯಾಲಯ ಆಗಬೇಕೆಂಬುದೇ ಬಸವಣ್ಣನವರ ಹೆಬ್ಬಯಕೆಯಾಗಿತ್ತು"[೧]

ಬಿ. ಪುಟ್ಟಸ್ವಾಮಯ್ಯನವರು ಬರೆದಿರುವ 'ಉದಯರವಿ' ಎಂಬ ಕಾದಂಬರಿಯು ಬಸವಣ್ಣನವರನ್ನು ಹಾಗೂ ಶರಣ ಚಳುವಳಿಯನ್ನು ನಿರೂಪಿಸುವ ಕಾದಂಬರಿಯಾಗಿದೆ. ಈ ಕಾದಂಬರಿಯ ಮುಖ್ಯ ಕಥಾವಸ್ತು ಬಸವಣ್ಣನವರ ಬಹುಮುಖ ವ್ಯಕ್ತಿತ್ವ ಹಾಗೂ ಶಿವಶರಣರ ಚಳುವಳಿಯ ವಿವಿಧ ಮುಖಗಳನ್ನು ಚಿತ್ರಿಸುತ್ತದೆ. ಅದರೊಂದಿಗೆ ೧೨ನೇ ಶತಮಾನದ ಜನಜೀವನದ ವಿವಿಧ ಮುಖಗಳ ವಿಶ್ವಕೋಶದಂತಿದೆ. ಅವುಗಳಲ್ಲಿ ಶರಣ ಚಳುವಳಿಯ ಸಮಗ್ರ ಚರಿತೆ ವಾಸ್ತವಿಕ ಹಾಗೂ ಐತಿಹಾಸಿಕ ಹಿನ್ನೆಲೆಯಲ್ಲಿ ರಸವತ್ತಾದ ನಾಟಕೀಯ ಶೈಲಿಯಲ್ಲಿ ಮೂಡಿಬಂದಿದೆ. ಈ ಕಾದಂಬರಿಯನ್ನು ಓದುವಾಗ ನಾವು ೧೨ನೇ ಶತಮಾನದ ಆ ಕಾಲದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಮುಖಗಳನ್ನು ಅನುಭವಿಸಿದಂತೆ ಭಾಸವಾಗುತ್ತದೆ.

ಈ ಕಾದಂಬರಿಯಲ್ಲಿ ಬಸವಣ್ಣನವರ ಜೀವನಕ್ಕೆ ಸಂಬಂಧಪಟ್ಟಂತೆ ಇಂದಿನ ಚರಿತ್ರೆ ಗ್ರಂಥಗಳು, ಶಾಸನಗಳು ಹಾಗೂ ಆಸ್ಪತ್ರೆಗಳು ಸಂಪೂರ್ಣವಾಗಿ ಅಧ್ಯಯನ ಮಾಡಿ ಇಲ್ಲಿಯವರೆಗೂ ಚಾರಿತ್ರಿಕವಾಗಿ ದಾಖಲಾಗದೇ ಇದ್ದ ಅನೇಕ ಸಂಗತಿಗಳು ಈ ಉದಯರವಿ ಕಾದಂಬರಿಯಲ್ಲಿ ಮೂಡಿಬಂದಿವೆ.

ಬಸವಣ್ಣನವರ ಧಾರ್ಮಿಕ ವಿಚಾರ ಕುರಿತು ಅಷ್ಟಾಗಿ ಇಲ್ಲದಿದ್ದರೂ ವೈಜ್ಞಾನಿಕವಾಗಿ ವಿಮರ್ಶಾತ್ಮಕವಾಗಿ ನೋಡಿರುವ ಕಲಾತ್ಮಕತೆ ಇಲ್ಲಿ ಎದ್ದು ಕಾಣುತ್ತದೆ. ಬಸವಣ್ಣನವರು ಅವರ ಮೂಲದ ಬಗ್ಗೆ ಚಂದ್ರರಾಜ ಮತ್ತು ಚಂದ್ರಾಂಬಿಕೆ ಇವರ ತಂದೆ ತಾಯಿಗಳು ಸಾಂಕ್ರಾಮಿಕ ರೋಗದಿಂದ ವಿಧಿವಶರಾದಾಗ ಅವರು ಸಾಕು ತಂದೆ ತಾಯಿಗಳಾದ ಮಾದರಸ ಮಾದಲಾಂಬಿಕೆ ಅವರ ಕೃಪಾ ಆಶೀರ್ವಾದದಿಂದ ಬೆಳೆಯುತ್ತಾರೆ.

ಸಂಗಮನಾಥದಿಂದ ಬಿಜ್ಜಳನಲ್ಲಿಗೆ ಹೋದಾಗ ಬಲದೇವನ ಮಗಳಾದ ಗಂಗಾಂಬಿಕೆಯನ್ನು ಮದುವೆಯಾಗಿ ವರ್ಷಕ್ಕೆ ನೂರೊಂದು ಹೊನ್ನಿನ ಮೇಲೆ ಬಿಜ್ಜಳನಲ್ಲಿ ಕರಣಿಕನಾಗಿ ಸೇರಿಕೊಳ್ಳುತ್ತಾನೆ. ಈ ವಿಷಯವನ್ನು ಯಥಾವತ್ತಾಗಿ ಇತರ ಕಾದಂಬರಿಕಾರರು ಚಿತ್ರಿಸಿದ್ದಾರೆ.

ಎರಡನೇ ತೈಲಪ ಬನವಾಸಿಯನ್ನು ಆಕ್ರಮಿಸಿದಾಗ ಸಂಧಾನಕಾರರಾಗಿ ಬಸವಣ್ಣ ಹೋಗಿ ಅದನ್ನು ಪರಿಹರಿಸಿ ಹಿಂದಿರುಗಿ ಬಂದಾಗ ಬನವಾಸಿ ರಾಜ್ಯಪಾಲನನ್ನಾಗಿ ಮಾಡಿರುವ ಸಂಗತಿ. ಹಲವಾರು ಸಾಕ್ಷಿಗಾಗಿ ಗ್ರಂಥಗಳನ್ನು, ಶಾಸನಗಳನ್ನು ಉದಾಹರಣೆಗಾಗಿ ನೀಡಿದ್ದಾರೆ.

ಕೂಡಲಸಂಗಮಕ್ಕೆ ಬಂದ ಮೇಲೆ ಅಕ್ಕ ನಾಗಮ್ಮ ಶಿವಯೋಗಿಯ ಸ್ವಾಮಿಯ ಪತಿಯಾಗಿ ಪಡೆದು ಚೆನ್ನಬಸವಣ್ಣನನ್ನು ಪಡೆಯುತ್ತಾಳೆ. ಚೆನ್ನಬಸವಣ್ಣ ಮೂರು ವರ್ಷದವನಿರುವಾಗಲೇ ಶಿವಸ್ವಾಮಿ ತುಂಬಿ ಹರಿಯುವ ನದಿಯಲ್ಲಿ ಕೊಚ್ಚಿಹೋಗಿ ಸಾಯುತ್ತಾನೆ. ಇದರಿಂದ ಅಕ್ಕ ನಾಗಮ್ಮ ವಿಧವೆಯಾಗುತ್ತಾಳೆ. ಆದರೆ ಲೇಖಕರು ಸತ್ತಿರುವ ಶಿವಯೋಗಿಯ ರೂಪದಲ್ಲಿ ಸಂಗಮನಾಥನೇ ಬಂದು ಅಕ್ಕನಾಗಮ್ಮನನ್ನು ಆಶೀರ್ವಾದಿಸುತ್ತಾನೆಂದು ಚಿತ್ರಿಸಿದ್ದಾರೆ. ಇದರಿಂದ ಚೆನ್ನಬಸವಣ್ಣನು ಶಿವನ ಪ್ರಸಾದದಿಂದ ಹುಟ್ಟಿದನೆಂಬ ನಿಲುವಿಗೆ ಹತ್ತಿರವಾಗುತ್ತದೆ.

ಹರಿಹರನಲ್ಲಿ ನಿರೂಪಿತವಾದ ಜನಿವಾರ ಪ್ರಸಂಗ ಈ ಕಾದಂಬರಿಯಲ್ಲಿ ನಿರೂಪಿತ ವಾಗಿರುವುದಿಲ್ಲ. ಆತನನ್ನು ವಿದ್ಯಾಭ್ಯಾಸಕ್ಕಾಗಿ ನಾಗಲಾಂಬಿಕಾ ಕೂಡಲಸಂಗಮಕ್ಕೆ ಕರೆದುಕೊಂಡು ಬರುತ್ತಾಳೆಂಬುದನ್ನು ಪ್ರಸ್ತಾಪಿಸಲಾಗಿದೆ. ಚೆನ್ನಬಸವಣ್ಣನವರ ವಿದ್ಯಾಭ್ಯಾಸದ ಬಗ್ಗೆ ಹಲವಾರು ಅನುಮಾನಗಳು ಇಲ್ಲಿ ಎಡೆಮಾಡಿಕೊಡುತ್ತವೆ.

ಕೂಡಲಸಂಗಮದಿಂದ ಬಸವಣ್ಣ ಮಂಗಳವಾಡಕ್ಕೆ ಹೋಗುವುದೇ ಇಲ್ಲ. ನೇರವಾಗಿ ಕಲ್ಯಾಣಕ್ಕೆ ಹೋಗುತ್ತಾನೆ. ಕಾದಂಬರಿಕಾರರು ಈ ವಿಷಯವಾಗಿ ಭೀಮಕವಿಯ 'ಬಸವ ಪುರಾಣ'ವನ್ನು ಅನುಸರಿಸಿದ್ದಾರೆ. ಇದರಿಂದ ಬಸವಣ್ಣನವರ ಕಾರ್ಯಕ್ಷೇತ್ರ ಕಲ್ಯಾಣವಾಗುತ್ತದೆ. ಅಲ್ಲಿ ಸೋದರ ಮಾವನಾದ ಬಲದೇವನ ಸಹಾಯದಿಂದ ಲೆಕ್ಕವನ್ನು ಸರಿಪಡಿಸುವ ಪ್ರಸಂಗ. ಹರಿಹರನ ಬಸವರಾಜದೇವರಗಳೆಯಿಂದ ನೇರವಾಗಿ ತೆಗೆದುಕೊಂಡಿದ್ದಾರೆ. ಕರಣಿಕ ವೃತ್ತಿಯನ್ನು ಬಿಜ್ಜಳನ ಆಸ್ಥಾನದಲ್ಲಿ ಆರಂಭಿಸಿ, ಬಲದೇವನ ಮಗಳಾದ ಗಂಗಾಂಬಿಕೆಯನ್ನು ಮದುವೆ ಯಾಗುವುದು ಸಹ ಹರಿಹರನ ರಗಳೆಯಲ್ಲಿಯಂತೆಯೇ ಇದೆ. ಮದುವೆಯಾದ ನಂತರ ನಿಕ್ಷೇಪ ಕಂಡು ಹಿಡಿಯುವ ಪ್ರಸಂಗ ಕಾದಂಬರಿಕಾರನ ಕಲ್ಪನೆಯಾಗಿದೆ. ಏನೆಂದರೆ, ಬಿಜ್ಜಳನು ಆಸೀನನಾಗುವ ಸಿಂಹಾಸನದ ಕೆಳಗೆ ನಿಧಿಯ ನಿಕ್ಷೇಪವಿರುತ್ತದೆ. ಇದು ಚಾಳುಕ್ಯ ರಾಯರ ಅಳಿಯ ಸಿಂಹಾಸನದ ಹಾದು ಹೋಗುವ ಮಾರ್ಗದಲ್ಲಿ ಇರುತ್ತದೆ. ಇದಕ್ಕೆ ಕಾದಂಬರಿಕಾರರು ಶಾಸನಗಳನ್ನು ಉಲ್ಲೇಖನವಾಗಿ ನೀಡುತ್ತಾರೆ.

ಈ ಅಪಾರ ಸಂಪತ್ತನ್ನು ಕಂಡು ಹಿಡಿದ ಬಸವಣ್ಣನಿಗೆ ಬಿಜ್ಜಳರಾಯನು ಮಹಾಮಂತ್ರಿ ಸ್ಥಾನವನ್ನು ನೀಡುತ್ತಾನೆ. ಈ ಅಂಶ ಚೆನ್ನಬಸವ ಪುರಾಣದಲ್ಲಿ ವ್ಯಕ್ತವಾಗುವುದು ಕಾಣಬಹುದು.

ಬಿಜ್ಜಳನು ಪ್ರಜಾಪ್ರತಿನಿಧಿ ಸಭೆಯನ್ನು ಕರೆಯುವ ಸಂಗತಿ. ಬಸವ ಪುರಾಣದಲ್ಲಿ ಉಲ್ಲೇಖ ಗೊಂಡಿದೆ. ಇಲ್ಲಿ ಮುಖ್ಯವಾಗಿ ಈ ನಿಧಿಯ ಉಪಯೋಗವನ್ನು ಕುರಿತು ಚರ್ಚಿಸಲಾಗುತ್ತದೆ. ಆದರೆ ನಾರಾಯಣ ಕ್ರಮಿತ ಇದನ್ನು ವಿರೋಧಿಸುತ್ತಾನೆ. ಭಂಡಾರದಲ್ಲಿ ಏರುಪೇರಾದಾಗ

ಅದನ್ನು ಬಸವಣ್ಣನು ಕಂಡು ಹಿಡಿದಾಗ ಮಂಚಣ್ಣ ಕ್ರಮಿತ ಹಾಗೂ ಆಡಳಿತ ವರ್ಗದವರೂ ಕುದುರೆ ವ್ಯಾಪಾರದಲ್ಲಿ ಸಿಕ್ಕಾಕಿಕೊಳ್ಳುತ್ತಾರೆ. ಇದನ್ನು ಬಿಜ್ಜಳನು ಕ್ಷಮಿಸುತ್ತಾನೆ. ಏಕೆಂದರೆ ಮಂಚಣ್ಣ ಕ್ರಮಿತ ಹಿರಿಯ ಅರ್ಥಮಂತ್ರಿಯಾಗಿರುತ್ತಾನೆ. ಆದರೆ ಮದರಸ ಬಸವಣ್ಣನ ಜನಪರ ಯೋಜನೆಗಳನ್ನು ಮೆಚ್ಚಿ ಪ್ರೋತ್ಸಾಹಿಸುತ್ತಾನೆ.

ಇವೆಲ್ಲವೂ ವೀರಶೈವ ಪುರಾಣಗಳಲ್ಲಿ ಉಲ್ಲೇಖನಗಳನ್ನು ಕಾದಂಬರಿಕಾರರು ಗುರುತಿಸಿದ್ದಾರೆ. ಇದರಿಂದ ಬಸವಣ್ಣನ ಕೀರ್ತಿ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋದಂತೆ ನೀಲಾಂಬಿಕೆ ಬಸವಣ್ಣನ ವ್ಯಕ್ತಿತ್ವಕ್ಕೆ ಮಾರು ಹೋಗುತ್ತಾಳೆ. ಗಂಗಾಬಿಕೆ ಜೊತೆಯಲ್ಲಿ ಮಾದರಸನ ಮಗಳಾದ ಲಾವಣ್ಯವತಿ ಬಂದಿರುತ್ತಾಳೆ. ಆಗ ಬಿಜ್ಜಳನ ತಮ್ಮನಾದ ಕರುಣದೇವನು ಲಾವಣ್ಯವತಿಗೆ ಮನಸೋಲುತ್ತಾನೆ. ಈ ವಿಷಯವು ಕಾದಂಬರಿಕಾರನ ಕಲ್ಪಿತ ಚಿತ್ರಣವಾಗಿದೆ. ಇದು ಮುಂದೆ ಶೀಲವಂತನೊಂದಿಗೆ ವಿವಾಹವಾದಾಗ ಪ್ರತಿಕಾರ ಮನೋಭಾವನೆಯನ್ನು ತಾಳೆ ಹಾಕಿ ನೋಡಿದ್ದಾರೆ. ನೀಲಾಂಬಿಕೆಯು ಮಾರುವೇಷದಲ್ಲಿ ಬಸವಣ್ಣನವರ ಮನೆಗೆ ಪ್ರವೇಶ ಮಾಡುತ್ತಾಳೆ. ಗಂಗಾಂಬಿಕೆ ಮತ್ತು ನಾಗಾಲಾಂಬಿಕೆ ಸಹಾಯದಿಂದ ಬಿಜ್ಜಳನ ಒಪ್ಪಿಗೆಯನ್ನು ಪಡೆದು ಬಸವಣ್ಣನನ್ನು ಮದುವೆಯಾಗುತ್ತಾಳೆ. ಈ ವಿಷಯ ಸೋಮರಾಜನ 'ಕಲ್ಯಾಣೇಶ್ವರ'ದಲ್ಲಿ ಬಂದಿದೆ.

ತೈಲಪ ಕಡಿವಾಣವಿಲ್ಲದ ವಿಲಾಸಿ ಜೀವನದಿಂದ ಚಾಲುಕ್ಯ ರಾಜ್ಯ ನಾಶವಾಗಲು ಕಾರಣನಾಗುತ್ತಾನೆ. ಇದನ್ನು ಬಸವಣ್ಣನವರ ಜೀವನದ ಅನೇಕ ಘಟನೆಗಳನ್ನು ತುಲನಾತ್ಮಕವಾಗಿ ನೋಡಿದ್ದಾರೆ. "ಮುಮ್ಮಡಿ ತೈಲಪನು ಹಿಂಗಳ ಸಹವಾಸದಿಂದ ಮೆಸಿಡೋನಿಯದ ರಾಜ್ಯವಂಶದಲ್ಲಿ ಜನ್ಮತಾಳಿದ ಅಫ್ರೋಡೈಟ್ ಅವಳನ್ನು ೩೦ ಸಹಸ್ರ ವರಹಗಳಿಗೆ ಕೊಂಡುಕೊಳ್ಳುತ್ತಾನೆ."[೨] ಇದರಿಂದ ಆ ಸಾಮ್ರಾಜ್ಯದಲ್ಲಿ ಜನರ ಕಲ್ಯಾಣಕ್ಕಿಂತ ರಾಜನ ವಿಲಾಸಿ ಜೀವನವೇ ಅಧಿಕವಾಗುತ್ತದೆ. ಇದರಿಂದ ತೈಲಪನ ಆಶ್ರಯದಲ್ಲಿ 'ಪಾಟಲಿಕೆ' ಎಂಬ ಹೆಣ್ಣು ರಾಜನೊಂದಿಗೆ ವ್ಯಾಪಾರ ಕುದುರಿಸಲು ಪ್ರಯತ್ನಪಡುತ್ತಿರುವಾಗ ಮಹಾರಾಣಿಯಾದ ಕಾಮೇಶ್ವರಿಯ ಅಸಮಾಧಾನಕ್ಕೆ ಕಾರಣವಾಗುತ್ತದೆ. ಒಮ್ಮೆ ಅಫ್ರೋಡೆಟ್‌ನೊಂದಿಗೆ ತೈಲಪನು ಏಕಾಂತದಲ್ಲಿರುವಾಗ ಕಾಮೇಶ್ವರಿ ರಾಣಿಗೆ ಸಿಕ್ಕು ಹಾಕಿಕೊಳ್ಳುತ್ತಾನೆ. ಇದರಿಂದ ಕಾಮೇಶ್ವರಿಯವರ ಸ್ವಚ್ಛತಾ ಜೀವನಕ್ಕೆ ಅನೇಕ ಘಟನೆಗಳು ಎದುರಾಗುವುದನ್ನು ಕಾದಂಬರಿಕಾರರು ಚಿತ್ರಿಸಿದ್ದಾರೆ.

ತೈಲಪನು ಬನವಾಸಿಗೆ ಬಂದು ಅಲ್ಲಿಯ ಪ್ರಜೆಗಳಿಗೆ ಅವರ ರಕ್ಷಣೆಗಾಗಿ ನಿಕ್ಷೇಪದ ಸುಳಿವನ್ನು ನೀಡುತ್ತಾನೆ. ತನ್ನ ಭಟ್‌ರೊಂದಿಗೆ ಬನವಾಸಿಯ ರಕ್ಷಣೆಯಲ್ಲಿರುವಾಗ ಇದನ್ನರಿತ ಬಿಜ್ಜಳನು ಬಸವಣ್ಣನನ್ನು ಸಂಧಾನಕಾರರಾಗಿ ಕಳುಹಿಸುತ್ತಾನೆ. ಈ ಘಟನೆಗೆ ಸಹ ಶಾಸನದ ಉಲ್ಲೇಖ ಕೊಡುತ್ತಾನೆ. ಕದಂಬರ ರಾಜಕನ್ಯೆ ಕುಸುಮಾವಳಿ ಮಧುಕೇಶ್ವರ ದೇವಾಲಯದಲ್ಲಿ ನೃತ್ಯವನ್ನು ಮಾಡುತ್ತಿರುತ್ತಾಳೆ. ಅದಕ್ಕೆ ಮನಸೋತು ತೈಲಪನು ಅವಳನ್ನು ಮೋಹಿಸಿ ವಶಪಡಿಸಿ ಕೊಳ್ಳಲು ಪ್ರಯತ್ನಿಸುತ್ತಾನೆ. ಇದನ್ನರಿತ ಬಸವಣ್ಣ ಸಂಧಾನಕ್ಕಾಗಿ ಬಂದಾಗ ಭಟ್‌ರಿಂದ

ಘಾಸಿಗೊಂಡು ಪ್ರಜ್ಞಾಹೀನ ಸ್ಥಿತಿಯನ್ನು ಹೊಂದುತ್ತಾನೆ. ಆಗ ಕುಸುಮಾವಳಿಯು ಆತನನ್ನು ರಕ್ಷಣೆ ಮಾಡಿ ಕುಸುಮಾವಳಿಯನ್ನು ಬಸವಣ್ಣನು ಗುರುತಿಸಿ ತೈಲಪ ವಿಷಯವನ್ನು ವಿಚಾರಿಸುತ್ತಾನೆ.

ತೈಲಪನು ತನ್ನ ಸೈನ್ಯದೊಂದಿಗೆ ಹಂಪಿಯತ್ತ ಪಲಾಯನಗೈದಿರುತ್ತಾನೆ. ಅಷ್ಟರಲ್ಲಿ ಅವನ ಪಟ್ಟದ ರಾಣಿಯಾದ ಕಾಮೇಶ್ವರಿಯ ಸಂದರ್ಶನವಾಗುತ್ತದೆ. ಕುಸುಮವಳಿಯ ಸಹಾಯದಿಂದ ಕಾಮೇಶ್ವರಿಯ ಬಸವಣ್ಣನನ್ನು ಭೆಟ್ಟಿಯಾಗಲು ಪ್ರಯತ್ನಿಸುತ್ತಾಳೆ. ಇದನ್ನರಿತ ಬಸವಣ್ಣನು ಕುಸುಮಾವಳಿಯನ್ನು ವಿಚಾರಿಸುತ್ತಾನೆ. ಲೇಖಕರು ಮುಂದುವರೆದು ಕುಸುಮಾವಳಿ ಅಲ್ಲಮನನ್ನು ಪ್ರೀತಿಸಿದ ಮಾಯೆಯ ತಂಗಿಯೆಂದು ವಿಷಯದ ಹೊಸತನಕ್ಕೆ ಬೆಳಕು ಚೆಲ್ಲಿದ್ದಾರೆ. ಇದಾದದ ನಂತರ ತೈಲಪನನ್ನು ಭೇಟಿಯಾಗಲು ಬಸವಣ್ಣನವರು ಹಂಪಿಯತ್ತ ಧಾವಿಸುತ್ತಾರೆ. ಅಷ್ಟೊತ್ತಿಗೆ ತೈಲಪ ಗಂಗಾವತಿಗೆ ಹೊರಟು ಹೋಗಿರುತ್ತಾನೆ. ಗಂಗಾವತಿ ಕಡೆಗೆ ಬಸವಣ್ಣನವರು ಹೊರಟು ನಿಂತಾಗ ತೈಲಪನು ಕಾತೀಯ ಗಜಪತಿ ಪ್ರೊಲ್ಲರಾಜ ಸೈನ್ಯಕ್ಕೆ ತೈಲಪನು ಸೆರೆ ಸಿಗುತ್ತಾನೆ. ಸಿಂಧ್‌ನಾಡಿನ ಮಹಾಮಂಡಳೇಶ್ವರ ರಾಚಮಲ್ಲ ನರಸನೊಂದಿಗೆ ಯುದ್ಧ ಮಾಡಿ ಸೋತು ಅವರಿಂದ ಸೆರೆ ಹಿಡಿಯಲ್ಪಟ್ಟು ತುಂಗಾಭದ್ರ ನದಿಯ ವೀರಭವನದಲ್ಲಿ ಇಟ್ಟಿರುತ್ತಾರೆ. ಬಸವಣ್ಣನು ಅಲ್ಲಿಗೆ ಬಂದ ವಿಷಯ ತಿಳಿದ ಗಜಪತಿಯು ಸಂತೋಷಪಟ್ಟು ಜಗದೇಕಮಲ್ಲನಿಗೆ ಕರೆದುಕೊಂಡು ಹೋಗುತ್ತಾನೆ. ಜಗದೇಕಮಲ್ಲನು ವೃದ್ಧನಾಗಿರುವುದರಿಂದ ತನ್ನ ರಾಜ್ಯದ ಎಲ್ಲಾ ಕಾರುಬಾರುಗಳನ್ನು ತನ್ನ ಮಗನಾದ ಕೀರ್ತಿಗೆ ವಹಿಸಿಕೊಟ್ಟು ಅವನು ಪಟ್ಟಾಭಿಷೇಕ ಆಗುವವರೆಗೂ ರಾಜ್ಯದ ಪ್ರತಿನಿಧಿಯಾಗಿ ಕಾರುಬಾರು ನಡೆಸಲಿ ಎಂದು ಹೇಳುತ್ತಾನೆ.

ಬಸವಣ್ಣನವರು ರಾಜಕೀಯ ಸಂಧಾನವನ್ನು ಬಹಳ ಕುಶಲತೆಯಿಂದ ನೆರವೇರಿಸಿರುತ್ತಾರೆ. ಬಿಜ್ಜಳನು ಇದರಿಂದ ಸಂತೋಷಗೊಂಡು ಬಸವಣ್ಣನವರನ್ನು ಬನವಾಸಿಯ ರಾಜ್ಯಪಾಲನನ್ನಾಗಿ ನೇಮಿಸುತ್ತಾರೆ. ಇದೇ ಸಂದರ್ಭದಲ್ಲಿ ಕಾದಂಬರಿಕಾರರು ಅಲ್ಲಮಪ್ರಭುವಿನ ಬಾಲ್ಯವನ್ನು ವಿವರಿಸಿದ್ದಾರೆ.

ಬಸವಣ್ಣನವರು ಬನವಾಸಿಯ ರಾಜ್ಯಭಾರವನ್ನು ವಹಿಸಿಕೊಂಡ ನಂತರ ತಾವು ಕನಸುಕೊಂಡಂತೆ ಜನಪರವಾದ ಸುಧಾರಣೆಗಳನ್ನು ವಿಕ್ರಮನ ನಿಧಿಯಿಂದ ಕಾರ್ಯರೂಪಕ್ಕೆ ತರುತ್ತಾರೆ. ಅಕ್ಷರಭ್ಯಾಸ ಜ್ಞಾನ ಪ್ರಸಾರ ಮೂಢನಂಬಿಕೆಗಳ ಉಚ್ಚಾಟನೆ ಧಾರ್ಮಿಕ ಪುನರ್‌ಸಂಘಟನೆ ಆರ್ಥಿಕ ಪುನರ್‌ಸಂಘಟನೆ. ವ್ಯವಸ್ಥೆಗಳಿಗೆ ವಿಶೇಷ ಗಮನಕೊಟ್ಟರು. ವಾಣಿಜ್ಯ ಕೈಗಾರಿಕೆಗಳನ್ನು ಬೆಳೆಯುವಂತೆ ಮಾಡಿದರು. ಕೃಷಿಕರ ಪರಿಸ್ಥಿತಿ ಸುಧಾರಿಸುವ ಯೋಜನೆಗಳನ್ನು ಹಾಕಿಕೊಂಡರು. ಕಾರ್ಯಾಲಯ ಹಾಗೂ ಆಡಳಿತ ವ್ಯವಸ್ಥೆ ಸರಳಗೊಳಿಸಿ ಅದಕ್ಕೆ ತಗಲುವ ವೆಚ್ಚವನ್ನು ಕಡಿಮೆ ಮಾಡಿದರು. ಜ್ಞಾನ ಪ್ರಸಾರ ಮಾಡುತ್ತಿದ್ದ ಮಠ ಆಹಾರಗಳಿಗೆ ಪ್ರಭುತ್ವದ ಹಾಗೂ ಮಾಂಡಲೀಕರಿಗೆ ಸಹಾಯ ದೊರಕುವಂತೆ ಮಾಡಿದರು. ಆಗ ರಾಜ್ಯದಲ್ಲಿ ಪಾಶುಪತ ಧರ್ಮ ಬಹಳ ಪ್ರಭಾವಶಾಲಿ ಧರ್ಮವಾಗಿತ್ತು. ಇದು ಬಸವಣ್ಣನವರ ಕಾರ್ಯದಲ್ಲಿ ಸಹಾಯಕವಾಯಿತು. ಈ ವಿಷಯವನ್ನು ಲೇಖಕರು ಭೀಮಕವಿಯ ಬಸವಪುರಾಣದಿಂದ ಆಯ್ದುಕೊಂಡಿದ್ದಾರೆ.

ಬಸವಣ್ಣನವರನ್ನು ಧರ್ಮನಿಷ್ಠೆ, ರಾಜಕೀಯ ಅನುಭವ, ಜನರಿಗಾಗಿ ದುಡಿಯುವ ಮನಸ್ಸು ಇನ್ನಷ್ಟು ಮೆಚ್ಚುವಂತೆ ಮಾಡಲಾಯಿತು. ಅದಕ್ಕೆ ಪೂರಕ ಎನ್ನುವಂತೆ ಒಂದು ಉದಾಹರಣೆಯನ್ನು ಕೊಡುತ್ತಾರೆ. ಒಮ್ಮೆ ಬಸವಣ್ಣನವರು ಕೋಡಿಮಠಕ್ಕೆ ಭೇಟಿ ಕೊಡುವ ಉದ್ದೇಶದಿಂದ ಹೋಗುತ್ತಿರುವಾಗ ದಾರಿ ಮಧ್ಯದಲ್ಲಿ ಒಬ್ಬ ದರೋಡೆಕೋರನಾಗಿರುವ ಸಿಂಗರಾರ್ಯ ಭೇಟಿಯಾಗುತ್ತಾನೆ. ಆತನು ಬಸವಣ್ಣನವರ ವಿಚಾರಗಳಿಗೆ ಮಾರುಹೋಗಿ ತನ್ನ ದರೋಡೆ ತನವನ್ನು ಬಿಟ್ಟು ಸೀದ ಮಾರ್ಗದಲ್ಲಿ ನಡೆಯುವಾಗ ಬಿಜ್ಜಳ ಆತನನ್ನು ಕಾರಾಗೃಹದಲ್ಲಿ ಇಟ್ಟುಕೊಂಡು ಬಸವಣ್ಣನವರ ಜೀವನ-ಸಾಧನೆಯನ್ನು ಕುರಿತು ಒಂದು ಗ್ರಂಥವನ್ನು ಬರೆಯುತ್ತಾರೆ. ಅದುವೇ ಮುಂದೆ ಅಮಲಬಸವ ಚಾರಿತ್ರ್ಯ ಎಂದು ಹೆಸರು ಪಡೆಯುವುದರೊಂದಿಗೆ ಸಿಂಗಿರಾಜ ಪುರಾಣವೆಂದು ಪ್ರಸಿದ್ಧಿಯಾಗುತ್ತದೆ.

ಬಸವಣ್ಣನವರು ರಾಜ್ಯಪಾಲರಾದ ವಿಷಯವನ್ನು ಯಾವುದೇ ಪುರಾಣವು ಪ್ರಸ್ತಾಪ ಮಾಡುವುದಿಲ್ಲ. ಆದರೆ ಕೆಲವು ಶಾಸನಗಳ ಹಿನ್ನೆಲೆಯಲ್ಲಿ ಕಾದಂಬರಿಕಾರರು ಸಮರ್ಥಿಸಿ ಕೊಂಡಿದ್ದಾರೆ. ಬಸವಣ್ಣನವರು ರಾಜ್ಯಪಾಲರಾಗಿದ್ದಾಗ ರಾಜ್ಯಮಲ್ಲ ಅರಸನು ತೈಲಪನಿಗಾಗಿ ಹಂಪಿಯಲ್ಲಿ ಬಂದು ಅರಮನೆಯನ್ನು ಕಟ್ಟಿಕೊಡುತ್ತಾನೆ. ಈ ವಿಷಯವು ಸಹ ಶಾಸನದಲ್ಲಿ ಉಲ್ಲೇಖವಾಗಿರುವುದು ಕಂಡುಬರುತ್ತದೆ. "ಕಾಮೇಶ್ವರಿಯು ತನ್ನ ಮಗನಾದ ಕೀರ್ತಿವರ್ಮನೊಂದಿಗೆ ಹಂಪಿಗೆ ಬರುತ್ತಾಳೆ".[೩] ಇದರೊಂದಿಗೆ ಇನ್ನೊಂದು ಪ್ರಸಂಗವನ್ನು ಸಹ ಕಾದಂಬರಿಕಾರರು ಎತ್ತಿದ್ದಾರೆ. ಅದು ಏನೆಂದರೆ ತೈಲಪನ ತಮ್ಮ ಜಗದೇಕಮಲ್ಲ ಆತನ ಗೆಳೆಯ ಬೊಮ್ಮರಸನೊಂದಿಗೆ ಆಗಮಿಸುತ್ತಾನೆ. ಕಾಮೇಶ್ವರಿಯು ತನ್ನ ಅಣ್ಣನಾದ ವಿಜಯಾರ್ಕನಲ್ಲಿಗೆ ಹೋಗುತ್ತಾಳೆ. ಕೀರ್ತಿವರ್ಮ ನನ್ನು ಬಿಜ್ಜಳನಲ್ಲಿಗೆ ಕಳುಹಿಸಿ ಅವನಿಗೆ ಆಡಳಿತದ ಅನುಭವವನ್ನು ನೀಡಿ ಪ್ರಾಪ್ತವಯಸ್ಕ ನಂತರ ರಾಜ್ಯ ಪಟ್ಟಾಭಿಷೇಕ ಮಾಡಬೇಕೆಂದು ತೈಲಪನ ತಮ್ಮನಾದ ಜಗದೇಕಮಲ್ಲನೊಂದಿಗೆ ಬಿಜ್ಜಳನಿಗೆ ಪತ್ರವನ್ನು ಬರೆದು ಕಳುಹಿಸುತ್ತಾನೆ. ಬಿಜ್ಜಳನ ತಮ್ಮನಾದ ಕರುಣದೇವನು ಜಗದೇಕಮಲ್ಲನ ಸಂರಕ್ಷಣೆ ಮತ್ತು ಅವನ ಪಾನ ಸೇವನೆಯಲ್ಲಿ ಪಾಲ್ಗೊಳ್ಳುತ್ತಾನೆ. ಇದರಿಂದ ತೈಲಪ ಪಾರ್ಶ್ವ ವಾಯುವಿಂದ ಮರಣ ಹೊಂದುತ್ತಾನೆ. ಬಿಜ್ಜಳನ ತಮ್ಮನಾದ ಕರುಣಾದೇವನು ವಿಲಾಸಿ ಜೀವನದಲ್ಲಿ ತೊಡಗಿರುವುದನ್ನು ಕಂಡು ತಮ್ಮ ರಾಜಿನಾಮೆಯನ್ನು ನೀಡುತ್ತಾರೆ. ಬಸವಣ್ಣನವರು ತಮ್ಮ ವೃತ್ತಿಗೆ ರಾಜಿನಾಮೆಯನ್ನು ನೀಡಿದರು. ಬಿಜ್ಜಳನು ಬಸವಣ್ಣನಿಗೆ ಮಂತ್ರಿಸ್ಥಾನವನ್ನು ನೀಡುವುದಲ್ಲದೇ ನಿವೃತ್ತಿ ರಾಜ್ಯಪಾಲ ವೇತನವನ್ನು ಸಹ ಕೊಡುತ್ತಾನೆ.

ತೈಲಪ ಗತಿಸಿದ ನಂತರ ಅವನ ಗಣಿಕೆಯರಾದ ಪಾಟಲಿಕೆ ಮತ್ತು ಪ್ರೇಮಾವತಿಯವರು ಗಂಧರ್ವ ವಿವಾಹ ಮಾಡಿಕೊಳ್ಳುತ್ತಾರೆ. ಈ ಗಂಧರ್ವ ವಿವಾಹ ಪದ್ಧತಿಯು ಬಸವಣ್ಣನವರ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ಹಾಗೂ ಅದರಿಂದ ರಾಜ್ಯಕ್ಕೆ ಆದಾಯ ಬರುತ್ತೆಂದು ಕಾದಂಬರಿಕಾರರು ವಿವರಿಸುತ್ತಾರೆ.

"ಮಾರಸಿಂಹನು ಪ್ರೇಮಾವತಿಯನ್ನು ತ್ರಿಪುರಾಂತಕ ದೇವಾಲಯದಲ್ಲಿ ಗಂಧರ್ವ ವಿವಾಹ ಮಾಡಿಕೊಂಡಾಗ ಅದನ್ನು ನೋಡಿದ ಮಂತ್ರಿ ನಾರಾಯಣ ಕ್ರಮಿತ ಬಿಜ್ಜಳನಿಗೆ ದೂರನ್ನು ಕೊಡುತ್ತಾನೆ. ಏಕೆಂದರೆ ಗಂಧರ್ವ ವಿವಾಹದ ಗಣಿಕೆಯರು ಸಹಜ ಸ್ತ್ರೀಯರಂತೆ ಸಾಮಾನ್ಯ ಸಭೆ ಸಮಾರಂಭದಲ್ಲಿ ಭಾಗವಹಿಸುವಂತಿಲ್ಲ".[೪] ಇದನ್ನು ಮನಗಂಡ ಬಿಜ್ಜಳನು ಬಸವಣ್ಣನವರ ಅಧ್ಯಕ್ಷತೆಯಲ್ಲಿ ನ್ಯಾಯಾಪೀಠವನ್ನು ರಚಿಸಿದನು. ಆಗ ಗಣಿಕಾಸ್ತ್ರೀಯರಿಗೆ ಬಂದಂತಹ ಈ ಸಮಸ್ಯೆಯ ವಿರುದ್ಧವಾಗಿ ನಿಲ್ಲುವ ಬದಲು ಪರವಾಗಿ ತೀರ್ಪು ನೀಡುತ್ತಾನೆ. ಸ್ತ್ರೀಯರಿಗೆ ಮುಕ್ತ ಸ್ವಾತಂತ್ರ್ಯ ಕೊಡುವಲ್ಲಿ ಬಸವಣ್ಣನವರ ಮಾನವೀಯ ಕಾಳಜಿಯನ್ನು ಕಾದಂಬರಿಕಾರರು ಚಿತ್ರಿಸಿದ್ದಾರೆ.

ಬಸವಣ್ಣನವರು ಕದಂಬ ರಾಜಕುಮಾರಿ ಕುಸುಮಾವಳಿಯ ಪ್ರೇಮವನ್ನು ನಿರಾಕರಿಸಿ ಬುದ್ಧಿವಾದವನ್ನು ಹೇಳಿದ್ದರು. ಕಾಮೇಶ್ವರಿಯಿಂದ ಬಂದ ಕರುಣಾದೇವನು ಕುಸುಮಾವಳಿಯ ಮೇಲೆ ಅತ್ಯಾಚಾರವನ್ನು ಮಾಡಲು ಪ್ರಯತ್ನಿಸುತ್ತಾನೆ. ಆ ಸಂದರ್ಭದಲ್ಲಿ ಹರಳಯ್ಯನ ಮಗ ಶೀಲವಂತನು ರಕ್ಷಿಸುತ್ತಾನೆ. ಹರಳಯ್ಯನ ಎರಡನೇ ಹೆಂಡತಿಯಾದ ಕಲ್ಯಾಣಿಯ ಮಗನೇ ಶೀಲವಂತ ಎಂಬ ಈ ವಿಷಯ ಯಾವುದೇ ಸಾಹಿತ್ಯ ಕೃತಿಯಲ್ಲಿ ನಮೂದಿತವಾಗಿಲ್ಲ. ಕ್ರಾಂತಿ ಕಲ್ಯಾಣ ಕಾದಂಬರಿಯಲ್ಲಿ ಮಾತ್ರ ಇದರ ಸುಳಿವು ಸಿಗುತ್ತದೆ. ಇದನ್ನು ಮನಗಂಡ ಬಸವಣ್ಣನವರು ಕುಸುಮಾವಳಿ ಮತ್ತು ಶೀಲವಂತನಿಗೆ ಮದುವೆಯನ್ನು ಮಾಡಿಸುತ್ತಾರೆ. ಕಾಮೇಶ್ವರಿಯು ಜಗದೇಕಮಲ್ಲನ ಸಹವಾಸದ ಫಲವಾಗಿ ಒಂದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಇದರಿಂದ ಅವಳ ರಾಜಕೀಯ ಚಟುವಟಿಕೆಗಳು ಬಿರುಸುಗೊಳ್ಳುತ್ತವೆ. ಬಸವಣ್ಣನವರು ಸಹ ಶರಣ ಚಳುವಳಿಯನ್ನು ತೀವ್ರಗೊಳಿಸುತ್ತಾರೆ. ಅದೇ ಈ ಕಾದಂಬರಿಯಲ್ಲಿ ಪ್ರಭಾವಿತವಾಗಿದೆ. ಕುಸುಮಾವಳಿಯು ಕಾಮುಕ ಕರ್ಣದೇವನಿಂದ ಕಿರುಕುಳಕ್ಕೆ ಒಳಗಾದಳು. ಹೀಗಾಗಿ ಬಿಜ್ಜಳನ ಆಸ್ಥಾನದಲ್ಲಿ ಇರುವುದು ಸುರಕ್ಷಿತವಲ್ಲವೆಂದು ತಿಳಿದು ನೀಲಾಂಬಿಕೆಯು ಆಕೆಯನ್ನು ಕರೆಯಿಸುತ್ತಾಳೆ. ಇದರಿಂದ ಕುಸುಮಾವಳಿ ಅನಿವಾರ್ಯವಾಗಿ ಲಿಂಗದೀಕ್ಷೆ ಪಡೆದು ಮಹಾಮನೆಯ ಶರಣೆಯಾಗುತ್ತಾಳೆ. ಬಸವಣ್ಣನವರು ಶರಣ ಧರ್ಮಕ್ಕಾಗಿ ಬಲದೇವನ ಆಸ್ತಿಯನ್ನು ದಾಸೋಹಕ್ಕಾಗಿ ಸಂಪತ್ತೆಲ್ಲವನ್ನು ವಿನಿಯೋಗಿಸುತ್ತಾರೆ. ಅಲ್ಲಿ ಅನಾಥ ಮಕ್ಕಳ ರಕ್ಷಣೆ, ನಿರಕ್ಷರಿಗಳಿಗೆ ಅಕ್ಷರಭ್ಯಾಸ, ಶರಣಧರ್ಮದ ಪ್ರಚಾರ ಪ್ರತಿನಿತ್ಯ ಧರ್ಮಗೋಷ್ಠಿ ನಡೆಸುವುದು ಪ್ರಾರಂಭವಾಗುತ್ತದೆ. ಮಹಾಮನೆಯಲ್ಲಿ ಒಂದು ದಿನ ಸನ್ಯಾಸಿಯೊಬ್ಬ ರಾತ್ರಿಯಲ್ಲಿ ಒಳನುಗ್ಗಿ ಪೂಜಾ ಮನೆಯಲ್ಲಿದ್ದ ಬೆಳ್ಳಿ ಸಾಮಾನುಗಳನ್ನು ತೆಗೆದುಕೊಂಡು ಹೋಗುವಾಗ ಗಂಗಾಂಬಿಕೆ ಕಳ್ಳ ಎಂದು ಕೂಗಿಕೊಳ್ಳುತ್ತಾಳೆ. ಅವನು ನಿನ್ನ ಕಿವಿಯ ಓಲೆಯನ್ನು ಕೊಡು ಎಂದು ಕೇಳಿಕೊಂಡಾಗ ಅವನು ಸಾಮಾನ್ಯ ಕಳ್ಳನಲ್ಲ ನಿನ್ನ ಕಿವಿಯ ಓಲೆಯನ್ನು ಕೊಟ್ಟು ಬಿಡು ಎಂದು ಬಸವಣ್ಣನವರು ಹೇಳುವ ಸಂದರ್ಭವು ಹರಿಹರನ ಬಸವರಾಜದೇವ ರಗಳೆಯಲ್ಲಿ ಮೂಡಿಬಂದಿದೆ. ಅದಕ್ಕೆ ಇನ್ನು ಹೆಚ್ಚಿನ ವಿಷಯವನ್ನು ಸೇರಿಸುವ ಉದ್ದೇಶದಿಂದ ಕಾದಂಬರಿಕಾರರು ಕಳ್ಳನ ಬಾಯಿಯಿಂದ ಈ ರೀತಿ ನುಡಿಸುತ್ತಾರೆ. ನಾನು ನೂರು ವರ್ಷಗಳ ಕಾಲ ಯೋಗ ಸಮಾಧಿಯಲ್ಲಿದ್ದು, ಈಗ

ಎಚ್ಚೆತ್ತು ನಿನ್ನ ಧಾರ್ಮಿಕ ಸಾಮಾಜಿಕ ಸುಧಾರಣೆಗಳಲ್ಲಿ ಭಾಗವಹಿಸಬೇಕೆಂಬ ಕಾರಣದಿಂದ ಬಂದಿದ್ದೇನೆ. ನನಗೆ ಜ್ಞಾನಿ ಎಂಬ ಅಹಂಕಾರ ಇತ್ತು. ನಿನ್ನ ಭಕ್ತಿ, ವೈರಾಗ್ಯಗಳ ಸಮನ್ವಯವನ್ನು ನೋಡಿ ನನ್ನ ಗರ್ವವು ಪರಿಹಾರವಾಯಿತು ಎಂದು ನುಡಿಯುತ್ತಾನೆ. ಭೀಮಕವಿಯ ಬಸವಪುರಾಣದಲ್ಲಿ ಬರುವ ಈ ಕಳ್ಳನ ಪ್ರಸಂಗವನ್ನು ರೋಚಕವಾಗಿ ಚಿತ್ರಿಸಿದ್ದಾರೆ. ಶೂನ್ಯಸಂಪಾದನೆಯಲ್ಲಾಗಲೀ, ಚಾಮರಸನ ಪ್ರಭುಲಿಂಗಲೀಲೆಯಲ್ಲಾಗಲೀ ಬರುವ ಈ ಪ್ರಸಂಗವನ್ನು ಸಹಜವಾಗಿ ಚಿತ್ರಿಸಲಾಗಿದೆ.

ಇತ್ತ ವಿಧವೆಯಾದ ಕಾಮೇಶ್ವರಿಯಲ್ಲಿ ಬಿಜ್ಜಳನ ವಿರುದ್ಧ ಸೇಡಿನ ಮನೋಭಾವ ಹೆಡೆ ಎತ್ತುತ್ತದೆ. ಇಂಗಳೇಶ್ವರದವನಾದ ಅಗ್ಗಳನ್ನು ಕರ್ಹಾಟಕ್ಕೆ ಕರೆಯಿಸಿಕೊಂಡು ಅವನನ್ನು ತನ್ನ ಹೆಗ್ಗಡೆಯನನ್ನಾಗಿ ಮಾಡಿಕೊಂಡು ಸೇಡು ತೀರಿಸಿಕೊಳ್ಳುವ ಹವಣಿಕೆಯಲ್ಲಿರುತ್ತಾಳೆ. ಅಗ್ಗಳನು ಕವಿಯೂ ಆಗಿರುವುದಲ್ಲದೇ ರಾಜಕೀಯ ಚತುರನೂ ಆಗಿರುತ್ತಾನೆ.

ಬಿಬ್ಬಳನಿಗೆ ತನ್ನ ಚಿಕ್ಕ ಮಗನಾದ ಸೋಮೇಶ್ವರನಲ್ಲಿ ಬಹಳ ಪ್ರೀತಿಯಿರುತ್ತದೆ. ಅವನ ವಿದ್ಯಾಭ್ಯಾಸಕ್ಕಾಗಿ ಅವನನ್ನು ಬೆಳಗಾವಿಗೆ ಕಳುಹಿಸಿರುತ್ತಾರೆ. ಅಲ್ಲಿ ಚೆನ್ನಬಸವನೂ ಅಧ್ಯಯನವನ್ನು ಮಾಡುತ್ತಿರುತ್ತಾನೆ. ಇವರಿಬ್ಬರಲ್ಲಿ ಸ್ನೇಹವು ಏರ್ಪಟ್ಟಿರುತ್ತದೆ. ಬಿಜ್ಜಳನಿಗೆ ತನ್ನ ಸೊಸೆ, ಮಗ, ಸೋವಿದೇವನ ಹೆಂಡತಿ ರೂಪವತಿ ಅಷ್ಟೇ ಅಲ್ಲದೇ ಗುಣವಂತಿಯು ಆಗಿರುತ್ತಾಳೆ. ಅವರನ್ನು ಸ್ವೀಕರಿಸಲು ರಾಜದೀಪಗಳನ್ನು ಅಲಂಕರಿಸಿರುತ್ತಾನೆ. ಸೋವಿದೇವ ಕೈಲಾಸಮಂದಿರವನ್ನು ನೋಡಲು ನಿರ್ಧರಿಸಿದ. ಅಗ್ಗಳ ಚೆನ್ನಬಸವಣ್ಣನವರು ಬಲಿಪಶುವನ್ನು ತಡೆದ ಸಂಗತಿಯನ್ನು ತಿಳಿದು ಅವರನ್ನು ಅಭಿನಂದಿಸಲು ಬರುತ್ತಾನೆ. ಈ ಶರಣರ ತಂಡದೊಂದಿಗೆ ಕದಂಬ ರಾಜಕನ್ಯೆಯಾದ ಕುಸುಮಾವಳಿ ಶೀಲವಂತರು ಅಲ್ಲಿಗೆ ಬಂದಿರುತ್ತಾರೆ. ಸೋವಿದೇವನು ಶರಣ ಪಕ್ಷಪಾತಿಯಾಗಿದ್ದು ಚೆನ್ನಬಸವಣ್ಣನವರ ಯಜ್ಞ ವಿರೋಧವನ್ನು ಮೆಚ್ಚಿಕೊಂಡಿರುತ್ತಾರೆ. ಚೆನ್ನಬಸವಣ್ಣನವರನ್ನು ಅಗ್ಗಳನು ಮುಕ್ತಕಂಠದಿಂದ ಹೊಗಳಿರುತ್ತಾನೆ. ಈ ಎಲ್ಲಾ ವಿಷಯಗಳನ್ನು ಕಾದಂಬರಿಕಾರರ ಕಲಾತ್ಮಕತೆ ಅನಾವರಣಗೊಂಡಿದೆ.

ಶೀಲವಂತನು ಕಾಮೇಶ್ವರಿಯ ಸೌಂದರ್ಯಕ್ಕೆ ಮರುಳಾಗಿದ್ದನು. ಅವನನ್ನು ಬಿಗಿದಪ್ಪಿಕೊಂಡು ಕಾಮೇಶ್ವರಿಯು ಚುಂಬಿಸುತ್ತಾಳೆ. ಕಾಮೇಶ್ವರಿ ಕಾದಂಬರಿ ಉದ್ದಕ್ಕೂ ಕಾಮಭೋಗದ ವಸ್ತುವಾಗಿ ಕಂಡುಬರುತ್ತಾಳೆ. ಎಲ್ಲೋರಾದಲ್ಲಿ ವಿವಿಧ ವಾಸ್ತುಶಿಲ್ಪದ ಭಂಗಿಗಳನ್ನು ನೋಡುತ್ತಿರುವಾಗ ಶೀಲವಂತನಿಗೆ ಹಾವು ಕಚ್ಚುತ್ತದೆ. ಇದರಿಂದ ಕಾಮೇಶ್ವರಿಗೆ ಆಘಾತವಾಗುತ್ತದೆ. ಅಲ್ಲೇ ನಿಂತಿರುವ ಕುಸುಮಾವಳಿ ಸರ್ಪದ ವಿಷವನ್ನು ಬಾಯಿಯಲ್ಲಿ ಹೀರಿಕೊಂಡು ನಿಶ್ಚಿಂತಳಾಗಿ ನೆಲಕ್ಕೆ ಉರುಳುತ್ತಾಳೆ. ಕುಸುಮಾವಳಿ ಮರಣ ಹೊಂದುತ್ತಾಳೆ. ಶೀಲವಂತನು ಬದುಕುತ್ತಾನೆ. ಕಾದಂಬರಿಕಾರರು ಕುಸುಮಾವಳಿಯ ತ್ಯಾಗದ ಮನೋಭಾವನೆಯನ್ನು ಓದುಗರಿಗೆ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಅಲ್ಲಿಂದ ಹಿಂದಿರುಗಿದ ಶೀಲವಂತನಗೆ ಚೆನ್ನಬಸವಣ್ಣನವರು ಚಿಕಿತ್ಸೆಯನ್ನು ನೀಡುತ್ತಾರೆ. "ಈ ವಿಷಯ ತಿಳಿದ ಮಧುವರಸನ ಮಗಳು ಲಾವಣ್ಯವತಿ ಶೀಲವಂತನ ಆರೈಕೆಯಲ್ಲಿ

ಹೇಳಿದಾಗ ಬಸವಣ್ಣನವರು ಹೇಳಿರುವ ಮಾತು ಅಷ್ಟೇ ಮಾರ್ಮಿಕವಾಗಿ ಮೂಡಿ ಬಂದಿದೆ. ನನ್ನ ಪ್ರಾಣವಿರುವವರೆಗೂ ನಾನು ಶರಣರಿಂದ ದೂರ ಇರಲಾರೆ. ಶರಣರ ಚಳುವಳಿ ನನ್ನ ಉಸಿರು ಎಂದು ಹೇಳುತ್ತಾರೆ. ಈ ರೀತಿ ಹೇಳಿದಾಗ ಬಿಜ್ಜಳನು ಹಿಂದಿನ ಎಲ್ಲಾ ಸಂಬಂಧಗಳನ್ನು ಮರೆತು ಜನರು ರೊಚ್ಚಿಗೆದ್ದಿದ್ದಾರೆ. ನಾಳೆ ಸೂರ್ಯೋದಯ ಹೊತ್ತಿಗೆ ಈ ಕಲ್ಯಾಣವನ್ನು ಬಿಡಬೇಕು ಎಂದು ಗಡಿಪಾರು ಆಜ್ಞೆಯನ್ನು ಹೊರಡಿಸುತ್ತಾನೆ. ಬೆಳಿಗ್ಗೆ ಬಸವಣ್ಣನವರನ್ನು ಅವರ ಅನುಯಾಯಿಗಳು ಭಾರವಾದ ಹೃದಯಗಳಿಂದ ಬೀಳ್ಕೊಡುತ್ತಾರೆ. ಇದನ್ನು ಕಾದಂಬರಿ ಕಾರರು ಸತ್ಯಕ್ಕೆ ನ್ಯಾಯವಿಲ್ಲ ಎಂಬಂತೆ ವಿವರಿಸುತ್ತಾರೆ.

ಕಾಮೇಶ್ವರಿಯ ಆಜ್ಞೆಯ ಮೇರೆಗೆ ಬಂದಿರುವ ಅಗ್ಗಳದೇವ, ಬ್ರಹ್ಮಶಿವ, ಬೊಮ್ಮರಸ ಈ ಮೂರು ಜನ ಇದೇ ಸಮಯಕ್ಕೆ ಕಲ್ಯಾಣವನ್ನು ಪ್ರವೇಶ ಮಾಡುತ್ತಾರೆ. ಈ ಬೀಳ್ಕೊಡಿಗೆಯ ಸಮಾರಂಭದಲ್ಲಿ ಆ ಮೂರು ಜನ ಪಾಲ್ಗೊಂಡು ಅಗ್ಗಳದೇವ ಬಸವಣ್ಣನವರ ವಿಚಾರಗಳಿಗೆ ಮಾರುಹೋಗಿದ್ದರಿಂದ ತಾನೇ ಪರಿಚಯ ಮಾಡಿಕೊಂಡು ದರ್ಶನವನ್ನು ಪಡೆಯುತ್ತಾನೆ. ಬಸವಣ್ಣನವರು ಗಂಗಾಂಬಿಕೆ ಮತ್ತು ಮಗನಾದ ಸಂಗಮನಾಥರೊಂದಿಗೆ ಕಲ್ಯಾಣಕ್ಕೆ ಬರುತ್ತಾನೆ. ಇಲ್ಲಿ ಕಾದಂಬರಿಕಾರರು ಶರಣರು ಪಯಣ ಮಾಡುವಾಗಲೂ ಅವರು ಜೀವಂತವಾಗಿರುವುದನ್ನು ಆಶ್ಚರ್ಯ ಸಂಗತಿ ಎಂದು ವ್ಯಕ್ತಪಡಿಸುತ್ತಾರೆ.

ಕುಮಾರ ಪ್ರೇಮಾರ್ಣವನನ್ನು ಚಾಲುಕ್ಯ ರಾಜನನ್ನಾಗಿ ಮಾಡುವುದು ಅಷ್ಟೊಂದು ಸುಲಭವಾದ ಕೆಲಸವಾಗಿರುವುದಿಲ್ಲ. ಏಕೆಂದರೆ ತೈಲಪನ ತಮ್ಮನಾದ ಜಗದೇಕಮಲ್ಲನನ್ನು ಗೃಹಬಂಧನದಲ್ಲಿ ಇಟ್ಟು ಹೆಸರಿಗೆ ತಾನೇ ಸಾಮ್ರಾಟನೆಂದು ಘೋಷಿಸಿಕೊಂಡು ಆಳ್ವಿಕೆ ಮಾಡುತ್ತಿರುತ್ತಾನೆ. ಇದು ಜಗದೇಕಮಲ್ಲನಿಗೆ ಗೊತ್ತಿರುವುದಿಲ್ಲ. ಕಾಮೇಶ್ವರಿಯು ಮಾರುವೇಷದಲ್ಲಿ ಬಂದು ಜಗದೇಕಮಲ್ಲನಿಗೆ ಈ ವಿಷಯವನ್ನು ತಿಳಿಸಿ ಪ್ರೇಮಾರ್ಣವನನ್ನು ಚಾಲುಕ್ಯ ರಾಜ್ಯದ ಉತ್ತರಾಧಿಕಾರಿಯನ್ನಾಗಿ ಮಾಡಬೇಕೆಂದು ಕೇಳಿಕೊಳ್ಳುತ್ತಾಳೆ.

ತಾನು ಬರುವುದರ ಜೊತೆಗೆ ತನ್ನೊಂದಿಗೆ ಅಗ್ಗಳ, ಬ್ರಹ್ಮ, ಬೊಮ್ಮರಸ ಮುಂತಾದವರನ್ನು ಕರೆದು ತಂದಿರುತ್ತಾಳೆ. ಮೊದಲು ನಾರಾಯಣ ಕ್ರಮಿತರನ್ನು ಕಂಡು ಬಿಜ್ಜಳನನ್ನು ಭೇಟಿಯಾಗ ಬೇಕಾಗಿರುತ್ತದೆ. ಏಕೆಂದರೆ ಬ್ರಹ್ಮರಸನು ಜೈಲಿನಿಂದ ತಪ್ಪಿಸಿಕೊಂಡು ಬಂದಿರುತ್ತಾನೆ. ಆದ್ದರಿಂದ ಬ್ರಹ್ಮಶಿವನೊಂದಿಗೆ ಕಷ್ಟಪಟ್ಟು ವೀರಶೈವ ಮತವನ್ನು ಸೇರಿರುತ್ತಾನೆ. ಅಗ್ಗಳದೇವನು ಚಾಣಾಕ್ಷತನ ದಿಂದ ನಾರಾಯಣ ಕ್ರಮಿತರಿಗೆ ಕಾಮೇಶ್ವರಿಯ ವಿಷಯವನ್ನು ತಿಳಿಸಿ ಬಿಜ್ಜಳನು ಮಂಗಳವೇಡೆಯ ಉತ್ಸವಕ್ಕೆ ಬರಬೇಕೆಂದು ಹೇಳುತ್ತಾನೆ. ಏಕೆಂದರೆ ಪ್ರೇಮಾರ್ಣವನನ್ನು ಉತ್ತರಾಧಿಕಾರಿಯನ್ನಾಗಿ ಮಾಡಬೇಕಾಗಿರುವುದರಿಂದ ಜಗದೇವನ ಅಪ್ಪಣೆಯನ್ನು ಪಡೆದು ಗೃಹಬಂಧನದಲ್ಲಿರುವ ಜಗದೇವನನ್ನು ತಪ್ಪಿಸಿಕೊಂಡು ಬರಲು ಸೂಚಿಸುತ್ತಾನೆ. ಒಂದು ಸಲ ಅಗ್ಗಳದೇವ ಮತ್ತು ಜಗದೇಕಮಲ್ಲ ಕುದುರೆ ಸವಾರಿ ಮಾಡುವಾಗ ಕೆಳಗೆ ಬಿದ್ದ ಮನಃಪಟಲದಲ್ಲಿ ಸುಳಿಯುತ್ತಿದ್ದ ಅಂಶಗಳು ಶರಣರ ಒಲವಿನ ಕಡೆ ಗಮನಕೊಡುವುದರಿಂದ ಅವನಿಗೆ ಮತ್ತೆ ಜ್ಞಾಪಕಶಕ್ತಿ

ಮರುಕಳಿಸಿದಂತೆ ಆಗುತ್ತದೆ. ಇಂತಹ ಸಂದರ್ಭದಲ್ಲಿ ಅಗ್ಗಳದೇವನು ಪ್ರೇಮಾರ್ಣವನನ್ನು ನಿನ್ನ ಮಗ ಎಂದು ವಿವರಿಸಿ ಕೇಳುತ್ತಾನೆ. ವಿಲಾಸ ಜೀವನದಿಂದ ರಾಜ್ಯಪಾಲನ ಶಕ್ತಿಯನ್ನು ಕಳೆದುಕೊಂಡಿದ್ದರಿಂದ ಪ್ರೇಮಾರ್ಣವನನ್ನು ಉತ್ತರಾಧಿಕಾರಿಯನ್ನಾಗಿ ಮಾಡಲು ಒಪ್ಪಿಕೊಂಡಿರುತ್ತಾನೆ.

ಇತ್ತ ವೀರಶೈವ ಮತವನ್ನು ಸೇರಿರುವ ಬ್ರಹ್ಮಶಿವ ಮತ್ತು ಬೊಮ್ಮರಸ ಬಿಜ್ಜಳನ ವಿರುದ್ಧ ಸಂಚನ್ನು ಹೆಣೆಯುತ್ತಿರುತ್ತಾರೆ. ಬ್ರಹ್ಮಶಿವ ನಾಟಕ ವಸ್ತುಗಳು ಸಿಗುವ ಬೀದಿಗೆ ಹೋಗಿ ಸನ್ಯಾಸಿಗೆ ಒಪ್ಪಿಗೆಯಾಗಿರುವ ಉಡುಪನ್ನು ಖರೀದಿಸಿ ಅವನ್ನು ಬೊಮ್ಮರಸನಿಗೆ ತೊಡಸುತ್ತಾನೆ. ಬ್ರಹ್ಮರಸನಿಗೆ ಎಷ್ಟೋ ವಚನಗಳು ಕಂಠೋದ್ಘಾಟವಾಗಿದ್ದವು. ಬ್ರಹ್ಮಶಿವನು ಅವನ ಶಿಷ್ಯನಾಗಿ ಅವನ ಬಟ್ಟೆಗಳನ್ನು ಧರಿಸಿಕೊಂಡು ಅನುಭವಮಂಟಪಕ್ಕೆ ಬರುತ್ತಾನೆ. ಹೀಗೆ ಇರುವಾಗ ಬಿಜ್ಜಳನು ಒಂದು ದಿನ ಅನುಭವಮಂಟಪಕ್ಕೆ ಬಂದಾಗ ನೀಲಾಂಬಿಕೆ ಮತ್ತು ಚೆನ್ನಬಸವಣ್ಣನನ್ನು, ನಾಗಲಾಂಬಿಕೆಯನ್ನು ಸಂತೈಸಿ ಚೆನ್ನಬಸವಣ್ಣನಿಗೆ ತನ್ನ ರಾಜ್ಯದ ದಂಡನಾಯಕನ ಪದವಿಯನ್ನು ಒಪ್ಪಿಕೊಳ್ಳುವಂತೆ ಮಾಡುತ್ತಾನೆ. ಚಾಲುಕ್ಯ ಅರಸರ ಶೈವ ಸಂಪ್ರದಾಯವನ್ನು ಪುರಸ್ಕರಿಸಿದವರು. ಅಗ್ಗಳದೇವನು ಶರಣರ ಚಳುವಳಿಯಲ್ಲಿ ಪಾಲ್ಗೊಂಡು ತನ್ನ ವಿಲಾಸ ಜೀವನವನ್ನು ಕೈಬಿಟ್ಟಿದ್ದನು. ಹಾಗಾಗಿ ಅನುಭವ ಮಂಟಪದಲ್ಲಿ ಶ್ರದ್ಧೆ, ಭಕ್ತಿಗಳು ದಿನದಿಂದ ದಿನಕ್ಕೆ ಹೆಚ್ಚುತ್ತಾ ನಡೆದವು. ಬಿಜ್ಜಳ ಅಸ್ತಿತ್ವದಲ್ಲಿದ್ದ ಪ್ರತಿಯೊಂದು ಮತದಿಂದ ಒಬ್ಬೊಬ್ಬ ಜಂಗಮನನ್ನು ಕಳುಹಿಸುವಂತೆ ಮಾಡಬೇಕಾಗಿತ್ತು. ಇದರಿಂದ ಅವನ ದೃಷ್ಟಿ ಅನುಭವಮಂಟಪದ ಕಡೆ ತಿರುಗಿತು. ಹೊಸದಾಗಿ ದಂಡನಾಯಕನಾಗಿರುವ ಚೆನ್ನಬಸವಣ್ಣನಿಗೆ ಬಿಜ್ಜಳನು ಪತ್ರವನ್ನು ಬರೆದು ಈ ಮೇಲಿನ ಇಂಗಿತವನ್ನು ವ್ಯಕ್ತಪಡಿಸಿದ್ದಾನೆ. ಇದರಿಂದ ದಿಗ್ಭ್ರಾಂತರಾದ ಚೆನ್ನಬಸವಣ್ಣನವರು ಮಡಿವಾಳ ಮಾಚಿದೇವ, ಸಕಲೇಶ ಮಾದರಸರೊಂದಿಗೆ ಚರ್ಚಿಸಿ ಶರಣರೇನು ಅಂಜ ಬೇಕಾಗಿಲ್ಲ ಎಂದು ಹೇಳಿದರು. ಹೀಗಿರುವಾಗ ಒಂದು ದಿನ ಬ್ರಹ್ಮೇಂದ್ರ ಶಿವಯೋಗಿಯನ್ನು ಅವನ ಜೊತೆಗೆ ಹರೀಶ ರುದ್ರನ ಹೆಸರಿನ ಬ್ರಹ್ಮಶಿವನನ್ನು ಕಳುಹಿಸಲಾಗಿ ರಾಜಾಗೃಹದಲ್ಲಿರುವ ಜಗದೇಕಮಲ್ಲನ ಅನುಮತಿಯಂತೆ ನಡೆದುಕೊಳ್ಳಬೇಕೆಂದು ಬಿಜ್ಜಳನು ಆಜ್ಞೆಯನ್ನು ಹೊರಡಿಸಿದನು. ಇದರಿಂದ ಬ್ರಹ್ಮಶಿವ, ಬ್ರಹ್ಮರಸ, ಜಗದೇಕಮಲ್ಲ ಈ ಮೂವರಿಗೂ ಉಪಯುಕ್ತವಾಯಿತು.

ಜಗದೇಕಮಲ್ಲನು ಈ ಮೂವರನ್ನು ನೋಡಿ ಜೀವ ಬಂದಂತಾಯಿತು. ಇದರಿಂದ ಜಗದೇಕಮಲ್ಲನಿಗೆ ಗಣಿಕೆಯರ ಸಹವಾಸ, ಮದ್ಯಪಾನದ ಸಹವಾಸ ಬಿಟ್ಟು ಬಿಟ್ಟಿದ್ದನು. ಕರ್ಣದೇವನಿಗೆ ಯಾವುದೇ ಅನುಮಾನ ಬರದಂತೆ ಬ್ರಹ್ಮಶಿವನು ನಡೆದುಕೊಳ್ಳುತ್ತಿದ್ದನು. ಬಿಜ್ಜಳನು ಧರ್ಮಾಧಿಕರಣ ನಡೆಸಿ ಬಸವಣ್ಣ ಹೊರಟು ಹೋದ ಮೇಲೆ ಬಿಜ್ಜಳನು ಸಾರ್ವಜನಿಕರ ಅಭಿಪ್ರಾಯಗಳನ್ನು ಸಂಗ್ರಹಿಸಲು ಒಂದು ಸಮಿತಿಯನ್ನು ರಚಿಸಿದನು. ಸೋವಿದೇವನ ಪಟ್ಟಾಭಿಷೇಕದಲ್ಲಿ ತೊಡಗಿರುವುದರಿಂದ ಈ ಕಡೆ ಗಮನ ಕೊಡಲಿಲ್ಲ. ಮಂಗಳವಾಡದಲ್ಲಿ ಪಟ್ಟಾಭಿಷೇಕ ಎಲ್ಲಾ ಸಿದ್ಧತೆಗಳು ನಡೆಯತೊಡಗಿದವು. ಸೋವಿದೇವ ಮತ್ತು ಸುಂದರಮಲ್ಲಿನಿ ಸಕಲ ಮರ್ಯಾದೆಗಳು ದೊರೆಯತೊಡಗಿದವು. ರಾಣಿ ಕಾಮೇಶ್ವರಿ ಮಂಗಳವಾಡಕ್ಕೆ ಬಂದು

ತಲುಪಿದಳು. ಅಗ್ಗಳದೇವ ರಾಣಿಯನ್ನು ಆಗಾಗ ಭೇಟಿ ಮಾಡಲು ಅನುಕೂಲವಾಗಿರುವುದರಿಂದ ಈ ವಿಷಯವು ಜಗದೇಕಮಲ್ಲನಿಗೆ ಹಿಡಿಸಲಿಲ್ಲ. ಸೋವಿದೇವನ ಪಟ್ಟಾಭಿಷೇಕ ವಿಜೃಂಭಣೆಯಿಂದ ನಡೆಯಿತು.

ಕಲ್ಯಾಣದಲ್ಲಿ ಅಲ್ಲಮಪ್ರಭುವನ್ನು ಎದುರುಗೊಳ್ಳುವ ಸಮಯದಲ್ಲಿ ಗೊಂದಲವೆಬ್ಬಿಸಿದ ಬ್ರಹ್ಮಶಿವ ಕರ್ಹಾಟವನ್ನು ಸೇರಿ ವಿಜಯಾರ್ಕನನ್ನು ಮೊರೆಹೊಕ್ಕಿದ್ದನು. ಬ್ರಹ್ಮಶಿವ-ಅಗ್ಗಳರು ಪರಸ್ಪರ ಪರಿಚಯ ಮಾಡಿಕೊಂಡರು. ಮೊದಲಿಗೆ ಶರಣ ಧರ್ಮವನ್ನು ಸ್ವೀಕರಿಸಿದ್ದ ಬ್ರಹ್ಮಶಿವ ಜೈನಧರ್ಮವನ್ನು ಸ್ವೀಕರಿಸಿ ಶೈವಧರ್ಮ ದ್ವೇಷಿಯಾಗಿದ್ದನು. ಜಿನಸಮಯ ಬ್ರಹ್ಮಶಿವ ಕೆಲವು ವಚನಗಳ ಅಣಕವಾಡನ್ನು ಅಗ್ಗಳನಿಗೆ ಓದಿ ತೋರಿಸಿದನು. ಅವುಗಳನ್ನು ಅವನೇ ರಚಿಸಿದ್ದನು. ಅಂತೂ ಕಾಮೇಶ್ವರಿಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಬ್ರಹ್ಮಶಿವನಿಂದ ಅಗ್ಗಳ ಸಂಗ್ರಹಿಸಿದನು.

ಬಿಜ್ಜಳನ ಅನುಮೋದನೆ ಪಡೆದ ಮೂರು ದಾನಪತ್ರಗಳನ್ನು ಹಿಡಿದು ಕಲ್ಯಾಣಕ್ಕೆ ಮಂಚಣ್ಣನು ಬಂದನು. ಅವುಗಳಲ್ಲಿ ಒಂದು ಭಾಗ ಧರ್ಮ ಪ್ರತಿಷ್ಠಾಪನೆಗೆಂದೂ ಇನ್ನೊಂದು ಭಾಗ ರಾಜ್ಯದ ವಿದ್ಯಾಪೀಠಗಳ ಅಭಿವೃದ್ಧಿಗೆಂದೂ, ಮತ್ತೊಂದು ಭಾಗ ಮಧುವರಸರ ಪುತ್ರಿಕಾಪುತ್ರಿ ಲಾವಣ್ಯವತಿಗೆಂದು ತಿಳಿಸಲಾಗಿತ್ತು. ಅನುಭವಮಂಟಪದ ಸಭಾಪತಿ ಅಲ್ಲಮಪ್ರಭು ದೇವರು ಬಳ್ಳಿಗಾವೆಗೆ ಹೊರಡುವ ದಿನ ಸನ್ನಿಹಿತವಾಗಿತ್ತು. ತಾತ್ಕಾಲಿಕ ಸಭಾಪತಿಯಾಗಿ ಸಕಲೇಶ ಮಾದರಸರನ್ನು ಚೆನ್ನಬಸವಣ್ಣ, ಬಸವೇಶ, ಪ್ರಭುದೇವರ ಎದುರಿಗಿಟ್ಟರು. ಲಾವಣ್ಯವತಿಯನ್ನು ಶೀಲವಂತನಿಗೆ ಕೊಟ್ಟು ಮದುವೆ ಮಾಡುವ ವಿಚಾರವನ್ನು ಅರಿಕೆ ಮಾಡಿಕೊಂಡರು. ಆ ದಿನ ಸಂಜೆಯ ಶರಣಗೋಷ್ಠಿಯಲ್ಲಿ ಪ್ರಭುದೇವರು ಶೀಲವಂತ ಲಾವಣ್ಯವತಿಯರನ್ನು ಆಶೀರ್ವದಿಸಿದನು.

ಮಂಗಳವೇಡೆಯಿಂದ ನಾರಾಯಣಕ್ರಮಿತ ಕಲ್ಯಾಣಕ್ಕೆ ಹಿಂದಿರುಗುವ ವೇಳೆಗಾಗಲೇ ಮುಚ್ಚಿಗ ಶೀಲವಂತ ಹಾಗೂ ಬ್ರಾಹ್ಮಣ ಕನ್ಯೆಯಾದ ಲಾವಣ್ಯವತಿಯರ ಮದುವೆ ನಡೆದು ಹೋಗಿತ್ತು. ಇದನ್ನು ಕೇಳಿದ ಕ್ರಮಿತ ಕ್ರುದ್ಧನಾದನು. ಅಸವರ್ಣ ವಿವಾಹಕ್ಕೆ ನೆರವಾದ ಬ್ರಾಹ್ಮಣ ಧರ್ಮವನ್ನು ಹಾಳು ಮಾಡಲು ಹೊರಟರೆಂದು ಶರಣರನ್ನು ಶಪಿಸಿದನು. ನಾಲ್ಕು ಅಚಾತುರ್ಯವನ್ನು ಚಿಂತಿಸಿ ಚಿಂತಿಸಿ ಕ್ರಮಿತ ಕೊನೆಗೊಮ್ಮೆ ಬಿಜ್ಜಳದೇವನ ತಮ್ಮ ಕಲ್ಯಾಣದ ನಗರಾಧ್ಯಕ್ಷ ಕರ್ಣದೇವನನ್ನು ಕಾಣಲು ಹೊರಟನು. ಸಕಾಲದಲ್ಲಿ ಕ್ರಮಿತ ಕರ್ಣದೇವನನ್ನು ಕಂಡು ನಡೆದು ಹೋಗಿರುವ ವಿಷಯವನ್ನೆಲ್ಲಾ ತಿಳಿಸಿದನು. ವೈದಿಕ ಧರ್ಮಕ್ಕೆ ಆಗಿರುವ ಅಪಮಾನವನ್ನು ವಿವರಿಸಿ ವಿಷಾದವನ್ನು ವ್ಯಕ್ತಪಡಿಸಿದನು. ಸೂಕ್ಷ್ಮಗ್ರಾಹಿ, ವಿಷಯಲಂಪಟನಾದ ಕರ್ಣದೇವ ಕೂಡಲೇ ಕ್ರಮಿತನಿಗೆ ಸಹಾಯ ಮಾಡಲು ಒಪ್ಪಿದನು.

ಆ ಸಂಜೆ ಮಧುವರಸರ ಮನೆಯಲ್ಲಿ ಶೀಲವಂತ ಲಾವಣ್ಯವತಿಯರ ಅರತಕ್ಷತೆ ಏರ್ಪಟ್ಟಿತ್ತು. ನಗರದ ಶ್ರೀಮಂತ ಸಾಮಂತ ನಾಗರೀಕ ಪ್ರಭು ಮನ್ನೆಯರಿಗೆಲ್ಲಾ ಆಹ್ವಾನ ಹೋಗಿತ್ತು. ಒಬ್ಬೊಬ್ಬರಾಗಿ ಸಮಾರಂಭಕ್ಕೆ ಬರತೊಡಗಿದ್ದರು. ಏತನ್ಮಧ್ಯೆ ಅನಿರೀಕ್ಷಿತವಾಗಿ ಕ್ರಮಿತ ಸಮಾರಂಭದ ಮಧ್ಯೆ ಪ್ರವೇಶಿಸಿ ಈ ಅಸವರ್ಣ ವಿವಾಹ ಹಿಂದೂ ಧರ್ಮದಲ್ಲಿ ಬಾಹಿರವಾದದ್ದು; ಇದು

ವಿವಾಹವಲ್ಲ. ದಾಸೀ ವಿಕ್ರಯ, ಇದನ್ನು ಬಹಿಷ್ಕರಿಸಿ ಘಟಸ್ಫೋಟ ಮಾಡುತ್ತೇನೆಂದು ಹೇಳಿ ಶೌಚಕೂಪ ತೊಳೆಯುವ ದಾಸಿಯೊಬ್ಬಳು ಹೊತ್ತು ತಂದ ಎಣ್ಣೆ ಗಡಿಗೆಯನ್ನು ನೆಲಕ್ಕೆ ಬಿಸುಡಿದನು. ಇದೇ ಸಮಯದಲ್ಲಿ ಕ್ರಮಿತರಿಂದ ನಿಯಮಿತರಾದ ಋತ್ವಿಕ್ಕುಗಳು ಉಚ್ಚಾಟನಾ ಕರ್ಮಕ್ಕೆ ಗೊತ್ತಾದ ಮಂತ್ರಗಳನ್ನು ಪಠಿಸಿದರು.

ಚಾಲುಕ್ಯ ಅರಮನೆಯ ಬಾಹ್ಯೋದ್ಯಾನದ ಒಂದು ಸ್ಥಳದಲ್ಲಿ ಏರ್ಪಡಿಸಿದ್ದ ರಾಜಸಭೆ ಇನ್ನೇನು ತನ್ನ ಕಾರ್ಯಕಲಾಪಗಳನ್ನು ಪ್ರಾರಂಭಿಸಬೇಕಿತ್ತು. ಅಂದಿನ ಸಭೆ ಮಹತ್ವಪೂರ್ಣದ್ದಾಗಿತ್ತು. ಸಭೆಯಲ್ಲಿ ಮುಖ್ಯವಾಗಿ ಶೀಲವಂತ ಲಾವಣ್ಯವತಿಯರ ವಿಷಮ ವಿವಾಹವು ಚರ್ಚೆಗೆ ಬರುವುದರಲ್ಲಿತ್ತು. ಮಧುವರಸ, ಹರಳಯ್ಯ, ಬಸವೇಶ, ಮಂಚಣ್ಣ ಎಲ್ಲರೂ ಸಭೆಗೆ ಹಾಜರಾಗಿದ್ದರು. ಅಂದು ನಾರಾಯಣಕ್ರಮಿತನದೇ ಮುಖ್ಯ ಪಾತ್ರವಾಗಿತ್ತು. ಕ್ರಮಿತ ನಾಗರಿಕರ ಭಿನ್ನಪವನ್ನು ಧರ್ಮಾಧಿಕರಣಕ್ಕೆ ಒಪ್ಪಿಸಿದನು. ಭಿನ್ನಪದಲ್ಲಿ ಬಸವೇಶ ಹಾಗೂ ಅವರು ಆರಂಭಿಸಿದ ಶರಣ ಧರ್ಮ ಪುನರುಜ್ಜೀನ ಮತ್ತು ಶೀಲವಂತ ಲಾವಣ್ಯವತಿಯರ ವಿವಾಹದ ಮೇಲೆ ದೂರಿದ್ದವು. ನಾಗರಿಕ ಭಿನ್ನಪದ ಪರವಾಗಿ ವಾದಿಸಲು ವಿಜಯಪುರದ ನ್ಯಾಯಶಾಸ್ತ್ರೀ ರುದ್ರಭಟ್ಟ ಧರ್ಮಾವತಾರರ ಅಪ್ಪಣೆ ಬೇಡಿ ಸಭೆಯಲ್ಲಿ ನಿಂತನು. ವಾದ-ವಿವಾದಗಳು ಹೇಳಿಕೆ ಕೇಳಿಕೆಗಳು ಎಲ್ಲ ಮುಗಿದ ಮೇಲೆ ನ್ಯಾಯತೀರ್ಪಿಗಾಗಿ ಬಿಜ್ಜಳನು ಮಂತ್ರಿಮಂಡಲದ ಹಿರಿಯನಾದ ಮಂಚಣ್ಣನಾಯಕನ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿದನು. ನಾರಾಯಣಕ್ರಮಿತ, ರುದ್ರಭಟ್ಟರನ್ನು ಆ ಸಮಿತಿಯ ಸದಸ್ಯರುಗಳಾಗಿ ನೇಮಿಸಿದನು. ಬಿಜ್ಜಳನ ರಾಜತಂತ್ರವನ್ನು ಅರಿಯದ ಜನತೆ ಅಂದಿನ ಬಿಜ್ಜಳನ ಧರ್ಮದರ್ಶಿತನವನ್ನು ಮೆಚ್ಚಿದರು. ಆದರೆ ಮಹಾಮನೆಯ ಶರಣರು ಮುಂಬರುವ ತೀರ್ಪು ನ್ಯಾಯ ವಿರುದ್ಧವಾಗಿರುವುದೆಂದು ಅಂದೇ ಊಹಿಸಿದರು. ಮಡಿವಾಳ ಮಾಚಿದೇವರು ಶರಣರು ಮುನ್ನೆಚ್ಚರಿಕೆಯಿಂದ ವರ್ತಿಸಬೇಕೆಂದು ಹೇಳಿ ಕೋಪಾವಿಷ್ಟರಾದರು.

ಅದೇ ಸಮಯದಲ್ಲಿ ರಾಹುತನೊಬ್ಬ ಬಿಜ್ಜಳನ ನಿರೂಪವನ್ನು ಬಸವಣ್ಣನವರಿಗೆ ಒಪ್ಪಿಸಿದನು. ನಿರೂಪದಲ್ಲಿ ಈ ರೀತಿ ತಿಳಿಸಲಾಗಿತ್ತು. ಬಸವಣ್ಣನವರು ಅನುಭವಮಂಟಪದ ಧರ್ಮ ಪ್ರತಿಷ್ಠಾಪನ ಸಂಬಂಧವನ್ನು ತ್ಯಜಿಸಬೇಕೆಂದು ಧರ್ಮಾಧಿಕರಣ ನೀಡಿದ ಸಲಹೆಯನ್ನು ಅವರು ನಿರಾಕರಿಸಿದ್ದರಿಂದ ತಲೆದೋರಿರುವ ಪ್ರಕ್ಷುಬ್ಧ ಪರಿಸ್ಥಿತಿ ಶಾಂತಲಾಗುವವರೆಗೂ ಬಸವೇಶ್ವರರು ಕಲ್ಯಾಣ ಬಿಡುವುದು ಉಚಿತವೆನಿಸುತ್ತದೆ. ಆದುದರಿಂದ ನಾಳಿನ ಸೂರ್ಯೋದಯವಾಗುವ ಮುನ್ನವೇ ಕಲ್ಯಾಣವನ್ನು ತ್ಯಜಿಸಿ ಮಲಾಪಹಾರಿ ತೀರದ ಸಂಗಮೇಶ್ವರ ಗುರುಕುಲದಲ್ಲಿ ಸ್ಥಾನಬದ್ಧರಾಗಬೇಕೆಂದು ರಾಜಾಜ್ಞೆಯಾಗಿತ್ತು. ಉದಯರವಿ ಕಾದಂಬರಿಯಲ್ಲಿ ಕಾದಂಬರಿಕಾರರು ಧರ್ಮ ಮತ್ತು ಜಾತಿ ಒಂದನ್ನೊಂದು ಯಾವ ರೀತಿಯಾಗಿ ಬೆಳೆದುಕೊಂಡು ಬಂದಿವೆ ಎಂಬ ಮಾಹಿತಿಯನ್ನು ಉದಾಹರಣೆಯಾಗಿ ಕೊಡುತ್ತಾರೆ.

> "ಹೊಯ್ಸಳ ವಿಷ್ಣುವರ್ಧನನು ಬ್ರಾಹ್ಮಣ ಕನ್ಯೆಯೊಬ್ಬಳನ್ನು ಮದುವೆಯಾಗಿದ್ದಾನೆಂದು,
> ವೀರನರಸಿಂಹನು ಆ ಕನ್ಯೆಯ ಮಗನೆಂದು ಹೇಳುವುದನ್ನು ಕೇಳಿದ್ದೇನೆ.
> ಅದು ನಿಜವೇ? ಕ್ಷತ್ರಿಯನು ಬ್ರಾಹ್ಮಣ ಕನ್ಯೆಯನ್ನು ಮದುವೆಯಾಗಬಹುದೇ?"[೬]

ಹೊಯ್ಸಳರ ಕಾಲದಿಂದಲೂ ಈ ಅಂತರ್‌ಜಾತಿ ವಿವಾಹ ನಡೆದುಕೊಂಡು ಬಂದಿರುವುದನ್ನು ತಿಳಿಸುವುದರ ಮೂಲಕ ಆ ವಿವಾಹದ ಪ್ರಕಾರಗಳಿಗೆ ಹೆಚ್ಚಿನ ಮಹತ್ವವನ್ನು ಕೊಟ್ಟಂತೆ ಕಾಣುತ್ತದೆ. ಸವರ್ಣ ವಿವಾಹ ನಮ್ಮ ಸಮಾಪ ಪದ್ಧತಿಯಲ್ಲಿ ಯಾವ ರೀತಿ ನಡೆಯುತ್ತಿತ್ತು ಎಂಬುದನ್ನು ಉಲ್ಲೇಖಿಸಿದ್ದಾರೆ.

> "ಬ್ರಾಹ್ಮಣನು ಕ್ಷತ್ರಿಯ, ವೈಶ್ಯ, ಶೂದ್ರ, ಕನ್ಯೆಯರನ್ನು ಮದುವೆಯಾಗಬಹುದು.
> ಕ್ಷತ್ರಿಯನು ವೈಶ್ಯ ಶೂದ್ರರನ್ನು, ವೈಶ್ಯನು ಶೂದ್ರರನ್ನು,
> ಶೂದ್ರನು ತನ್ನ ವರ್ಣದವರನ್ನು ಮಾತ್ರ"[೬]

ರಾಜನಾದವನಿಗೆ ಕಾಮದಾಸೆ ಹೆಚ್ಚಾದಂತೆಲ್ಲಾ ಯಾವುದೇ ಸಮಾಜ, ಧರ್ಮವನ್ನು ನೋಡುವುದಿಲ್ಲ ಎನ್ನುವುದಕ್ಕೆ ಹೊಯ್ಸಳರ ರಾಜನಾದ ವೀರನರಸಿಂಹನ ಜನ್ಮ ವೃತ್ತಾಂತವನ್ನು ತಿಳಿಸುತ್ತಾರೆ. ಅದೇ ಬಸವಣ್ಣನವರ ಹುಟ್ಟಿನ ಬಗ್ಗೆಯೂ ನಿಖರವಾದಂತಹ ಮಾಹಿತಿಯನ್ನು ಕೊಡುತ್ತಾರೆ.

> "ಎಲ್ಲರೂ ಹಾಗೆಯೇ ತಿಳಿದುಕೊಂಡಿದ್ದಾರೆ. ನಮ್ಮದು ಹಾರೀತ ಗೋತ್ರ,
> ಬಸವೇಶನದು ಕಶ್ಯಪ ಗೋತ್ರ, ಅವನ ತಂದೆ ಚಂದ್ರರಾಜರು
> ಆ ಪ್ರಾಂತ್ಯಕ್ಕೆ ಹೆಸರಾದವರು"[೮]

ಬಸವಣ್ಣನವರು ಅಗ್ರಹಾರದಿಂದ ಬಂದರೂ, ಮೊದಲಿನಿಂದಲೂ ಕುಲಜಾತಿಯನ್ನು ವಿರೋಧಿಸಿದ ಮನುಕುಲದ ಮೊದಲಿಗರೆಂದು ವ್ಯಕ್ತಪಡಿಸುತ್ತಾರೆ.

ಕುಲಪತಿಗಳ ಅಧಿಕಾರ ಹಾಗೂ ಅವರ ಮಾನವೀಯ ಮೌಲ್ಯಗಳನ್ನು ಅನಾವರಣ ಮಾಡುವಾಗ ಮಠಕ್ಕಿಂತಲೂ ರಾಜ್ಯ ಶ್ರೇಷ್ಠ ಎಂಬುದಕ್ಕೆ ಬಸವಣ್ಣನವರ ಪಾತ್ರದ ಮೂಲಕ ಕಾದಂಬರಿಕಾರರು ವ್ಯಕ್ತಪಡಿಸುವ ಅಭಿಪ್ರಾಯ ಅತ್ಯಂತ ಸೂಕ್ತವೆನಿಸುತ್ತದೆ.

"ಬಸವೇಶನ ಪ್ರಶ್ನೆಯನ್ನು ಕೇಳಿ ಕುಲಪತಿಗಳು ಕೆಲವು ಕ್ಷಣಗಳು ಮೌನವಾಗಿದ್ದರು. ಏನನ್ನೋ ಚಿಂತಿಸುವಂತೆ ಅವರ ಹುಬ್ಬುಗಳು ಸಂಕುಚಿತವಾದವು. ಅನಂತರ ಹೇಳಿದರು. ಅದಕ್ಕೊಂದು ಮಹತ್ವದ ಕಾರಣವಿದೆ. ಇಂಗಳೇಶ್ವರ ಬೃಹನ್ಮಠದ ಪಟ್ಟಾಧಿಕಾರಿ ಅಥವಾ ಮಹಂತನನ್ನಾಗಿ ಮಾಡಲು ಮಾದಿರಾಜನು ನಿನ್ನನ್ನು ಸಾಕಿದನು. ಅವನ ಈ ಉದ್ದೇಶವನ್ನು ಭಂಗಪಡಿಸುವುದು ಮೊದಲ ಕಾರಣ. ನಿನ್ನಂಥ ವಿವೇಕಶಾಲಿ ಪ್ರತಿಭಾವಂತ ಶರಣನು ಮಠಾಧಿಪತಿಯಾಗಿ ಅಲ್ಲಿಯ ಸಂಕುಚಿತ ವಾತಾವರಣದಲ್ಲಿ ಸಂಪ್ರದಾಯಗಳ ಭಾರದಿಂದ ವ್ಯಕ್ತಿತ್ವ ಸಾಹಸಗಳನ್ನು ಕರೆದುಕೊಂಡು ನಿರ್ಜೀವವಾಗುವುದು ನಮಗಿಷ್ಟವಿಲ್ಲ. ಲೋಕಸೇವೆಯ ವಿಶಾಲ ಕ್ಷೇತ್ರದಲ್ಲಿ ಬೆಳಗಿ ನೀನು ಸುಧಾರಕನೂ, ಆದರ್ಶವಾದಿಯೂ ಆಗಬೇಕೆಂಬುದು ನನ್ನ ಇಚ್ಛೆ".[೯]

ಜಗದ್ಗುರು ಈಶ್ವರ ಅವರು ಸ್ಥಾಪಿಸಿರುವ ಬೃಹನ್ಮಠದ ಗೌರವದ ಸ್ಥಾನವನ್ನು ಬಸವಣ್ಣನವರು ತಿಳಿದಿದ್ದರು ಎಂದು ಅರ್ಥವಾಗುತ್ತದೆ. ಮನುಷ್ಯನಿಗೆ ಹುಟ್ಟಿಗಿಂತ ಸಮಾಜದ ಆಗು-ಹೋಗುಗಳಿಗೆ

ಸ್ಪಂದಿಸಬೇಕಾದಾಗ ಧರ್ಮ ಎಷ್ಟು ಜಟಿಲವಾಗುತ್ತದೆ ಎನ್ನುವುದಕ್ಕೆ ಈ ಕೆಳಗಿನ ಹೇಳಿಕೆ ಸಮರ್ಪಕವಾಗಿದೆ.

"ಮಕ್ಕಳಿಗೆ ಎರಡು ಹೆಸರಿಡುವುದು ಹಿಂದಿನಿಂದ ನಮ್ಮಲ್ಲಿ ಪ್ರಚಾರದಲ್ಲಿದೆ. ಮೊದಲನೆಯದು ವ್ಯವಹಾರಕ್ಕೆ ಬೇಕಾದ ಗೋತ್ರನಾಮ. ಎರಡನೆಯದು ವ್ಯಕ್ತಿ ಪರಿಚಯಕ್ಕಾಗಿ ಉಪಯೋಗಿಸುವ ನಕ್ಷತ್ರ ನಾಮ. ತಂದೆ-ತಾಯಿ ಈ ಹೆಸರನ್ನು ರಹಸ್ಯವಾಗಿಟ್ಟು ಉಪನಯನ ಕಾಲದಲ್ಲಿ ಪ್ರಕಟಿಸಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. ಬಾಲ್ಯದಲ್ಲಿ ತಂದೆ-ತಾಯಿಗಳನ್ನು ಕಳೆದುಕೊಂಡ ಕಸಪಯನಿಗೆ ಬಸವೇಶ ಎಂದು ಹೆಸರಿಟ್ಟು ನೀನು ಆ ಕಾರ್ಯ ಮಾಡಿದೆ. ನಿಜವಾಗಿ ಅವನ ತಾಯಿಯಾದೆ".[೧೦]

ಬಸವಣ್ಣನವರಿಗೆ ವ್ಯವಹಾರಕ್ಕಾಗಿ ಹೆಸರಿಟ್ಟರೂ ಉಪನಯನ ಕಾಲದಲ್ಲಿ ಅದನ್ನು ತಿರಸ್ಕರಿಸಿ ಧಾರ್ಮಿಕ ಬುಡವನ್ನೇ ಹೇಗೆ ಅಲ್ಲಾಡಿಸಿದರು ಎಂಬುದು ವ್ಯಕ್ತವಾಗುತ್ತದೆ. ಅಂದಿನ ಕಾಲದಲ್ಲಿ ಆಚರಣೆಗಳಿಗೆ ಅಡೆ-ತಡೆಗಳು ಉಂಟಾದಾಗ ಬಯಕೆ ಈಡೇರದೇ ಇದ್ದಾಗ ಮನಸ್ಸು ಮೌನವನ್ನು ತಾಳುತ್ತದೆ. ಆದರೆ ಸಾವಿನಿಂದ ಪಾರಾಗಿ ಬಂದಾಗ ಹೊಸ ಜೀವನ ಪಡೆಯುವುದಕ್ಕಾಗಿ ಅಪ್ರೊಡೈಟ್‌ಳು ಹೇಗೆ ಶೈವಧರ್ಮವನ್ನು ಸ್ವೀಕರಿಸಿದಳು ಎಂಬುದನ್ನು ಕಾದಂಬರಿಕಾರರು ಸಂದರ್ಭೋಚಿತವಾಗಿ ವಿವರಿಸಿದ್ದಾರೆ.

"ಈ ದಿನ ಬೆಳಿಗ್ಗೆ ಸಮುದ್ರ ತೀರದಲ್ಲಿ ನಡೆದ ಘಟನೆಯಿಂದ ಆ ಆಚರಣೆ ಪರಿಹಾರವಾಯಿತು. ಪ್ರೇಮಾವತಿ, ಯವನದಾಸಿ ಅಪ್ರೊಡೈಟ್ ಸಮುದ್ರದಲ್ಲಿ ಸತ್ತಳು. ಆ ಅಪರಿಚಿತ ಸನ್ಯಾಸಿ ದಡಕ್ಕೆ ತಂದದ್ದು ಸಮುದ್ರ ಸ್ನಾನದಿಂದ ಪರಿಶುದ್ಧಳಾದ ಪ್ರೇಮಾವತಿಯನ್ನು ಮಹಾರಾಜರಿಗೆ ಇಷ್ಟವಿರಲಿ, ಇಲ್ಲದಿರಲಿ ನಾನು ವಿಶ್ವಪತಿಯ ಸಮ್ಮುಖದಲ್ಲಿ ನಿನ್ನನ್ನು ಶೈವಧರ್ಮದಲ್ಲಿ ದೀಕ್ಷಿತಳಾಗಿ ಮಾಡುತ್ತೇನೆ".[೧೧]

ಹೀಗೆ ಪಾಟಲಿಕೆಯು ಪ್ರೇಮಾವತಿ(ಅಪ್ರೊಡೈಟ್)ಳ ಕೈಹಿಡಿದು ಹೇಳುತ್ತಾಳೆ. ಅಪ್ರೊಡೈಟ್‌ಗಳು ಸಮುದ್ರದಲ್ಲಿ ಸನ್ಯಾಸಿಯಿಂದ ರಕ್ಷಣೆ ಪಡೆದಾಗ ಮಹಾರಾಜರಿಗೆ ಇಷ್ಟವಿಲ್ಲದಿದ್ದರೆ ವಿಶ್ವಪತಿಯಾದ ಶೈವ ಧರ್ಮವನ್ನು ಸ್ವೀಕರಿಸುತ್ತೇನೆ ಎಂದು ಹೇಳುವ ಮಾತು ಸ್ತ್ರೀ ಸ್ವಾತಂತ್ರ್ಯವನ್ನೇ ಉಲ್ಲೇಖಿಸುತ್ತದೆ.

ಇತ್ತ ಜಗದೇಕಮಲ್ಲರಸನ ಅರಮನೆಯಲ್ಲಿ ಕವಿ ಅಗ್ಗಳ ಕಾವ್ಯೋಪದೇಶಿಯಾಗಿಯೂ ಬೊಮ್ಮರಸ ಬ್ರಹ್ಮೇಂದ್ರ ಶಿವಯೋಗಿಯಾಗಿ, ಧರ್ಮೋಪದೇಶಿಕನಾಗಿಯೂ ಬ್ರಹ್ಮಶಿವನ ಹರೀಶರುದ್ರನಾಗಿ ಸೇರಿಕೊಂಡು ಒಳಸಂಚಿಗೆ ಸನ್ನಾಹವನ್ನು ಮಾಡತೊಡಗಿದರು.

ಯಾವ ಧರ್ಮವನ್ನು ಬಿಜ್ಜಳನು ಹಿಂಸೆ ದಬ್ಬಾಳಿಕೆಯಿಂದ ನಿರ್ಮೂಲನೆಗೊಳಿಸಲು ಪ್ರಯತ್ನಿಸಿದನೋ ಆ ಶರಣ ಧರ್ಮ ಕಾಲಕ್ರಮದಲ್ಲಿ ಚಾಲುಕ್ಯ ಹೊಯ್ಸಳ ರಾಜ್ಯಗಳಲ್ಲಿ ಪ್ರಭಾವಶಾಲಿ ಧರ್ಮವಾಗಿ ಬೆಳೆದು, ಶರಣರು ನಾಡು-ನುಡಿಗಳಿಗೆ ಅಪಾರವಾದ ಸೇವೆಸಲ್ಲಿಸುವಂತಾಯಿತು. ಬಿಜ್ಜಳನ ಹೆಸರು ಇತಿಹಾಸದಲ್ಲಿ ಇನ್ನೂ ಉಳಿದಿರುವುದು ಆ ಧರ್ಮದ ಪ್ರಭಾವದಿಂದಲೇ ಎಂದು ಹೇಳಬಹುದು.

ಮಹಾಸಂಗಮ ಸಂಪುಟ ಜಿ.ಎಚ್. ಹನ್ನೆರಡುಮಠರ ವಿಶಿಷ್ಟ ಕಾದಂಬರಿಯಾಗಿದೆ. ಬಸವಣ್ಣನವರನ್ನು ಕುರಿತು ಕಾದಂಬರಿಯ ರೂಪದಲ್ಲಿ ಗ್ರಂಥಗಳನ್ನು ಹೊರತಂದ ಕಾದಂಬರಿಕಾರ ನೆಂದರೆ ಶ್ರೀ ಜಿ.ಎಚ್. ಹನ್ನೆರಡುಮಠರು. ಅವರು ಬರೆದಿರುವ ಕಾದಂಬರಿಗಳೆಂದರೆ, 'ಕಲ್ಯಾಣ ಕೂಗೈತೋ', 'ಭೃಂಗ ಬಂದಾವೊ ಲಿಂಗ ತುಂಬ್ಯಾವೊ', 'ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ', 'ತೇರು ಸಾಗಿತಣ್ಣ ಬಸವಣ್ಣನ ಪಾಜ ಬಂದಿತಣ್ಣಾ' ಈ ಮುಂತಾದ ಕಾದಂಬರಿಗಳಲ್ಲಿ ಬಸವಣ್ಣನವರ ಜೀವನ ಮತ್ತು ಸಾಧನೆಯನ್ನು ಒಂದು ಕಡೆಗೆ ನೋಡುವಾಗ ಈ ಬೃಹತ್ತಾದ ಕಾದಂಬರಿಗಳು ಒಟ್ಟಾಗಿ ನೋಡುವುದಕ್ಕಿಂತ ನನ್ನ ಅಧ್ಯಯನಕ್ಕೆ ಎಡೆಮಾಡಿಕೊಂಡ ಅಂಶಗಳಿಗೆ ಅನುಗುಣವಾಗಿ ಚಿತ್ರಿಸುವುದು ಮುಖ್ಯ ಉದ್ದೇಶವಾಗಿದೆ.

'ತೇರು ಸಾಗಿತಣ್ಣ ಬಸವಣ್ಣನ ಪಾಜ ಬಂದಿತಣ್ಣಾ' ಎಂಬ ಕಾದಂಬರಿಯಲ್ಲಿ ಧಾರ್ಮಿಕ ಹಿತಾಸಕ್ತಿಯನ್ನು ದೃಷ್ಟಿಯನ್ನು ಇಟ್ಟುಕೊಂಡು ನೋಡುವುದಾದರೆ ವೇದ, ಆಗಮ, ಉಪನಿಷತ್ತುಗಳಲ್ಲಿ ಬಂದ ಕಂದಚಾರಗಳನ್ನು ತಮ್ಮ ಅನುಭವಮಂಟಪದಲ್ಲಿ ಖಡಾಖಂಡಿತವಾಗಿ ಖಂಡಿಸಿ, ದೇವರ ಹೆಸರಿನಲ್ಲಿ ಪೂಜಾ ಮಂದಿರಗಳಲ್ಲಿ ನರ್ತಕಿಯರನ್ನು ಕುಣಿಸುವವರನ್ನು ಅವರ ಅಂಗೋಷ್ಠೆಯನ್ನು ಸವಿಯುವರ ವಿರುದ್ಧ ಕಿಡಿಕಾರಿದ್ದಾರೆ.

ಹನ್ನೆರಡುಮಠರ ಇಪ್ಪತ್ತು ವರ್ಷಗಳ ಕಾಲಾವಧಿಯಲ್ಲಿ ಮಹಾಶರಣರ ಜೀವನವನ್ನು ಕುರಿತು ಎಂಟು ಕಾದಂಬರಿಗಳಲ್ಲಿ ಬಸವಣ್ಣನವರ ಜೀವನ ಅನಾವರಣವಾಗಿರುವುದು ಕಾಣಬಹುದಾಗಿದೆ. ಇವರ ಕಾದಂಬರಿಗಳಲ್ಲಿ ಬಸವಣ್ಣನವರ ಬದುಕಿನ ಚಾರಿತ್ರಿಕ, ಸಾಮಾಜಿಕ, ಆಧ್ಯಾತ್ಮಿಕ ಮೌಲ್ಯಗಳು ಒಂದು ಅದ್ಭುತವು ರಸಪೂರ್ಣವಾದ ಸ್ಪರ್ಶ ಪಡೆದಿವೆ ಎಂದು ಧಾರಳವಾಗಿ ಹೇಳಬಹುದು.

ಮಹಾಸಂಗಮ ಗ್ರಂಥವು ಹನ್ನೆರಡುಮಠರ ಸಮಗ್ರ ಕಾದಂಬರಿ ಸಾಹಿತ್ಯಕ್ಕೆ ಇಟ್ಟ ಹೆಸರು. ಈ ಎಂಟು ಭಾಗಗಳಿಗೆ ವಿದ್ವತ್ ಪೂರ್ಣವಾದ ಶೀರ್ಷಿಕೆಯನ್ನು ಕೊಟ್ಟಿದ್ದಾರೆ. ಇಲ್ಲಿ ಬಸವಣ್ಣನವರ ತತ್ವಜ್ಞಾನ ಪರಿಸರ ಆಂದೋಲನಗಳು ಹೀಗೆ ಒಂದರ ನಂತರ ಮತ್ತೊಂದು ವಿಶಾಲವಾಗಿ ಹರಡಿಕೊಂಡಿವೆ.

ಈ ಸಂಪುಟದ ಮೊದಲನೇ ಭಾಗದ 'ಕೂಗಿತ್ತು ಕೂಡಲ ಸಂಗಮ' ಕಾದಂಬರಿಯಲ್ಲಿ ಬಸವಣ್ಣನವರು ಕೂಡಲ ಸಂಗಮಕ್ಕೆ ಬರಲು ಕಾರಣವಾದ ಬಾಲ್ಯ ಜೀವನದ ಸಾಧನೆ ಸಿದ್ಧಿಗಳು ಹಾಗೂ ಸಮಷ್ಠಿ ಪ್ರಜ್ಞೆ ಮಾನವ ಬಂಧತ್ವ ಶಿವಭಕ್ತಿ, ಸಮರ್ಪಣೆ, ಸಾಮಾಜಿಕ ವಿಶ್ಲೇಷಣೆಗಳಿಗೆ, ಅರ್ಥಪೂರ್ಣವಾಗಿ ಮೂಡಿ ನಿಂತಿವೆ. ಬಸವಣ್ಣನವರು ಚಿಕ್ಕವಯಸ್ಸಿನಲ್ಲಿಯೇ ಹೇಗೆ ಶೈವತನವನ್ನು ಮೈಗೂಡಿಸಿಕೊಂಡಿದ್ದರೆಂಬುವುದು ಇಲ್ಲಿ ಮೂಡಿಬಂದಿದೆ.

ಬಸವಣ್ಣನು ಮಾದಲಾಂಬಿಕೆ ಮಾದರಸರ ಸಾಕು ಮಗನಾಗಿದ್ದನು. ಅಂದು ಆಚರಣೆ ಯಲ್ಲಿರುವ ಕಂದಾಚಾರಗಳಾದ ಉಪನಯನ ಜನಿವಾರ ಧಾರಣೆ ಈ ಮುಂತಾದವುಗಳು

ಅವರ ಜೀವನದ ಮೇಲೆ ಕೆಟ್ಟ ಪರಿಣಾಮವನ್ನು ಬೀರಿದವು. ಧಾರ್ಮಿಕವಾಗಿ ಮನುಷ್ಯನನ್ನು ಬಂಧಿಸುವಾಗ ಅವನ ಉದ್ಧಾರವು ಸಹ ಅಷ್ಟೇ ಮುಖ್ಯವಾಗುತ್ತದೆ ಎಂದು ಮನಗಂಡ ಬಸವಣ್ಣನವರು ಉದ್ಧಾರ ಮಾಡದ ಧರ್ಮದ ಶಿಷ್ಟಾಚಾರಗಳು ಧಿಕ್ಕರಿಸಿ ನಡೆದರು. ಇಲ್ಲಿ ಮನೆಯಿಂದ ಜನಿವಾರ ಧಾರಣೆ ಮತ್ತು ಉಪನಯನ ಕೇವಲ ಒಂದು ಸಮುದಾಯಕ್ಕೆ ಸೀಮಿತವಾಗಿರುವುದೆಂದು ಅದು ಸಂಪ್ರದಾಯ ಎಂದು ತಿಳಿದು ಅದನ್ನು ಮುಂದುವರಿಸಿಕೊಂಡು ಬಂದರೆ ಯಾವುದೇ ಅರ್ಥವು ಇಲ್ಲ ಎಂದು ಕಪ್ಪಡಿ ಸಂಗಮನಾಥನ ಸಾಮೀಪ್ಯಕ್ಕೆ ತೆರಳುತ್ತಾನೆ. ಅಲ್ಲಿ ಈಶಾನ್ಯ ಗುರುಗಳನ್ನು ಕಂಡು, ಅವರ ಅನುಗ್ರಹಕ್ಕೆ ಪಾತ್ರರಾಗಿ ಸಂಗಮನಾಥನನ್ನು ಭಕ್ತಿಯಿಂದ ಪೂಜಿಸಿ ದೈಹಿಕವಾಗಿರುವ ಒತ್ತಡಗಳನ್ನು ಕಳೆದುಕೊಳ್ಳುತ್ತಾರೆ. ಪ್ರತಿನಿತ್ಯ ಸಂಗಮನಾಥ ನನ್ನು ವಿವಿಧ ಬಗೆಯ ಹೂವುಗಳನ್ನು ತಂದು ಮನಪೂರ್ವಕವಾಗಿ ಸಂಗಮನಾಥನ ಅವಿಷ್ವೇಯನ್ನು ಈಡೇರಿಸುತ್ತಾ ಆತನೇ ತನ್ನ ಜಗತ್ತೆಂದು ಮುನ್ನಡೆಯುವ ಮಾರ್ಗದಲ್ಲಿ ಸಂಗಮನಾಥ ಮತ್ತು ಬಸವಣ್ಣ ಇಬ್ಬರು ಒಬ್ಬರನ್ನು ಬಿಟ್ಟು ಒಬ್ಬರು ಇರಲಾರದಷ್ಟು ಬರುವ ಸನ್ನಿವೇಶವೇ ಈ ಕಾದಂಬರಿಯ ಮುಖ್ಯ ತಿರುಳು.

ಹನ್ನೆರಡುಮತರವರು ಬಸವಣ್ಣನವರ ಬಾಲ್ಯ ಜೀವನವನ್ನು ಚಿತ್ರಿಸುವಾಗ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಚಂದ್ರರಾಜ ಚಂದ್ರಾಂಬೆಯವರು ತೀರಿಕೊಂಡ ನಂತರ ಮಾದರಸ ಮತ್ತು ಮಾದಲಾಂಬಿಕೆಯವರ ಅಕ್ಕರೆಯಲ್ಲಿ ಬೆಳೆದು ಅದು ಶೈವ ಸಂಪ್ರದಾಯದ ವಿಧಿ ವಿಧಾನಗಳನ್ನು ಧಿಕ್ಕರಿಸಿ, ಹೋಗುವಂತ ಸಂದರ್ಭದಲ್ಲಿ ಅಕ್ಕನಾದ ಅಕ್ಕನಾಗಮ್ಮ ಆಕೆಯ ಗಂಡ ಶಿವಮಾಯ ದೇವ ಯಾವುದೋ ಸಂಕ್ರಾಮಿಕ ರೋಗಕ್ಕೆ ತುತ್ತಾಗಿ ವಿಧಿವಶರಾಗುತ್ತಾರೆ. ಮುಂದೆ ಅಕ್ಕನಾಗಮ್ಮ ಬಸವಣ್ಣನನ್ನೇ ಆಶ್ರಯಿಸಿ ಅವನ ಹಿಂದೆಯೇ ಹೊರಡುತ್ತಾಳೆ. ಆದರೆ ಬಿ. ಪುಟ್ಟಸ್ವಾಮಯ್ಯರವರು ಕಲ್ಯಾಣಕ್ಕೆ ಅಕ್ಕನಾಗಮ್ಮ ಬಂದನಂತರ ಶಿವಸ್ವಾಮಿಯನ್ನು ಮದುವೆಯಾಗಿ ನದಿಯ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಾನೆ ಎಂದು ತಿಳಿಸುತ್ತಾರೆ.

ಕಾದಂಬರಿಯ ಎರಡನೇ ಸಂಪುಟವಾದ 'ಯೋಗಿ ಕಂಡ ಯೌವ್ವನ' ಭಾಗದಲ್ಲಿ ಬಸವಣ್ಣ ನವರು ಜೀವನದಲ್ಲಿ ಈಜಿದ ಜೀವಂತ ಪ್ರಸಂಗವಿದೆ. ಇಲ್ಲಿ ಹೆಣ್ಣಿನ ವ್ಯಾಮೋಹ ಸಂಸಾರ ವ್ಯಾಮೋಹವು ಬಸವಣ್ಣನವರನ್ನು ಬಿಟ್ಟಿಲ್ಲ ಎಂಬ ಮಾತು ನಿರ್ದೇಶನಗಳನ್ನು ನೀಡುತ್ತಾರೆ. ಈ ಮದುವೆ ಎಂಬ ಮಾಯೆಯನ್ನು ಲೇಖಕರು ಮನದ ಮಾಯೆ ಎಂದು ಚಿತ್ರಿಸಿದ್ದಾರೆ. ಮೋಹಿಣಿ ಶೃಂಗಾರ ಚೆಲುವು ಜಾಣ್ಮೆಗಳು ಬಸವಣ್ಣನವರ ಅಧ್ಯಯನದಲ್ಲಿ ಗಂಭೀರವಾಗಿ ಬಾಳುತ್ತಾರೆ. ಆದರೂ ಈ ಹಗಲುಗನಸುಗಳು ಜೀವನದಲ್ಲಿ ಆಗಾಗ ಹಿಣುಕುತ್ತಲೇ ಇರುತ್ತವೆ. ಇದನ್ನು ಮನಗಂಡ ಬಸವಣ್ಣನವರು ಜಾತವೇದ ಗುರುಗಳ ಸಾನಿಧ್ಯದಲ್ಲಿ ಯೋಗ ಮಾರ್ಗದಿಂದ ಜೀವನ ನಡೆಸಲು ಪ್ರಯತ್ನಿಸುತ್ತಾರೆ. ಮೋಹಿಣಿಯ ಪತ್ರದೊಂದಿಗೆ ಬದುಕಿನ ನಾನಾ ಕಷ್ಟಗಳನ್ನು ಬಿಚ್ಚುತ್ತಾ ಹೋಗುತ್ತದೆ. ಈ ಗ್ರಂಥದಲ್ಲಿ ಹೇಳಬೇಕಾದ ಪ್ರಮುಖ ಅಂಶವೆಂದರೆ ಜಾತಿ-ಭೇದ

ಮನೆಗಳಲ್ಲಿ ಆಶ್ರಯದಲ್ಲಿ ಶಿವನೇ ತನ್ನ ಸರ್ವಸ್ವ ಎಂದು ಭಾವಿಸಿದ ಬಸವಣ್ಣನವರು. ಅವರಿಗೂ ಸಹ ಸಂಸಾರ ಎಂಬ ಮಾಯೆ ಬಿಡಲಿಲ್ಲ ಎಂದು ಒತ್ತಿ ಹೇಳುತ್ತಾರೆ.

ಮಾದರಸರ ಮನೆಯಲ್ಲಿ ಮೇಣದ ಬತ್ತಿ ಉರಿಯುತ್ತಿದೆ. ಕಣ್ಣಿಗೆ ಕಾಣದಷ್ಟು ಸೂಕ್ಷ್ಮಾತಿಸೂಕ್ಷ್ಮ ವಿಷಯಗಳು ಗೋಚರವಾಗುವುದನ್ನು ಹನ್ನೆರಡುಮಠರ 'ಕೂಗಿತ್ತು ಕೂಡಲಸಂಗಮ' ಕಾದಂಬರಿಯು ಧಾರ್ಮಿಕತೆಗೆ ಸಂಬಂಧಿಸಿ ಮಹತ್ತರವಾದ ಅಂಶಗಳನ್ನು ಸಾದರಪಡಿಸಿದೆ.

"ಶಿವಧೋ... ಶಿವಧೋ... ಮಹಾಜಂಗಮ ತೃಪ್ತಿ... ಭಿಕ್ಷಾಂದೇಹಿ... ಮೈತುಂಬಾ ಭಸ್ಮಧಾರಣೆ. ಹಣೆಯಲ್ಲಿ ಗುಂಗಿಹುಳ ಗಾತ್ರದ ಕರಿಯಬೊಟ್ಟು. ಕೊರಳಲ್ಲಿ ರುದ್ರಾಕ್ಷಿ ಮಾಲೆ. ರಟ್ಟೆಯಲ್ಲಿ ರುದ್ರಾಕ್ಷ ಬಂಧಿ, ತಲೆಯ ಮೇಲೆ ಜಟಾಜೂಟ. ಅದಕ್ಕೂ ಒಂದು ರುದ್ರಾಕ್ಷ ಮುದ್ರಿಕೆ. ಟೊಂಕಕ್ಕೊಂದು ಹುಲಿಚರ್ಮ. ಕೌಂಕುಳಲ್ಲಿ ಕೃಷ್ಣಾಜಿನ. ಒಂದು ಕೈಯಲ್ಲಿ ತ್ರಿಶೂಲ. ಇನ್ನೊಂದರಲ್ಲಿ ಯೋಗದಂಡ. ಬಗಲಲ್ಲಿ ಭಿಕ್ಷಾಜೋಳಿಗೆ ಹೆಗಲ ಮೇಲೆ ಹೆಗ್ಗಂಬಳಿ".[೨]

ಹೀಗೆ ಕಾಳಾಮುಖಿಯು (ಜಂಗಮ) ಬಂದು ಬಸವಣ್ಣನ ಉಗಮ ದೈವಸಂಭೂತ ಹಾಗೂ ಈತನಿಂದಲೇ ಜಗದ ಉದ್ಧಾರ ಎಂದು ಹೇಳುವ ಅಂಶ ಗಮನಿಸಬಹುದು.

ಸಂಸಾರದ ಬಂಧನದಲ್ಲಿದ್ದರೂ ಸಮಾಜದ ಕಂದಾಚಾರಗಳನ್ನು ಪರಿವರ್ತಿಸಿ ಮುನ್ನುಗ್ಗುವಂತ ಮನೋಭಾವವನ್ನು ಬಸವಣ್ಣನವರು ಬೆಳೆಸಿಕೊಳ್ಳುತ್ತಾರೆ. ಸಮಾಜ ಬದಲಾವಣೆ ಮಾಡುವಲ್ಲಿ ಸಂಸಾರಿಕರಿಂದ ಸಾಧ್ಯವಿಲ್ಲ ಎಂಬ ಮಾತಿಗೆ ಬಸವಣ್ಣನವರು ತದ್ವಿರುದ್ಧವಾಗಿ ಎದ್ದು ನಿಲ್ಲುತ್ತಾರೆ.

ಈ ಹಿಂದೆ ಹೇಳಿದಂತೆ ಹನ್ನೆರಡುಮಠರವರು ಬಸವಣ್ಣನವರೇ ಜೀವನದ ವಿವಿಧ ಅಂತಃಗಳಿಗುಣವಾಗಿ ಒಂದೊಂದು ರೀತಿಯ ಶೀರ್ಷಿಕೆಯನ್ನು ನೀಡಿದ್ದಾರೆ. ಈ ಸಂಪುಟದ ಮೂರನೇ ಭಾಗವಾದ 'ಗುರುವೆಂದರ್‍ಯಾರೊ ಹರವೆಂದರ್‍ಯಾರೋ' ಕಾದಂಬರಿಯಲ್ಲಿ ಜಾತಿಭೇದ ಮುನಿಗಳ ಮಹೋನ್ನತದಲ್ಲಿ ಬಸವಣ್ಣನವರ ಜಂಗಮ ಜ್ಯೋತಿಯಾಗಿ ಅರಳಿದ ಮಹಾನ್ ಸನ್ನಿವೇಶನವನ್ನು ಈ ಭಾಗದಲ್ಲಿ ಅನಾವರಣ ಮಾಡಿದ್ದಾರೆ. ಪ್ರಬುದ್ಧ ತರಣನಾದ ಬಸವಣ್ಣನವರು ಆಗಮ, ವೇದ ಉಪನಿಷತ್ತುಗಳನ್ನು ಭಗವದ್ಗೀತೆ ಪುರಾಣಗಳನ್ನು ಕಾವ್ಯ ತರ್ಕ ವ್ಯಾಕರಣ ಮೀಮಾಂಸೆಗಳನ್ನು ಅಧ್ಯಾಯಿನಿಸಿ ಅವುಗಳ ಸಾರಸಂಗ್ರಹವನ್ನು ಅರ್ಥಮಾಡಿಕೊಂಡು ಹೊಸದೊಂದು ಆಧ್ಯಾತ್ಮಿಕ ಮಾರ್ಗದ ನಿರೂಪಕನಾಗಿ ನಿಲ್ಲುತ್ತಾನೆ.

ನಾಡಿನಾದ್ಯಂತ ಅಂದು ತಲೆ ಎತ್ತಿದ ಶೈವ ಪಂಥಗಳ ಕಂದಾಚಾರವು ಪರಿಶೀಲಿಸಿ, ಅವುಗಳ ಅವೈಜ್ಞಾನಿಕ ಕುರುಡು ಕಲ್ಪನೆಗಳನ್ನು ಸುಟ್ಟು ಹಾಕಿ ನೂತನಾತೀತಾ ಶರಣ ಧರ್ಮದ ಸ್ಥಾಪಕನಾಗುತ್ತಾನೆ. ಇದರಿಂದ ಬಸವಣ್ಣನವರೊಬ್ಬರು ಪ್ರಬುದ್ಧ ಜ್ಞಾನಿಯಾಗಿ ಶಿವಯೋಗಿಯಾಗಿ ಸಮಾಜ ಸುಧಾರಕನಾಗಿ ಸೃಜನಾತ್ಮಕ ಸಾಹಿತಿಯಾಗಿ ಚಿಂತನಶೀಲ ದಾರ್ಶನಿಕನಾಗಿ ಪ್ರಕಾರವಾಗಿ ಬೆಳೆಯುತ್ತಾ ಹೋಗುವ ವಿಷಯವನ್ನು ಹನ್ನೆರಡುಮಠ ಅವರ ಅಸಾಧಾರಣ ಪ್ರತಿಭೆ ಇಲ್ಲಿ ಅನಾವರಣಗೊಂಡಿದೆ.

ಇತಿಹಾಸ ಪುಟಗಳಲ್ಲಿ ಮಹಾಶಯರೆಂದೂ, ಪುರಾಣಗಳಲ್ಲಿ ದೈವ ಸ್ವರೂಪರೆಂದೂ ಅಮರರಾಗಿರುವ ಶ್ರೀ ಬಸವಣ್ಣನವರು ಸುಮಾರು ೮೫೦ ವರ್ಷಗಳ ಹಿಂದೆ ಭವ್ಯ ಭಾರತದಲ್ಲಿ,

ಅದರಲ್ಲಿಯೂ ಕರ್ನಾಟಕದ ಕಲ್ಯಾಣನಗರದಲ್ಲಿ ಹೊಸದೊಂದು ಸಮಾಜೋಧಾರ್ಮಿಕ ಆಂದೋಲನವನ್ನೇ ಸೃಷ್ಟಿಸಿದ ಮಹಾನ್ ಕ್ರಾಂತಿಕಾರಿ, ಚೇತನ ಚಕ್ರವರ್ತಿ. ಶರಣ ಸಂಸ್ಕೃತಿಯನ್ನು ಅನುಭವಮಂಟಪವನ್ನು, ದಾಸೋಹ ಮತ್ತು ಶೂನ್ಯ ಸಿಂಹಾಸನದ ಕಲ್ಪನೆಯನ್ನು ನಿರ್ಮಾಣ ಮಾಡಿದ ಅದ್ಭುತ ಅನುಭಾವಿಕ ಶಿಲ್ಪಿ. ಭವಿಷ್ಯದ ಭವ್ಯ ಬದುಕಿನ ಬಾಗಿಲಿಗೆ ವಚನ ತೋರಣ ವನ್ನು ಕಟ್ಟಿದ ವಿದ್ವತ್ಸಾಧಕ. ಇವರ ಜೀವನ ಚರಿತ್ರೆ ತಿಳಿಯಲು ಲಭ್ಯವಿರುವ ದಾಖಲೆಗಳೆಂದರೆ ಹರಿಹರನ ಬಸವರಾಜದೇವರ ರಗಳೆ, ಭೀಮಕವಿಯ ಬಸವಪುರಾಣ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಸಿಂಗಿರಾಜನ ಬಸವರಾಜ ಚಾರಿತ್ರ, ಷಡಕ್ಷರನ ಬಸವರಾಜ ವಿಜಯ, ಶೂನ್ಯ ಸಂಪಾದನೆಗಳು ಮತ್ತು ಶರಣರ ವಚನಗಳು. ಹೀಗೆ ರಚಿತವಾಗಿರುವ ಹಲವಾರು ಗ್ರಂಥಗಳಲ್ಲಿ ಶ್ರೀ ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ' ಕಾದಂಬರಿಯೂ ಒಂದಾಗಿದೆ.

'ಕರ್ತಾರನ ಕಮ್ಮಟ' ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಬರೆದಿರುವ ಅತ್ಯುತ್ತಮ ಶ್ರೇಷ್ಠ ಕೃತಿ. ಜನಮನಕ್ಕೆ ಬಸವಣ್ಣನವರ ದಿವ್ಯ ಜೀವನವನ್ನು ಮುಟ್ಟಿಸಿದ ಮತ್ತು ಅಕ್ಷರ ಬಲ್ಲ ಸಾಮಾನ್ಯನೂ ಪ್ರೀತಿಸುವಂಥ ಬೃಹತ್ ಆದರ್ಶನೀಯ ಕಾದಂಬರಿ. ನವರಸಗಳ ಜೊತೆಗೆ ಭಕ್ತಿರಸವೂ ತುಂಬಿ ರಾರಾಜಿಸುವ ಈ ಕೃತಿಯಲ್ಲಿ ಬಸವಣ್ಣನವರೇ ಕೇಂದ್ರಬಿಂದು. ಉಳಿದ ಪಾತ್ರಗಳೆಲ್ಲಾ ಅವರ ಸುತ್ತಾ ಸುತ್ತುತ್ತವೆ. ಆ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಿನ್ನೆಲೆ ಕೂಡ ಬಸವಣ್ಣನವರಿಗೆ ಸಂಬಂಧಪಟ್ಟಂತೆ ಮಾತ್ರ ಮೂಡಿಬಂದಿದೆ. ಪ್ರಸ್ತುತ ಕೃತಿಯು ಹತ್ತು ಅನುಕ್ರಮಣಿಕೆಗಳನ್ನು ಹೊಂದಿದ್ದು ಒಂದೊಂದು ಭಾಗವೂ ಕುತೂಹಲ, ಆಸಕ್ತಿ, ಆತ್ಮಾಭಿಮಾನಗಳನ್ನು ಓದುಗರಲ್ಲಿ ಅದರಲ್ಲಿಯೂ ಸಮಾಜದಲ್ಲಿನ ದಲಿತ ವರ್ಗದವರಲ್ಲಿ ಮೂಡಿಸುವುದಲ್ಲದೆ ಯುವಶಕ್ತಿಯಲ್ಲಿ ನವಚೈತನ್ಯವನ್ನು ತರುವಷ್ಟರಮಟ್ಟಿಗೆ ರೂಪಿತವಾಗಿರುವುದು ವಿಶ್ವಾಸಾರ್ಹ. ಅಂತಹ ಕೆಲವೊಂದು ವಿಚಾರಧಾರೆಯನ್ನು ಇಲ್ಲಿ ಉಲ್ಲೇಖಿಸಿದರೆ ಹೆಚ್ಚು ಸಮಂಜಸವೆನಿಸುತ್ತದೆ.

ಬಸವಪುರಾಣಗಳು ಬಸವಣ್ಣನವರ ಚರಿತ್ರೆಯನ್ನು ಪವಾಡಗಳಲ್ಲಿ ಹುದುಗಿಸಿಬಿಟ್ಟಿರುವುದಲ್ಲದೆ ಅವರನ್ನು ದೇವ ಮಾನವನೆಂದು ನಿರೂಪಿಸಿವೆ. ಹೀಗಾಗಿ ಬಸವಣ್ಣ ಇತಿಹಾಸಿಕ ವ್ಯಕ್ತಿಯಾಗದೆ ಪೌರಾಣಿಕತೆಯ ಮಹಾಪವಾಡ ಪುರುಷರಾಗಿ ಕಾಣುತ್ತಾರೆ. ಆದರೆ ಕರ್ತಾರನ ಕಮ್ಮಟ ಕಾದಂಬರಿಯಲ್ಲಿ ಬಸವಣ್ಣನವರು ಭಕ್ತಿಭಂಡಾರಿ. ಸಮಾಜ ಸುಧಾರಕ, ಧರ್ಮದಲ್ಲಿ ಕ್ರಾಂತಿಕಾರಿ, ಅನುಭಾವಿ, ಕವಿ, ಕಾರಣಿಕ ಹೀಗೆ ಹತ್ತಾರು ಮುಖಗಳಲ್ಲಿ ಸೀಮಾ ಪುರುಷರಾಗಿರುವುದಲ್ಲದೇ ಒಂದು ಯುಗ ಮನೋಧರ್ಮವನ್ನು ರೂಪಿಸಿದ ಯುಗ ಪ್ರವರ್ತಕರೂ ಆಗಿದ್ದಾರೆ. ಜೊತೆಗೆ ಕಥೆಯಲ್ಲಿ ಬರುವ ಎಲ್ಲಾ ಪಾತ್ರಗಳು. ಸನ್ನಿವೇಶಗಳೂ ಸಹ ಬಸವಣ್ಣನವರ ವ್ಯಕ್ತಿತ್ವಕ್ಕೆ ಪೂರಕವಾಗಿವೇ ಹೊರತು ಮಾರಕವಾಗಿ ಎಲ್ಲಿಯೂ ವ್ಯಕ್ತವಾಗಿಲ್ಲ. ಮಧ್ಯಕಾಲೀನ ಮಹಾಕಾವ್ಯಗಳಂತೆ ಇಲ್ಲಿ ಕಾದಂಬರಿಗಳು ಬಸವಣ್ಣನ ಜೀವನ ಚರಿತ್ರೆಯನ್ನು ಕಟ್ಟುವ ಕಲೆಗಾರಿಕೆಗೆ ಹೆಚ್ಚು ಮಹತ್ವ ಕೊಟ್ಟಿವೆ.

ಬಸವಣ್ಣನ ಜನನದ ಪೂರ್ವಕಾಲದಲ್ಲಿ ಈಶಾನ್ಯ ಗುರುಗಳಿಗೆ ಮತ್ತು ಮಾದಲಾಂಬಿಕೆಗೆ ಆಗುವ ಆಧ್ಯಾತ್ಮಿಕ ಅನುಭಾವ ನೊಂದವರ ನೋವ ನಿವಾರಿಸುವ ಮಹಾಪುರುಷನ ಆಗಮನದ ಸೂಚಕಗಳಾಗಿಯೂ, ಬಾಲ್ಯಾವಸ್ಥೆಯ ಬಸವಣ್ಣನಲ್ಲಿ ಮೂಡುವ ಆಧ್ಯಾತ್ಮಿಕ ಭಾವವು ಇವರಿಬ್ಬರ ಮಧುರಬಾಂಧವ್ಯದ ಮುನ್ಸೂಚನೆಯಂತೆಯೂ ವ್ಯಕ್ತವಾಗಿದೆ. ಇದು ನೆನೆಯುವ ಮನಸ್ಸಿನ ಭಾವನೆ ಮನುಷ್ಯನ ಸಹಜ ಗುಣವಷ್ಟೆ ಎಂದರೆ ಸಮಂಜಸವೆನಿಸುತ್ತದೆ.

ಬಾಲಕ ಬಸವಣ್ಣನ ಅನಾರೋಗ್ಯದಿಂದ ಬಳಲುತ್ತಿದ್ದ ಕೇತನ ಮನೆಗೆ ಹೋಗಿ ಆತನಿಗೆ ಸಹಾಯ ಮಾಡಿದ್ದನ್ನೇ ನೆಪ ಮಾಡಿಕೊಂಡು ಶಾಸ್ತ್ರ, ಪುರಾಣಗಳನ್ನು ತಪ್ಪಾಗಿ ಅರಿತ ಮೇಲ್ವರ್ಗದ ಬ್ರಾಹ್ಮಣರು ಬಸವಣ್ಣನನ್ನು ವಿಚಾರಣೆಗೆ ಒಳಪಡಿಸಿದಾಗ ನಡೆಯುವ ವಾದ-ವಿವಾದ ವಾಸ್ತವಿಕ ಸಮಾಜದ ಸತ್ಯಗಳನ್ನು ಪ್ರತಿಬಿಂಬಿಸುತ್ತದೆ. ಕೇತನ ಕೇರಿಗೆ ಹೋದದ್ದರಿಂದ ಪವಿತ್ರವಾದ ಯಜ್ಞೋಪವೀತ ಅಪವಿತ್ರವಾಯಿತು ಎಂದು ಶಾಸ್ತ್ರೀ ಹೇಳಿದಾಗ ಯಾವುದು ಮುಟ್ಟಿದೆಲ್ಲವನ್ನು ಪವಿತ್ರ ಮಾಡಲಾಗದೆ ತಾನೇ ಅಪವಿತ್ರವಾಗುವುದೋ ಅದು ನನಗೆ ಬೇಡ ಎಂದು ಹೇಳಿ ಯಜ್ಞೋಪವೀತವನ್ನು ಛಿದ್ರ ಮಾಡಿ ಈ ಕರ್ಮಲತೆಯನ್ನು ಆ ಕಾಲದ ಸಮಾಜದಲ್ಲಿದ್ದ ಮೌಢ್ಯಾಂಧಕಾರದ ಸ್ವರೂಪ ಮತ್ತು ಅದನ್ನು ವಿರೋಧಿಸುವ ಬಸವಣ್ಣನವರ ಮನೋಧರ್ಮ ಸ್ಪಷ್ಟವಾಗಿ ಚಿತ್ರಿತವಾಗಿದೆ.

ಬಾಲ್ಯದಿಂದಲೂ ಬಸವಣ್ಣನವರ ಮನಸ್ಸಿನೊಂದಿಗೆ ವ್ಯವಹರಿಸುತ್ತಿದ್ದ ಅಕ್ಕನಾಗಮ್ಮ ಬಸವಣ್ಣನ ಪ್ರತಿ ಯಶಸ್ಸಿನ ಕೇಂದ್ರಬಿಂದುವಾಗಿದ್ದಾರೆ. ಯಾವುದೇ ಶಾಸ್ತ್ರ ಸಂಪ್ರದಾಯಗಳಿಗೆ ಒಳಪಡದೆ ಬಸವಣ್ಣನವರು ಕೂಡಲಸಂಗಮಕ್ಕೆ ಹೋರಟಾಗ 'ನಾನು ಬರ್ತೀನಿ ಕಣೋ ನಿನ್ನ ಜೊತೆ' ಎಂದು ಹೇಳಿ ಬಸವಣ್ಣನವರ ಸಾಧನೆಗೆ ಬೆನ್ನೆಲುಬಾಗಿ ನಿಲ್ಲುತ್ತಾರೆ. ಬಸವಣ್ಣನವರ ವಿವಾಹದ ನಂತರ ಗಂಗಾಂಬಿಕೆ ಮತ್ತು ನೀಲಾಂಬಿಕೆಯರೂ ಸಹ ಬಸವಣ್ಣನವರಿಡುವ ಪ್ರತಿ ಹೆಜ್ಜೆಗೂ ಶಕ್ತಿ ತುಂಬುವ ಕಾರ್ಯದಲ್ಲಿ ಯಶಸ್ವಿಯಾಗುತ್ತಾರೆ. ಆ ಸನ್ನಿವೇಶಗಳನ್ನು ಕಾದಂಬರಿಕಾರರು ಸಮಂಜಸವಾಗಿ ನಿರೂಪಿಸಿದ್ದಾರೆ. ಇದು ಲೇಖಕರಿಗೆ ಸ್ತ್ರೀಯರ ಮೇಲಿರುವ ಅಭಿಮಾನದ ಸಂಕೇತವೆಂದರೆ ಹೆಚ್ಚು ಸೂಕ್ತವಾಗುತ್ತದೆ.

ಜೇಡರ ದಾಸಿಮಯ್ಯನ ವಚನಗಳಿಂದ ಪ್ರಭಾವಿತರಾಗಿ ತಾವೂ ಸಹ ವಚನಗಳ ರಚನೆಗೆ ಮುಂದಾಗುವ ಬಸವಣ್ಣ ತಮ್ಮ ವಚನಗಳ ಅಂಕಿತವನ್ನು ಹುಡುಕಾಡಿ ಕೊನೆಗೆ ಮನತುಂಬಿ ನುಡಿಯಬಹುದಾದ ಅರ್ಥಗರ್ಭಿತವಾದ 'ಕೂಡಲ ಸಂಗಮದೇವಾ' ಎಂಬ ಅಂಕಿತವನ್ನು ಮನದಲ್ಲೇ ಮೆಚ್ಚಿ ತನ್ನ ವಚನಗಳಲ್ಲಿ ಸೇರಿಸುವ ರೀತಿ ಇಂದಿನ ನವಕವಿಗಳು ಏಕೆ? ಎಂದಿನ ನವಕವಿಗಳೂ ಸಹ ರೂಪುಗೊಳ್ಳುವ ಬಗೆಯನ್ನು ವಿವರಿಸುತ್ತದೆ. ಅಲ್ಲದೆ ಅಂದಿನ ಸಮಾಜದಲ್ಲಿದ್ದ ಎಡರು-ತೊಡರುಗಳನ್ನು ಅರ್ಥವಿಲ್ಲದ ಆಚಾರ-ವಿಚಾರಗಳನ್ನು, ಮೂಢತೆಯ ಸಂಪ್ರದಾಯವನ್ನು ಬಸವಣ್ಣನವರು ನೇರವಾಗಿ ತಮ್ಮ ವಚನಗಳಲ್ಲಿ ಖಂಡಿಸುತ್ತಾರೆ. ಹೀಗಾಗಿ ಬಸವಣ್ಣನವರು ಆಧುನಿಕ ಬಂಡಾಯ ಸಾಹಿತ್ಯ ಅಥವಾ ದಲಿತ ಸಾಹಿತ್ಯದ ಉಗಮಕ್ಕೆ ಕಾರಣವಾದ ಮೊದಲಿಗರು ಎಂಬುದು ಸ್ಪಷ್ಟವಾಗಿ ಕೃತಿಯಲ್ಲಿ ಗೋಚರವಾಗುತ್ತದೆ.

ಪ್ರತಿ ವ್ಯಕ್ತಿಯ ಮನಸ್ಸಿನ ಭಾವನೆಗಳಿಗೆ ಹೆಚ್ಚಿನ ಮಹತ್ವ ನೀಡಿರುವ ಈ ಕೃತಿಯಲ್ಲಿ ಬಸವಣ್ಣ ಏಕಾಂತವಾಗಿ ಆಲೋಚಿಸುವ ಸನ್ನಿವೇಶಗಳನ್ನು ವರ್ಣರಂಜನೀಯವಾಗಿ ಹೇಳಲಾಗಿದೆ. ಬಸವಣ್ಣನ ಕ್ರಾಂತಿಕಾರಕ ಬುದ್ಧಿವಂತಿಕೆಯನ್ನು ಲಿಂಗಾಧಾರಣೆಯನ್ನು ಮನದಲ್ಲೇ ಮೆಚ್ಚಿ ತಾವು ಬಸವಣ್ಣನ ಮಾರ್ಗವನ್ನೇ ಹಿಡಿಯಲಿಚ್ಛಿಸುವ ಶಿವಸ್ವಾಮಿ, ನಾಗಮ್ಮ ಮತ್ತು ಇತರೇ ಶಿವಶರಣ-ಶರಣೆಯರನ್ನು ಹಾಗೂ ಗರ್ಭಿಣಿಯ ಬಯಕೆಯೆಂದು ಹೊಲೆಗೇರಿಯನ್ನು ನೋಡಲಿಚ್ಛಿಸುವ ನೀಲಾಂಬಿಕೆ ಇವರುಗಳಲ್ಲಿರುವ ಸುಪ್ತಮಾನವೀಯ ಮೌಲ್ಯಗಳಿಗೆ ಚಲನಾತ್ಮಕ ಸಂದರ್ಭಗಳನ್ನು ಒದಗಿಸಿಕೊಟ್ಟಿದ್ದಾರೆ.

ಈ ಕೃತಿಯಲ್ಲಿ ಬಹುಮುಖ್ಯವೂ, ಆಶ್ಚರ್ಯಕರವೂ ಆದ ಒಂದು ಸಂಗತಿಯು ಪ್ರಸ್ತಾಪವಾಗಿದೆ. ಅದೇನೆಂದರೆ ಚತುರ್ವರ್ಣಗಳ ಕಲ್ಪನೆಯ ವಿವರಣೆ. ಇಂದಿಗೂ ಕೂಡ ಸಮಾಜಶಾಸ್ತ್ರದ ಅಧ್ಯಯನದಿಂದ ಬ್ರಹ್ಮನ ಮುಖದಿಂದ ಬ್ರಾಹ್ಮಣರೂ, ಬಾಹುಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು ಮತ್ತು ಪಾದಗಳಿಂದ ಶೂದ್ರರೂ ಉತ್ಪನ್ನರಾದರೆಂದು ತಿಳಿದುಬರುತ್ತದೆ. ಜೀವನಕ್ಕಾಗಿ ನಾವು ಯಾವುದೇ ಉದ್ಯೋಗವನ್ನು ತೆಗೆದುಕೊಳ್ಳಬಹುದು. ವರ್ಣವನ್ನು ನಿರ್ಧರಿಸುವುದು ಹುಟ್ಟಿನಿಂದಲ್ಲ ಗುಣದಿಂದ. ಆದ್ದರಿಂದ ಶೂದ್ರ ಎನ್ನುವುದು ಪಾದದಿಂದ ಹುಟ್ಟಿದ, ಬ್ರಾಹ್ಮಣ ಎನ್ನುವುದು ಮುಖದಿಂದ ಹುಟ್ಟಿದ ಜಾತಿಯಲ್ಲ. ಅದೊಂದು ಮನೋಧರ್ಮ. ಈ ವಿಚಾರ ನಿಜಕ್ಕೂ ರೋಮಾಂಚನಕಾರಿ. ಪುರೋಹಿತಶಾಹಿ ವರ್ಗದವರೂ, ಪಟ್ಟಭದ್ರ ಹಿತಾಸಕ್ತಿಯುಳ್ಳವರೂ ತಮ್ಮ ಸ್ವಾರ್ಥ ಸಾಧನೆಗಾಗಿ ಅತ್ಯುತ್ತಮವಾದ ವೇದ ಉಪನಿಷತ್ತು, ಆಗಮಗಳನ್ನು ತಮಗೆ ಅನುಕೂಲಕರವಾದ ವಿವರಣೆಯ ಮೂಲಕ ಅರ್ಥೈಸಿ ಆಚರಣೆಗೆ ತಂದು ಮುಗ್ಧ ಅಮಾಯಕ ಜನರ ಮೇಲೆ ನಡೆಸುತ್ತಿದ್ದ ಅಮಾನವೀಯ ಕ್ರೂರ ದಬ್ಬಾಳಿಕೆಯನ್ನು, ಸಾಮಾಜಿಕ ಅವ್ಯವಸ್ಥೆಯನ್ನು ನೇರವಾಗಿ ಖಂಡಿಸಿದ್ದಾರೆ. ಅದೇ ಸಂದರ್ಭದಲ್ಲಿ ಸಮಾಜದಿಂದ ತಿರಸ್ಕೃತನಾಗಿದ್ದ ಶರಣ ಶಿವನಾಗಮಯ್ಯನು ದೇವರ ದಾಸಿಮಯ್ಯರ ವಚನವನ್ನು, ಮಗೇಂದ್ರಾಗಮ ಮತ್ತು ಭಗವದ್ಗೀತೆಯ ಶ್ಲೋಕಗಳನ್ನು ಉದಾಹರಿಸಿ ವಿವರಿಸುವುದರ ಮೂಲಕ ದೇವರು ಮತ್ತು ಚತುರ್ವರ್ಣಗಳ ಸ್ವರೂಪದ ಬಗ್ಗೆ ವ್ಯಾಖ್ಯಾನ ನೀಡುವುದು. ಬಸವಣ್ಣನವರ ಸಮಾಜೋಧಾರ್ಮಿಕ ಆಂದೋಲನವು ಯಶಸ್ವಿಯಾಗಿರುವುದಕ್ಕೆ ಜೀವಂತ ಸಾಕ್ಷಿ. ಆದರೆ ಈ ಘಟನೆಗೆ ಜನ ಪವಾಡದ ಮೆರುಗು ಕೊಟ್ಟು ಹೇಳಿಕೊಳ್ಳುವುದು ವಿಷಾದದ ಸಂಗತಿ.

ಬಿಜ್ಜಳನನ್ನು ಒಬ್ಬ ಉತ್ತಮ ರಾಜಕೀಯ ಮುತ್ಸದ್ಧಿ, ಬಸವಣ್ಣನ ಆತ್ಮೀಯ ಮತ್ತು ಪ್ರಜೆಗಳ ಪ್ರೀತಿಯ ಪ್ರಭುವಾಗಿ ನಿರೂಪಿಸಲಾಗಿದೆ. ಅಲ್ಲಮಪ್ರಭು ಪ್ರತಿ ಬಾರಿ ಕಲ್ಯಾಣಕ್ಕೆ ಬರುವಾಗಲೂ ಬಸವಣ್ಣ ಮತ್ತು ಇತರ ಕೆಲವು ಶಿವಶರಣರ ಮೇಲೆ ತನ್ನ ಪರೀಕ್ಷಾ ಪ್ರವೃತ್ತಿಯನ್ನು ತೋರ್ಪಡಿಸುವ ರೀತಿ ವಿಚಿತ್ರವಾಗಿ ಕಂಡರೂ ಸಾಧಕರ ಆತ್ಮಜ್ಯೋತಿಯ ಪ್ರತಿಭೆಯನ್ನು ವಿಮರ್ಶೆಗೆ ಒಡ್ಡುವ ಒಬ್ಬ ಉತ್ತಮ ವಿಮರ್ಶಕರಂತೆ ಚಿತ್ರಿತಗೊಂಡಿದ್ದಾರೆ.

ಅಕ್ಕಮಹಾದೇವಿ ಅನುಭವಮಂಟಕ್ಕೆ ಬಂದಾಗ ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿಯವರ ನಡುವಿನ ವಾದ-ವಿವಾದಗಳು ಶೂನ್ಯ ಸಂಪಾದನೆಯ ಒತ್ತು ಪ್ರತಿಗಳಂತೆ ಕಂಡರೂ ಕಾದಂಬರಿಕಾರ

ತನ್ನತನವನ್ನು ಬಿಟ್ಟುಕೊಟ್ಟಿಲ್ಲ. ವಯಸ್ಸಿನಲ್ಲಿ ಬಸವಣ್ಣ, ಅಲ್ಲಮಪ್ರಭು ಮತ್ತು ಇತರ ಎಲ್ಲ ಶರಣರಿಗಿಂತಲೂ ಚಿಕ್ಕವಳಾಗಿದ್ದ ಮಹಾದೇವಿ ತನ್ನ ದೈವಿಕ ತೇಜಸ್ವಿನ ಮತ್ತು ಅಂತರಂಗ ಶುದ್ಧಿಯ ಮೂಲಕ 'ಅಕ್ಕ' ಎನ್ನಿಸಿಕೊಳ್ಳುವುದು. ಆಕೆಯ ಆಧ್ಯಾತ್ಮಿಕ ಅನುಭಾವದ ಯಶಸ್ವಿ ಬದುಕನ್ನು ಪ್ರತಿಬಿಂಬಿಸುವಂತೆ ವಿವರಿಸಲಾಗಿದೆ. ಚಿಕ್ಕಯ್ಯ ಜಂಗಮ ವೇಷಾಧಾರಿಯಾಗಿ ಬಸವಣ್ಣನ ಮನೆಗೆ ಬಂದಾಗ ಮತ್ತು ಜಂಗಮ ಚಿಕ್ಕಯ್ಯ ಗಂಗಯ್ಯನ ಮನೆಗೆ ಅತಿಥಿಯಾಗಿ ಹೋದಾಗ ಎದುರಾಗುವ ಪ್ರಸಂಗಗಳು ಪೌರಾಣಿಕವಾಗಿರದೇ ಮನಃಪರಿವರ್ತನೆ ಮತ್ತು ಆತ್ಮಸ್ಥೈರ್ಯದ ಶಕ್ತಿಯನ್ನು ವ್ಯಕ್ತಪಡಿಸುತ್ತವೆ. ವಿವಿಧ ಪ್ರದೇಶಗಳಿಂದ ಕಲ್ಯಾಣಕ್ಕೆ ಬರುವ ಕಿನ್ನರಿ ಬೊಮ್ಮಯ್ಯ, ಬಹುರೂಪಿ ಚೌಡಯ್ಯ, ಮಾದಾರ ಧೂಳಯ್ಯ, ಉರಿಲಿಂಗದೇವ, ಮೋಳಿಗೆ ಮಾರಯ್ಯ, ಮಹಾದೇವಿ, ಇನ್ನು ಸಾವಿರಾರು ಶರಣರು ಬಸವಣ್ಣನ ವ್ಯಕ್ತಿತ್ವಕ್ಕೆ ಆಕರ್ಷಿತವಾದುದಕ್ಕೆ ಸಾಕ್ಷಿಯಂತಿದೆ. ಬಸವಣ್ಣನ ಶರಣ ಧರ್ಮವು ಇಡೀ ನಾಡಿನಾದ್ಯಂತ ಪ್ರಚಾರಗೊಂಡ ಬಗೆಯೂ ಉತ್ತಮವಾಗಿದೆ. ಕಲಾವತಿ-ಶೀಲವಂತನ ಪ್ರೇಮ, ಮಧುವರಸ ಪರಿವರ್ತಿತವಾದ ಪ್ರಸಂಗ, ಹರಳಯ್ಯ ಮಧುವರಸರ ಸ್ನೇಹ ಸಂಬಂಧ, ಬಿಜ್ಜಳನ ಕೊಲೆ ಅದರಿಂದುಂಟಾಗುವ ಕೋಮುವಾದ ಇಂದಿನ ವಾಸ್ತವಿಕ ಸಮಾಜದ ಹೊಸನೋಟವನ್ನು ಸೂಚಿಸುತ್ತವೆ. ಅಲ್ಲದೆ ಕಾದಂಬರಿಕಾರರು ಪಾತ್ರಗಳು, ವಸ್ತು-ವಿನ್ಯಾಸಗಳು, ವರ್ಣನೆಯ ಜೊತೆಗೆ ಪ್ರಕೃತಿ, ಪ್ರಸಂಗಗಳ ಮತ್ತು ಸಂದರ್ಭ ಸನ್ನಿವೇಶಗಳ ಹಿಂದಣ-ಮುಂದಣ ಕಲ್ಪನೆಗಳನ್ನು ರಸವತ್ತಾಗಿ ವರ್ಣಿಸಿದ್ದಾರೆ. ಇದರಿಂದ ಐತಿಹಾಸಿಕವಾದ ಕೆಲವು ಸತ್ಯ ಸಂಗತಿಗಳನ್ನು ಸಹ ತಿಳಿಯಬಹುದಾಗಿದೆ.

ಬಸವಣ್ಣನವರ ಅಂತ್ಯದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇಂತಹ ಸಂದರ್ಭದಲ್ಲಿ ಕಾದಂಬರಿಕಾರರು ತನ್ನ ಚಾಣಾಕ್ಷತನವನ್ನು ತೋರ್ಪಡಿಸಬೇಕಾದ ಕಾರ್ಯವನ್ನು ಹೆಚ್ಚು ಸಮರ್ಥವಾಗಿ ನಿರ್ವಹಿಸಿದ್ದಾರೆ. ಹರಳಯ್ಯ, ಮಧುವರಸ, ಬಿಜ್ಜಳರ ಕೊಲೆ, ಭುಗಿಲೆದ್ದ ಹಿಂಸೆ, ದೌರ್ಜನ್ಯ, ಸಾವು-ನೋವು, ಶರಣರ ಚದುರುವಿಕೆ, ಇವುಗಳನ್ನು ಧೈರ್ಯದಿಂದ ಎದುರಿಸಲಾಗದೆ ಬಸವಣ್ಣ ಕೂಡಲಸಂಗಮಕ್ಕೆ ಓಡಿ ಹೋದರೆಂಬ ಲೋಕಾಪವಾದ ಇವುಗಳಿಂದ ನೊಂದು ಚಿಂತಿಸುತ್ತಾ, ಮೂಕವೇದನೆಯನ್ನು ಅನುಭವಿಸುತ್ತಾ ಕೊನೆಗೆ ಸಂಗಮೇಶ್ವರ ಮಂಟಪದಲ್ಲಿ ಕುಳಿತು ಶಿವನಲ್ಲಿ ಐಕ್ಯರಾದರು ಎಂದಿರುವ ಈ ಕೃತಿ ಎರಡು ಸನ್ನಿವೇಶಗಳನ್ನು ಮತ್ತು ಉದ್ದೇಶಗಳನ್ನು ಒಂದೇ ಬಾರಿ ಹೇಳುವ ಪ್ರಯತ್ನ ಮಾಡಿದೆ. ಬಸವಣ್ಣನ ಐಕ್ಯದ ನಂತರ ಜನರೊಂದಿಗೆ ಇಡೀ ಪ್ರಕೃತಿಯೇ ಸ್ಪಂದಿಸುವ ರೋಧಿಸುವ ರೀತಿ ಅದ್ಭುತವಾಗಿದೆ ಮತ್ತು ಕರುಣಾಜನಕವಾಗಿದೆ.

ನರಸಿಂಹ ಪೆದ್ದಿ ಹೊಲೆಮಾದಿಗರು ಸಾರ್ವಜನಿಕವಾಗಿ ಭಾಗವಹಿಸುವಿಕೆಯನ್ನು ಸಹಿಸಲಾರದೇ ಮಹಾರಾಜನ ಮುಂದೆ ದೂರು ಕೊಡುವಂತಹ ಸಂದರ್ಭ ಆತನ ವೈದಿಕ, ವೇದಾರ್ತ, ಕರ್ಮಟ, ಜಪ, ಹೋಮ, ಹವನಾದಿಗಳು ನಡೆಸಲು ಆತನ ಅಂತರಾಳದ ಕರ್ಮ ಕಥೆಯನ್ನು ಬಿಚ್ಚಿಟ್ಟಿದ್ದಾರೆ.

"ಮನೆಯ ಕಟ್ಟೆಯನ್ನೆರಿ ಬಾಗಿಲ ತುದಿಯಲ್ಲಿ ನಿಂತು ಪೂಜೆಯತ್ತ ದೃಷ್ಟಿ ಹರಿಸಿದ್ದಾನೆ.
ಹೊಲೆಯರ ಕೇತ; ಮಂತ್ರಗಳನ್ನೂ ಕೇಳುತ್ತಿದ್ದಾನೆ
ಅವನನ್ನು ಕಾಣುತ್ತಿದ್ದಂತೆ ಮೆಟ್ಟಿ ಬಿದ್ದು ಹಿಂದೆ ಸರಿದ ನರಸಿಂಹ ಪೆದ್ದಿ.
ಕೇತ ಹೆದರಿಕೆಯಿಂದ ಓಡಿ ಕಟ್ಟೆಯ ಕೆಳಗೆ ಹಾರಿನಿಂತ.
ನರಸಿಂಹಪೆದ್ದಿಯ ಕಂಠ ಚೀರಿತು:
"ಥೂ ಚಾಂಡಾಲ, ಎಷ್ಟೋ ಸೊಕ್ಕು ನಿನಗೆ? ಮನೆಯ ಒಳಗೆ ಬರುತ್ತೀಯಾ?
ಮಂತ್ರಗಳನ್ನು ಕೇಳುತ್ತೀಯ? ಹೊಲೆಯ!"[೧೩]

ಮನೆಯ ಒಳಾಂಗಣ ಯಜ್ಞದಿಂದ ಆವೃತ್ತವಾಗಿದೆ. ಹೊಲೆಯರ ಕೇತನ ಬೌದ್ಧಿಕ ಜಿಜ್ಞಾಸೆ ಮತ್ತಷ್ಟು ವಿಶಾಲವಾಗುತ್ತದೆ ಹಾಗೂ ಕೆಳವರ್ಗದವರಿಗೂ ಸಹ ಮಂತ್ರ, ವೇದಾಧ್ಯಯನ ಕಲಿಯುವ ವಿಧಾನದಲ್ಲಿ ಆಸಕ್ತಿಯಿರುವುದು ಅದಕ್ಕೆ ಸಮಾಜ ವಿರೋಧಿಸುವ ವೈಪರೀತ್ಯಗಳು ಎದ್ದು ಕಾಣುತ್ತವೆ.

"ಕರ್ತಾರನ ಕಮ್ಮಟ" ಕೃತಿಯು ಈ ರೀತಿ ಹಲವಾರು ವೈಚಾರಿಕ, ವೈಜ್ಞಾನಿಕ, ತಾತ್ವಿಕ ಉತ್ತಮ ಮಾನವೀಯ ಮೌಲ್ಯಗಳನ್ನೊಳಗೊಂಡ ಸಮೃದ್ಧ ಸಮಗ್ರ ವಿಷಯ ಭಂಡಾರವಾಗಿದೆ. ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ತಮ್ಮ ಅದ್ಭುತ ವಿಚಾರಶಕ್ತಿ ಮತ್ತು ಸಂಶೋಧನಾತ್ಮಕ ಅನುಭವದಿಂದ ಮಹಾತ್ಮರೊಬ್ಬರ ಜೀವನವನ್ನು ಓದುಗರಿಗೆ ಅರ್ಥೈಸಲು ಪ್ರಯತ್ನಿಸಿದ್ದಾರೆ. ಪ್ರಬುದ್ಧ ಕ್ರಿಯಾಶೀಲತೆ ಮತ್ತು ಪಕ್ವ ಆಧ್ಯಾತ್ಮಿಕತೆಯ ದ್ಯೋತಕವಾಗಿ ಈ ಕೃತಿ ಮೂಡಿಬಂದಿದೆ.

## ೫.೨. ಸಾಮಾಜಿಕತೆಗೆ ಸಂಬಂಧಿಸಿ ಗ್ರಹಿಕೆಗಳು

ಜಗತ್ತಿನ ಯಾವುದೇ ದೇಶದ ಜನ ತಾವು ಬದುಕಿ ಬಾಳುತ್ತಿರುವ ಪ್ರಸ್ತುತ ಜೀವನಕ್ಕೆ ಮಾತ್ರ ತಮ್ಮ ಆಚಾರ ವಿಚಾರಗಳಿಂದೊಡಗೂಡಿದ ಆಸಕ್ತಿಗಳನ್ನು ಸೀಮಿತಗೊಳಿಸಿಕೊಂಡು ತೃಪ್ತಿದಾಯಕ ಬದುಕನ್ನು ಮಾಡಲಾರರು. ಏಕೆಂದರೆ ಪ್ರಸ್ತುತ ಜೀವನ ಒಂದಿಲ್ಲಾ ಒಂದು ರೀತಿಯಲ್ಲಿ ತನ್ನ ಹಿಂದಿನ ಪರಂಪರೆಯ ಮೌಲ್ಯಾಧಾರಗಳಿಗೆ ಯಾವುದೇ ಸಂಶಯ ಕಾಣಿಸುವುದಿಲ್ಲ. ಟಿ.ಎಸ್. ಎಲಿಯಟ್ ಹೇಳುವಂತೆ ಇತಿಹಾಸ ಅನೇಕ ಅನುಭವಗಳ ಪ್ರಯೋಗಗಳ ಆಗರವಾಗಿರುವುದರಿಂದ ಪ್ರತಿಯೊಂದು ತಲೆಮಾರಿನ ಜನಾಂಗವು ಅದರಿಂದ ಕಲಿತುಕೊಳ್ಳಬೇಕಾದ ಪಾಠ ಬಹಳವಿರುತ್ತದೆ. ನವೀಕರಣ ಎನ್ನಬಹುದಾದ ಆಧುನೀಕರಣದಲ್ಲಿ ಪರಂಪರೆಯ ಪ್ರಜ್ಞೆಯ ಮಿಡಿತ ಇದ್ದೇ ಇರುತ್ತದೆ. ಇದಕ್ಕೆ ಭಾರತ ದೇಶವು ಹೊರತಾಗಿಲ್ಲ.

೧೨ನೇ ಶತಮಾನದಲ್ಲಿ ಬಾಳಿ ಬೆಳಕು ಕಾಣಿಸಿ ಸಮಾಜೋದ್ಧಾರಕ್ಕಾಗಿ ತಮ್ಮ ಬದುಕನ್ನು ನೂಲಿನ ಎಳೆಯಾಗಿ ನೇಯ್ದು, ಶಿವಶರಣರ ಜೀವಿತಕಾರ್ಯ ಕೇವಲ ಇತಿಹಾಸದ ಪುಟಗಳಲ್ಲಿ ಉಳಿಯದೇ ಪರಿವರ್ತಿತ ಜನಾಂಗಕ್ಕೆ ಸತ್ವಮೊತ್ತಗಳನ್ನು ಒದಗಿಸಿ, ಉದ್ಧರಿಸುವಂತಾಗಿದೆ. ಹೀಗಾಗಿ ಆಧುನಿಕ ಮೌಲ್ಯಕ್ಕನುಗುಣವಾಗಿ ಶರಣರ ನುಡಿಮುತ್ತುಗಳನ್ನು ಅದರಲ್ಲಿಯೂ ೧೨ನೇ ಶತಮಾನದ ಕ್ರಾಂತಿಯ ಕೇಂದ್ರಬಿಂದುವಾದ ಮಾನವತೆಯ ಮಹಾಮಂದಾರವೆನಿಸಿದ ಕ್ರಾಂತಿಪುರುಷ

ಬಸವಣ್ಣನವರ ಸಾಮಾಜೀಕರಣ ವಿಚಾರಗಳನ್ನು ಆಧುನೀಕರಣದ ವೈಚಾರಿಕ ನೆಲೆಯಲ್ಲಿ ವಿಸ್ತೃತಪಡಿಸುವುದು ಇಲ್ಲಿಯ ಮುಖ್ಯ ಉದ್ದೇಶ.

ಸಾಮಾಜೀಕರಣವೆಂದರೆ ಸಾಮಾಜಿಕವೆನ್ನುವುದು ವಿಚಾರ ಪ್ರಣಾಳಿಕೆಗೆ ಪ್ರಾಚೀನ ಕಾಲದಿಂದಲೂ ಸಮಾಜ ವ್ಯವಸ್ಥೆಗನುಗುಣವಾಗಿ ಬೆಳೆದುಕೊಂಡು ಬಂದಿರುವ ನೀತಿತತ್ವ ಸಂಪ್ರದಾಯ ಆಚರಣೆ ಮುಂತಾದ ಬದುಕಿನ ವಿವಿಧ ಮೂಲಗಳನ್ನು ಇಂದಿನ ಬದುಕಿನ ಜನಾಂಗದ ವ್ಯಕ್ತಿತ್ವ ಹಿನ್ನೆಲೆಯಲ್ಲಿ ತೌಲನೀಕರಿಸಿ ಅನ್ವಯಿಸಿ ವಿಸ್ತೃತಪಡಿಸುವುದು.

ಕನ್ನಡ ನಾಡುನುಡಿಗಳ ಇತಿಹಾಸದಲ್ಲಿ ಹನ್ನೆರಡನೇ ಶತಮಾನದ ಮಧ್ಯಭಾಗ ಅತ್ಯಂತ ಮಹತ್ವ ಪೂರ್ಣವಾಗಿದೆ. ಮುಮ್ಮಡಿ ತೈಲಪನು ಮತ್ತು ಬಿಜ್ಜಳ ಇಬ್ಬರು ರಾಜಕೀಯ ನೆರಳಿನಲ್ಲಿ ಬಸವಣ್ಣನವರು ಅನುಭವಮಂಟಪವನ್ನು ಕಟ್ಟಿ ಧಾರ್ಮಿಕ ಕ್ರಾಂತಿಗೆ ಕಾರಣರಾದರು. ಈ ಕ್ರಾಂತಿ ಮುಂದೆ ಬೇರೆ ರೂಪವನ್ನು ಪಡೆದುಕೊಂಡು ಸಾಂಸ್ಕೃತಿವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಆರ್ಥಿಕ ಕ್ರಾಂತಿಗಳನ್ನು ಮಾಡಿರುವುದು ಕಾಣುವುದಾಗಿದೆ. ಈ ವಿಷಯವನ್ನು ಬಿ. ಪುಟ್ಟಸ್ವಾಮಯ್ಯ ಅವರು ಆರು ಸಂಪುಟಗಳಲ್ಲಿ ಬಸವಣ್ಣನವರ ಸಮಗ್ರ ಜೀವನವನ್ನು ವಿಸ್ತಾರವಾಗಿ ಮತ್ತು ಸುಂದರವಾಗಿ ಚಿತ್ರಿಸಿದ್ದಾರೆ. ಇವರ ಆರು ಸಂಪುಟಗಳಲ್ಲಿ ಸಾಮಾಜಿಕ ಹಿತಾಸಕ್ತಿ ಯಾವ ರೀತಿ ನಿರ್ಮಾಣಗೊಂಡಿದೆ ಎಂಬುದನ್ನು ಈ ಕೆಳಗಿನಂತೆ ತಿಳಿದುಬರುತ್ತದೆ.

ಇವರ ಸಂಪುಟದ ಮೊದಲನೆ 'ಉದಯರವಿ' ಎಂಬ ಕಾದಂಬರಿಯಲ್ಲಿ ಬಸವಣ್ಣನವರ ಬಾಲ್ಯದಿಂದ ಹಿಡಿದು ಕಲ್ಯಾಣಕ್ಕೆ ಬರುವ ಸನ್ನಿವೇಶ ನಿರ್ಮಾಣಗೊಂಡಿದೆ. ಬಸವಣ್ಣನವರು ಸಂಗಮನಾಥನಲ್ಲಿ ಇದ್ದಂತಹ ಸಂದರ್ಭದಲ್ಲಿ ಬಲದೇವನ ಮಗಳಾದ ಗಂಗಾಂಬಿಕೆ ಬಿಜ್ಜಳ ತಂಗಿಯಾದ ನೀಲಾಂಬಿಕೆ ಹಾಗೂ ಮಾದರಸನ ಮಗಳಾದ ಲಾವಣ್ಯವತಿ. ಈ ಮೂವರು ಸ್ತ್ರೀಯರು ಮೇಲ್ವರ್ಗಕ್ಕೆ ಸೇರಿದವರಾಗಿದ್ದಾರೆ. ಇದು ಸಂಗಮನಾಥನ ಸಾನಿಧ್ಯದಲ್ಲಿ ಬಸವಣ್ಣನವರನ್ನು ಕಾಣುತ್ತಾರೆ. ಆಗ ಕಂಡಾಗ ಆ ಹೆಂಗಸರಲ್ಲಿ ಆದ ಮಾನಸಿಕ ತುಮಲವನ್ನು ಎದ್ದು ಕಾಣುತ್ತದೆ.

ಮಂತ್ರಿ ಬಲದೇವ ಅರಸರು ಕಲ್ಯಾಣದಿಂದ ಸಂಗಮೇಶಕ್ಕೆ ಬರುವುದಕ್ಕೆ ಬಲವಾದ ಕಾರಣವಿತ್ತು. ಆಶ್ರಮದಲ್ಲಿ ತನ್ನ ಮಗಳು ಯೋಗ್ಯರಾದವರನ್ನು ಹೊರೆಸುವುದು ಮುಖ್ಯ ಉದ್ದೇಶವಾಗಿತ್ತು. ಬಲದೇವನು ತಾನು ಬಂದ ಕಾರ್ಯ ಸಾಧನೆಯನ್ನು ಜಾತವೇದಮುನಿಗಳಿಗೆ ತಿಳಿಸುತ್ತಾನೆ. ಇದನ್ನು ರಾಜ್ಯಕನ್ಯೆಯಾದ ನೀಲಾಂಬಿಕೆಗೆ ಗೊತ್ತಾದಾಗ ಆಘಾತವಾಗುತ್ತದೆ. ಬಸವಣ್ಣನಿಗೆ ವಿವಾಹ ಬಂಧನ ಇಷ್ಟವಿರುವುದಿಲ್ಲ. ಇದನ್ನು ಕಂಡಂತಹ ಜಾತವೇದಮುನಿಗಳು ಬಸವಣ್ಣನನ್ನು ಕರೆದು ಈ ರೀತಿ ಹೇಳುತ್ತಾರೆ. 'ಬಸವೇಶ, ಮಾದಿರಾಜ ನಿನ್ನನ್ನು ಸಾಕಿದ್ದು ಇಂಗಳೇಶ್ವರ ಬೃಹನ್ಮಠದ ಮಹಾಂತನನ್ನಾಗಿ ಮಾಡಲು ಅದು ನನಗೆ ಸರಿ ಬೀಳುವುದಿಲ್ಲ. ಮಠಾಧಿಪತಿಯ ಸಂಕುಚಿತ ವಾತಾವರಣದಲ್ಲಿ ನಿನ್ನಂತಹ ಪ್ರತಿಭಾವಂತ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡಿರಬಾರದು. ಲೋಕಸೇವೆಯ ವಿಶಾಲ ಕ್ಷೇತ್ರದಲ್ಲಿ ನಿನ್ನ ಬೆಳಗು ಆದರ್ಶವಾದಿ

ಯಾಗಿರಬೇಕು. ಈಗಿನ ಸಕಾಲ ಕಲ್ಯಾಣಕ್ಕೆ ಹೋಗಿ ನಿನ್ನ ಆದರ್ಶಗಳನ್ನು ಬೆಳಗು'[೧೪] ಎಂದು ಹೇಳುವುದರ ಮೂಲಕ ಆಶೀರ್ವಾದಿಸಿ ಕಳುಹಿಸಿಕೊಡುತ್ತಾನೆ.

ಕಾಶ್ಮೀರ ಪಂಡಿತನನ್ನು ಸೋಲಿಸಿ, 'ವಾದಿಮ ಸಿಂಹ' ಎಂಬ ಬಿರುದು ಪಡೆದ ಚಂದ್ರರಾಜನ ಮಗ ಬಸವೇಶ. ಚಂದ್ರರಾಜ ಮತ್ತು ಆತನ ಹೆಂಡತಿ ಸಾಂಕ್ರಾಮಿಕ ರೋಗದಿಂದ ಮರಣ ಹೊಂದಿದಾಗ ಬಸವೇಶ ಅನಾಥನಾಗುತ್ತಾನೆ. ಇದರಿಂದ ಬಸವಣ್ಣನು ಕಲ್ಯಾಣದ ಬಾವಿಯಲ್ಲಿ ನೀರು ಕುಡಿಯುತ್ತಿರುವಾಗ ಮಾದರಾಜನ ಮಗಳಾದ ನಾಗಲಾಂಬಿಕೆ ಅವನನ್ನು ಕರೆತಂದು ಸಾಕುತ್ತಾಳೆ. ಬಸವೇಶ ಎಂದು ನಾಮಕರಣ ಮಾಡಿ ಬಸವೇಶ್ವರನಿಗೆ ತಾಯಿಯಾಗುವುದರ ಜೊತೆಗೆ ಸರ್ವಸ್ವವಾದಳು. ಎಂಟು ವರ್ಷದ ಬಸವಣ್ಣನು ವಿದ್ಯಾಭ್ಯಾಸಕ್ಕಾಗಿ ಹೊರಟಾಗ ತನ್ನ ತಂದೆಯ ಅಪ್ಪಣೆಯನ್ನು ಪಡೆದು ಅವನಿಂದ ಸಂಗಮಕ್ಕೆ ಹೊರಡುತ್ತಾಳೆ. ಸಂಗಮದಲ್ಲಿ ಈಶಾನ್ಯ ಗುರುಗಳ ಪರಿಚಯ ಸಂಗಮನಾಥನಲ್ಲಿಯ ಭಕ್ತಿ. ಈಶಾನ್ಯ ಗುರುಗಳ ಅನುಮತಿ ಮೇರೆಗೆ ಕಲ್ಯಾಣಕ್ಕೆ ಹೋಗುವುದು ಅಲ್ಲಿ ಮಾದರಸನ ಮಾವನಾದ ಬಲದೇವನ ಸಹಾಯದಿಂದ ಕರಣಿಕ ವೃತ್ತಿಗೆ ಸೇರುಕೊಳ್ಳುವಂತಹದ್ದು. ಮುಂದೆ ಬಲದೇವನ ಮಗಳನ್ನು ಮದುವೆ ಮಾಡಿಕೊಂಡು ಸಂಸಾರ ಸಾಗಿಸುತ್ತಿರುವಾಗ, ಬಿಜ್ಜಳನ ತಂಗಿಯಾದ ನೀಲಾಂಬಿಕೆಯನ್ನು ಸಹ ಮದುವೆಯಾಗುತ್ತಾನೆ. 'ರಾಜ್ಯಪಾಲ' ಎಂಬ ಕಾದಂಬರಿಯಲ್ಲಿ ರಾಜ್ಯ ಆಸಕ್ತಿಯನ್ನು ತೋರೆದ ತೈಲಪನು ಗೋಕರ್ಣಕ್ಕೆ ಬಂದ ವಿಚಾರ ಮತ್ತು ಅಲ್ಲಿ ಸೈನ್ಯವನ್ನು ಜಮಾಯಿಸಿ ಪಾಟಲಿಕೆ-ಪ್ರೇಮಾವತಿಯರನ್ನು ದೂರವಿರಿಸಿದ್ದರು. ಗೋಕರ್ಣದಲ್ಲಿ ಪ್ರೇಮಾವತಿ ಕೊಚ್ಚಿ ಹೋಗುವಂತಹ ಸಂದರ್ಭ ಅವಳನ್ನು ಉಳಿಸಿದ ಸನ್ಯಾಸಿ ಅಲ್ಲಮಪ್ರಭುವಿನ ವಿವರಣೆ ಮತ್ತು ಗೋಕರ್ಣದಲ್ಲಿನ ಮಂಡಲೇಶ್ವರ ಮಹಾದೇವ ಅರಸ. ಗೋವಾದ ಕದಂಬರ ಪೆರ್ವಾಡಿ ಮಹಾರಾಜರ ದರ್ಶನಕ್ಕೆ ಬರುವ ವಿಚಾರ ವಿಕ್ರಮಾಧೀಶ್ವರನ ಆರು ಕೋಟಿ ವರಹದ ವಿಚಾರ ಹಾಗೂ ತೈಲಪನು ಗೋಕರ್ಣದಿಂದ ಬನವಾಸಿಗೆ ಬರುವಾಗ ಬನವಾಸಿಯ ಮಂಡಲೇಶ್ವರ ಬಿಜ್ಜಳನಿಗೆ ತಿಳಿಸುವಂತಹದ್ದು. ಇದರಿಂದ ಬಿಜ್ಜಳನು ತೈಲಪ ನಡೆಸಿದ ಗುಪ್ತ ಸಂಗತಿಗಳನ್ನು ಮನಗಂಡ ಬಿಜ್ಜಳನು ರಾಜದೂತನನ್ನಾಗಿ ಕಳುಹಿಸಿದ್ದು ಈ ಎಲ್ಲಾ ವಿಚಾರಗಳು ಬರುವುದರೊಂದಿಗೆ ಬಸವಣ್ಣನವರು ಕುಸುಮಾವಳಿಯ ಅವಳ ಅಕ್ಕಮಹಾದೇವಿಯನ್ನು ತಿಳಿದುಕೊಳ್ಳುತ್ತಾನೆ. ತೈಲಪನನ್ನು ಹುಡುಕಿಕೊಂಡು ಬಂದ ಕಾಮೇಶ್ವರಿಯು ಬನವಾಸಿಯಲ್ಲಿ ತೈಲಪನನ್ನು ಭೇಟಿಯಾಗುತ್ತಾಳೆ. ಆ ವಿಷಯವು ಇಲ್ಲಿ ರಸವತ್ತಾಗಿ ಮೂಡಿಬಂದಿದೆ.

ಮೂರು ಜನ ರಾಜಕುಮಾರಿಯರು ನರ್ತನೆಗಾಗಿ ಕಲಾಮಂದಿರದಲ್ಲಿ ತಮ್ಮ ಲೋಕವನ್ನೇಲ್ಲ ಮರೆತು ನರ್ತಿಸುವ ಸಂದರ್ಭದಲ್ಲಿ ಒಂದು ಸುಂದರ ಯುವಕ ಇದರ ಮುಂದೆ ಹಾದು ಹೋದಾಗ ಗಂಗಾಂಬಿಕೆಯಲ್ಲಿ ಆದ ಸಹಜ ಹೆಣ್ಣಿನ ಮನೋ ಇಂಗಿತವನ್ನು ಇಲ್ಲಿ ಕಾಣಬಹುದು.

"ಏಕೆ ಸುಮ್ಮನಿದ್ದೀಯೆ ಗಂಗಾ? ನನಗೆ ಗಂಡನನ್ನು ಹುಡುಕಲು ನೀನೇಕೆ ಸಂಗಡ ಬರಬೇಕಾಗಿತ್ತು'? ಎಂದಳು. ಬರುವ ಅಗತ್ಯವಿತ್ತು ಬಂದೆ. ಮದುವೆಯ ವಿಚಾರದಲ್ಲಿ ನನಗೂ ಗಂಗಾಂಬಿಕೆಗೂ ಒಂದು ಒಪ್ಪಂದವಾಗಿದೆ".[೧೫] ಗಂಡನನ್ನು ಹುಡುಕುವ ನಿವೇದನೆ, ನೀಲಾಲೋಚನೆ,

ಲಾವಣ್ಯ, ಗಂಗಾಂಬಿಕೆ ಇವರ ಒಳಮನದ ಒಪ್ಪಂದವನ್ನು ಕಾದಂಬರಿಕಾರರು ಆಧುನಿಕ ಸ್ತ್ರೀಯರ ಮನೋಭಾವದ ಇಂಗಿತವನ್ನು ಪ್ರತಿನಿಧಿಸುವಂತೆ ಚಿತ್ರಿಸಿದ್ದಾರೆ.

ತೈಲಪನು ಬನವಾಸಿಯಿಂದ ಕಾಲು ತೆಗೆದು ಓಡಿ ಹೋಗಿ ಹಂಪಿಯನ್ನು ಸೇರುತ್ತಾನೆ. ಅಲ್ಲಿ ಗಜಪತಿ ರಾಜನ ಕೈಯಲ್ಲಿ ಬಂಧಿತನಾಗುತ್ತಾನೆ. ಇದು ರಾಜಕೀಯ ವಿಷಯವಾದರೂ ಕಾಮೇಶ್ವರಿಯ ವಿಷಯವು ಬಂದಿರುವುದರಿಂದ ಸಾಮಾಜಿಕ ವಿಷಯವಾಗಿ ಪರಿವರ್ತನೆಯನ್ನು ಕಾಣಬಹುದು.

ಬಸವಣ್ಣನವರನ್ನು ನೋಡಿದ ನೀಲಾಲೋಚನೆ ಅವರನ್ನು ಮಾತನಾಡಿಸುವ ಸಂದರ್ಭದಲ್ಲಿ ಅವಳ ಅಭಿಲಾಷೆ ಮತ್ತು ಹಾರೈಕೆ ಪ್ರತಿಯೊಂದು ಹೆಣ್ಣಿನ ತುಮುಲ ಯಾವ ರೀತಿ ಇರುತ್ತದೆ ಎಂಬುದನ್ನು ನಾವು ಗಮನಿಸಬಹುದು.

> "ಪ್ರತಿ ಕ್ಷಣದಲ್ಲಿ ಜಗತ್ತು ಚಲಿಸಿತು. ನೀಲಾಲೋಚನೆ ಎರಡು ಹೆಜ್ಜೆ
> ಮುಂದೆ ಹೋಗಿ ತರುಣನಿಗೆ ಕೈಜೋಡಿಸಿ ನಮಸ್ಕಾರ ಮಾಡಿದಳು.
> 'ಆರ್ಯ! ಆರ್ಯ' ಎಂದು ಏನೋ ಹೇಳಲು ಪ್ರಾರಂಭಿಸಿ ಸುಮ್ಮನಾದಳು.
> ಮನಸ್ಸಿನ ಧೈರ್ಯ ಮಾತಿನಲ್ಲಿ ಹೊರಸೂಸಲಿಲ್ಲ."[೧೧]

ಹೆಣ್ಣು ನೋಡುವ ದೃಷ್ಟಿಗೆ ಬಸವಣ್ಣನವರು ಲಜ್ಜೆಗೆಟ್ಟು ಮುಖ ಕೆಳಗೆ ಹಾಕಿ ಮೌನದಿಂದ ಆ ವ್ಯಾಪಾರದಿಂದ ಬಹುದೂರ ಇರುವಂತೆ ಗೋಚರಿಸುತ್ತಾರೆ. ಮುಂದೆ ಬಸವಣ್ಣನವರು ತೈಲಪನನ್ನು ಹುಡುಕಿಕೊಂಡು ಹಂಪಿಗೆ ಬರುವ ಸಂದರ್ಭವು ಸಹ ರಸವತ್ತಾಗಿ ಮೂಡಿ ನಿಂತಿವೆ. ಮುಂದೆ ಜಗದೇಕಮಲ್ಲನ್ನು ಕಾಮೇಶ್ವರಿ ಕುಡುತಕ್ಕಂತಹದ್ದು ತೈಲಪನ ಮರಣ ಬಿಜ್ಜಳನ ರಾಜ್ಯದಾಹ ಹೊತ್ತು ನಿಂತಿದೆ.

ಕಪ್ಪಡಿ ಸಂಗಮನಾಥನಲ್ಲಿ ಬಸವಣ್ಣನವರು ಪೂಜೆ ಸೇವೆ ನಿರತರಾಗಿದ್ದ ಸಂದರ್ಭದಲ್ಲಿ ಅವರ ಗುರುಗಳು ಮಂಗಳವಾಡದಿಂದ ಕಲ್ಯಾಣಕ್ಕೆ ಕಳುಹಿಸುವಾಗ ಬಸವಣ್ಣನವರ ಮನದಾಳದ ಒತ್ತಡ ಮತ್ತು ಸಂಗಮನಾಥನ ಬಗ್ಗೆ ಭಕ್ತಿ ಸಾಮಾಜಿಕ ಸನ್ನಿವೇಶದಲ್ಲಿ ಅನಾವರಣವಾಗಿದೆ.

"ನಾನೂ ಬಹಳ ಹೊತ್ತು ಚಿಂತಿಸಿ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಈಗ ನನಗೆ ಕಲ್ಯಾಣಕ್ಕೆ ಬರುವ ಇಚ್ಛೆಯಿಲ್ಲ. ಬೇಕಾದರೆ ಚೆನ್ನಬಸವನನ್ನು ಕರೆದುಕೊಂಡು ನೀನು ಹೋಗಬಹುದು. 'ಈ ಪರಿವರ್ತನೆಯ ಕಾರಣ? ನಾವೆಲ್ಲ ಹೋಗಬೇಕೆಂದು ನೀನೇ ಹೇಳಿದ್ದೆ ಯಲ್ಲವೇ?' ಅವಸರದಲ್ಲಿ ಹೇಳಿದ್ದೆ. ಈಗ ತೋರುತ್ತಿದೆ. ನಾನು ಬರುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದೂ."[೧೨]

ಕುಲಪತಿಗಳು ಹೇಳಿದ ಮಾತನ್ನು ಬಸವಣ್ಣನವರು ತಿರಸ್ಕರಿಸಿದರೂ, ಗುರುಗಳ ಮಾತನ್ನು ತಿರಸ್ಕರಿಸಲಾರದೇ ತೊಳಲಾಡುತ್ತಾರೆ. ನಾಗಲಾಂಬೆ ಅಪ್ರತಿಭೆಯಾಗಿದ್ದರೂ ಮದುವೆ ನಿಲ್ಲಿಸುವುದು ಬಲದೇವ ಅರಸರನ್ನು ವಚನ ಭ್ರಷ್ಟರನ್ನಾಗಿ ಮಾಡಿದಂತಾಗುತ್ತದೆ ಎಂದು ಹೇಳಿ ಕಲ್ಯಾಣಕ್ಕೆ ಹೋಗುವಂತೆ ಮಾಡುತ್ತಾಳೆ.

ಇವರ ಮೂರನೇ ಸಂಪುಟವಾದ 'ಕಲ್ಯಾಣೇಶ್ವರ'ದಲ್ಲಿ ತೈಲಪನ ಮರಣದಿಂದ ಆರಂಭ ವಾಗುತ್ತದೆ. ತೈಲಪನ ಇಬ್ಬರು ಹೆಂಡರಲ್ಲಿ ಪಾಟಲಿಕೆ ಮತ್ತು ಪ್ರೇಮಾವತಿ ಇವರಿಬ್ಬರು ಕಾಶ್ಮೀರದ ರಾಜನನ್ನು ಒಲಿಯುವಂತದ್ದು ಪ್ರೇಮಾವತಿ ಮಾದಸಿಂಹನನ್ನು ಮದುವೆಯಾದಂತೆ ನಟಿಸಿದರೆ, ಪಾಟಲಿಕೆಯು ಆಹ್ವಾನ ಪ್ರೇಯಸಿಯಾಗುತ್ತಾಳೆ.

ಬಸವಣ್ಣನವರು ರಾಜ್ಯಸಂಧಾನಕ್ಕಾಗಿ ಬನವಾಸಿಗೆ ಹೋದಂತ ಸಂದರ್ಭದಲ್ಲಿ ಕರುಣದೇವರ ಒಂದು ಕುತಂತ್ರದಿಂದ ನಿರಾಯುಧನಾದ ಬಸವಣ್ಣನು ಶತ್ರುಗಳ ಹೊಡೆತಕ್ಕೆ ಸಿಕ್ಕು ಹಾಕಿಕೊಳ್ಳುತ್ತಾನೆ. ಅಂತಹ ಸಂದರ್ಭದಲ್ಲಿ ಕದಂಬ ಕುಲಕನ್ಯೆಯಾದ ಕುಸುಮಾವಳಿಯು ಒಂದು ಹೆಣ್ಣಿನ ಮಾನವೀಯತೆಯನ್ನು ಮೆರೆದಿರುವುದು ಕಾದಂಬರಿಕಾರರು ಸೂಕ್ಷ್ಮವಾಗಿ ಇಲ್ಲಿ ಉಲ್ಲೇಖಿಸಿದ್ದಾರೆ.

"ಮಹಾರಾಜರು ಬನವಾಸಿಯನ್ನು ಬಿಡುವ ಮೊದಲು ನಿಮಗೊಂದು ವಿಶೇಷ ಸಂದೇಶವನ್ನು ಕೊಟ್ಟರು. ಅದನ್ನು ಮುಟ್ಟಿಸುವುದಕ್ಕಾಗಿ ಎಲ್ಲ ಕಡೆ ನಿಮ್ಮನ್ನು ಹುಡುಕಿಸಿದೆ. ಕದಂಬ ಪ್ರಾಸಾದದ ಈ ರಮ್ಯ ಸ್ಥಳದಲ್ಲಿ, ಕುಸುಮಾವಳಿ ದೇವಿಯವರ ಶುಶ್ರೂಷೆಯಲ್ಲಿ ನೀವು ಚೇತರಿಸಿ ಕೊಳ್ಳುತ್ತಿರುವಿರೆಂದು ತಿಳಿದು ಮನಸ್ಸಿಗೆ ಸಮಾಧಾನವಾಯಿತು."[೧೮]

ಮಹಾದೇವ ಅರಸನು ಬಸವಣ್ಣನವರಿಗೆ ಒಂದು ವಿಶೇಷ ಸಂದೇಶವನ್ನು ತಿಳಿಸಲು ಬಂದಾಗ ಅವರ ಪರಿಸ್ಥಿತಿ ನೋಡಿ ಮರುಗುವುದರೊಂದಿಗೆ ವೃತ್ತಿಯಲ್ಲಿ ಬಡ್ತಿ ಹೊಂದಿರುವ ಸಂತೋಷದ ವಿಷಯವನ್ನು ಬಸವಣ್ಣನ ಮುಂದೆ ವಿವರಿಸುವ ಪ್ರಸಂಗ ಅವರ ಮನೋಭಾವನೆಗೆ ಹಿಡಿದ ನಿದರ್ಶನವಾಗಿದೆ.

ತೈಲಪ ತೀರಿಕೊಂಡ ನಂತರ ಜಗದೇಕಮಲ್ಲನು ಸಿಂಹಾಸನ ರೂಢನಾಗಿರತಕ್ಕದ್ದು ಇಲ್ಲಿ ಮೂಡಿಬರುತ್ತದೆ. ಇಂತಹ ಸಂದರ್ಭದಲ್ಲಿ ಮಾರಸಿಂಹನಿಗೂ ಅವಮಾನವಾಗುತ್ತದೆ. ಅಲ್ಲಿ ಪಾಟಲಿಕೆ ಮತ್ತು ಪ್ರೇಮಾಲಿಕೆಯ ಅನೈತಿಕ ಸಂಬಂಧ ಬಸವಣ್ಣನವರ ನ್ಯಾಯತೀರ್ಪು ಇವೆಲ್ಲವೂ ಅಂದಿನ ವ್ಯವಸ್ಥೆಯನ್ನು ಎತ್ತಿತೋರಿಸುತ್ತವೆ. ತೈಲಪನು ತೀರಿದ ಒಂದು ವಾರದಲ್ಲಿಯೇ ಮಗನಾದ ಕೀರ್ತಿವರ್ಮನನ್ನು ಕಾಮೇಶ್ವರಿ ಕಳೆದುಕೊಳ್ಳುತ್ತಾಳೆ. ಇದರೊಂದಿಗೆ ಅವಳ ರಾಜಕೀಯ ಸೇಡು ಮತ್ತಷ್ಟು ಹೆಚ್ಚಾಗುತ್ತದೆ. ಕಲ್ಯಾಣಕ್ಕೆ ಬಂದು ಜಗದೇಕಮಲ್ಲನಿಗೆ ಮಕ್ಕಳಿಲ್ಲದಿರುವುದರಿಂದ ಕಲ್ಯಾಣದ ರಾಜಕೀಯ ವ್ಯವಸ್ಥೆಯನ್ನು ಬಿಜ್ಜಳನು ನೋಡಿಕೊಳ್ಳುತ್ತಾನೆ. ಮುಂದೆ ಕಾಮೇಶ್ವರಿಯು ಧರ್ಮಶಾಸ್ತ್ರಗಳಲ್ಲಿ ಹೇಳಿರುವಂತೆ ನಿಯೋಗ ಪದ್ಧತಿಯ ಮೂಲಕ ಜಗದೇವನೊಂದಿಗೆ ಸ್ಪಂದಿಸಿ ತಮ್ಮ ವಂಶದ ಸಂಬಂಧಿಕರೊಂದಿಗೆ ಮಗನನ್ನು ಪಡೆಯುತ್ತಾಳೆ. ಈ ವಿಷಯ ಅತ್ಯಂತ ವಿಮರ್ಶಾತ್ಮಕವಾಗಿ ಇಲ್ಲಿ ಮೂಡಿಬಂದಿದೆ. ಆ ಜಗದೇಕಮಲ್ಲನನ್ನು ಭೇಟಿಯಾಗುವ ಸಂದರ್ಭದಲ್ಲಿ ಅವಳು ಪಡುವ ಎಲ್ಲಾ ಪ್ರಯತ್ನಗಳು ವಿವರವಾಗಿ ಕಾದಂಬರಿಕಾರರು ಹಿಡಿದಿಟ್ಟುಕೊಂಡಿದ್ದಾರೆ.

ಕಲ್ಯಾಣದಲ್ಲಿ ಬಸವಣ್ಣನು ಅನುಭವಮಂಟಪವನ್ನು ಸ್ಥಾಪಿಸಿದ ನಂತರದಲ್ಲಿ ಅದರ ಅಧ್ಯಕ್ಷ ಸ್ಥಾನ ಯಾರಿಗೆ ವಹಿಸಬೇಕು ಎಂಬ ಚಿಂತನೆಯಲ್ಲಿದ್ದಾಗ ಬಸವಣ್ಣನವರಿಗೆ ಹೊಳೆದ ವ್ಯಕ್ತಿ ಆಯ್ಕೆ ಅವರ ದೂರದೃಷ್ಟಿಯನ್ನು ವ್ಯಕ್ತಪಡಿಸುತ್ತದೆ. ಅಂತಹ ಸಂದರ್ಭದಲ್ಲಿ ಅಲ್ಲಮಪ್ರಭುಗಳು ಬಸವಣ್ಣನವರನ್ನು ಕುರಿತು ಹೇಳುವ ಮಾತುಗಳು ಗಮನಿಸಬೇಕಾಗುತ್ತದೆ.

"ಹಿಂದೆ ನಾನು ಮಧುವರಸರಂತೆಯೇ ರಾಜಕಾರಣಿಯಾಗಿದ್ದೆ. ಈಗ ಆ ಬಂಧನದಿಂದ ಬಿಡುಗಡೆ ಹೊಂದಿ ಜಗತ್‌ಕಲ್ಯಾಣದ ಅನಾದಿ ತತ್ವವನ್ನು ಅರಸುತ್ತಾ ಅನುಭವಮಂಟಪದ ಅಧ್ಯಕ್ಷನಾಗುವ ಯೋಗ್ಯತೆ ಎಲ್ಲಿಯದು ನನಗೆ? ವಯಸ್ಸಿನಲ್ಲಿ ಹಿರಿಯನೆಂಬ ಗೌರವದಿಂದ ಬಸವಣ್ಣನವರು ನನ್ನ ಹೆಸರು ಹೇಳಿದ್ದಾರೆ. ಅಧ್ಯಕ್ಷಗಿರಿಯ ಹೊಣೆಯನ್ನು ನಿರ್ವಹಿಸಬಲ್ಲ ಶಕ್ತಿ ನನ್ನಲಿಲ್ಲ. ಅಂತಹ ಶಕ್ತಿಸಾಮರ್ಥ್ಯ ಅನುಭವಗಳನ್ನು ಪಡೆದ ಜ್ಞಾನವೃದ್ಧರು ದೊರಕುವವರೆಗೆ ಅಧ್ಯಕ್ಷ ಸ್ಥಾನವನ್ನು ತೆರವಾಗಿಡಬೇಕೆಂಬ ಸಲಹೆಯನ್ನು ನಾನು ಅನುಮೋದಿಸುತ್ತೇನೆ".೧೯

ಸಕಲೇಶ ಮಾದರಸರು ಕೊಟ್ಟ ಸಲಹೆಯನ್ನು ಬಸವಣ್ಣನವರು ಅದನ್ನು ಅನುಮೋದಿಸುವ ಮೂಲಕ ಅಲ್ಲಮಪ್ರಭುದೇವರು ಅವರಷ್ಟೇ ಸೂಕ್ತ ವ್ಯಕ್ತಿ ಎಂಬುದಕ್ಕೆ ಬಸವಣ್ಣ ಮತ್ತು ಮಧುವರಸರ ಮನೋಭಾವ ಪ್ರಜ್ವಲಿಸುತ್ತದೆ.

ಕಲ್ಯಾಣದಲ್ಲಿ ಹರಳಯ್ಯನ ಮಗ ಶೀಲವಂತ ಕಾಮೇಶ್ವರಿಯು ಸಾನಿಧ್ಯದಲ್ಲಿ ಬಂದಾಗ ಅವನ ಕೈಚಳಕಕ್ಕೆ ಮಾರುಹೋಗುತ್ತಾಳೆ. ಅದರೊಂದಿಗೆ ಶೀಲವಂತನ ಚಿತ್ರಕಲೆಗೆ ಮನಸೋತು ಅರಮನೆಯಲ್ಲಿ ಇಟ್ಟುಕೊಂಡು ಅನೇಕ ಚಿತ್ರಗಳನ್ನು ಮೆಚ್ಚಿಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ವಿಮರ್ಶಾತ್ಮಕವಾಗಿ ಅವಲೋಕನ ಮಾಡಬೇಕಾದರೆ ಕೆಳವರ್ಗದವರಾಗಿರುವಂತಹ ಶೀಲವಂತನು ಅವನ ಕಲೆಗೆ ಮಹತ್ವವನ್ನು ಕೊಟ್ಟು ಅವನನ್ನು ಅನುಸರಿಸುತ್ತಾಳೆ. ಇಲ್ಲಿ ಶರಣರ ಸಂದೇಶ ಕುಲ ಯಾವುದಾದರೇನು ಅವನಲ್ಲಿ ಇರುವಂತಹ ಪ್ರತಿಭೆಗೆ ಹೆಚ್ಚಿನ ಮಾನ್ಯತೆ ಇತ್ತೆಂಬುದು ಇಲ್ಲಿ ವ್ಯಕ್ತವಾಗುತ್ತದೆ.

ಇದರೊಂದಿಗೆ ಕಾಮೇಶ್ವರಿಯ ಮನದಾಳದಲ್ಲಿ ಒದಗಿದ ಕಾಮದ ಭಾವನೆಗಳು ಇಲ್ಲಿ ವ್ಯಕ್ತವಾಗಿವೆ. ಕಲ್ಯಾಣದಲ್ಲಿ ಕುಸುಮಾವಳಿ ಬಿಡಾರದಲ್ಲಿ ಒಬ್ಬಳನ್ನು ಕಂಡು ಬಿಜ್ಜಳನ ತಮ್ಮನಾದ ಕರುಣಾದೇವನು ಅವಳ ಮಾನಭಂಗವನ್ನು ಮಾಡಲು ಪ್ರಯತ್ನಿಸುತ್ತಾನೆ. ಶೀಲವಂತನ ಸಮಯ ಪ್ರಜ್ಞೆಯಿಂದ ಇದು ಕೈಗೂಡುವುದಿಲ್ಲ. ಕರುಣಾದೇವನು ತನ್ನ ಕಾಮಲಾಸ್ಯ ತೀರಿಸಿಕೊಳ್ಳಲು ಅಡ್ಡಿಯಾದ ಶೀಲವಂತನನ್ನು ಕರುಣಾದೇವ ಬಂಧಿಸಿ ಚಿತ್ರ ಹಿಂಸೆ ಕೊಡುತ್ತಾನೆ. ಮುಂದುವರೆದು ಈ ವಿಷಯವನ್ನು ಕರುಣಾದೇವನು ಕಾಮೇಶ್ವರಿಗೆ ಹೇಳಿ ನೀನು ನನಗೆ ಒಲಿದರೆ ಶೀಲವಂತನು ಬದುಕುತ್ತಾನೆ ಎಂದು ಹೇಳುತ್ತಾನೆ. ಇಲ್ಲಿಯೂ ಸಹ ಈ ವಿಷಯದಲ್ಲಿಯೂ ಸಹ ಕಾಮೇಶ್ವರಿಯು ಅನ್ಯಾಯವಾಗಿ ಕರಣಾದೇವನಿಗೆ ಬಲಿಯಾಗುವುದು ತಪ್ಪುತ್ತದೆ.

ಶೀಲವಂತನು ಕಾಣದಿರುವಾಗ ಕುಸುಮಾವಳಿಯು ಬಸವಣ್ಣನವರ ಮಹಾಮನೆಗೆ ಬರುತ್ತಾಳೆ. ಕದಂಬ ರಾಜ್ಯ ಕನ್ಯೆಯಾದ ಕುಸುಮಾವಳಿಯು ಮಾದರಸನ ಮಗಳಾದ ಲಾವಣ್ಯಾವತಿಯನ್ನು ಭೇಟಿಯಾಗುತ್ತಾಳೆ. ಅಲ್ಲಿ ಅವರಿಬ್ಬರ ಮಾತುಕಥೆಗಳು ಅವರ ಮನದ ತೊಳಲಾಟವನ್ನು ಚಿತ್ರಿಸಲಾಗಿದೆ.

ಕಾಮೇಶ್ವರಿ ಕಲ್ಯಾಣವನ್ನು ಬಿಟ್ಟ ವಿಚಾರಶೀಲವಂತನ ಬಗ್ಗೆ ಬಲದೇವ ಅರಸನ ಸಂಪತ್ತನ್ನೆಲ್ಲಾ ದಾನದ ವಿವರ ನೀಲಾಲೋಚನೆ ಬಿಜ್ಜಳನ ತಂಗಿಯಾದ ನೀಲಾಂಬಿಕೆ ಅರಮನೆಗೆ ಬರುವ

ವಿಚಾರ ಅಕ್ಕಮಹಾದೇವಿ ಕಲ್ಯಾಣಕ್ಕೆ ಬರುವ ವಿಚಾರ ಮುಂತಾದವುಗಳು ಈ ಕಾದಂಬರಿಯಲ್ಲಿ ವರ್ಣಾತ್ಮಕವಾಗಿ ಮೂಡಿಬಂದಿವೆ.

ಬಿ. ಪುಟ್ಟಸ್ವಾಮಯ್ಯನವರು ಬರೆದ 'ನಾಗಬಂಧ'ದಲ್ಲಿ ಬರೆದ ಬ್ರಹ್ಮ ಶಿವ ಅಗ್ಗಳ ಜೈನಧರ್ಮ ಮತ್ತು ವೀರಶೈವ ಧರ್ಮದ ನಡುವೆ ಕೆಲವು ವಿಚಾರಗಳು ಇಲ್ಲಿ ಕಂಡು ಬರುತ್ತವೆ. ಆ ಕರ್ಹಾಟದಿಂದ ಹೊರಟ ಕಾಮೇಶ್ವರಿಯು ಹಗ್ಗಳನನ್ನು ಹೆಗ್ಗಡೆಯನ್ನಾಗಿ ಮಾಡಿಕೊಂಡ ವಿಚಾರ ಕಾಮೇಶ್ವರಿಯು ಕಲ್ಯಾಣದ ಹತ್ತಿರ ದೇವಗಿರಿಯಲ್ಲಿ ಕೆಲವು ದಿನಗಳವರೆಗೆ ನೆಲಸಿ, ಕೈಲಾಸನಾಥ ದೇವಾಲಯದಲ್ಲಿ ರಂಗಮಂಚದಲ್ಲಿ ನಡೆದ ಗಿರಿಜಾಕಲ್ಯಾಣ ನರ್ತನೆಯನ್ನು ವೀಕ್ಷಿಸಿದ್ದು ಅಗ್ಗಳ ನಾರಾಯಣ ಕ್ರಮಿತನನ್ನು ಸಂಧಿಸಿ, ಕಾಮೇಶ್ವರಿಯ ವಿಚಾರವನ್ನು ತಿಳಿಸುತ್ತಾನೆ. ಈ ಎಲ್ಲಾ ಅಂಶಗಳು ಎದ್ದು ಕಾಣುತ್ತವೆ. ಬಹು ಹಿಂದೆ ಉಳಿದ ಕಾಮೇಶ್ವರಿ ಶೀಲವಂತನಿಗೆ ಹೇಳುವಂತ ಮಾತುಗಳಲ್ಲಿ ಶೀಲವಂತ ನಿನ್ನ ಜೀವನ ವೃತ್ತಾಂತದ ಧೂಮಕೇತುವಾದ ನನ್ನನ್ನು ಮರೆತು ಬೀಡು ಇದೇ ನಮ್ಮ ಕೊನೆಯ ಭೇಟಿ ಎಂದು ಕಾಮೇಶ್ವರಿಯು ಕೃತಜ್ಞತೆಯಿಂದ ಶೀಲವಂತನಿಗೆ ಹೇಳುವ ಮಾತು ಆಧುನಿಕ ಸ್ತ್ರೀಯರ ಮನೋಭಾವ ಇಲ್ಲಿ ವ್ಯಕ್ತವಾಗುತ್ತದೆ. ಮುಂದುವರೆದು ತಾರುಣ್ಯದಲ್ಲಿರತಕ್ಕಂತಹ ಶೀಲವಂತನು ಆಪೇಕ್ಷೆ ಏನೆಂದು ತಿಳಿಯದೆ ವಿಷ ಕುಡಿಯಲು ಆಪೇಕ್ಷಿಸುತ್ತಿರುವ ಶೀಲವಂತ. ಆದರೆ ಈ ನಿನ್ನ ಕೈಯಲ್ಲಿರುವ ಆ ವಿಷದ ಬಟ್ಟಲನ್ನು ಕಿತ್ತು ಬಿಸಾಡಲು ನನಗೆ ಶಕ್ತಿಯಿಲ್ಲ, ನಿನ್ನನ್ನು ನೋಡದೆ ಓಡಿ ಹೋಗಿದ್ದರೆ ಚೆನ್ನಾಗಿತ್ತು. ಹೀಗೆ ಶೀಲವಂತ ಮತ್ತು ಕಾಮೇಶ್ವರಿಯ ಕಾಮದ ದಾಹವನ್ನು ಇಲ್ಲಿ ವ್ಯಕ್ತವಾಗಿದೆ. ಶೀಲವಂತ ಕಾಮೇಶ್ವರಿ ಜಗದೇವ ಬಿಜ್ಜಳ ಈ ಮುಂತಾದ ಪಾತ್ರಗಳು ಒಬ್ಬರನ್ನು ಒಬ್ಬರು ಮುಗಿಸುವ ಅಂತ್ಯದಲ್ಲಿ ಕಾದಂಬರಿಯು ಮುಕ್ತಾಯವಾಗುತ್ತದೆ.

ಬಿ. ಪುಟ್ಟಸ್ವಾಮಯ್ಯನವರ ಐದನೇ ಸಂಪುಟವಾದ ಮುಗಿಯದ ಕನಸು ಈ ಕಾದಂಬರಿಯಲ್ಲಿ ಚಾಳುಕ್ಯದ ಮಹಾರಾಣಿ, ಕಾಮೇಶ್ವರಿ ಬ್ರಹ್ಮ ಶಿವ, ಬೊಮ್ಮರಸ ಈ ಮೂವರು ಒಟ್ಟುಗೂಡಿ ಬಿಜ್ಜಳನು ತಮ್ಮ ಮಗಳಾದ ಸೋಮೇಶ್ವರನನ್ನು ಪಟ್ಟಾಭಿಷೇಕ ವಿಚಾರ ಹಾಗೂ ಬಿಜ್ಜಳನು ಕಳುಹಿಸಿರುವ ವಿಶೇಷ ಆಹ್ವಾನ ಪತ್ರಿಕೆಯಿಂದ ಇದರಲ್ಲೇನೋ ರಾಜಕೀಯ ಉದ್ದೇಶವಿರುವುದೆಂದು ತಿಳಿದುಕೊಂಡು ಎಚ್ಚರವಾದ ಕಾಮೇಶ್ವರಿಯು ಅಗ್ಗಳದೇವನನ್ನು ಕಲ್ಯಾಣಕ್ಕೆ ಕಳುಹಿಸುತ್ತಾಳೆ. ಅಗ್ಗಳದೇವನು ಕಲ್ಯಾಣಕ್ಕೆ ಬರುವ ವಿಚಾರ ದೇವಗಿರಿಗೆ ಹೋಗಿದ್ದ ನಾರಾಯಣ ಕ್ರಮಿತನ ವಿಚಾರ ಬಿಜ್ಜಳನಿಗೆ ದೇವಗಿರಿಯಲ್ಲಿ ಕಾಮೇಶ್ವರಿ ಕಳುಹಿಸಿದ ನೀಲಾಂಜನೆಯನ್ನು ಬಿಜ್ಜಳನು ಅವಳನ್ನು ಹಿಡಿಯಲು ಹೋಗಿ ಮೂರ್ಛೆ ಹೋದ ಸಂಗತಿಯನ್ನು ಇಲ್ಲಿ ತಿಳಿಸಲಾಗಿದೆ ಮತ್ತು ಶೀಲವಂತನಿಗೆ ಹಾವು ಕಚ್ಚಿದ ವಿಚಾರ ಆ ವಿಷಯವನ್ನು ಹಾಗೂ ವಿಷವನ್ನು ಏರಿ, ಸತ್ತ ಕುಸುಮಾವಳಿಯ ವಿಚಾರವನ್ನು ಹಾಗೂ ಲಾವಣ್ಯವತಿ ಶೀಲವಂತನನ್ನು ಆರೋಗ್ಯ ಮಾಡಿದ ಸಂಗತಿಗಳು ಇಲ್ಲಿ ಗರಿಬಿಚ್ಚಿ ಗೆದರಿವೆ.

ಬಿ. ಪುಟ್ಟಸ್ವಾಮಿಯ್ಯನವರ ಆರನೇ ಸಂಪುಟವಾದ 'ಕ್ರಾಂತಿ ಕಲ್ಯಾಣ' ಕಾದಂಬರಿಯಲ್ಲಿ ಬಿಜ್ಜಳನ ಧರ್ಮಾಧೀಕರಣದಿಂದ ಬಸವಣ್ಣನ ನಿರ್ಗಮವಾದ ದಿನದಿಂದ ಹಿಡಿದು ಅಗ್ಗಳನು

ನಾರಾಯಣ ಕ್ರಮಿತನನ್ನು ಭೇಟ್ಟಿ ಮಾಡಿದ ವಿಚಾರ ಬ್ರಹ್ಮರಸನ ಬ್ರಹ್ಮಶಿವ ಮಾರುವೇಷದಲ್ಲಿ ಕಲ್ಯಾಣವನ್ನು ಪ್ರವೇಶ ಮಾಡಿದ್ದು ಕಾಮೇಶ್ವರಿಯ ಮಗನಾದ ಪ್ರೇಮಾರ್ಣವನಿಗೆ ಚಾಲುಕ್ಯ ಸಾಮ್ರಾಜ್ಯದ ಉತ್ತರಾಧಿಕಾರಿಯನ್ನಾಗಿ ನೇಮಕ ಮಾಡಲು ಬಿಜ್ಜಳನು ಅಗ್ಗಳನನ್ನು ನೇಮಿಸುತ್ತಾನೆ.

ಮರುದಿನ ರಾಜ್ಯಸಭೆಯಲ್ಲಿ ಕರುಣಾದೇವ ಮತ್ತು ಜಗದೇಕಮಲ್ಲನನ್ನು ತನ್ನ ಹಾಸ್ಯ ಶೈಲಿಯಿಂದ ಅವರನ್ನು ಒಲಿಸಿಕೊಳ್ಳುತ್ತಾನೆ. ಕರುಣಾದೇವನಿಂದ ಅಗ್ಗಳನಿಗೆ ಪಾನ ಸೇವನೆಯಲ್ಲಿ ಆಹ್ವಾನ ಬಂದರು. ಅನೀತಿ ಸಂಬಂಧದಿಂದ ದೂರ ಉಳಿಯುತ್ತಾನೆ. ಜಗದೇಕಮಲ್ಲನು ಮತ್ತು ಅಗ್ಗಳದೇವರ(ನಡುವೆ) ಗುಪ್ತವಾದ ಮಾತುಕತೆಗಳು ನಡೆಯುತ್ತವೆ. ಅಂದರೆ ಪ್ರೇಮಾರ್ಣವನ ಹುಟ್ಟುವಿನ ಬಗ್ಗೆ ಪ್ರಶ್ನೆಗಳನ್ನು ಹಾಕುತ್ತಾನೆ. ಅದು ಒಂದು ಕಡೆ ಆದರೆ, ಕಾಮೇಶ್ವರಿಯು ಮಂಗಳವಾಡಕ್ಕೆ ಬಂದ ಮೂರನೇ ದಿನವೇ ಸೋಮೇಶ್ವರನ ಪಟ್ಟಾಭಿಷೇಕ ಒಂದು ದಿನ ಉಳಿದಿರುತ್ತದೆ. ಅಗ್ಗಳನು ಕಾಮೇಶ್ವರಿಯನ್ನು ಭೇಟ್ಟಿ ಮಾಡಿ ಬಿಜ್ಜಳನ ಕುತಂತ್ರ ಎಲ್ಲವನ್ನು ವಿಚಾರಿಸುತ್ತಾನೆ. ಕುಮಾರ ಸೋಮೇಶ್ವರ ಮತ್ತು ಅವನ ಹೆಂಡತಿ ಸಾವಳದೇವಿಯವರು ಪಟ್ಟಾಭಿಷೇಕ ಮಂಡಲದಲ್ಲಿ ಜನರಿಗೆ ದರ್ಶನ ನೀಡಿದ ಪ್ರಸಂಗವನ್ನು ಕರ್ಕಾಡಕ್ಕೆ ಹೊರಟಂತಹ ಕಾಮೇಶ್ವರಿಯನ್ನು ವಿಜಯದಶಮಿಯವರೆಗೂ ಅತಿಥಿಯಾಗಿ ಉಳಿಯಲು ಬಿಜ್ಜಳನು ಹೇಳುತ್ತಾನೆ. ಆ ದಿನದಂದು ಬಿಜ್ಜಳನ ಅರಮನೆಯಲ್ಲಿ ಪುರುಷ ಭೇದಭಾವವಿಲ್ಲದೆ ಭಾಗವಹಿಸಿದರು. ಆ ಸಂದರ್ಭದಲ್ಲಿ ಬಿಜ್ಜಳ ಮತ್ತು ಕಾಮೇಶ್ವರಿಯ ನಡುವೆ ಮನೋರಂಜನಾತ್ಮಕ ಕ್ರೀಡೆಗಳು ನಡೆಯುತ್ತವೆ. ಅದರಲ್ಲಿ ಕಾಮೇಶ್ವರಿಯು ವಿಜಯದಿಂದ ವಿಜಯವನ್ನು ಸಾಧಿಸುವುದರ ಮೂಲಕ ಮುಂದಿನ ದಿನದಂದು ಬಿಜ್ಜಳನು ಸೋಲುವ ಸನ್ನಿವೇಶದ ಭವಿಷ್ಯವನ್ನು ಕಾದಂಬರಿಕಾರರು ನುಡಿಯುತ್ತಾರೆ. ಕಾಮೇಶ್ವರಿಗೆ ಅಗ್ಗಳದೇವ ಮತ್ತು ಕರುಣಾದೇವ ವಾಹನ ಮತ್ತನಾದಾಗ ಅಗ್ಗಳನು ಸತ್ಯವೊಂದನ್ನು ಹೊರಗೆ ಹಾಕುತ್ತಾನೆ. ಶೀಲವಂತನೊಂದಿಗಿದ್ದ ಸಂಬಂಧವನ್ನು ಕೇವಲ ಕಲ್ಪಿತವೆಂದು ತಿಳಿಸಿ ಅಂದು ರಾತ್ರಿ ಬಿಜ್ಜಳನು ಕಾಮೇಶ್ವರಿಯನ್ನು ಕೂಡಿದ್ದು, ಕಾಮೇಶ್ವರಿಯ ಹಿಂದಿನ ಎಲ್ಲಾ ಘಟನೆಯು ಕಲ್ಪಿತವೆಂದು ಹೇಳಿ ಬಿಜ್ಜಳನನ್ನು ಬೀಳ್ಕೊಡುತ್ತಾಳೆ. ಅಂದು ರಾತ್ರಿ ನಡೆದ ಸಂಗತಿಗಳನ್ನೆಲ್ಲ ಗಮನಿಸಿದ ಮಹಾರಾಣಿ ಕಾಮೇಶ್ವರಿ ಬಿಜ್ಜಳನ ಅರಮನೆಯಲ್ಲಿ ತನ್ನನ್ನು ಅಗ್ನಿಗೆ ಅರ್ಪಿಸಿಕೊಂಡಳು. ದಶಮಿಯಂದೇ ಮಂಗಳವೇಡೆಯ ಬಿಜ್ಜಳನ ಅರಮನೆ ಭೂ ಆಕಾಶಗಳು ಒಂದಾಗಿ ಉರಿಯುತ್ತಿತ್ತು.

ಹರಳಯ್ಯ ಮತ್ತು ಮಧುವರಸರ ವರ್ಣಸಂಕರದ ಮನವಿ ಪತ್ರವು ವಿಚಾರಣೆ ಮುಗಿದರೂ ಇನ್ನೂ ಕಾರ್ಯರೂಪಕ್ಕೆ ಬಂದಿರಲಿಲ್ಲ. ವಿಚಾರಣೆ ಆರಂಭವಾದ ಮೇಲೆ ಶೀಲವಂತ, ಹರಳಯ್ಯ, ಮಧುವರಸ, ಲಾವಣ್ಯವತಿ ಇವರೆಲ್ಲರ ವಿಚಾರಗಳನ್ನು ಆಲಿಸಿದ ನಂತರ ಲಾವಣ್ಯವತಿ, ಮಧುವರಸ, ಹರಳಯ್ಯ, ಶೀಲವಂತರಿಗೆ ವರ್ಣಸಂಕರದ ವಿವಾಹದ ಅಪರಾಧಕ್ಕಾಗಿ ಮರಣ ದಂಡನೆಯನ್ನು ವಿಧಿಸಲು ನಿರ್ಧರಿಸಿದ್ದಾರೆ ಎಂದು ಮಂಚಣ್ಣನು ಮಾಚಿದೇವರಿಗೆ ಪತ್ರವನ್ನು ಬರೆಯುತ್ತಾನೆ. ಇದರಿಂದ ನೀವು ಅನುಭಾವ ಮಂಟಪದ ಶರಣರಿಗೆ ಈ ವಿಷಯ ತಿಳಿಸಿ

ಆಪಾದಿತರ ಬಿಡುಗಡೆಗೆ ಪ್ರಯತ್ನಿಸಬೇಕೆಂದು ಹೇಳುತ್ತಾನೆ. ಅಂದು ರಾತ್ರಿ ತಾನು ಮತ್ತು ಆತನ ಹೆಂಡತಿ ಅಸುನೀಗಿದರು. ದರ್ಪಿಷ್ಟರ ದಬ್ಬಾಳಿಕೆಯಿಂದ ಸತ್ಯ ಹೇಗೆ ಕಮರಿ ಹೋಗುತ್ತದೆ ಎಂಬುದನ್ನು ಈ ಸಂಗತಿಯಿಂದ ಪ್ರತಿಧ್ವನಿತವಾಗುತ್ತದೆ.

ಮಾರನೇ ದಿನ ಲಾವಣ್ಯವತಿಯು ಬಿಜ್ಜಳನನ್ನು ಏಕಾಂತದಲ್ಲಿ ಕಂಡು ತನ್ನ ಗಂಡನಾದ ಶೀಲವಂತನನ್ನು, ತಂದೆಯಾದ ಮಧುವರಸನನ್ನು, ಮಾವನಾದ ಹರಳಯ್ಯನವರನ್ನು ಮರಣ ದಂಡನೆಯಿಂದ ವಿಮುಕ್ತಗೊಳಿಸಬೇಕೆಂದು ಕೇಳಿಕೊಳ್ಳುತ್ತಾಳೆ. ಅದಕ್ಕೆ ಕೆಲವು ಷರತ್ತುಗಳನ್ನು ಬಿಜ್ಜಳನು ಹಾಕುತ್ತಾನೆ. ನೀನು ನನಗೆ ದಾಸಿಯಾಗುವುದಾದರೆ ಅದನ್ನು ಈಡೇರಿಸುತ್ತೇನೆ ಎಂದು ಹೇಳಿದಾಗ ಅಲ್ಲೇ ದೀಪಸ್ತಂಭದಲ್ಲಿ ಉರಿಯುತ್ತಿದ್ದ ಎರಡು ದೀಪಗಳನ್ನು ಉಜ್ಜಿಕೊಂಡು ವಿಕಾರವಾಗಿ ಚೀರುತ್ತಾಳೆ. ಮಾರನೇ ದಿನವೇ ರಾಜಾಜ್ಞೆಯಂತೆ ಶೀಲವಂತ, ಮಧುವರಸ ಹರಳಯ್ಯನ ಶಿರಚ್ಛೇಧವಾಗುತ್ತದೆ. ಲಾವಣ್ಯವತಿಯು ವಧೆಯಾದ ಸ್ಥಳಕ್ಕೆ ನೇರವಾಗಿ ಹೋದಾಗ ರಾಜಭಟರು ಅವಳನ್ನು ತಿವಿದುಕೊಂದರು. ಲಾವಣ್ಯವತಿಯು ತನ್ನ ಜೀವನದ ಎಲ್ಲಾ ಕನಸುಗಳು ಈಡೇರದೇ ಇದ್ದಾಗ ಕೊನೆಯದಾಗಿ ತನ್ನ ಗಂಡನಾದ ಶೀಲವಂತನನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನ ವಿಫಲವಾಗುತ್ತದೆ. ಇಂಥ ದುರದೃಷ್ಟ ಹೆಣ್ಣಿನ ಕತೆಯು ಕರುಣರಸವಾಗಿ ಹರಿದಿದೆ. ಇಲ್ಲಿ ಬಿಜ್ಜಳ ಒಬ್ಬ ರಾಜನಾಗಿ ಅಸಹಾಯಕ ಹೆಣ್ಣನ್ನು ಕಾಪಾಡುವುದು ಅವನ ರಾಜ ಧರ್ಮ. ಆದರೆ ರಕ್ಷಕನೇ ಭಕ್ಷಕನಾದಾಗ ಮುಂದೊಂದು ದಿನ ಜನಸಾಮಾನ್ಯರ ಆಕ್ರೋಶಕ್ಕೆ ಬಲಿಯಾಗುತ್ತಾನೆ.

ಮಾಚಿದೇವರ ಸಮ್ಮುಖದಲ್ಲಿ ಶರಣರ ಎಲ್ಲ ದೇಹಗಳನ್ನು ಧರ್ಮಕ್ಕನುಸಾರವಾಗಿ ಶವಸಂಸ್ಕಾರ ನಡೆಯುತ್ತದೆ. ಸಕಲೇಶ ಮಾದರಸರ ಅಧ್ಯಕ್ಷತೆಯಲ್ಲಿ ಅನುಭವಮಂಟಪದಲ್ಲಿನ ಶರಣರು ತಮ್ಮ ರಕ್ಷಣೆಯ ಪಣವನ್ನು ತೊಡುತ್ತಾರೆ. ಈ ವಿಷಯವನ್ನು ತಿಳಿದ ಬಿಜ್ಜಳನು ಚೆನ್ನಬಸವಣ್ಣನವರನ್ನು ಕರೆಯಿಸಿ ಇದನ್ನು ಕುರಿತು ಪ್ರಶ್ನಿಸಿದಾಗ ಚೆನ್ನಬಸವಣ್ಣ ಕೊಡುವ ಉತ್ತರ ಮಾರ್ಮಿಕವಾಗಿದೆ. ಅಗ್ಗಳದೇವನು ಮಾರುವೇಷದಲ್ಲಿ ಜಗದೇಕಮಲ್ಲರಸರನ್ನು ಸಂಧಿಸಿ ಕಾಮೇಶ್ವರಿಯ ಪತ್ರವನ್ನು ಕೊಡುವ ದೃಶ್ಯ ಒಬ್ಬ ಹೆಣ್ಣಿನಲ್ಲಿರುವ ಹಠವಾದವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇದರಿಂದ ಪ್ರೇರಣೆಗೊಂಡ ಜಗದೇಕಮಲ್ಲನು ಬೊಮ್ಮರಸನ ಸಂಗಡ ಗುಪ್ತ ವಿಷಯದಲ್ಲಿ ಅರಮನೆಯನ್ನು ಬಿಟ್ಟು ಬೊಮ್ಮರಸನ ಸಂಗಡ ಗುಪ್ತ ವಿಷಯದಲ್ಲಿ ಅರಮನೆಯನ್ನು ಬಿಟ್ಟು ಹೊನ್ನಮ್ಮನ ಚಾವಡಿಯಲ್ಲಿ ಬಿಜ್ಜಳನನ್ನು ಕೊಂದು ಪರಾರಿಯಾಗುತ್ತಾರೆ. ಅವರನ್ನು ಬೆನ್ನಟ್ಟಿದ ರಾಜಭಟರಿಂದ ಜಗದೇಕಮಲ್ಲರ ಕೊಲೆಯಾಗುತ್ತದೆ. ಅವರನ್ನೇ ಹುಡುಕಿಕೊಂಡು ಬಂದ ಕರ್ಣದೇವರಿಗೆ ಅವರು ವಧೆಯಾದ ದೃಶ್ಯ ಗೋಚರಿಸುತ್ತದೆ. ಇಲ್ಲಿಂದ ಶರಣರಿಗೆ ಮತ್ತು ಬಿಜ್ಜಳನ ರಾಜಭಟ್ಟರಿಗೂ ಕದನ ನಡೆಯುತ್ತದೆ. ಹಲವಾರು ಶರಣರು ಈ ಒಂದು ಹೋರಾಟದಲ್ಲಿ ಸಾವನ್ನಪ್ಪುತ್ತಾರೆ. ಮಾಧವ ನಾಯಕನ ಸೈನ್ಯ ತಂಗಡಗಿಯ ಮೇಲೆ ಎರಗಿತು. ಅಲ್ಲಿ ಮಾಚಿದೇವ ಮತ್ತು ಚೆನ್ನಬಸವಣ್ಣನವರು ಮಾಧವನ ಸೈನ್ಯದ ಮೇಲೆ ಬೆನ್ನಟ್ಟಿ ಓಡಿಸುತ್ತಾರೆ. ಇಲ್ಲಿಗೆ ಈ ಕಾದಂಬರಿ ಮುಗಿಯುತ್ತದೆ.

ಒಟ್ಟಾರೆಯಾಗಿ ಬಿ. ಪುಟ್ಟಸ್ವಾಮಿಯ್ಯನವರು ಬರೆದಿರುವ ಕ್ರಾಂತಿಕಲ್ಯಾಣ ಕಾದಂಬರಿಯ ಸಂಪುಟಗಳನ್ನು ತಿರುವಿ ನೋಡಿದಾಗ ಸಾಮಾಜಿಕ ಹಿತಾಸಕ್ತಿಯ ಧೋರಣೆಯೇ ಹೆಚ್ಚಾಗಿ ಕಂಡುಬರುತ್ತದೆ. ಹೀಗೆ ಮದುವೆ, ಕಾಮದ ದಾಹ, ರಾಜ್ಯದ ವಿಸ್ತರಣೆ, ತಂತ್ರ-ಕುತಂತ್ರಗಳು ಎಲ್ಲವೂ ಜನಸಾಮಾನ್ಯರ ನಡುವೆ ಇರುವ ಕಲಹದ ಸನ್ನಿವೇಶದಂತೆ ಇಲ್ಲಿ ಚಿತ್ರಣವಾಗಿದೆ.

ಪ್ರೊ. ಜಿ.ಎಚ್. ಹನ್ನೆರಡುಮಠ ಕಾದಂಬರಿಗಳಲ್ಲಿ ಸಾಮಾಜಿಕ ಹಿತಾಸಕ್ತಿಯನ್ನು ನೋಡುವುದಾದರೆ ಅಲ್ಲಿಯೂ ಸಹ ಬಸವಣ್ಣನವರ ಜೀವನದಿಂದ ಆರಂಭವಾಗಿರುವುದು ಕಂಡುಬರುತ್ತದೆ. ಅವರು ಬರೆದಿರುವ ಎಂಟು ಕಾದಂಬರಿ ಸಂಪುಟಗಳನ್ನು ನೋಡಿದಾಗ ಪ್ರತಿಯೊಂದರಲ್ಲಿಯೂ ಸಾಮಾಜಿಕ ಹಿತಾಸಕ್ತಿ ಬಸವಣ್ಣನವರ ಮುಖ್ಯ ಕಾಳಜಿಯಾಗಿತ್ತು ಎಂಬುದನ್ನು ಕಾಣುತ್ತೇವೆ. ಅವರ ಮಹಾಸಂಪುಟದ ಮೊದಲ ಕಾದಂಬರಿಯಾದ 'ಕೂಗಿತ್ತು ಕೂಡಲ ಸಂಗಮ'ದಲ್ಲಿ ಬಸವಣ್ಣನವರ ಜನನದಿಂದ ಹಿಡಿದು ಅವರ ವಿದ್ಯಾಭ್ಯಾಸ. ಅಕ್ಕನಾಗಮ್ಮನವರ ತ್ಯಾಗದ ಮನೋಭಾವ ಈಶಾನ್ಯ ಗುರುಗಳ ಅನುಗ್ರಹ, ಸಂಗಮನಾಥನ ಕೃಪೆ, ಕಲ್ಯಾಣದವರೆಗೆ ನಡೆದ ಸಂಗತಿಗಳು ಬಸವಣ್ಣನವರ ಮಾವನಾದ ಬಲದೇವ, ಅವರ ಮಗಳಾದ ಗಂಗಾಂಬಿಕೆಯೊಂದಿಗೆ ಮದುವೆ - ಮುಂತಾದ ವಿವರಗಳು ವಿವರಣಾತ್ಮಕವಾಗಿ ಕಥನ ರೂಪದಲ್ಲಿ ನಿಂತಿರುವುದು ಕಾಣಬಹುದು.

ಎರಡನೇ ಸಂಪುಟದಲ್ಲಿ ಸಂಗಮನಾಥನಲ್ಲಿಗೆ ಹೋಗುವ ಮುಂಚೆ ಜನಿವಾರ ದೀಕ್ಷೆ, ಶೈವಪಂಥದ ಉಪನಯನ ಪದ್ಧತಿ, ಇದರ ವಿರುದ್ಧ ಪ್ರತಿಭಟನೆ ಇವುಗಳ ಕುರಿತು ಬಸವಣ್ಣನವರ ವಿಚಾರಗಳು ಪ್ರತಿಭಟನೆಗಳು ವಿವರಣಾತ್ಮಕವಾಗಿ ಮೂಡಿಬಂದಿವೆ. ಬಸವಣ್ಣನವರು ಮೂಲತಃ ಸಮಾಜಮುಖಿಯಾದ ವಿಚಾರಗಳನ್ನು ಹೊಂದಿರುವವರು. ಸಮಾಜದ ಅನಿಷ್ಟ ಪದ್ಧತಿಗಳ ವಿರುದ್ಧ ಬಂಡಾಯವೇಳುವ ಮನೋಭಾವ ಇಲ್ಲಿ ಎದ್ದು ಕಾಣಿಸುತ್ತದೆ. ಈ ಸಂಪುಟದ ಮೂರನೇ ಕಾದಂಬರಿಯಾದ 'ಗುರುವೆಂದರ್‍ಯಾರೋ ಹರವೆಂದರ್‍ಯಾರೋ' ಕಾದಂಬರಿಯಲ್ಲಿ ಇಲ್ಲಿ ಬಸವಣ್ಣನವರು ಬಾಗೇವಾಡಿಯಿಂದ ಮಂಗಳವಾಡಕ್ಕೆ ಹೋದಂತ ಸಂದರ್ಭದಲ್ಲಿ ಅಲ್ಲಿ ನಡೆದ ಘಟನೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಅಕ್ಕನಾಗಮ್ಮನೊಂದಿಗೆ ಕಪ್ಪಡಿಯ ಸಂಗಮನಾಥನ ಸಾನ್ನಿಧ್ಯಕ್ಕೆ ಹೋದಂತಹ ಸಂದರ್ಭದಲ್ಲಿ ಶಿವನ ಸಾಕ್ಷಾತ್ಕಾರದ ಶಿಕ್ಷಣವನ್ನು ಪಡೆಯುತ್ತಾನೆ. ಅಲ್ಲಿ ಅರಳಿದ ಜ್ಞಾನಾರ್ಜನೆ ವಿದ್ವತ್, ದಾರ್ಶನಿಕತೆ, ರಾಜ ನೈಪುಣ್ಯತೆ ಮುಂತಾದವುಗಳು ಬಸವಣ್ಣನವರ ಜೀವನದ ಮೇಲೆ ಬೆಳಕನ್ನು ಹರಿಸಿದ್ದಾರೆ.

ಕಪ್ಪಡಿಯ ಸಂಗಮನಾಥನಲ್ಲಿ ಸಂಗಮನಾಥನೇ ತನಗೆ ಶಿವನೆಂದು ಬಗೆದು ಶಿವಧ್ಯಾನ, ಶಿವನಿಷ್ಠೆ, ಶಿವ ಸಾಕ್ಷಾತ್ಕಾರಕ್ಕೆ ತನ್ನನ್ನು ತಾನು ತೊಡಗಿಸಿಕೊಂಡು ತಾನೇ ತಾನಾಗಿ ನಿಂತು ಶಿವನೇ ತಾನಾಗಿ ಶಿವನೇ ಬಸವಣ್ಣನಾಗಿ ಮೈವೆತ್ತ ಪ್ರಸಂಗಗಳು ಇಲ್ಲಿ ಎದ್ದು ಕಾಣುತ್ತೇವೆ. ನಡುಗನ್ನಡ ಕಾಲಘಟ್ಟದಲ್ಲಿ ಬಸವಣ್ಣನವರ ಜೀವನವನ್ನು ಕುರಿತು ರಚನೆಯಾಗಿರುವ ಗ್ರಂಥಗಳನ್ನು ಇಟ್ಟುಕೊಂಡು ನೋಡಿದಾಗ ಹರಿಹರನ ಬಸವರಾಜದೇವರಗಳೆ, ಭೀಮಕವಿಯ ಬಸವಪುರಾಣ,

ಸಿಂಗರಾರ್ಯನ ಕೃತಿ, ಹಾಗೇ ಷಡಕ್ಷರದೇವನ ಬಸವರಾಜವಿಜಯ, ಚೆನ್ನಬಸವಪುರಾಣ ಮುಂತಾದ ಗ್ರಂಥಗಳಲ್ಲಿ ವ್ಯಕ್ತವಾಗಿರುವ ವಿಷಯಗಳನ್ನು ಅಧ್ಯಯನ ಮಾಡಿ ಅದನ್ನು ತಮ್ಮ ಕಾದಂಬರಿಗಳಿಗೆ ಆಧಾರಗಳಾಗಿ ಬಳಸಿಕೊಂಡಿದ್ದಾರೆ. ಈ ಮೂಲಕ ಬಸವಣ್ಣನ ಜೀವನ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ಇವರ ನಾಲ್ಕನೇ ಸಂಪುಟವಾದ 'ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ' ಎಂಬ ಕಾಂದಬರಿಯಲ್ಲಿ ಶಿವನ ಆರಾಧಕನಾಗಿರುವ ಬಸವಣ್ಣನವರಾಗಿರಬಹುದು. ನಿರಹಂಕಾರಿ ಯಾಗಿರುವ ಅಲ್ಲಮಪ್ರಭುವಿಗೆ ಆಗಲಿ, ವೈರಾಗಿಣಿಯಾಗಿರುವ ಅಕ್ಕಮಹಾದೇವಿ ಬಗ್ಗೆಯಾಗಲೀ ಯೋಗಿಣಿ ಯೋಗಿಗೆ ಯಾವ ರೀತಿ ಕಾಡುತ್ತದೆ ಎಂಬುದು ಈ ಕಾದಂಬರಿಯಲ್ಲಿ ಬಿತ್ತರಗೊಂಡಿದೆ. ವಿವಾಹ ಬಂಧನದಿಂದ ದೂರವಿದ್ದ ಬಸವಣ್ಣನಿಗೆ ಬಲದೇವನ ಬಲವಂತದಿಂದ ಅವರ ಮಗಳನ್ನು ಮದುವೆಯಾಗುತ್ತಾನೆ. ಮುಂದೆ ಬಿಜ್ಜಳನ ಆಸ್ಥಾನದಲ್ಲಿ ನೆಲೆನಿಂತಾಗ ಬಿಜ್ಜಳನ ತಂಗಿಯಾದ ನೀಲಾಂಬಿಕೆಯನ್ನು ವರಿಸುವ ಸಂದರ್ಭ ಇಲ್ಲಿ ನಾವು ಕಾಣಬಹುದು. ಸಂಸಾರದಲ್ಲಿ ಇದ್ದುಕೊಂಡು ಸಮಾಜ ಸುಧಾರಣೆ ಮಾಡುವುದು ಅಷ್ಟು ಸುಲಭದ ಕೆಲಸವೇನು ಅಲ್ಲ. ಆದರೂ ಬಸವಣ್ಣನವರು ಎರಡನ್ನೂ ಅಷ್ಟೇ ಪರಿಣಾಮಕಾರಿಯಾಗಿ ನಿರ್ವಹಿಸುತ್ತಾರೆ. ಆದರೆ ಅಲ್ಲಮಪ್ರಭುದೇವರು ಅವರಲ್ಲಿ ಅನುರಕ್ತಳಾದ ಮಾಯಾದೇವಿಯನ್ನು ಮದುವೆಯಾಗಲು ನಿರಾಕರಿ ನಿರಹಂಕಾರಿಯಾಗಿ ಅನುಭವಮಂಟಪದ ಸಿಂಹಾಸನ ಅಧಿಪತಿಯಾಗುತ್ತಾರೆ. ಮತ್ತೊಂದು ಕಡೆ ಅಕ್ಕಮಹಾದೇವಿಯವರು ಮದುವೆಯಾಗಿ ಕೌಶಿಕನಿಂದ ದೂರ ಸರಿದು ದಿಗಂಬರಳಾಗಿ ಅನುಭವ ಮಂಟಪವನ್ನು ಪ್ರವೇಶಿಸಿದಾಗ ಅವಳ ಮನಸ್ಸಿನಲ್ಲಿರುವ ಪ್ರಶ್ನೆಗಳಿಗೆ ಉತ್ತರಗಳನ್ನು ಪಡೆಯಲು ಬಂದಿರುತ್ತಾಳೆ. ಇವಿಷ್ಟು ಒಂದು ಕಡೆಯಾದರೆ, ತೈಲಪ, ಬಿಜ್ಜಳ, ಜಗದೇಕಮಲ್ಲ, ಕರ್ಣದೇವ, ಶೀಲವಂತ ಮುಂತಾದವರು ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದರೂ ಕಾಮದಲ್ಲಿ ಬಿದ್ದು ಅವರ ನರಳಾಟವು ಕಣ್ಣಿಗೆ ರಾಚುವಂತೆ ಚಿತ್ರಿಸಿದ್ದಾರೆ. ಮತ್ತೊಂದು ಕಡೆಗೆ ಕುಸುಮಾವಳಿ, ಲಾವಣ್ಯವತಿ ಇವರು ತಮ್ಮ ಕನಸುಗಳನ್ನು ಈಡೇರಿಸಿಕೊಳ್ಳುವಲ್ಲಿ ವಿಫಲವಾಗುವುದು ಕಂಡುಬರುತ್ತದೆ. ಆದರೆ ಇಮ್ಮಡಿ ತೈಲಪನ ಪ್ರೇಯಸಿಯರಾದ ಪಾಟಲಿಕೆ ಮತ್ತು ಪ್ರೇಮಾವತಿಯರ ಕಾಮದಾಹ ಸ್ವಲ್ಪಮಟ್ಟಿಗೆ ಎದ್ದು ಕಂಡರೆ ಕಾಮೇಶ್ವರಿಯ ಸ್ವೇಚ್ಛಾಚಾರ ಮಿತಿ ಮೀರಿರುವುದು ಗೋಚರಿಸುತ್ತದೆ. ಇವೆಲ್ಲವನ್ನು ಗಮನಿಸಿದಾಗ ಹನ್ನೆರಡುಮಠರು ವಿವಾದಾತ್ಮಕವಾದ ಹೇಳಿಕೆಗಳನ್ನು ಕೈಬಿಟ್ಟು ಸಕರಾತ್ಮಕವಾಗಿರುವ ಶರಣ ಮೌಲ್ಯಗಳನ್ನು ಸಮಾಜಕ್ಕೆ ಸಾರುವ ಆದರ್ಶಗಳನ್ನು ಮಾತ್ರ ಕಟ್ಟಿಕೊಟ್ಟಿದ್ದಾರೆ.

ಇವರ ಐದನೇ ಸಂಪುಟವಾದ 'ಕಲ್ಯಾಣ ಕೂಗೈತೋ' ಕಾದಂಬರಿಯಲ್ಲಿ ಬಸವಣ್ಣನವರು ಮಧುವರಸ ಮತ್ತು ಹರಳಯ್ಯನವರ ಮಕ್ಕಳ ಮದುವೆಯನ್ನು ನೆರವೇರಿಸಿದ ನಂತರ ಕಲ್ಯಾಣದಲ್ಲಿ ಆದ ಬದಲಾವಣೆಗಳನ್ನು ಹಿಡಿದಿಟ್ಟಿದ್ದಾರೆ. ಬಸವಣ್ಣನವರನ್ನು ಪ್ರಜಾಪ್ರತಿನಿಧಿ ಸಭೆಯಿಂದ ಹೊರಬಂದ ನಂತರ ಅವರನ್ನು ರಾಜಾಜ್ಞೆಯ ಗಡಿಪಾರಿನಿಂದಾಗಿ ಶರಣರು ಮತ್ತು ರಾಜರ ನಡುವೆ ಸಾಮಾಜಿಕ ಆಂದೋಲನಗಳು ಮೈದಾಳುತ್ತವೆ. ಬಸವಣ್ಣನವರು ಕಲ್ಯಾಣದಲ್ಲಿ

ಇರುವವರೆಗೂ ಉತ್ತರ ಮತ್ತು ದಕ್ಷಿಣದ ಕಡೆಯಿಂದ ಅನೇಕ ರಾಜಮಹಾರಾಜರು ಕಲ್ಯಾಣಕ್ಕೆ ಬಂದು ವೀರಶೈವ ಧರ್ಮವನ್ನು ಸ್ವೀಕರಿಸುವುದರೊಂದಿಗೆ ಬಸವಧರ್ಮಕ್ಕೆ ಹೆಚ್ಚಿನ ಅನುಯಾಯಿಗಳು ದೊರಕಿದರು. ಬಸವಣ್ಣನವರು ಕೈಗೊಂಡ ಸಾಮಾಜಿಕ ಸುಧಾರಣೆಗಳಿಂದಾಗಿ ಇಡೀ ದೇಶದಲ್ಲಿಯೇ ವಚನ ಸಾಹಿತ್ಯ ಹೆಸರುವಾಸಿಯಾಯಿತು. ಈ ಎಲ್ಲಾ ಅಂಶಗಳನ್ನು ಈ ಕಾದಂಬರಿಯಲ್ಲಿ ಹಿಡಿದಿಟ್ಟಿದ್ದಾರೆ.

ಇವರ ಮತ್ತೊಂದು ಸಂಪುಟವಾದ 'ತೇರು ಸಾಗಿತಣ್ಣಾ ಬಸವಣ್ಣನ ಪಾಜ ಬಂದಿತಣ್ಣಾ' ಕಾದಂಬರಿಯಲ್ಲಿ ಬಸವಣ್ಣನವರು ಅನೇಕ ಶರಣರಿಗೆ ಸ್ತ್ರೀಯರು ಮತ್ತು ಪುರುಷ ಎಂಬ ಭೇದ-ಭಾವವಿಲ್ಲದೇ ಎಲ್ಲರನ್ನು ಒಂದೇ ಸೂರಿನಡಿಯಲ್ಲಿ ನೋಡುವ ಪರಿಪಾಠವನ್ನು ಅನುಭವ ಮಂಟಪದಲ್ಲಿ ಎದ್ದು ಕಾಣುತ್ತದೆ. ಬಸವಣ್ಣನವರು ಬಿಜ್ಜಳನ ಆಜ್ಞೆಯ ಮೇರೆಗೆ ಕಲ್ಯಾಣವನ್ನು ಬಿಟ್ಟು ಕೂಡಲಸಂಗಮಕ್ಕೆ ಬರುವಾಗ ಅವರ ಹಿಂದೆ ಅನೇಕ ಶರಣ-ಶರಣೆಯರು ಧಾವಿಸಿ ಹೋಗುವ ವಿಷಯ ವಸ್ತುವನ್ನು ಇಲ್ಲಿ ವಿವರಣಾತ್ಮಕವಾಗಿ ವಿವರಿಸಿದ್ದಾರೆ.

ಅವರ ಕೊನೆಯ ಸಂಪುಟವಾದ 'ಉಳವಿಯಲ್ಲಿ ಓಂಕಾರ' ಈ ಕಾದಂಬರಿಯಲ್ಲಿ ಬಸವಣ್ಣನವರ ಅಳಿಯನಾದ ಚೆನ್ನಬಸವಣ್ಣನು ಬಸವಣ್ಣನವರಿಂದ ತೇರ್ಗಡೆಯಾಗಿದ್ದ ಸ್ಥಾನವನ್ನು ವಹಿಸಿಕೊಂಡಿದ್ದು, ಬಿಜ್ಜಳ ಮತ್ತು ಚೆನ್ನಬಸವಣ್ಣರ ನಡುವೆ ನಡೆಯುವ ಸಂವಾದ, ಕೊನೆಯಲ್ಲಿ ಬಿಜ್ಜಳನ ಕೊಲೆ ಶೀಲವಂತ ಮತ್ತು ಮಧುವರಸರ ಶಿರಚ್ಛೇದ ಇವೆಲ್ಲವೂ ಕಥನ ರೂಪದಲ್ಲಿ ತಲೆಎತ್ತಿ ನಿಂತಿವೆ.

ಒಟ್ಟಾರೆಯಾಗಿ ಜಿ.ಎಚ್. ಹನ್ನೆರಡುಮಠರ ಕಾದಂಬರಿಗಳನ್ನು ನೋಡಿದಾಗ ಈ ಹಿಂದೆ ಹೇಳಿದಂತೆ ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ' ಎಂಬ ಕಾದಂಬರಿಯಲ್ಲಿ ಸಾಮಾಜಿಕ ವಸ್ತು ವೈವಿಧ್ಯತೆಯಿಂದ ಕೂಡಿದೆ.

ಬಸವಣ್ಣನವರಲ್ಲಿ ದೇವರು ಮತ್ತು ದೇವಾಲಯಗಳ ಬಗ್ಗೆ ಇದ್ದ ಅಭಿಪ್ರಾಯವು ಸಾರ್ವತ್ರಿಕವಾದುದ್ದು ಮತ್ತು ಸತ್ಯವೂ ಕೂಡ. ಮನುಷ್ಯನಿಗೆ ಕಲ್ಪನೆ ಬದುಕಿಗೆ ಅನಿವಾರ್ಯವೇ? ಎಂಬ ಪ್ರಶ್ನೆಯಂತೆ ದೇವಾಲಯವು ಅಷ್ಟೇ ಮುಖ್ಯವೋ? ಎಂದು ಪ್ರಶ್ನಿಸುವುದನ್ನು ಕಾಣಬಹುದು.

> "ನನಗೆ ಅನ್ನಿಸುವುದು ಈ ದೇವಾಲಯಗಳೇ ಬೇಡ ಅಥವಾ ಇದ್ದರೂ
> ನಮ್ಮ ಪೂಜೆಯ ಪ್ರಮುಖ ಸಾಧನಗಳಾಗಿ ಅವು ಮಹತ್ವ ಪಡೆಯುವುದು ಸಲ್ಲದು.
> ನಾನು ಧರಿಸಿರುವ ಈ ಇಷ್ಟಲಿಂಗ, ಇದು ಧಾರ್ಮಿಕ ಸಮತೆಯನ್ನು ಸೂಚಿಸುತ್ತದೆ.
> ಪೂಜೆಯ ಸ್ವಾತಂತ್ರ್ಯವನ್ನು ಎಲ್ಲರಿಗೂ ತಂದುಕೊಡುತ್ತದೆ".[೨೦]

ನಮಗೆ ದೇವಾಲಯಗಳು ಹಾಗೂ ಪೂಜಾರಿಗಳು ಬೇಡ. ನನ್ನ ಮತ್ತು ದೇವರ ನಡುವೆ ಇನ್ನೊಬ್ಬರು ಯಾಕೆ? ಎಂದು ಪ್ರಶ್ನಿಸುವುದರ ಮೂಲಕ ತನ್ನ ಅಂತರಂಗದಲ್ಲಿ ದೇವರನ್ನು ನಿರ್ಮಿಸಿಕೊಳ್ಳಬೇಕೆಂಬುದು ಬಸವಣ್ಣನವರ ನಿಲುವಾಗಿತ್ತು.

ಬಿ. ಪುಟ್ಟಸ್ವಾಮಯ್ಯನವರ ವಿಸ್ತೃತವಾದ ಆರು ಕಾದಂಬರಿಗಳಲ್ಲಿ ಬಿತ್ತರಿತವಾದ ವಸ್ತು ವೈವಿಧ್ಯವಾಗಲಿ ಕಂಡು ಬರುವುದಿಲ್ಲ. ನಡೆದ ಘಟನೆಯನ್ನು ನೇರವಾಗಿ ನಿರೂಪಣೆ ಮಾಡಿರುವುದು ಮನಗಾಣಬಹುದಾಗಿದೆ.

## ೫.೩. ಆರ್ಥಿಕತೆಗೆ ಸಂಬಂಧಿಸಿ ಗ್ರಹಿಕೆಗಳು

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಮಾಡಿದ ಕ್ರಾಂತಿ ಇತಿಹಾಸದಲ್ಲಿ ಅಜರಾಮರ ವಾಗಿದೆ. ಅವರು ಆರ್ಥಿಕ ಕ್ರಾಂತಿಗೈದು ಸಮಾಜದ ಸುಖ-ಶಾಂತಿಗೆ ಭದ್ರಬುನಾದಿ ಒದಗಿಸಿಕೊಟ್ಟ ಸಂಗತಿ ಅನುಪಮವೂ ಅಪೂರ್ವವೂ ಆಗಿದೆ. ಆರ್ಥಿಕವಾಗಿ ಸಬಲವಾಗಿ ಜೀವನವನ್ನು ನಿರಾತಂಕವಾಗಿ ನಿರ್ವಹಿಸಲು ವ್ಯಕ್ತಿಯು ನಿತ್ಯವೂ ನಿಷ್ಠೆಯಿಂದ ಹಾಗೂ ಸತ್ಯ ಶ್ರದ್ಧೆಯಿಂದ ಕಾಯಕ ಮಾಡಬೇಕಾಗುತ್ತದೆ ಎಂದು ತಿಳಿಸಿದರು. ತಾವೂ ಅದರಂತೆ ನಡೆದು ತೋರಿಸಿದರು. ಎಲ್ಲ ಜನರು ಪ್ರಾಮಾಣಿಕತನದಿಂದ ಕಾಯಕ ಮಾಡಿದರೆ ಮನೆಯಲ್ಲಿ ಸುಖ-ಶಾಂತಿ, ಸಮಾಜದಲ್ಲಿ ಸಮಾನತೆ ನೆಲೆಸುವುದೆಂದು ಸಾರಿದರು. ಅವರು ತಿಳಿಸಿದ ಆರ್ಥಿಕ ಸುಧಾರಣೆಯ ಸೂತ್ರಗಳು ಇಂದಿಗೂ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿವೆ ಹಾಗೂ ಸಂಸಾರವನ್ನು ಸುಸೂತ್ರವಾಗಿ ಸಾಗಿಸಲು ಮಾರ್ಗದರ್ಶಕವಾಗಿದೆ. ಅವು ಇಂತಿವೆ: "ಪ್ರತಿಯೊಬ್ಬರೂ ಯೋಗ್ಯವಾದ ಉದ್ಯೋಗವನ್ನು ನಿಷ್ಠೆ ಮತ್ತು ಪ್ರಾಮಾಣಿಕತನದಿಂದ ಮಾಡಬೇಕು. ಉದ್ಯೋಗಗಳಲ್ಲಿ ಮೇಲು-ಕೀಳುಗಳಿಲ್ಲ. ಉದ್ಯೋಗದಲ್ಲಿ ಸತ್ಯ ಶುದ್ಧತೆಯಿದ್ದರೆ ಅದು ಕಾಯಕವೆಂದೆನಿಸಿಕೊಳ್ಳುತ್ತದೆ. ಇಂತಹ ಕಾಯಕದಿಂದ ಬಂದ ಧನವನ್ನು ದಾಸೋಹಕ್ಕಾಗಿ ವಿನಿಯೋಗಿಸಬೇಕು. ದಾಸೋಹವೆಂದರೆ ತಾನು ಮಾಡಿದೆ ನೀಡಿದೆ ಎಂಬ ಅಹಂಕಾರವನ್ನು ಅಳಿದು ವಿನಮ್ರನಾಗಿ ದೀನರನ್ನು, ಜಂಗಮರನ್ನು ಉಣಿಸುವುದು. ಉದ್ಯೋಗದ ಉದಾತ್ತವಾದ ಆಚರಣೆ ಕಾಯಕವಾದಂತೆ, ತಾನು ಸೇವಕನೆಂಬ ಭಾವನೆಯಿಂದ ಉಣಿಸಿ ಮನ ತಣಿಸುವ ದಾನದ ಉತ್ಕೃಷ್ಟವಾದ ಆಚರಣೆ ದಾಸೋಹವಾಗಿದೆ. ಕಾಯಕ ಮತ್ತು ದಾಸೋಹ ಇವು ಭಕ್ತನ ಎರಡು ಕಣ್ಣುಗಳಂತಿರಬೇಕು. ವ್ಯಷ್ಟಿಯೊಂದಿಗೆ ಸಮಷ್ಟಿಯ ಹಿತ ಬಯಸುವ ಇಂತಹ ಕಾಯಕ ಮತ್ತು ದಾಸೋಹಗಳು ಬಾಳನ್ನು ಸುಂದರ, ಸುಮಧುರ ವನ್ನಾಗಿಸಲು ಸಹಾಯಕವಾಗುತ್ತವೆ.

ಬಸವಣ್ಣನವರ ಈ ಪರಿಕಲ್ಪನೆಗಳು ಅನರ್ಘ್ಯ ರತ್ನಗಳಂತಿದ್ದು ಮಾನವ ಜನಾಂಗದ ಭಾವೀ ಬಾಳಿಗೆ ಭರವಸೆಯನ್ನು ನೀಡುತ್ತವೆ. ಇಂದು ನಮ್ಮ ದೇಶದಲ್ಲಿ ಶ್ರೀಮಂತರು ಅತಿಹೆಚ್ಚು ಶ್ರೀಮಂತರಾದಂತೆ ಬಡವರು ಕಡುಬಡವರಾಗುತ್ತಿದ್ದಾರೆ. ಇದಕ್ಕೆ ಬಸವಣ್ಣನವರ ತತ್ವಾದರ್ಶನವನ್ನು ಮರೆಯುವುದೇ ಕಾರಣವಾಗಿದೆ. ಏಕೆಂದರೆ ಆರ್ಥಿಕ ಅವ್ಯವಸ್ಥೆಗೆ ಸಂಗ್ರಹ ಪ್ರವೃತ್ತಿಯೇ ಮೂಲಕಾರಣವಾಗಿದೆ. ದೇಹದ ಒಂದೇ ಭಾಗದಲ್ಲಿ ರಕ್ತ ಒಟ್ಟುಗೂಡಿದರೆ ಅದು ಮಲೀನವಾಗಿ ವ್ಯಕ್ತಿಗೆ ಬಾಧಕವಾಗುತ್ತದೆ. ಅದರಂತೆ ಸಮಾಜದಲ್ಲಿ ಒಬ್ಬರ ಹತ್ತಿರ (ಬಂಡವಾಳಶಾಹಿ) ಹಣ ಸಂಗ್ರಹವಾದರೆ ಎಲ್ಲ ಕಡೆ ಕ್ಷೋಭೆ, ಅಶಾಂತಿ ತಲೆದೋರುತ್ತದೆ. ಇದನ್ನರಿತು ಕಾಯಕ ಮತ್ತು ದಾಸೋಹ ತತ್ವ ಪಾಲಿಸಿದರೆ ಹಣ ಎಲ್ಲಾ ಕಡೆ ವಿಕೇಂದ್ರೀಕರಗೊಂಡು ಸಮಾಜದಲ್ಲಿ ಸುಖ-ಶಾಂತಿ ಸಮೃದ್ಧಿ ನೆಲೆಗೊಳ್ಳುತ್ತದೆ.

ಬಸವಣ್ಣನವರು ಮಾನವತಾವಾದಿಗಳಾಗಿದ್ದಂತೆ ಸಮಾಜವಾದಿಗಳೂ, ಸಮಾನತಾವಾದಿಗಳೂ ಆಗಿದ್ದರು. ಅವರು ತಮ್ಮ ಮನೆಗೆ ಎಂದೂ ಬಾಗಿಲು ಹಾಕುತ್ತಿರಲಿಲ್ಲ. ದೀನ-ದಲಿತರಿಗಾಗಿ

ಜಂಗಮ ದಾಸೋಹಕ್ಕಾಗಿ ಮನೆಯ ಬಾಗಿಲು ಸದಾ ತೆರೆದಿರುತ್ತಿತ್ತು. ಅವರ ಮನೆಗೆ ಕಳವು ಮಾಡಲೆಂದು ಬಂದ ಒಬ್ಬ ಚೋರ ಇವರ ಸದ್ಬೋಧೆಯಿಂದ ಚರ(ಜಂಗಮ)ನಾಗಿ ಪರಿವರ್ತನೆ ಹೊಂದಿದ. ಬಸವಣ್ಣನವರ ಬೋಧೆಯಿಂದ ಪ್ರಭಾವಿತರಾಗಿ ಅಂದಿನ ಜನರೆಲ್ಲರೂ ನಿತ್ಯ ಕಾಯಕ ಮಾಡಿ ದಾಸೋಹ ನಡೆಸುತ್ತಿದ್ದರು. ಕಲ್ಯಾಣನಗರದಲ್ಲಿ ಸುಖ-ಶಾಂತಿ ತೃಪ್ತಿ ನೆಲೆಗೊಂಡಿತ್ತು. ಕಾಶ್ಮೀರದಿಂದ ಮಹದೇವ ಭೂಪಾಲನು ಇಲ್ಲಿಗೆ ಬಂದು ನಿತ್ಯ ಕಟ್ಟಿಗೆ ಮಾರಿ ದಾಸೋಹ ನಡೆಸಿ ಶರಣ ಜೀವನ ಸಾಗಿಸಿ ಮೋಳಿಗೆ ಮಾರಯ್ಯನೆಂದು ಪ್ರಸಿದ್ಧನಾದನು. ಇದರಂತೆ ಆಯ್ದಕ್ಕಿ ಮಾರಯ್ಯನೂ ತನ್ನ ಕಾಯಕ ನಿಷ್ಠೆಯಿಂದ ಹೆಸರು ಪಡೆದುದು ಮುಂತಾದ ಚಿತ್ರಣಗಳು ಬಿತ್ತರಿತವಾಗಿವೆ.

ಆಧುನಿಕ ಸಾಹಿತ್ಯದಲ್ಲಿ ಬಸವಣ್ಣನವರ ಪರಿಕಲ್ಪನೆ ಗುರುತಿಸುವಾಗ ಕವಿಯ ಮನೋಭಾವ ಕಾಲದ ಸ್ಥಿತಿಗಳು ಮತ್ತು ಪರಿಸರದ ಒತ್ತಡ ಇವೆಲ್ಲವನ್ನು ನಾವು ಗ್ರಹಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಬಸವಣ್ಣನವರನ್ನು ಕುರಿತು ಹರಿಹರನ ರಗಳೆಗಳು ಆಗಿರಬಹುದು. ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಬಸವರಾಜ ವಿಜಯ, ಬಸವಪುರಾಣ, ಸಿಂಗರಾಜಪುರಾಣ, ಚೆನ್ನಬಸವಪುರಾಣ ಹಾಗೂ ಕೆಲವು ಲೇಖನಗಳನ್ನು ಬರೆದಿರುವ ಎಂ.ಎಂ. ಕಲಬುರ್ಗಿ, ಚಿದಾನಂದಮೂರ್ತಿ, ಬಿ.ವ್ಹಿ. ಶಿರೂರು, ಹಂಪನಾಗರಾಜಯ್ಯ, ಡಿ.ಆರ್. ನಾಗರಾಜ್, ಡಿ.ಎಲ್.ನರಸಿಂಹಚಾರ್, ಕಮಲಾಹಂಪನಾ, ಎಸ್.ಎಂ. ಹಿರೇಮಠ ಮುಂತಾದ ವಿಮರ್ಶಕರು ಬಸವಣ್ಣನವರನ್ನು ಕುರಿತು ಚಿಂತನೆಯನ್ನು ಮಾಡಿದಾಗ ಹಲವಾರು ಅಂಶಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಅದೇ ರೀತಿಯಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನೇಕ ಸೃಜನಶೀಲ ಲೇಖಕರು ಬಸವಣ್ಣನವರ ಜೀವನವನ್ನು ಕುರಿತು ವಿವಿಧ ಸಾಹಿತ್ಯ ರೂಪದಲ್ಲಿ ಚಿತ್ರಿಸಿದ್ದಾರೆ. ಎಚ್.ಎಸ್. ಶಿವಪ್ರಕಾಶ್, ಪಿ. ಲಂಕೇಶ, ಅ.ನ.ಕೃ., ಗಿರೀಶ್ ಕರ್ನಾಡ್, ಚಂದ್ರಶೇಖರ ಕಂಬಾರ್, ಎಚ್. ತಿಪ್ಪೇರುದ್ರಸ್ವಾಮಿ ಮುಂತಾದ ನಾಟಕಕಾರರು ಬಸವಣ್ಣನವರ ಜೀವನವನ್ನು ನಾಟಕವನ್ನಾಗಿ ಪರಿವರ್ತಿಸಿದ್ದಾರೆ.

ಬಿ. ಪುಟ್ಟಸ್ವಾಮಯ್ಯ, ಎಚ್. ತಿಪ್ಪೇರುದ್ರಸ್ವಾಮಿ, ಜಿ.ಎಚ್. ಹನ್ನೆರಡುಮಠ ಇವರು ಬಸವಣ್ಣನ ಜೀವನ ಚರಿತ್ರೆಯ ವಸ್ತುವನ್ನು ಕಾದಂಬರಿಯಲ್ಲಿ ಹಿಡಿದಿಟ್ಟಿದ್ದಾರೆ. ಬಿ. ಪುಟ್ಟಸ್ವಾಮಯ್ಯನವರ 'ಕ್ರಾಂತಿ ಕಲ್ಯಾಣ'ದಲ್ಲಿ ಬಸವಣ್ಣನವರು ಆರ್ಥಿಕವಾಗಿ ಜನರನ್ನು ಮೇಲೆತ್ತುವ ದೃಷ್ಟಿಯಿಂದ ಅನೇಕ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಆ ದೃಷ್ಟಿಯಿಂದಾಗಿ ಅವರ ಕಾದಂಬರಿಯಲ್ಲಿ ಆರ್ಥಿಕ ಅಂಶಗಳು ಯಾವ ರೀತಿಯಾಗಿ ಅನಾವರಣಗೊಂಡಿವೆ ಎಂಬುದನ್ನು ಕುರಿತು ಈ ಅಧ್ಯಯನ ಗಮನೀಯವಾಗಿದೆ.

ಬಸವಣ್ಣನವರು ಮಂಗಳವಾಡಕ್ಕೆ ಹೋದಾಗ ಬಲದೇವನ ಅನುಗ್ರಹದಿಂದ ಬಿಜ್ಜಳನ ಆಸ್ಥಾನದಲ್ಲಿ ನೂರೊಂದು ಹೊನ್ನಿಗಾಗಿ ಕರಣಿಕ ವೃತ್ತಿಯನ್ನು ಕೈಗೊಳ್ಳುತ್ತಾರೆ. ಇಲ್ಲಿಂದ ಅವರ ಆರ್ಥಿಕ ಹೊಣೆಗಾರಿಕೆಯ ಜೀವನ ಆರಂಭವಾಗುತ್ತದೆ. ಬಿಜ್ಜಳನು ಬಸವಣ್ಣನವರ ಪ್ರತಿಭೆಯನ್ನು ಗುರುತಿಸಿ ಅವರ ರಾಜ್ಯಭಂಡಾರದ ಸಮಗ್ರ ನಿರ್ವಹಣೆ ಒಪ್ಪಿಸುತ್ತಾನೆ. ಇದರಿಂದ

ತಿಳಿದುಬರುವುದೇನೆಂದರೆ ಸಾಮ್ರಾಜ್ಯವು ಆರ್ಥಿಕದಿಂದ ಅಭಿವೃದ್ಧಿಯಾದಾಗ ರಾಜ್ಯವು ಸುಭಿಕ್ಷೆಯಿಂದ ಇರುತ್ತದೆ. ಇದಕ್ಕೆ ಮೂಲಕಾರಣ ಬಸವಣ್ಣನವರು ಕಲ್ಯಾಣದಲ್ಲಿ ಅನುಭವಮಂಟಪವನ್ನು ಸ್ಥಾಪಿಸುವುದರಿಂದ ಅನೇಕ ಜನರು ಕಲ್ಯಾಣಕ್ಕೆ ಧಾವಿಸಿ ಬರುತ್ತಾರೆ. ಇದರಿಂದ ರಾಜ್ಯಕ್ಕೆ ಆರ್ಥಿಕವಾಗಿ ಸಹಾಯವಾಗುತ್ತವೆ.

ಬಸವಣ್ಣನವರನ್ನು ಬನವಾಸಿಯ ರಾಜ್ಯಪಾಲರನ್ನಾಗಿ ಮಾಡಿದಾಗ ಅಲ್ಲಿ ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆ. ಕೃಷಿ ಸುಧಾರಣೆ ಒಳ್ಳೆ ಬೀಜಗಳನ್ನು ಕೊಡುವಂತಹದ್ದು. ರಸ್ತೆಗಳ ನಿರ್ಮಾಣ ನೀರಾವರಿ ಕಾಲುವೆಗಳ ನಿರ್ಮಾಣ ಹೀಗೆ ಜನರಿಗೆ ಉಪಯುಕ್ತವಾಗುವಂತಹ ಆರ್ಥಿಕ ಸುಧಾರಣೆಗಳನ್ನು ತರುತ್ತಾರೆ.

ಎರಡನೇ ಸಂದರ್ಭ ಯಾವುದೆಂದರೆ ಬಿಜ್ಜಳನು ಸಿಂಹಾಸನದ ಕೆಳಗಡೆ ನಿಧಿ ಇರುವ ಸಂಗತಿಯನ್ನು ತಿಳಿದಾಗ ಅದನ್ನು ಒಡೆದು ಹಾಕಿ ಅದು ಚಾಲುಕ್ಯರ ಮಾರ್ಗಕ್ಕೆ ಹೋಗುವ ಸುರಂಗವಿತ್ತು. ಇದನ್ನು ಗಮನಿಸಿದಾಗ ಅದರ ನೆಲಮಾಡಿಯಲ್ಲಿ ವಿಕ್ರಮಾದಿತ್ಯನ ನಿಧಿ ಇರುವುದು ಗೋಚರವಾಗುತ್ತದೆ. ಬಸವಣ್ಣನವರು ಆ ನಿಧಿಯನ್ನು ಜನಸಾಮಾನ್ಯರ ಕಲ್ಯಾಣ ಕಾರ್ಯಕ್ಕಾಗಿ ಬಳಸುವ ಮಾತು ಆರ್ಥಿಕ ಸುಧಾರಣೆ ಕಡೆಯದ್ದಾಗಿರುತ್ತದೆ.

ಬಲದೇವನು ತೀರಿಕೊಂಡ ನಂತರ ಅವನ ಸಂಪತ್ತೆಲ್ಲವನ್ನು ಅನುಭವಮಂಟಪ ಮತ್ತು ಶರಣರ ಕಲ್ಯಾಣಕ್ಕಾಗಿ ಹಣವನ್ನು ಉಪಯೋಗಿಸಬೇಕೆಂದು ಬಸವಣ್ಣನವರ ಅಭಿಮತವಾಗಿರುತ್ತದೆ. ಇದರಿಂದಾಗಿ ಬಸವಣ್ಣನವರು 'ಮೇಲು-ಕೀಳು' ಎಂಬ ಭಾವನೆಯನ್ನು ತಾಳಿ ಎಲ್ಲರೂ ಸಮಾನರು ಎಂಬ ತತ್ವಕ್ಕೆ ಬದ್ಧರಾಗಿರುತ್ತಾರೆ. ನಾಳೆಗೆ ಎಂದೂ ಚಿಂತೆ ಮಾಡದೆ ಇವತ್ತಿನದ್ದುಕ್ಕಾಗಿ ಚಿಂತೆ ಮಾಡಬೇಕು ಎಂದು ಆಲೋಚಿಸುವ ಮನೋಭಾವದವರಾಗಿದ್ದರು. ಅವರನ್ನು ಈ ವಿಧಾನದಲ್ಲಿ ಪರೀಕ್ಷಿಸಲು ಗೋವುಗಳನ್ನು ಅಪಹರಣವನ್ನು ಮಾಡತಕ್ಕಂತಹ ಪ್ರಸಂಗ ಹೀಗಿದೆ. ಒಂದು ದಿನ ಮನೆಯಲ್ಲಿ ನೀಲಾಂಬಿಕೆ ಕಿವಿಗೆ ಕನ್ನ ಹಾಕುವುದಾಗಲಿ, ಆವಾಗ ಬಸವಣ್ಣನವರು ಹೇಳುವ ಮಾತು ಸಮಾನತೆಯನ್ನು ಸಾರುತ್ತದೆ. ಬಸವಣ್ಣನವರ ರಾಜ್ಯ ಭಂಡಾರದಲ್ಲಿ ಹಣದ ಏರುಪೇರಾದಾಗ ಅದನ್ನು ಸರಿಪಡಿಸುವ ವಿಧಾನ ಆರ್ಥಿಕವಾಗಿ ಜ್ಞಾನವುಳ್ಳವನಿಗೆ ಮಾತ್ರ ಅರ್ಥವಾಗುತ್ತದೆ.

ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಧರ್ಮಾಧಿಕರಣದ ನಿಧಿಯ ಅಪಹರಣದ ವಿಷಯ ಅದರ ಮುಂಜಾಗ್ರತಾ ಕ್ರಮವಾಗಿ ಬಸವಣ್ಣನವರು ಹೊಸ ಪದ್ಧತಿಯನ್ನು ರೂಪಿಸಿದರು. ದಕ್ಷಿಣ ಮಂಡಳಗಳಿಗೆ ಸಲ್ಲಬೇಕಾಗಿದ್ದ ಆರು ಕೋಟಿ ಅವರಿಗೆ ಮುಟ್ಟುವಂತೆ ನಿರ್ವಹಿಸಿದ ಕಾರ್ಯ ಅಮೋಘವಾಗಿದೆ.

"ವಾಣಿಜ್ಯ ಕ್ಷೇತ್ರದಲ್ಲಿ ಹಿಂದಿನಿಂದ ಪ್ರಚಾರದಲ್ಲಿದ್ದ ಈ ವಿನಿಮಯ ಪದ್ಧತಿಯನ್ನು ಬಸವೇಶ ಮೊದಲ ಬಾರಿ ರಾಜ್ಯದ ಆರ್ಥಿಕ ಆಡಳಿತದಲ್ಲಿ ಆಚರಣೆಗೆ ತಂದಿದ್ದನು."[೨೧]

ಬಸವಣ್ಣನವರು ಆಡಳಿತ ವ್ಯವಸ್ಥೆಯಿಂದ ಉಳಿದ ಹಣವನ್ನು ಸಾಮಂತ ದೊರೆಗಳಿಗೆ ಹಂಚುವ ವಿಧಾನದಲ್ಲಿ ಅವರ ಚಾಣಾಕ್ಷತನ ಸಮಾನತಾ ತತ್ವ ಸಾಮ್ರಾಜ್ಯದ ಅಭಿವೃದ್ಧಿಯ ಕಲ್ಪನೆ ಇವೆಲ್ಲ ಅಂಶಗಳನ್ನು ಅವರು ಪರಿಗಣಿಸುತ್ತಿದ್ದರು ಎಂಬುದು ಈ ಕಾದಂಬರಿ ಪಠ್ಯದಿಂದ ವ್ಯಕ್ತವಾಗಿದೆ.

ಪುಟ್ಟಸ್ವಾಮಯ್ಯನವರು ಬರೆದ ಕಾದಂಬರಿಯಲ್ಲಿ ಹೀಗೆ ಅನೇಕ ಅಂಶಗಳು ಮೈದಾಳಿ ನಿಂತಿವೆ. ಎಚ್. ತಿಪ್ಪೇರುದ್ರಸ್ವಾಮಿಯವರು ಬರೆದ 'ಕರ್ತಾರನ ಕಮ್ಮಟ'ದಲ್ಲಿ ಆರ್ಥಿಕ ವಿಚಾರಗಳು ಬಹುಮುಖವಾದ ಪಾತ್ರವನ್ನು ಪಡೆದುಕೊಂಡಿವೆ. ಉಪನಯನ ಮತ್ತು ಲಿಂಗಾರ್ಚನೆ ಇವುಗಳು ಮಾಡುವುದರಿಂದ ಹಣದ ವ್ಯಥೆಯಾಗುತ್ತದೆ. ಅದರಿಂದ ಸಮಾಜ ಸುಧಾರಣೆಯಾಗುವುದಿಲ್ಲ ಎಂಬ ವೈಚಾರಿಕೆ ಮನೋಭಾವನೆಯನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಬಸವಣ್ಣನು ಶರಣರ ಬರವೆ ತನ್ನಗೆ ಜೀವಾಳ ಎಂದು ಹೇಳುವ ಸಂದರ್ಭದಲ್ಲಿ ಆ ಶರಣರು ಅನುಭವ ಮಂಟಪಕ್ಕೆ ಬಂದು ತಮ್ಮ ವಿಚಾರವನ್ನು ಹಂಚಿಕೊಂಡು ಅಲ್ಲೇ ನೆಲೆ ಉರಿದಾಗ "ಕಾಯಕವೇ ಕೈಲಾಸ" ಎಂಬ ತತ್ವವನ್ನು ಜಾರಿಗೆ ತಂದು ಅದರ ಮೂಲಕ ಪ್ರತಿಯೊಬ್ಬ ಶರಣರು ದುಡಿಮೆಯಲ್ಲಿ ದೇವರ ಹಂಗನ್ನು ತೊರೆದು ನಿರತರಾಗಬೇಕು. ಅದರ ಮೂಲಕ ಪ್ರತಿಯೊಬ್ಬ ಶರಣರು ದುಡಿಮೆಯಲ್ಲಿ ದೇವರ ಮೂಲಕ ಸ್ವಾವಲಂಬನೆ ಬದುಕನ್ನು ಸಾಧಿಸಬೇಕೆಂಬ ಸಂದೇಶವನ್ನು ತಿಪ್ಪೇರುದ್ರಸ್ವಾಮಿಯವರು ತಮ್ಮ ಕಾದಂಬರಿಯಲ್ಲಿ ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ಶರಣರ ಚಳುವಳಿ ಒಂದೇ ರೀತಿಯಲ್ಲಿ ಆರ್ಥಿಕ ಸ್ವಾವಲಂಬನೆಯಾಗಿದೆ. ಬಸವಣ್ಣನವರು ಆ ಕ್ಷೇತ್ರದ ಮೂಲ ಪುರುಷರಾಗಿ ಕಂಡುಬರುತ್ತಾರೆ. ಕಾಯಕದಲ್ಲಿ ಕೈಲಾಸ ಕಾಣುವ ಮನೋಭಾವನೆಯನ್ನು ಹೊಂದಿರುವಂತಹ ಪಾತ್ರ ನಿರ್ಮಿಸುವುದರೊಂದಿಗೆ ಅದಕ್ಕೆ ಪೂರಕವಾದ ಅಂಶಗಳ ಉಲ್ಲೇಖಗಳು 'ಕರ್ತಾರನ ಕಮ್ಮಟ' ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ರಾಜ್ಯ ರಕ್ಷಣೆ ಮಾಡುವಾಗ ಹಳ್ಳಿಗಳ ರಕ್ಷಣೆಯು ಅತ್ಯಂತ ಮುಖ್ಯವಾಗುತ್ತದೆ. ಅದನ್ನು ಮನಗಂಡ ಬಸವಣ್ಣನವರು ರಾಜಕೀಯ ಘಟನೆಗಳು ಬೆಳೆದಂತೆಲ್ಲಾ ಭಂಡಾರವು ಹೊಸ ಹೊಸ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅದಕ್ಕಾಗಿ ಅವರು ಕೊಡುವ ಉಲ್ಲೇಖಗಳನ್ನು ಗಮನಿಸಬಹುದು.

"ಆ ಜನಗಳಲ್ಲಿ ಆತ್ಮಾಭಿಮಾನ ಬೆಳೆಯಬೇಕು. ಅದಕ್ಕೆ ಆರ್ಥಿಕ ಸ್ಥಿತಿ ಉತ್ತಮಗೊಳ್ಳಬೇಕು. ಸಾಮಾಜಿಕ ಪರಿಸರ ಬದಲಾಗಬೇಕು. ಧಾರ್ಮಿಕ ಅವಕಾಶಗಳು ಲಭಿಸಬೇಕು. ಇವೆಲ್ಲವೂ ಒಂದಕ್ಕೊಂದು ಸಂಬಂಧವನ್ನುಳ್ಳವು. ಒಟ್ಟಿಗೆ ನಡೆಯಬೇಕಾದವುಗಳು. ಸಮಸ್ಯೆಯ ಈ ಮೂರು ಮುಖಗಳನ್ನು ಏಕಕಾಲದಲ್ಲಿ ಕಂಡುಕೊಳ್ಳಬೇಕು. ಅದಕ್ಕೆ ಪರಿಹಾರ ಮಾರ್ಗಗಳನ್ನು ಹುಡುಕ ಬೇಕು."[೨೨]

ಒಂದು ರಾಜ್ಯ ಸುಭಿಕ್ಷೆಯಿಂದ ಇರಬೇಕಾದರೆ ಆರ್ಥಿಕ ಪರಿಸ್ಥಿತಿಯು ಉತ್ತಮಗೊಳ್ಳಬೇಕು. ಅದಕ್ಕೆ ಮೂರು ಕಾರಣಗಳನ್ನು ಹೇಳುತ್ತಾರೆ. ಸಾಮಾಜಿಕ ಪರಿಸರ ಬದಲಾಗಬೇಕು. ಧಾರ್ಮಿಕ ಅವಕಾಶಗಳು ಲಭಿಸಬೇಕು ಹಾಗೂ ಹಳ್ಳಿಗಳ ಉದ್ಧಾರವಾಗಬೇಕು ಎಂಬ ಅವರ ಮನೋಭಾವ ಆರ್ಥಿಕ ಚಿಂತನೆಯನ್ನು ಹೇಳುತ್ತದೆ.

ಜಿ.ಎಚ್. ಹನ್ನೆರಡುಮಠರು ತಮ್ಮ ಕಾದಂಬರಿಗಳಲ್ಲಿ ಆರ್ಥಿಕ ದುಷ್ಪತೆ ಮೇಲೆ ಬೆಳಕು ಚೆಲ್ಲಿದ್ದಾರೆ. ಏಕೆಂದರೆ ಶರಣರು ಎಂದೂ ಆಡಂಬರದ ಜೀವನವನ್ನು ನಡೆಸಿದವರಲ್ಲ. ಇನ್ನೊಬ್ಬರಿಗೆ ಭಾರವಾಗದಂತೆ ಬದುಕುವ ಜೀವನ ಅವರದ್ದಾಗಿತ್ತು. ಹನ್ನೆರಡುಮಠರ ಸಂಪುಟ ಕಾದಂಬರಿಗಳಾದ 'ಕೂಗಿತ್ತು ಕೂಡಲಸಂಗಮ', 'ಯೋಗಿ ಕಂಡ ಯೌವ್ವನ', 'ಗುರುವೆಂದವರ್ಯಾರೋ ಹರವೆಂದವರ್ಯಾರೋ', 'ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ', 'ಭೃಂಗ ಬಂದಾವೋ ಲಿಂಗ ತುಂಬ್ಯಾವೋ', 'ಕಲ್ಯಾಣ ಕೂಗೈತೋ', 'ತೇರು ಸಾಗಿತು ಬಸವಣ್ಣನ ಪಾಜ ಬಂದಿತಣ್ಣ' ಮತ್ತು 'ಉಳಿವಿಯಲ್ಲಿ ಓಂಕಾರ' ಹೀಗೆ ಈ ಎಲ್ಲಾ ಸಂಪುಟಗಳಲ್ಲಿ ಆರ್ಥಿಕ ವಿಚಾರಗಳು ಬಸವಣ್ಣ, ಕಾಮೇಶ್ವರಿ, ಶೀಲವಂತ, ಕುಸುಮಾವಳಿ, ಲಾವಣ್ಯವತಿ, ಮಾರಸಿಂಹ, ತೈಲಪ, ಕರುಣಾದೈವ, ಕೀರ್ತಿವರ್ಮ - ಮುಂತಾದ ಪಾತ್ರಗಳ ನಡೆಯಲ್ಲಿ ಮತ್ತು ನುಡಿಯಲ್ಲಿ ಅದನ್ನು ವ್ಯಕ್ತಪಡಿಸಿರುವುದು ಇವರ ಭಾಷೆಯ ವಿಧಾನವೇ ಎದ್ದು ಕಾಣುತ್ತದೆ.

## ೫.೪. ರಾಜಕೀಯಕ್ಕೆ ಸಂಬಂಧಿಸಿ ಗ್ರಹಿಕೆಗಳು

ಕಲ್ಯಾಣ ರಾಜ್ಯದ ಮಹಾಮಂತ್ರಿಗಳಾದ ಬಸವಣ್ಣನವರು ಸದಾ ಸರ್ವದಾ ಜನರ ಶ್ರೇಯಸ್ಸನ್ನೇ ಬಯಸುತ್ತಿದ್ದರು. ತಾವು ಮಂತ್ರಿಯೆಂಬ ಆಡಂಬರ, ಅಹಂಕಾರ ತೋರಿಸದೇ ಬಾಗಿದ ತಲೆ, ಮುಗಿದ ಕೈಯಿಂದ ವಿನ್ರಮರಾಗಿ ಜನರ ಸುಖ-ದುಃಖಗಳನ್ನು ವಿಚಾರಿಸುತ್ತಿದ್ದರು. ಅವರು ಯಾವ ರಾಜ್ಯಕ್ಕೂ ದಂಡೆತ್ತಿ ಹೋಗದೇ ರಾಜ್ಯದ ಸ್ಥಿತಿಯನ್ನು ಸುಧಾರಿಸಿದರು. ಸತ್ಯ ಶುದ್ಧ ಕಾಯಕದ ಬಲದಿಂದ ಬಡತನ ತೊಲಗಿಸಿ ನಾಡಿನ ಪ್ರಜೆಗಳು ಸುಖದಿಂದ ಬಾಳುವಂತೆ ನೋಡಿಕೊಂಡರು. ಬಸವಣ್ಣನವರು ತಮ್ಮ ಜೀವಿತದ ಕಾಲಾವಧಿಯಲ್ಲಿ ಗೈದ ಸಮಾಜ ಸುಧಾರಣೆಗಳು ಶತಶತಮಾನ ಗತಿಸಿದರೂ ಅಚ್ಚಳಿಯದೆ ಉಳಿಯುವಂಥವು ಆಗಿದೆ. ಅವರು ಇಬ್ಬರು ಸತಿಯರೊಂದಿಗೆ (ನೀಲಾಂಬಿಕೆ ಮತ್ತು ಗಂಗಾಬಿಕೆ) ಸಂಸಾರ ಸಾಗಿಸಿ ಪ್ರಪಂಚದಲ್ಲಿದ್ದು ಪಾರಮಾರ್ಥವನ್ನು ಸಾಧಿಸಿದರು. ಅವರ ಪ್ರೇರಣೆಯಿಂದ ಅನೇಕ ಪಣ್ಯಾಂಗನೆಯರು (ವೇಶ್ಯೆಯರು) ಪರಿವರ್ತನೆಗೊಂಡು ಪುಣ್ಯಾಂಗನೆ(ಶರಣೆ)ಯರಾದರು. ಪತಿತರನ್ನು ಉದ್ಧರಿಸಿದ ಮಹಾನುಭವಿ ಬಸವಣ್ಣನವರು ಮಾನವೀಯತೆಯನ್ನು ಮೆರೆಸಿದ ಮಹಾತ್ಮರಾಗಿದ್ದರು. ಅವರ ದಿವ್ಯ ಭವ್ಯ ವ್ಯಕ್ತಿತ್ವವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ ಸರಿ. ಅವರು ೮೦೦ ವರ್ಷಗಳ ಹಿಂದೆ ಬಾಳಿ ಬೋಧಿಸಿದ ತತ್ವಗಳು ಇಂದಿನ ನಮ್ಮ ಸಂಕೀರ್ಣ ಬದುಕಿಗೆ ಪ್ರಸ್ತುತವೆನಿಸಿವೆ. ವಿಶ್ವಶಾಂತಿಗೆ ಸಹಾಯಕವಾಗಿವೆ. ವಿಶ್ವವಿಭೂತಿಗಳೆಂದು ವಿಖ್ಯಾತರಾದ ಬಸವಣ್ಣನವರು ಮನುಕುಲಕ್ಕೆ ಮಾರ್ಗದರ್ಶಕರಾಗಿದ್ದಾರೆ. ಇಂತಹ ಮನುಕುಲಕ್ಕೆ ಮಾರ್ಗದರ್ಶಕರಾದ ಬಸವಣ್ಣನವರನ್ನು ಕುರಿತು ಅನೇಕರು ಕನ್ನಡ ಸಾಹಿತ್ಯದಲ್ಲಿ ಅವರ ಚರಿತ್ರೆಯನ್ನು ಕೃತಿಗಳಾಗಿ ಹೊರತಂದಿದ್ದಾರೆ. ಹರಿಹರನ ಬಸವರಾಜದೇವರ ರಗಳೆ, ಭೀಮಕವಿಯ ಬಸವಪುರಾಣ, ಷಡಕ್ಷರದೇವನ ಬಸವರಾಜ ವಿಜಯ, ವಿರುಪಾಕ್ಷ ಪಂಡಿತನ ಚೆನ್ನಬಸವಪುರಾಣ, ಸಿಂಗರಾಜನ ಸಿಂಗಿರಾಜಪುರಾಣದಲ್ಲಿ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ ಈ ರೀತಿ ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದಂತೆ

ಆ ಕಾಲದ ವಿಷಯ ವಸ್ತುವನ್ನು ಪದ್ಯದ ರೂಪದಲ್ಲಿ ಹಿಡಿದಿಟ್ಟಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಸಹ ಬಸವಣ್ಣನವರನ್ನು ಕುರಿತು ಅನೇಕರು ಕತೆ, ಕಾವ್ಯ, ನಾಟಕ, ಕಾದಂಬರಿಗಳನ್ನು ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ನಿರೂಪಣೆಗೊಂಡಿವೆ. ಕಾದಂಬರಿ ಸಾಹಿತ್ಯ ರೂಪದಲ್ಲಿ ಬಸವಣ್ಣನವರನ್ನು ಕುರಿತು ಬರೆದಿರುವ ಅನೇಕ ಕಾದಂಬರಿಕಾರರನ್ನು ಹೆಸರಿಸಬಹುದಾಗಿದೆ. ಎಚ್. ತಿಪ್ಪೇರುದ್ರಸ್ವಾಮಿಯವರ ಕರ್ತಾರನ ಕಮ್ಮಟ, ಬಿ. ಪುಟ್ಟಸ್ವಾಮಯ್ಯನವರ ಕ್ರಾಂತಿಕಲ್ಯಾಣ, ಜಿ.ಎಚ್. ಹನ್ನೆರಡುಮಠರ ಮಹಾಸಂಪುಟ ಇವುಗಳನ್ನು ಹೆಸರಿಸಲೇಬೇಕಾಗುತ್ತದೆ. ಈ ಕಾದಂಬರಿಗಳಲ್ಲಿ ಬಸವಣ್ಣನವರ ರಾಜಕೀಯ ಜೀವನ ಹೇಗೆ ಒಡಮೂಡಿದೆ ಎಂಬುದನ್ನು ಈ ಅಧ್ಯಯನದಲ್ಲಿ ಒರೆಗೆ ಹಚ್ಚಿದ್ದೇನೆ. ಬಿ. ಪುಟ್ಟಸ್ವಾಮಯ್ಯನವರು ಬರೆದಿರುವ 'ಉದಯರವಿ' ಎಂಬ ಮೊದಲ ಸಂಪುಟದಲ್ಲಿ ಮಂತ್ರಿ ಬಲದೇವ ಅರಸರು ಕಲ್ಯಾಣದಿಂದ ಸಂಗಮೇಶ್ವರಕ್ಕೆ ಬಂದು ರಕ್ತಸಂಬಂಧವನ್ನು ಬೆಳೆಸಿ ಬಸವಣ್ಣನನ್ನು ರಾಜಕೀಯ ಕ್ಷೇತ್ರಕ್ಕೆ ಕರೆ ತರುತ್ತಾರೆ. ಅಲ್ಲಿಂದ ಅವರ ರಾಜಕೀಯ ಜೀವನ ಆರಂಭವಾಗುತ್ತದೆ. ಬಲದೇವರು ತಮ್ಮ ಮಗಳ ಮದುವೆ ಮುಗಿಸಿದ ನಂತರ ದೇಹದ ಆರೋಗ್ಯದ ಸ್ಥಿತಿ ಕೆಡುತ್ತಾ ಬಂದಂತೆ ಅವರ ಅಧಿಕಾರವನ್ನು ಬಸವಣ್ಣನವರು ಪಡೆದುಕೊಳ್ಳುತ್ತಾರೆ. ಬಿಜ್ಜಳನ ಮಹಾಮಂತ್ರಿಯಾದ ಮೇಲೆ ಕೈಗೊಂಡ ಅನೇಕ ರಾಜಕೀಯ ವಿಚಾರಗಳು ಇಲ್ಲಿ ಎದ್ದು ಕಾಣುತ್ತವೆ. ಚಾಲುಕ್ಯರ ಅರಸ ಮಾರಸಿಂಹನ ಪುತ್ರಿ ಚಂದಲದೇವಿ ಚಂದಲಪುರದಲ್ಲಿ ವಿಜಯೇಶ್ವರ ದೇವಾಲಯವನ್ನು ಕಟ್ಟಿಸಿದ ಸಂಗತಿ ಇಲ್ಲಿ ಉಲ್ಲೇಖಾರ್ಹವಾಗಿದೆ. ಬಿಜ್ಜಳನು ಸರ್ವಾಧಿಕಾರಿಯಾದ ಮೇಲೆ ಚಂದಲಪುರದ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಏರ್ಪಾಡನ್ನು ಮಾಡಿದನು. ಅಲ್ಲಿ ನೆಲಮಾಳಿಗೆಯಲ್ಲಿ ದೊರೆತ ಶಾಸನವನ್ನು ಯಾರಿಗೂ ಓದಲಾಗಲಿಲ್ಲ. ಕೆಲದಿನಗಳ ಶ್ರಮಪಟ್ಟು ಬಸವಣ್ಣನವರು ಅದನ್ನು ಓದಿ ವಿವರಿಸುತ್ತಾರೆ. ಇದು ಆರನೇ ವಿಕ್ರಮಾದಿತ್ಯನು ನೆಲಮಾಳಿಗೆಯಲ್ಲಿ ಹುದುಗಿಸಿಟ್ಟ ವಿಷಯದ ಬಗ್ಗೆ ತಿಳಿಸುತ್ತದೆ. ಇದಿಷ್ಟು ಈ ಕಾದಂಬರಿಯಲ್ಲಿ ರಾಜಕೀಯ ವಿಚಾರವಾಗಿ ಮೈದಾಳಿದೆ.

ಎರಡನೇ ಸಂಪುಟವಾದ 'ರಾಜ್ಯಪಾಲ' ಕಾದಂಬರಿಯಲ್ಲಿ ರಾಜಕೀಯ ವಿಚಾರಗಳು ಹೆಚ್ಚಾಗಿ ನಿರೂಪಿತವಾಗಿವೆ. ರಾಜ್ಯದ ಆಸಕ್ತಿಯನ್ನು ತೊರೆದು ತೈಲಪನು ಗೋಕರ್ಣಕ್ಕೆ ಬಂದ ನಂತರ ಸನ್ಯಾಸಿಯಂತೆ ಬಾಳಿ ತಾನು ಪ್ರೀತಿಸಿದ ಪಾಟಲಿಕೆ ಮತ್ತು ಪ್ರೇಮಾವತಿಯರನ್ನು ದೂರವಿರಿಸಿದ್ದನು. ತೈಲಪನು ಗೋಕರ್ಣದಲ್ಲಿರುವಾಗ ಬನವಾಸಿಯ ಮಾಂಡಲೇಶ್ವರನಿಗೆ ಸೆರೆಸಿಕ್ಕು ಆರನೇ ವಿಕ್ರಮಾದಿತ್ಯನ ನಿಧಿಯ ಸಂಗ್ರಹದ ಬಗ್ಗೆ ಮಾಹಿತಿ ಗೊತ್ತಾಗುತ್ತದೆ. ನಂತರ ತೈಲಪದೇವನು ಗೋಕರ್ಣದಿಂದ ಬನವಾಸಿಗೆ ಬರುತ್ತಾನೆ. ರಾಜಮಾರ್ಗದಲ್ಲೇ ದರೋಡೆಕೋರರಂತೆ ನಿಧಿಯನ್ನು ಅಪಹರಿಸಲಾಯಿತು. ಈ ವಿಚಾರ ರಾಜ್ಯಭಟರಿಂದ ಬಿಜ್ಜಳನಿಗೆ ಗೊತ್ತಾಗುತ್ತದೆ. ತೈಲಪ ದೇವನು ಬನವಾಸಿಗೆ ಬಂದು ಅಲ್ಲಿನ ಮಹಾದೇವ ಅರಸನ ಆಡಳಿತವನ್ನು ಕಿತ್ತುಕೊಂಡು ತಾನೇ ಆಡಳಿತವನ್ನು ನಡೆಸುತ್ತಾನೆ.

ಬಿಜ್ಜಳ ತೈಲಪನು ಅಪಹರಿಸಿದ ನಿಧಿಯನ್ನು ಕುರಿತು ತನ್ನ ಮಂತ್ರಿಮಂಡಲ ಸಭೆಯನ್ನು ಕುರಿತು ಯೋಗ್ಯವಲ್ಲದ ರೀತಿಯಲ್ಲಿ ತೈಲಪನು ಅದನ್ನು ಅಪಹರಿಸುವುದರಿಂದ ಕಲಚೂರಿಯವರಿಗೆ ಮತ್ತು ಚಾಲುಕ್ಯರಿಗೂ ಮುಂದೆ ತಲೆದೋರಬಹುದಾದ ಸಂಗತಿಗಳನ್ನು ವಿವರಿಸಲಾಗಿದೆ. ತನ್ನ ತಪ್ಪನ್ನು ಅವನಿಗೆ ಅರಿವು ಮೂಡಿಸುವುದು ಹೇಗೆ ಎಂದು ಕುರಿತು ಬಸವೇಶ್ವರನನ್ನು ತೈಲಪನಲ್ಲಿಗೆ ರಾಜಪೂತನಲ್ಲಿಗೆ ಕಳುಹಿಸಿ ಆತನೊಂದಿಗೆ ಸಂಧಾನವನ್ನು ಏರ್ಪಡಿಸಿ ಕಲ್ಯಾಣಕ್ಕೆ ಕರೆತರಬೇಕೆಂಬ ವಿಷಯ ಇಲ್ಲಿ ಪ್ರಸ್ತಾಪಿಸಲಾಗಿದೆ. ಮಂತ್ರಿಮಂಡಲದ ಒತ್ತಡದ ಮೇರೆಗೆ ಈ ದೂತ ಕಾರ್ಯಕ್ಕೆ ಒಪ್ಪಿಕೊಳ್ಳುತ್ತಾರೆ. ಬಿಜ್ಜಳನು ಬಸವೇಶ್ವರರ ಕೈಯಲ್ಲಿ ಒಂದು ಪತ್ರವನ್ನು ಕಳುಹಿಸಿಕೊಡುತ್ತಾರೆ. ಆ ಪತ್ರದ ಸಾರಾಂಶ ಈ ರೀತಿಯಾಗಿದೆ. "ಮಹಾರಾಜರು ಸಾಮ್ರಾಜ್ಯದ ದಕ್ಷಿಣ ಯಾತ್ರೆಯನ್ನು ಮುಗಿಸಿಕೊಂಡು ಜಾಗೃತಿ ಕಲ್ಯಾಣದ ನೆಲೆವೀಡಿಗೆ ಹಿಂದಿರುಗುವುದು. ಚಾಲುಕ್ಯ ರಾಜ್ಯದ ಹಿತಶಾಂತಿಗಳಿಗೆ ಅಗತ್ಯವೆಂದು ಮಂತ್ರಿಮಂಡಲ ಅಭಿಪ್ರಾಯ ಆಜ್ಞೆ ಮಾಡುತ್ತವೆ. ಮಹಾರಾಜರು ಕಲ್ಯಾಣಕ್ಕೆ ಹಿಂದಿರುಗಿದ ಕೂಡಲೇ ವಿಕ್ರಮಾದಿತ್ಯ ದೇವರ ಮಹಾನಿಧಿಯಲ್ಲಿ ಅವರಿಗೆ ಸಲ್ಲುವ ರಾಜ ಆದಾಯದ ಉಳಿಕೆ ಹಣವನ್ನು ಅರಮನೆಯ ಕೋಶಗಾರಕ್ಕೆ ಸಂದಾಯ ಮಾಡಲು ಮಂತ್ರಿಮಂಡಲ ಆಜ್ಞೆ ಮಾಡಿದೆ.

ಮಹಾರಾಜರ ಪಟ್ಟಾ ಮಹಾದೇವಿ ಕಾಮೇಶ್ವರಿ ಅಮ್ಮನವರ ಗರ್ಭದಲ್ಲಿ ಜನಿಸಿದ ಕುಮಾರ ಕೀರ್ತಿವರ್ಮ ದೇವರನ್ನು ರಾಜ್ಯದ ಉತ್ತರಾಧಿಕಾರಿಯಾಗಿ ಮಂತ್ರಿಮಂಡಲ ಅಂಗೀಕರಿಸುತ್ತದೆ. ವಿಧಿ ರೂಪವಾದ ಈ ನಿರ್ಣಯಗಳು ಅಭಿಪ್ರಾಯ ಉದ್ದೇಶಗಳಿಗೆ ಚ್ಯುತಿ ಬಾರದ ರೀತಿಯಲ್ಲಿ ತೈಲಪ ಮಹಾರಾಜರೊಡನೆ ಸಂಧಾನ ನಡೆಸಲು ಈ ಶಾಸನದ ಮೂಲಕ ಬಸವೇಶ ದಂಡನಾಯಕರಿಗೆ ಅಧಿಕಾರ ಕೊಟ್ಟಿದೆ.

ಬಸವಣ್ಣನವರು ಬನವಾಸಿಗೆ ಪ್ರಯಾಣ ಬೆಳೆಸಿ, ಅಲ್ಲಿ ನಡೆಯುವ ರಾಜಕಾರಣೆಗಳಿಗೆ ಅನೇಕ ವಿದ್ಯಮಾನಗಳನ್ನು ವೀಕ್ಷಿಸಿದರು. ಮಹಾರಾಜರು ಅಪಹರಿಸಿದ ಹಣ, ಸೈನ್ಯ ಅಕ್ರಮವಾಗಿ ಪೋಲಾಗಿರುವುದನ್ನು ಕಣ್ಣಾರೆ ಕಂಡು ಬನವಾಸಿ ಮಧುಕೇಶ್ವರ ದೇವಸ್ಥಾನದಲ್ಲಿ ನಡೆಯುತ್ತಿದ್ದ ನರ್ತನವನ್ನು ವೀಕ್ಷಿಸುತ್ತಿದ್ದ ತೈಲಪನನ್ನು ಭೇಟಿ ಮಾಡಿ ಅನೇಕ ಸಂಶಯಗಳನ್ನು ನಿವಾರಿಸಿ ಮಂತ್ರಿಮಂಡಲ ತೀರ್ಮಾನಿಸಿದ ಶಾಸನವನ್ನು ಅವರಿಗೆ ನೀಡಿ ಅವರ ಒಪ್ಪಿಗೆಯನ್ನು ಪಡೆದು ಬಸವೇಶ್ವರನ ಜಾಗತಿಕ ದೂರದೃಷ್ಟಿಯ ಮಾತುಕತೆಗೆ ಒಲಿದ ಮಹಾರಾಜ ಬಿಜ್ಜಳನು ಮಂತ್ರಿಮಂಡಲದ ತೀರ್ಮಾನವನ್ನು ಒಪ್ಪದಿದ್ದಾಗ ನಿರೂಪಿಸಲು ತೊಡಗಿದನು.

ಕದಂಬ ವಂಶದ ಅರಸನಾದ ಕೀರ್ತಿದೇವರ ಮಗಳು ಕುಸುಮಾವಳಿಯ ಪದ್ಧತಿಯಂತೆ ಮಧುಕೇಶ್ವರ ದೇವಾಲಯದಲ್ಲಿ ಹುಣ್ಣಿಮೆಯಂತೆ ದಿನದಂದು ವರ್ತಿಸುತ್ತಿದ್ದಳು. ಅವಳ ರೂಪಕ್ಕೆ ಮರುಳಾದ ತೈಲಪನು ಅವಳನ್ನು ರಾಜ್ಯಭವನದಲ್ಲಿ ನರ್ತಿಸುವಂತೆ ಅಗ್ರಹಿಸುತ್ತಾನೆ. ಇದನ್ನು ಕಂಡ ಕೀರ್ತಿದೇವನು ಅದನ್ನು ಖಡಾಖಂಡಿತವಾಗಿ ವಿರೋಧಿಸುತ್ತಾನೆ. ಇದಕ್ಕೆ ಪೂರಕ ಎಂಬಂತೆ ಬಸವಣ್ಣನವರು ಸಹ ಖಂಡಿಸುತ್ತಾರೆ. ಇದನ್ನು ಅರ್ಥಮಾಡಿಕೊಂಡ ತೈಲಪನು ಬಸವಣ್ಣನನ್ನು ಏನಾದರೂ ಮಾಡಿ ಇಲ್ಲಿಂದ ಓಡಿಸಬೇಕೆಂಬ ಆಲೋಚನೆ ಮಾಡುತ್ತಾನೆ.

ಅದಕ್ಕಾಗಿ ಸ್ವರ್ಣಕಾರರ ಬೀದಿಯಲ್ಲಿ ಕಲ್ಯಾಣದಿಂದ ಬಂದ ಒಬ್ಬ ಬೇವುಕಾರನನ್ನು ಭೇಟಿಯಾಗಲು ನಿರ್ಧರಿಸುತ್ತಾನೆ. ಇದನ್ನು ತಿಳಿದ ವಿಷ್ಣುಚಿತ್ತ ಭಟರನ್ನು ಕಳುಹಿಸಿ ಬಸವಣ್ಣನವರಿಗೆ ಹೆರಗುವಂತೆ ಮಾಡುತ್ತಾರೆ. ಇಲ್ಲಿಯೂ ಸಹ ಬಸವಣ್ಣನೂ ಭಟರಿಂದ ಹಿಂಸೆಗೊಳಗಾಗುತ್ತಾನೆ. ಇಲ್ಲಿ ಲೇಖಕರು ಯಾವುದೇ ಪವಾಡವನ್ನು ಮಾಡದೇ ನೇರವಾಗಿ ಕಥೆಯನ್ನು ಹೆಣೆದಿದ್ದಾರೆ.

ಅವರ ನಾಲ್ಕನೇ ಸಂಪುಟವಾದ ಕಲ್ಯಾಣೇಶ್ವರ ಕಾದಂಬರಿಯಲ್ಲಿ ರಾಜಕೀಯ ವಿಚಾರವಾಗಿ ನೋಡುವುದಾದರೆ ನವರಾತ್ರಿಯಲ್ಲಿ ಹೊಸದಾಗಿ ಸಿಂಹಾಸನ ರೂಪದಲ್ಲಿ ಜಗದೇಕಮಲ್ಲನು ರಾಜ್ಯಸಭೆಯನ್ನು ನಡೆಸುತ್ತಾನೆ. ರಾಜ್ಯಸಭೆಗೆ ಬರಲು ಮಾರಸಿಂಹನಿಗೂ ಆಹ್ವಾನವನ್ನು ಇಟ್ಟಿರುತ್ತಾನೆ. ವಿಚಾರಣಾ ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡ ಬಸವಣ್ಣನವರು ಮಾರಸಿಂಹನ ಪ್ರೇಯಸಿಯ ರಾದ ಪಾಟಲಿಕೆ ಪ್ರೇಮಾವತಿಯವರು ಇಂತಹ ರಾಜ್ಯಸಭೆಗೆ ಅವರು ಬರುವುದು ಉಚಿತವಲ್ಲವೆಂದು ಬಸವಣ್ಣನವರು ತೀರ್ಪು ಕೊಡುತ್ತಾರೆ. ತೈಲಪನು ಮರಣನಾದ ನಂತರ ಅವನ ಮಗನಾಗಿ ಕೀರ್ತಿವರ್ಮನು ಉತ್ತರಾಧಿಕಾರ ಮಾಡಲು ಬಿಜ್ಜಳನ ಸಹಾಯ ಕೇಳುತ್ತಾಳೆ. ಆದರೆ ಬಿಜ್ಜಳನು ಸರ್ವಾಧಿಕಾರಿಯಾಗಿರುವುದರಿಂದ ತಾನೇ ಮುಟ್ಟುಗೋಲು ಹಾಕಿಕೊಳ್ಳತಕ್ಕಂತಹ ಸಂಗತಿ ಇಲ್ಲಿ ಬಂದಿದೆ.

ಕಾಮೇಶ್ವರಿ ಗಡಿದಾಟುವಂತಹ ವಿಚಾರ ಮತ್ತು ಅವನ ಮಗ ಕೀರ್ತಿವರ್ಮನು ಸಾಯುವ ವಿಚಾರ ತದನಂತರ ಅವನು ಜಗದೇಕಮಲ್ಲನನ್ನು ಸಂಧಿಸುವ ವಿಚಾರ ಒಂದೊಂದಾಗಿ ಈ ಕಾದಂಬರಿಯ ಬೆಳವಣಿಗೆಯಾಗಿ ಪ್ರಮುಖ ಅಂಶವಾಗಿ ನಿಲ್ಲುತ್ತವೆ. ಇನ್ನೂ ನಾಲ್ಕನೇ ಸಂಪುಟದಲ್ಲಿ ಕಲ್ಯಾಣಕ್ಕೆ ಅಲ್ಲಮಪ್ರಭು ಆಗಮನ ಸಿಂಹಾಸನದ ಆಧಿಪತ್ಯ ಬ್ರಹ್ಮಶಿವ ಮತ್ತು ಬ್ರಹ್ಮಅರಸರು ಮಾರುವೇಶ ಹಾಕಿಕೊಂಡು ಬಿಜ್ಜಳನ ಅರಮನೆಗೆ ಕಳುಹಿಸಿಕೊಡುವಂತಹದ್ದು. ಇದರಿಂದ ಬಿಜ್ಜಳನಿಗೆ ಅವಳಿಂದ ಅನುಮಾನ ಬರತಕ್ಕಂತಹದ್ದು. ಬ್ರಹ್ಮ ಅರಸ, ಬ್ರಹ್ಮ ಶಿವ ಒಂದಾಗಿ ಬಿಜ್ಜಳನ ರಾಜಕೀಯ ವಂಶಕ್ಕೆ ಹುಳಿ ಹಿಂಡುತಕ್ಕದ್ದು ಅತ್ಯಂತ ಮೌಲ್ಯಿಕೆಯಾಗಿ ಮೂಡಿಬಂದಿದೆ.

ಐದನೇ ಸಂಪುಟ 'ಮುಗಿಯದ ಕನಸು' ಕಾದಂಬರಿಯಲ್ಲಿ ರಾಜಕೀಯ ವಿಚಾರವಾಗಿ ಕೆಲವೊಂದು ಅಂಶಗಳನ್ನು ಇಲ್ಲಿ ಕಾಣಬಹುದಾಗಿದೆ. ನವರಾಣಿ ಕಾಮೇಶ್ವರಿಯೂ ಬ್ರಹ್ಮಶಿವ ಮತ್ತು ಬ್ರಹ್ಮರಸುನನ್ನು ಬಿಜ್ಜಳನ ಅರಮನೆಗೆ ಕಳುಹಿಸಿದ್ದು, ಬಿಜ್ಜಳನು ತನ್ನ ಮಗನಿಗೆ ರಾಜ್ಯಪಟ್ಟ ಅಡ್ಡಿಗೊಳಿಸಿದ್ದನು. ಈ ಎಲ್ಲಾ ವಿಷಯಗಳಿಗೆ ಕಾಮೇಶ್ವರಿಗೆ ಆಹ್ವಾನವಿರುತ್ತದೆ. ನಾರಾಯಣ ಕ್ರಮಿತ ದೇವಗಿರಿಗೆ ಹೊರಟಿದ್ದು ಅಗ್ಗಳನು ನಾರಾಯಣ ಕ್ರಮಿತರನ್ನು ಭೇಟಿಯಾದದ್ದು ಈ ಎಲ್ಲಾ ಮುಂತಾದ ವಿಷಯವನ್ನು ಬಿ. ಪುಟ್ಟಸ್ವಾಮಯ್ಯನವರು ಅನೇಕ ದಾಖಲಾತಿಗಳನ್ನು ಒದಗಿಸಿ ಆ ವಿಷಯಕ್ಕೆ ಕಾಲ್ಪನಿಕ ಸ್ಪರ್ಶವನ್ನು ಉಂಟು ಮಾಡಿದ್ದಾರೆ.

ಚಾಲುಕ್ಯರ ಅರಮನೆಯ ಒಂದು ಸ್ಥಳದಲ್ಲಿ ಏರ್ಪಡಿಸಿದ ರಾಜ್ಯಸಭೆಯ ವಿಷಯಗಳನ್ನು ನಾರಾಯಣ ಕ್ರಮಿತರು ಹೊಯ್ಸಳರ ಆಸ್ಥಾನದ ನರ್ತಕಿಯರಾದ ನೀಲಾಂಜನೆಯ ಗಣನಿಕೆಯರ ವಿಷಯವನ್ನು ಪ್ರಭುತ್ವದ ಆಜ್ಞೆಗೆ ತಲೆಬಾಗಿ ಬಸವಣ್ಣನವರು ಕಲ್ಯಾಣವನ್ನು ಬಿಟ್ಟಿದ್ದು, ಅಗ್ಗಳ,

ಬೊಮ್ಮರಸ, ಬ್ರಹ್ಮಶಿವ ದೇವಗಿರಿ ಬಿಟ್ಟು ಕಲ್ಯಾಣಕ್ಕೆ ಬಂದಿದ್ದು ಅಗ್ಗಳನು ಬಸವೇಶ್ವರನ ದರ್ಶನ ಪಡೆದಿದ್ದು ಈ ಭಾಗದಲ್ಲಿ ಒಡಮೂಡಿವೆ.

ಇನ್ನೂ ಆರನೇ ಸಂಪುಟವಾದ 'ಕ್ರಾಂತಿ ಕಲ್ಯಾಣ' ಕಾದಂಬರಿಯಲ್ಲಿ ಬಸವಣ್ಣನವರು ಕಲ್ಯಾಣವನ್ನು ಬಿಟ್ಟ ದಿನದಿಂದ ಆಸ್ಥಾನವನ್ನು ನಾರಾಯಣ ಕ್ರಮಿತ ನಿರ್ವಹಿಸುತ್ತಿರುವುದನ್ನು ಅಗ್ಗಳನ ಪತ್ರವನ್ನು ಬೊಮ್ಮರಸ ಬಸವಣ್ಣನವರಿಗೆ ತಲುಪಿಸಿದ್ದು ಅಗ್ಗಳನು ಬಿಜ್ಜಳನ ದರ್ಶನವನ್ನು ಪಡೆದಿದ್ದು ಜಗದೇಕ ಮಲ್ಲನನ್ನು ಸಂದರ್ಶಿಸಿದ್ದು ಜಗದೇಕ ಮಲ್ಲನಿಂದ ಕಾಮೇಶ್ವರಿಯ ಮಗನಾದ ಕುಮಾರ ಪ್ರೇಮಾರ್ಣವನಿಗೆ ಯುವರಾಜ ಪಟ್ಟವನ್ನು ಕಟ್ಟಲು ಅನುಮತಿಯನ್ನು ಪಡೆದಿದ್ದು ಆ ಬಿಜ್ಜಳನ ರಾಜ್ಯಸಭೆಯಲ್ಲಿ ರಸಿಕ ಕವಿ ಅಗ್ಗಳ ಜಗದೇಕಮಲ್ಲ ಹಾಗೂ ಕರುಣ ದೇವನನ್ನು ಹೋಲಿಸಿಕೊಂಡದ್ದು. ಅವರಿಬ್ಬರ ನಡುವೆ ನಡೆದ ಚರ್ಚೆಯ ವಿಷಯವಸ್ತು ರಾಜಕೀಯ ಲೇಖನದಿಂದ ಕೂಡಿದೆ. ಕಾಮೇಶ್ವರಿಯು ನವಮಿಹಬ್ಬದಲ್ಲಿ ಬಿಜ್ಜಳನ ಆಸ್ಥಾನಕ್ಕೆ ಬಂದು ಅಲ್ಲಿ ನಡೆದ ಸಾಂಸ್ಕೃತಿಕ ಸ್ಪರ್ಧೆಯಲ್ಲಿ ಭಾಗವಹಿಸಿ ಗೆಲುವನ್ನು ಸಾಧಿಸುವ ವಿಚಾರವನ್ನು ಅಷ್ಟೇ ನಾಜುಕಿನಿಂದ ಒಡಮೂಡಿವೆ. ಒಟ್ಟಾರೆಯಾಗಿ ಡಾ. ಬಿ. ಪುಟ್ಟಸ್ವಾಮಯ್ಯನವರ 'ಕ್ರಾಂತಿಕಲ್ಯಾಣ'ವೆಂಬ ಕಾದಂಬರಿ ಸಂಪುಟದಲ್ಲಿ ಸಾಮಾಜಿಕವಾಗಿ ಉಪಯುಕ್ತವಾದ ಮಾಹಿತಿ ಗಳಿಂದ ರಾಜಕೀಯ ವಿಚಾರಗಳಿಗೆ ಸಂಬಂಧಿಸಿ ಚಿತ್ರಿಸಿರುವುದು ಕಾಣಬಹುದು.

ಬಿ. ಪುಟ್ಟಸ್ವಾಮಿಯ್ಯನವರಂತೆ ೧೨ನೇ ಶತಮಾನದ ಶರಣರನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಿ ಶರಣರೆಲ್ಲರ ಜೀವನ ಚರಿತ್ರೆ ವಿವರಣೆಗಳನ್ನು ಮಹಾಸಂಪುಟದಲ್ಲಿ ಹಿಡಿದಿಟ್ಟಿದ್ದಾರೆ. ಅವರು ಬರೆದ ಒಟ್ಟು ಎಂಟು ಸಂಪುಟಗಳಲ್ಲಿ ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ವಿಚಾರಗಳೇ ಅಧಿಕವಾಗಿವೆ. ಇವರ ಮೊದಲ ಸಂಪುಟವಾದ 'ಕೂಗಿತ್ತು ಕೂಡಲಸಂಗಮ' ಕಾದಂಬರಿಯ ಕೊನೆಯಲ್ಲಿ ರಾಜಕೀಯ ವಿಚಾರಗಳು ಬರುತ್ತವೆ. ಅಂಥವುಗಳಲ್ಲಿ 'ಕಲ್ಯಾಣ ಕೂಗೈತೋ' ಕಾದಂಬರಿಯಲ್ಲಿಯೂ ಕೂಡ ವಿಶೇಷವಾದ ಅಂಶಗಳು ಸಿಗುತ್ತವೆ. ಬಿಜ್ಜಳನು ಅಧಿಕಾರಕ್ಕೆ ಬಂದಂತಹ ಸಂದರ್ಭದಲ್ಲಿ ರಾಜ ಜ್ಯೋತಿಷಿ ನಾರಾಯಣ ಜೋಯಿಸರು ಇವರ ರಾಜಕೀಯ ಆಗು-ಹೋಗುಗಳನ್ನು ಕುರಿತು ಉಪದೇಶ ನೀಡುತ್ತಿದ್ದರು. ಇಂತಹ ಸಂದರ್ಭವನ್ನು ಕಾದಂಬರಿಕಾರರು ಮನ ಮಿಡಿಯುವಂತೆ ಚಿತ್ರಿಸಿದ್ದಾರೆ.

"ಈ ಸಲ ನಿಮ್ಮ ರಾಜಕೀಯದ ಆರೋಗ್ಯ ಸ್ವಲ್ಪ ಕಷ್ಟಕರ... ನಿಮ್ಮ ನಂಬುಗೆಯವರು... ದೊಡ್ಡವರೆನಿಸಿಕೊಂಡವರು... ಹಣದ ಅಪವ್ಯಯ ಮಾಡುವುದರಿಂದ ಆರ್ಥಿಕ ಪರಿಸ್ಥಿತಿ ಮುಗ್ಗಟ್ಟಿಗೆ ಮೂಲ... ಎಚ್ಚರವಾಗಿರಬೇಕೆಂದು ಗ್ರಹಸೂಚನೆ ಉಂಟು...."[೨] ಶರಣರ ವಿಚಾರಗಳು ಜನಸಾಮಾನ್ಯರಿಗೂ ಹತ್ತಿರವಾಗುವಂತಿದ್ದರೆ ಮತ್ತೊಂದು ಕಡೆ ಪುರೋಹಿತಶಾಹಿವರ್ಗವು ಬಿಜ್ಜಳನನ್ನು ಎತ್ತಿಕಟ್ಟಿ ಅವರ ರಾಜಕೀಯ ಅಸ್ತ್ರಕ್ಕೆ ಕಾರಣೀಕರ್ತರಾಗುತ್ತಿದ್ದರು ಎಂದು ಕಾದಂಬರಿಕಾರರು ಉಲ್ಲೇಖಿಸಿದ್ದಾರೆ.

ಬಸವಣ್ಣನವರು ಸಂಗಮನಾಥನಲ್ಲಿ ಹೋಗಿ ಜ್ಞಾನಾಸಕ್ತನಾದಾಗ ಬಲದೇವನು ತನ್ನ ಮಗಳ ಅಪೇಕ್ಷೆಯ ಮೇರೆಗೆ ಈಶಾನ್ಯ ಗುರುಗಳನ್ನು ಸಂದರ್ಶಿಸಿ, ಬಸವಣ್ಣನ ಬಗ್ಗೆ ಹಾಗೂ

ತಾನು ಬಂದ ಉದ್ದೇಶವನ್ನು ತಿಳಿಸುತ್ತಾನೆ. ಮುಂದೆ ಆತನನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋಗುವ ಉದ್ದೇಶ ಎಲ್ಲವೂ ರಾಜಕೀಯ ವಿಷಯವಾಗಿದೆ.

ಇನ್ನೂ ಎರಡನೇ ಸಂಪುಟವಾದ 'ಯೋಗಿ ಕಂಡ ಯೌವ್ವನ' ಕಾದಂಬರಿಯಲ್ಲಿ ರಾಜಕೀಯ ವಿಚಾರಗಳು ಅಷ್ಟೇನೂ ಮೂಡಿಬರದಿದ್ದರೂ ಸಂಗಮನಾಥನಲ್ಲಿ ಪೂಜೆಯನ್ನು ಮಾಡುವಾಗ ಅದರಿಂದ ಅವರು ಪಡೆದುಕೊಂಡ ಜ್ಞಾನದರ್ಶನ ಮೀಮಾಂಸೆ ಅವರ ರಾಜಕೀಯ ಜೀವನಕ್ಕೆ ಅಥವಾ ವಿಚಾರಕ್ಕೆ ತಳಹದಿ ಎಂದು ಹೇಳಲಾಗುತ್ತದೆ.

ಅವರ ಮೂರನೆಯ ಸಂಪುಟದ 'ಗುರುವೆಂದವರ್ಯಾರೋ ಹರನಾಂದವರ್ಯಾರೋ'. ಇಲ್ಲಿ ಬಸವಣ್ಣನವರು ಶಿವನನ್ನು ಆರಾಧಿಸುವುದರ ಮೂಲಕ ಅವರ ಮಗನಾಗಿ ತಾನು ನಿರಂತರ ಸಂಗಮನಾಥನೇ ಎಲೆ ದೇವಾ ಎನ್ನ ಅರಸ ನಿನ್ನನ್ನು ಮಂಗಳವಾಡಕ್ಕೆ ಕರೆದುಕೊಂಡು ಹೋಗವೇನು. ಬಿಜ್ಜಳನ ರಾಜ್ಯಕ್ಕೆ ಎಂದು ಹೇಳುವ ಸಂದರ್ಭ ಬಸವಣ್ಣನವರ ರಾಜಕೀಯ ಜೀವನ ಅಷ್ಟೇ ಭದ್ರಬುನಾದಿಯಾಗಿರುವುದು ಇಲ್ಲಿ ಕಾಣಬಹುದು.

ನಾಲ್ಕನೇ ಸಂಪುಟ ಕಾದಂಬರಿಯಾದ 'ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ'ಯಲ್ಲಿ ಬಸವಣ್ಣನವರ ವೈವಾಹಿಕ ಜೀವನವನ್ನು ಚಿತ್ರಿಸಿದರೂ ಅಲ್ಲಿ ರಾಜಕೀಯ ವಿಚಾರಗಳು ಸಾಕಷ್ಟು ಮೂಡಿಬಂದಿವೆ. ಹೇಗೆಂದರೆ ಬಸವಣ್ಣನವರು ವೈವಾಹಿಕ ಜೀವನವನ್ನು ನಿರಾಕರಿಸಿದವರು ಒಂದು ಕಡೆಯಾದರೆ, ಬಿಜ್ಜಳ, ತೈಲಪ, ಕರ್ಣ ದೈವ, ಜಗದೇಕಮಲ್ಲ, ಮಾರಸಿಂಹ ಇವರೆಲ್ಲರೂ ವಿಲಾಸದ ಜೀವನದಲ್ಲಿ ತೇಲಿ ಹಾಡಿ ತಮ್ಮ ರಾಜ್ಯ ಸರ್ವನಾಶ ಮಾಡಿಕೊಂಡಿರುವಂತಹದ್ದನ್ನು ನಾವು ಕಾಣುತ್ತೇವೆ.

೫ನೇ ಸಂಪುಟವಾದ 'ಭೃಂಗ ಬಂದಾವೋ ಲಿಂಗ ತಂದಾವೋ' ಈ ಕಾದಂಬರಿಯಲ್ಲಿ ಹನ್ನೆರಡು ಮಠರವರು ಬಸವಣ್ಣನವರ ಜೀವನದ ಮೇಲೆ ಬೆಳಕು ಚೆಲ್ಲುವಾಗ ಅವರ ನೈತಿಕ ತಳಹದಿಯನ್ನು ಗುರುತಿಸುತ್ತಾರೆ. ಬಸವಣ್ಣನವರ ಕೀರ್ತಿಯನ್ನು ಕಂಡು ಅವರ ವಿಚಾರಗಳಿಗೆ ಮನಸೋತು ಅನೇಕ ದೇಶ-ವಿದೇಶಗಳಿಂದ ಜನರು ಆಗಮಿಸುತ್ತಿರುವುದರಿಂದ ಭೃಂಗದಂತೆ ಜನರು ಬಂದು ಸೇರುತ್ತಿರುವುದರಿಂದ ಕಲ್ಯಾಣ ನಾಡು ಶರಣರ ಬೀಡಾಗಿತ್ತು. ಇಲ್ಲಿ ಒರಿಸ್ಸಾದ ರಾಜರು ಆಗಿರಬಹುದು. ಕಾಶ್ಮೀರದ ರಾಜರು ಮತ್ತು ಪಂಡಿತರಾಗಿರಬಹುದು. ಇವರೆಲ್ಲರೂ ಕಲ್ಯಾಣಕ್ಕೆ ಬಂದು ಲಿಂಗದೀಕ್ಷೆ ಬಂದು ಪಡೆಯುವ ಸನ್ನಿವೇಶ ಇಲ್ಲಿ ಅನಾವರಣವಾಗಿವೆ. ಕಾದಂಬರಿಕಾರರು ಇದರ ಕೊನೆಯಲ್ಲಿ ಬಸವಣ್ಣನವರು ರಾಜಕೀಯ ಕ್ರಾಂತಿ ಹೇಗೆ ಮುನ್ನಡಿಯಾಗಿದ್ದಾರೆಂಬುದನ್ನು ಅನೇಕ ಸಂದರ್ಭಗಳನ್ನು ವಿವರಿಸಿದ್ದಾರೆ.

ಆರನೇ ಸಂಪುಟವಾದ 'ಕಲ್ಯಾಣ ಕೂಗೈತೋ' ಕಾದಂಬರಿಯಲ್ಲಿ ಬಸವಣ್ಣನವರು ಬಿಜ್ಜಳನ ಸಾಮ್ರಾಜ್ಯದ ಮಹಾಮಂತ್ರಿಯಾದ ಮೇಲೆ ಅವರು ವಹಿಸಿಕೊಂಡ ರಾಜಕೀಯ ಸಂದರ್ಭಗಳನ್ನು ಇಲ್ಲಿ ಎಳೆ ಎಳೆಯಾಗಿ ಬಿಚ್ಚಿಟ್ಟಿದ್ದಾರೆ. ಬಿಜ್ಜಳನ ರಾಜ್ಯಸಭೆಯ ಪರಿಷತ್ತಿನ ಅಧ್ಯಕ್ಷನಾಗಿ ನೀಡಿದ

ತೀರ್ಪುಗಳಾಗಿರಬಹುದು. ತೈಲಪನನ್ನು ಸಂದಾಗ ಮಾಡಲು ದೂತವಾಸಿಯಾಗಿ ಹೋದ ಪ್ರಸಂಗಗಳು ಕಾದಂಬರಿ ಬೆಳವಣಿಗೆಗೆ ಸಹಾಯಕವಾಗಿವೆ.

ಏಳನೇ ಸಂಪುಟವಾದ 'ತೇರು ಸಾಗಿತಣ್ಣ ಬಸವಣ್ಣ ಪಾಜ ಬಂದಿತಣ್ಣ' ಎಂಬ ಕಾದಂಬರಿಯಲ್ಲಿ ಸಾಮಾಜಿಕ ವಸ್ತುವೇ ಪುನರಾವರ್ತನೆಯಾದರೆ ರಾಜಕೀಯ ವಿಚಾರಗಳು ಅತ್ಯಂತ ಮಹತ್ವ ಪಡೆದಿವೆ. ಹೇಗೆಂದರೆ ಬಸವಣ್ಣನವರು ರಾಜ್ಯಭಾರವನ್ನು ನಡೆಸುವಾಗ ಹಣಕಾಸಿನ ವ್ಯವಹಾರದಲ್ಲಿ ಏರುಪೇರಾದಾಗ ಅದನ್ನು ಸಮದೂಗಿಸಿ ಮಂಚಣ್ಣ ಕ್ರಮಿತರು ಮತ್ತು ಅಧಿಕಾರಗಳು ಎಸೆಗಿದ ಅಪರಾಧವನ್ನು ಎತ್ತಿ ತೋರಿಸಿದ್ದಾರೆ. ಹಾಗೆ ಕರಣದೇವ, ತೈಲಪ, ಸೋಮೇಶ್ವರ, ಜಗದೇಕಮಲ್ಲ ಮುಂತಾದ ಪಾತ್ರಗಳಿಗೆ ರಾಜಕೀಯ ತಳಹದಿಯ ಮೇಲೆ ನಿಂತು ಮಾತನಾಡುತ್ತವೆ.

ಈ ಸಂಪುಟದ ಕೊನೆಯ ಕಾದಂಬರಿಯಾದುದು 'ಉಳವಿಯಲ್ಲಿ ಓಂಕಾರ' ಬಸವಣ್ಣನವರು ಕಲ್ಯಾಣವನ್ನು ಕಪ್ಪಡಿನಾಥ ಸಂಗಮನಲ್ಲಿಗೆ ಬಂದಂತಹ ಸಂದರ್ಭದಲ್ಲಿ ಬಿಜ್ಜಳನು ನಾರಾಯಣ ಕ್ರಮಿತ ದೇವಗಿರಿಯಿಂದ ಬಂದ ಮೇಲೆ ಹೊಯ್ಸಳ ರಾಜನ ಆಸ್ಥಾನದ ನರ್ತಕಿ ನೀಲಾಂಜನೆಯ ವಿಷಯವು ಶೀಲವಂತ, ಮಧುರಸ, ಹರಳಯ್ಯಾ ಇವರು ಮಾಡಿದ ಕಾರ್ಯಕ್ಕೆ ರಾಜ ಕೊಡುವ ಶಿಕ್ಷೆ ಇವೆಲ್ಲವೂ ಒಂದು ಕಡೆ ನಿಂತರೆ ಬಸವಣ್ಣ ನಂತರ ಬಿಜ್ಜಳನಿಗೆ ಮಾರ್ಗದರ್ಶಕನಾಗುತ್ತಾನೆ. ಇಲ್ಲಿಂದ ಮುಂದೆ ಎಲ್ಲಾ ರಾಜಕೀಯ ವಿಚಾರಗಳು ಚೆನ್ನಬಸವಣ್ಣನ ಉಪಸ್ಥಿತಿಯಲ್ಲಿಯೇ ನಡೆಯುತ್ತಿರುತ್ತವೆ. ಈ ತರದ ವಿಷಯಗಳು ಪರಿಣಾಮಕಾರಿಯಾಗಿ ಈ ಕಾದಂಬರಿಗಳು ಮೂಡಿಬಂದಿವೆ. ಒಟ್ಟಾರೆಯಾಗಿ ಜಿ.ಎಚ್. ಹನ್ನೆರಡುಮಠರ ಕಾದಂಬರಿಯನ್ನು ಆಧಾರವಾಗಿಟ್ಟುಕೊಂಡು ರಾಜಕೀಯ ವಿಚಾರಗಳನ್ನು ಗುರುತಿಸುವಾಗ ಸಾಮಾಜಿಕ ವಿಷಯಗಳು ಸಹ ಬರುತ್ತವೆ. ಇಮ್ಮಡಿ ತೈಲಪನು ತನ್ನ ಸಾಮ್ರಾಜ್ಯವನ್ನು ಬಿಟ್ಟು ಅಲೆಯುತ್ತಿರುವಂತಹ ಸಂಬರ್ಭದಲ್ಲಿ ಆತನಿಗೆ ವರ್ಷಾಸನವನ್ನು ಕಳುಹಿಸುವುದು ಬಿಜ್ಜಳನಿಗೆ ಅನಿವಾರ್ಯವಾಗಿತ್ತು. ಕಲ್ಯಾಣದಲ್ಲಿ ರಾಜಕೀಯ ಕೋಲಾಹಲ ಆರಂಭವಾಗಿತ್ತು. ಅಂತಹ ಸಂದರ್ಭದಲ್ಲಿ ಬಿಜ್ಜಳನು ಚಾಲುಕ್ಯ ಚಕ್ರವರ್ತಿಯನ್ನು ಯಾವ ರೀತಿ ಎದುರಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದ ಎಂಬುದನ್ನು ಕಾದಂಬರಿಕಾರರು ಇಲ್ಲಿ ಚಿತ್ರಿಸಿದ್ದಾರೆ.

> "ಸೈನ್ಯವನ್ನು ಕಲ್ಯಾಣದಲ್ಲೇ ಕೇಂದ್ರಿಕರಿಸದೇ ಬೇರೆ ಬೇರೆ ಮಂಡಲಗಳಲ್ಲಿ ಅದರ ಸಂಖ್ಯೆಯನ್ನು ಅಧಿಕಗೊಳಿಸುತ್ತಿದ್ದ. ತನ್ನ ನೆಚ್ಚಿನ ಸೇನಾಧಿಕಾರಗಳನ್ನು ಅಲ್ಲಿಗೆ ನೇಮಿಸಿದ್ದ. ಯಾರನ್ನೂ ಸಂಪೂರ್ಣವಾಗಿ ನಂಬದೇ ಅವರ ಮೇಲೆ ಮತ್ತೆ ಗುಪ್ತಾಚಾರವನ್ನು ನೇಮಿಸುತ್ತಿದ್ದ".[೨೪]

ಬಿಜ್ಜಳ ರಾಜನಾದರೂ ಸರ್ವಾಧಿಕಾರಿಯಾಗಿರಲಿಲ್ಲ. ಆದರೆ ಯುದ್ಧದ ಸಂದರ್ಭದಲ್ಲಿ ಯಾರನ್ನು ನಂಬುತ್ತಿರಲಿಲ್ಲ. ವಿದ್ರೋಹದ ಘಟನೆ ನಡೆದರೂ ಆತನಿಗೆ ವರದಿಯಾಗುವಂತೆ ಗುಪ್ತಾಚಾರ ಇಲಾಖೆಯನ್ನು ನೇಮಿಸಿಕೊಂಡಿದ್ದು ಆತನ ರಾಜಕೀಯ ಜೀವನಕ್ಕೆ ಕನ್ನಡಿ ಹಿಡಿಯುತ್ತದೆ. ಎಚ್. ತಿಪ್ಪೇರುದ್ರಸ್ವಾಮಿ ಅವರ ಕಾದಂಬರಿಗಳಲ್ಲಿ ರಾಜಕೀಯ ಗ್ರಹಿಕೆಗಳು ಅತ್ಯಂತ ಮಾರ್ಮಿಕವಾಗಿ ಮೂಡಿಬಂದಿವೆ.

**ಕೊನೆಟಿಪ್ಪಣಿಗಳು**

೧. ಬಸವ ಸಮಿತಿ, ೧೯೯೭, **ಬಸವಪಥ, ಸಂಪುಟ ೧೯, ಸಂಚಿಕೆ ೨, ಮೇ** ಪುಟ ೯೭.

೨. ಬಿ. ಪುಟ್ಟಸ್ವಾಮಯ್ಯ, ೨೦೦೩, **ಉದಯರವಿ,** ಪುಟ ೫೭.

೩. **ಅದೇ** - ಪುಟ ೭೩.

೪. ಬಿ. ಪುಟ್ಟಸ್ವಾಮಯ್ಯ, ೨೦೦೪, **ಕಲ್ಯಾಣೇಶ್ವರ,** ಪುಟ ೭೩.

೫. **ಅದೇ** - ಪುಟ ೩೨.

೬. ಬಿ. ಪುಟ್ಟಸ್ವಾಮಯ್ಯ, ೨೦೦೩, **ಉದಯರವಿ,** ಪುಟ ೧೬.

೭. **ಅದೇ** - ಪುಟ ೧೬.

೮. **ಅದೇ** - ಪುಟ ೨೦.

೯. **ಅದೇ** - ಪುಟ ೨೬.

೧೦. **ಅದೇ** - ಪುಟ ೩೫.

೧೧. ಬಿ. ಪುಟ್ಟಸ್ವಾಮಯ್ಯ, ೨೦೦೪, **ರಾಜ್ಯಪಾಲ,** ಪುಟ ೨೩.

೧೨. ಜಿ.ಎಚ್. ಹನ್ನೆರಡುಮಠ, ೧೯೮೨, **ಕೂಗಿತ್ತು ಕೂಡಲಸಂಗಮ,** ಪುಟ ೬೨.

೧೩. ಎಚ್. ತಿಪ್ಪೇರುದ್ರಸ್ವಾಮಿ, ೧೯೮೯, **ಕರ್ತಾರನ ಕಮ್ಮಟ,** ಪುಟ ೯.

೧೪. ದೇ. ಜವರೇಗೌಡ (ಸಂ), ೧೯೬೯, **ಪ್ರಬುದ್ಧ ಕರ್ನಾಟಕ,** ಚಿನ್ನದ ಸಂಚಿಕೆ, ಸಾಹಿತ್ಯ ಸಂಪುಟ, ಪುಟ ೭೯.

೧೫. ಬಿ. ಪುಟ್ಟಸ್ವಾಮಯ್ಯ, ೨೦೦೩, **ಉದಯರವಿ,** ಪುಟ ೩.

೧೬. **ಅದೇ** - ಪುಟ ೭.

೧೭. **ಅದೇ** - ಪುಟ ೫೪.

೧೮. ಬಿ. ಪುಟ್ಟಸ್ವಾಮಯ್ಯ, ೨೦೦೪, **ರಾಜ್ಯಪಾಲ,** ಪುಟ ೧೧೧.

೧೯. ಬಿ. ಪುಟ್ಟಸ್ವಾಮಯ್ಯ, ೨೦೦೩, **ಕಲ್ಯಾಣೇಶ್ವರ,** ಪುಟ ೧೭೬.

೨೦. ಎಚ್. ತಿಪ್ಪೇರುದ್ರಸ್ವಾಮಿ, ೧೯೮೯, **ಕರ್ತಾರನ ಕಮ್ಮಟ,** ಪುಟ ೨೧೯.

೨೧. ಬಿ. ಪುಟ್ಟಸ್ವಾಮಯ್ಯ, ೨೦೦೪, ರಾಜ್ಯಪಾಲ, ಪುಟ ೨೩೪.

೨೨. ಎಚ್. ತಿಪ್ಪೇರುದ್ರಸ್ವಾಮಿ, ೧೯೮೯, **ಕರ್ತಾರನ ಕಮ್ಮಟ,** ಪುಟ ೩೮೨.

೨೩. ಜಿ.ಎಚ್. ಹನ್ನೆರಡುಮಠ, ೧೯೮೪, **ಕಲ್ಯಾಣ ಕೂಗ್ಯೆತೋ,** ಪುಟ ೧೫೬.

೨೪. ಎಚ್. ತಿಪ್ಪೇರುದ್ರಸ್ವಾಮಿ, ೧೯೮೯, ಕರ್ತಾರನ ಕಮ್ಮಟ, ಪುಟ ೪೫೦.

□□□

## ಅಧ್ಯಾಯ : ಆರು

# ಬಸವಣ್ಣನು ಉಳಿದ ಪಾತ್ರಗಳನ್ನು ನೋಡಿರುವ ರೀತಿ

ಬಸವಣ್ಣನವರ ಜೀವನದ ಮೇಲೆ ಪ್ರಭಾವ ಬೀರಿದ ಅನೇಕ ಪಾತ್ರಗಳು ಕೆಲವು ಕಾದಂಬರಿಗಳಲ್ಲಿ ಅನಾವರಣಗೊಂಡಿವೆ. ಕ್ರಾಂತಿ ಕಲ್ಯಾಣ ಕಾದಂಬರಿಯ ಪ್ರಮುಖ ಐತಿಹಾಸಿಕ ಪಾತ್ರಗಳಾದ ಬಿಜ್ಜಳ, ನಾಗಲಾಂಬಿಕೆ, ಗಂಗಾಂಬಿಕೆ, ನೀಲಾಂಬಿಕೆ ಮುಂತಾದ ಈ ಪಾತ್ರಗಳು ಕರ್ತಾರನ ಕಮ್ಮಟ ಮತ್ತು ಜಿ.ಎನ್. ಹನ್ನೆರಡುಮಠರವರ ಕಾದಂಬರಿಯಲ್ಲಿ ಕಾದಂಬರಿಕಾರರ ಕಲ್ಪನಾ ಪಾತ್ರಗಳು ಯಾವುವು ಇಲ್ಲ. ಆದರೆ ಬಿ. ಪುಟ್ಟಸ್ವಾಮಯ್ಯನವರ 'ಕ್ರಾಂತಿ ಕಲ್ಯಾಣ' ಎಂಬ ಕಾದಂಬರಿಯಲ್ಲಿ ನವೀನ ಸೃಷ್ಟಿ ಪಾತ್ರಗಳಿಂದ ಕಾಮೇಶ್ವರಿ, ಕುಸುಮಾವಳಿ ಪಾಟಲಿಕೆ, ಅಫ್ರೊಡೇಟ್ ಮುಂತಾದವುಗಳು ಕಂಡುಬರುತ್ತವೆ. ಜಿ.ಎಚ್. ಹನ್ನೆರಡುಮಠರವರ ಕಾದಂಬರಿಗಳಲ್ಲಿ ನೂತನ ಸೃಷ್ಟಿಯ ಪಾತ್ರ 'ಮೋಹಿನಿ' ಈ ಪಾತ್ರಗಳನ್ನು ಬಸವಣ್ಣನವರು ನೋಡಿರುವ ದೃಷ್ಟಿ ಸಂದರ್ಭಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಬಸವಣ್ಣ-ಬಿಜ್ಜಳ**

ಶರಣರ ಕುರಿತು ಬಂದಿರುವ ಕಾದಂಬರಿಗಳ ಕುರಿತು ಬಿಜ್ಜಳನ ಪಾತ್ರ ಮಹತ್ವವಾದದ್ದು. 'ಕರ್ತಾರನ ಕಮ್ಮಟ' ಕಾದಂಬರಿಯಲ್ಲಿ ನಾಲ್ಕನೆಯ ಅಧ್ಯಾಯದಿಂದ ಈ ಪಾತ್ರದ ಪ್ರವೇಶವಾಗುತ್ತದೆ. ೧೦ನೇ ಅಧ್ಯಯನದವರೆಗೆ ಬಿಜ್ಜಳನ ಪಾತ್ರ ಸ್ಥೂಲವಾಗಿ ಬರುತ್ತದೆ. ಬಸವ ಬಿಜ್ಜಳರ ಸಂಬಂಧ ಎದ್ದು ಕಾಣುತ್ತದೆ. ಬಸವಣ್ಣನಷ್ಟೇ ಪಾತ್ರವು ಬಿಜ್ಜಳನದು ಮುಖ್ಯವಾಗಿ ನಿಲ್ಲುತ್ತದೆ. ಇನ್ನು ಹನ್ನೆರಡುಮಠರವರ ಎಂಟು ಕಾದಂಬರಿಗಳಲ್ಲಿ ನಾಲ್ಕನೇ ಕಾದಂಬರಿಯಾದ 'ಯೋಗಿಗೆ ಯೋಗಿಣಿಯಾಗಿ ಕಾಡಿತ್ತು' ಕಾದಂಬರಿಯಿಂದ ಹಿಡಿದು ಉಳಿವಿಯಲ್ಲಿ ಓಂಕಾರ ಕಾದಂಬರಿಯವರೆಗೆ ಬಿಜ್ಜಳನ ಪಾತ್ರ ವ್ಯಕ್ತಿತ್ವ ತೀರ ಗೌಣವಾಗಿ ಕಂಡು ಬರುತ್ತದೆ. ಕ್ರಾಂತಿ ಕಲ್ಯಾಣ ಕಾದಂಬರಿಯಲ್ಲಿ ಮಾತ್ರ ಬಸವಣ್ಣನವರು ಬಿಜ್ಜಳನನ್ನು ನೋಡಿರುವ ರೀತಿ ಬಸವ ಧ್ರುವ ನಕ್ಷತ್ರವನ್ನು ಸುತ್ತಿದರೆ ಬಿಜ್ಜಳನು ಅರಮನೆಯ ರಾಜಕೀಯ ಮಿನುಕು ಉಳುವಿನಂತೆ ಕಾಣುತ್ತಾನೆ.

ಬಸವಣ್ಣನವರು ಮೊದಲು ಭೇಟಿಯಾಗುವುದು ಬಿಜ್ಜಳನ ಅರಮನೆಯಲ್ಲಿ ಕರಣಿಕ ವೃತ್ತಿಯನ್ನು ಕೈಗೊಳ್ಳುವಾಗ ಹಾಗೂ ಬಲದೇವರಸ ಸತ್ತ ನಂತರ ಆತನ ಆಸ್ತಿ-ಪಾಸ್ತಿಗಳನ್ನು ದಾನವಾಗಿ

ವಿತರಿಸಬೇಕೆಂಬ ವಿಷಯವಾಗಿ ಚರ್ಚಿಸಲು ಕರೆದಿರುವಾಗ ಮಾವನ ಆಸ್ತಿ ತನಗೆ ಬೇಡ ತಾನು ಯಾವುದಾದರೂ ಒಂದು ಕಾಯಕ ಮಾಡಿ ಜೀವಿಸುತ್ತೇನೆಂದು ಸ್ವತಂತ್ರ ಮನೋವೃತ್ತಿಯನ್ನು ತೋರಿಸಿದಾಗ ಬಿಜ್ಜಳನು ಬಸವೇಶನಲ್ಲಿ ಅವ್ಯಕ್ತ ಪ್ರೀತಿಯನ್ನು ತಾಳುತ್ತಾನೆ. ಕಾವ್ಯ, ವ್ಯಾಕರಣ, ಅರ್ಥಶಾಸ್ತ್ರ, ಗಣಿತಶಾಸ್ತ್ರದಲ್ಲಿ ಪ್ರಾವೀಣ್ಯತೆ ಇರುವ ಬಸವೇಶನಿಗೆ ತನ್ನ ಮುಂದಿದ್ದ ನಾಲ್ಕು ವರ್ಷಗಳ ರಾಜ್ಯಾದಾಯ ಪಟ್ಟಿಯನ್ನು ಪರೀಕ್ಷಿಸುವಂತೆ ಬಿಜ್ಜಳನು ಹೇಳುತ್ತಾನೆ. ದೂರಾಲೋಚನೆವುಳ್ಳ ಬಸವೇಶರ ರಾಜ್ಯಾದಾಯ ಪಟ್ಟಿಯಲ್ಲಿನ ಲೋಪದೋಷಗಳನ್ನು ಸ್ಥೂಲವಾಗಿ ಪರಿಶೀಲಿಸುತ್ತಾನೆ. ಬಸವೇಶನ ಅರ್ಥ ವ್ಯಾಖ್ಯಾನವನ್ನು ಮೆಚ್ಚಿದ ಬಿಜ್ಜಳ ತನ್ನ ಸಾಮ್ರಾಜ್ಯದಲ್ಲಿ ಕರಣಿಕನನ್ನಾಗಿ ನೂರೊಂದು ಹೊನ್ನಿಗೆ ನೇಮಿಸಿಕೊಳ್ಳುತ್ತಾನೆ.

ಬಿಜ್ಜಳ ರಾಯನು ಪೂರ್ಣ ಪಾತ್ರನಾದನು. ಕರಣಿಕನಾಗಿ ನೇಮಕಗೊಂಡ ಬಸವೇಶ ದಕ್ಷತೆಯಿಂದ ಕೆಲಸ ಮಾಡಿ ಮಂಡಲಾಧ್ಯಕ್ಷ, ಸೇನಾಧ್ಯಾಕ್ಷ, ಅಶ್ವಾಧ್ಯಕ್ಷ ಕೋಶಗಾರ ಮುಂತಾದವುಗಳು ಲೆಕ್ಕಪತ್ರಗಳನ್ನು ಪರಿಶೀಲಿಸಿ, ಅದರ ನ್ಯೂನ್ಯತೆ ಏನೆಂದು ತಿಳಿದನು. ಅದುವರೆಗೂ ಬೊಕ್ಕಸಕ್ಕೆ ಆಗಿರುವ ಅಂಕಿಅಂಶಗಳನ್ನು ಕೆಲವೇ ದಿನಗಳಲ್ಲಿ ತಯಾರಿಸಿ ಬಿಜ್ಜಳನ ಅವಗಾಹನೆಗೆ ಕಳಿಸಿದನು. ಬಸವೇಶನ ಕಾರ್ಯತತ್ಪರತೆಗೆ ಮೆಚ್ಚಿದ ಬಿಜ್ಜಳನು ಬಸವೇಶನನ್ನು ಶ್ಲಾಘಿಸಿ ರಾಜ್ಯಾದಾಯವನ್ನು ಹೆಚ್ಚಿಸಲು ಬಸವೇಶ ನೀಡಿದ ಸಲಹೆಗಳನ್ನು ಪರಿಶೀಲಿಸಲು ಬಿಜ್ಜಳ ರಾಯನು ಮಂತ್ರಿ ಪರಿಷತ್ತನ್ನು ಕರೆದನು.

ಬಲದೇವ ಅರಸರು ಇಹಲೋಕವನ್ನು ಯಾತ್ರೆ ತ್ಯಜಿಸಿದ ನಂತರ ಇತ್ತ ಬಸವೇಶ್ವನಿಂದ ರೂಪಿತವಾದ ಹೊಸ ಆರ್ಥಿಕ ಯೋಜನೆಗಳನ್ನು ಬಿಜ್ಜಳನು ಜಾರಿಗೆ ತಂದನು. ವಿಕ್ರಮಾದಿತ್ಯನ ನಾಲ್ಕನೇ ಮಡದಿಯಾದ ಚಂಚಲದೇವಿ ವಿಜಯೇಶ್ವರ ದೇವಾಲಯವನ್ನು ಕಟ್ಟಿಸಿರುತ್ತಾರೆ. ಆ ದೇವಾಲಯದ ಜೀರ್ಣೋದ್ಧಾರಕ್ಕೆ ಏರ್ಪಾಡು ಮಾಡಿದಾಗ ಭೂಮಿ ಕುಸಿದು ಬಿದ್ದು ಸುರಂಗ ಒಂದು ಕಾಣುತ್ತದೆ. ಅದನ್ನು ಪರೀಕ್ಷಿಸಿದಾಗ ಒಂದು ನೆಲ ಮಾಳಿಗೆ ಸಿಗುತ್ತದೆ. ಅದರಲ್ಲಿ ವಿವಿಧ ವಸ್ತುಗಳ ಸಂಗ್ರಹವಿರುತ್ತದೆ. ಈ ಸುದ್ದಿ ಬಿಜ್ಜಳನಿಗೆ ತಲುಪಿದಾಗ ಆ ಎಲ್ಲ ವಸ್ತುಗಳನ್ನು ತನ್ನ ಸಾಮ್ರಾಜ್ಯದಲ್ಲಿ ಸಂಗ್ರಹಿಸಿ ಸಾಮ್ರಾಜ್ಯದ ಪಂಡಿತರೆಲ್ಲರನ್ನು ಕರೆತರಿಸಿ ಅವುಗಳನ್ನು ವಿಚಾರಣೆ ಮಾಡಲಾಗಿ ಅದರಲ್ಲಿರುವ ಶಾಸನದ ಒಂದು ಲಿಪಿ ಯಾರಿಗೂ ಅರ್ಥವಾಗಲಿಲ್ಲ. ಆದರೆ ಕೆಲವು ದಿನಗಳ ನಂತರ ಆ ರಾಜ್ಯ ಶಾಸನವನ್ನು ಬಸವಣ್ಣನವರು ಓದಿ ವಿಕ್ರಮಾದಿತ್ಯನ ಹುದುಗಿಸಿಟ್ಟ ಗುಪ್ತನಿಧಿ ಹಾಗೂ ಅದರ ವಿತರಣೆಯ ವಿವರಣೆಯನ್ನು ತಿಳಿಸುತ್ತಾನೆ. ಮುಂದೆ ಸಾವಿರ ಕಂಬದ ಅರಮನೆಯ ನೆಲಮಾಳಿಗೆಯಲ್ಲಿರುವ ಗುಪ್ತನಿಧಿಯನ್ನು ಬಸವಣ್ಣನವರು ಬಿಜ್ಜಳನಿಗೆ ತೋರಿಸುತ್ತಾರೆ. ಇದರಿಂದಾಗಿ ಬಸವಣ್ಣನವರು ಬಿಜ್ಜಳನಿಗೆ ಮತ್ತಷ್ಟು ಹತ್ತಿರವಾಗುತ್ತಾರೆ.

ಬಿಜ್ಜಳನು ಒಂದು ಮಹಾನಾಡನ್ನು ಕರೆದು ವಿಕ್ರಮಾದಿತ್ಯರ ನಿಧಿಯ ವಿಚಾರವಾಗಿ ಚರ್ಚಿಸಿ ಅಂದೇ ಬಸವಣ್ಣನನ್ನು ಮಂತ್ರಿ ಪದವಿಗೆ ವಿಕ್ರಮಾದಿತ್ಯದ ನಿಧಿಯ ಸಲುವಾಗಿ ಮಹಾನ್ ಕಾರ್ಯದರ್ಶಿಯನ್ನಾಗಿ ನೇಮಿಸುತ್ತಾನೆ.

ತೈಲಪನು ಬನವಾಸಿಯಲ್ಲಿ ನಿಧಿಯನ್ನು ಗುಪ್ತವಾಗಿ ಅಪಹರಿಸಿದ ಸಂದರ್ಭದಲ್ಲಿ ಅದನ್ನು ರಾಜಮರ್ಯಾದೆಯಾಗಿ ಕಲ್ಯಾಣಕ್ಕೆ ಒಪ್ಪಿಸಲು ರಾಜಸಂಧಾನಕ್ಕಾಗಿ ತೈಲಪನಲ್ಲಿಗೆ ಕಳುಹಿಸಿ ಕೊಡುವುದಕ್ಕಾಗಿ ಮಂತ್ರಿಮಂಡಲ ಚರ್ಚಿಸುತ್ತದೆ. ಬಿಜ್ಜಳನ ಈ ಒಂದು ಸೂಚನೆಗೆ ಮನ್ನಣೆ ಕೊಟ್ಟು ಬಸವೇಶನು ವಿಧಿಯಿಲ್ಲದೆ ದೂತ ಕಾರ್ಯವನ್ನು ಒಪ್ಪಬೇಕಾಯಿತು. ಬಿಜ್ಜಳನು ಬಸವಣ್ಣನ ಕೈಯಲ್ಲಿ ಅಭಿಯೋಗ ಪತ್ರವೊಂದನ್ನು ಕಳುಹಿಸಿಕೊಡುತ್ತಾನೆ.

ರಾಜಸಂಧಾನ ಯಶಸ್ವಿಯಾಗಿ ಮುಗಿಸಿಕೊಂಡು ಬಂದ ಬಸವೇಶನಿಗೆ ಬಿಜ್ಜಳನು ಬನವಾಸಿ ಪ್ರಾಂತ್ಯದ ರಾಜ್ಯಪಾಲನನ್ನಾಗಿ ನೇಮಿಸುತ್ತಾನೆ. ಇನ್ನು ಮುಂದೆ ಬಿಜ್ಜಳ ಮತ್ತು ಬಸವಣ್ಣರ ನಡುವೆ ಕೆಲವು ಘಟನೆಗಳಿಂದ ಮನಃಸ್ತಾಪ ಉಂಟಾಗುತ್ತದೆ. ಕಲ್ಯಾಣದಲ್ಲಿ ಅಸಂಖ್ಯಾ ಶರಣರು ವಾಸಿಸುವುದರಿಂದ ಅವರೆಲ್ಲಾ ನಿರ್ವಹಣೆಯ ವೆಚ್ಚವನ್ನು ರಾಜ್ಯ ಬೊಕ್ಕಸದಿಂದಲೇ ನಡೆಯುತ್ತಿದೆ ಎಂದು ತಿಳಿದ ಸೋಮೇಶ್ವರನು ಬಸವಣ್ಣನವರಿಂದ ಭಂಡಾರದ ಲೆಕ್ಕವನ್ನು ಪರಿಶೀಲಿಸುತ್ತಾನೆ. ನಂತರ ಆದಾಯಕ್ಕಿಂತಲೂ ಹೆಚ್ಚಿರುವುದು ಗೊತ್ತಾದಾಗ ಬಿಜ್ಜಳನು ಒಬ್ಬ ಜನಸಾಮಾನ್ಯನಾಗಿ ಬಸವಣ್ಣನವರಲ್ಲಿ ಕ್ಷಮೆ ಕೇಳುವಂತಹದ್ದು ನೋಡಿದರೆ ಅವರಿಬ್ಬರಲ್ಲಿರುವ ನ್ಯೂನತೆ ವ್ಯಕ್ತವಾಗುತ್ತದೆ. ಬಸವಣ್ಣ ಮತ್ತು ಬಿಜ್ಜಳರು ಪರಸ್ಪರ ಒಳ್ಳೆಯ ಸಮಾಲೋಚನೆಗಾರರಾಗಿದ್ದರು. ಬಿಜ್ಜಳನ ಅನೇಕ ಸಲಹೆ-ಸೂಚನೆಗಳನ್ನು ಪಡೆದು ಬಸವಣ್ಣನ ತಾತ್ವಿಕವಾದ ಕೆಲವು ವಿಚಾರಗಳನ್ನು ಗೌರವಿಸುತ್ತಿದ್ದ ಎನ್ನುವುದನ್ನು ಕಾಣಬಹುದು.

> 'ಅದು ನನ್ನ ಪ್ರವಾಸಕ್ಕೆ ಸಂಬಂಧಿಸಿದ ದೀರ್ಘ ಕತೆ.
> ಪ್ರಭುಗಳು ಅವಕಾಶ ಕೊಡುವುದಾದರೆ...'
> "ಹೇಳು ಬಸವೇಶ, ಜ್ಞಾನಾರ್ಜನೆಯನ್ನು ಕುರಿತ ಎಲ್ಲ
> ವಿಚಾರಗಳಲ್ಲಿಯೂ ನನಗೆ ಆಸಕ್ತಿಯಿದೆ".[೧]

ಹೀಗೆ ಬಿಜ್ಜಳನಿಗೆ ಬಸವಣ್ಣನ ವಿಚಾರಗಳಲ್ಲಿ ಆಸಕ್ತಿಯಿದೆ. ಆದರೆ ತಾರ್ಕಿಕ ನಿಲುವು ಪ್ರಗತಿಪರ ಧೋರಣೆಗಳು ಕಂಡುಬಂದಾಗ ಅವುಗಳನ್ನು ಪಾಲಿಸಲು ಮುಂದಾಗುವಾಗ ಬಿಜ್ಜಳನು ಹಿಂಜರಿಯುತ್ತಾನೆ. ರಾಜ್ಯದ ಸಿಂಹಾಸನದ ವಿಷಯದಲ್ಲಿ ಧಕ್ಕೆ ಬಂದಾಗ ಮೇಲ್ವರ್ಗದ ಪುರೋಹಿತ ಶಾಹಿಗಳ ಕೈಗೊಂಬೆಯಾಗಿ ಬಿಜ್ಜಳನು ಕಾಣಿಸಿಕೊಳ್ಳುವುದು ಗಮನಾರ್ಹವಾದ ಸಂಗತಿಯಾಗಿದೆ.

ರಾಜ್ಯದ ಭಂಡಾರದ ಕೀಯನ್ನು ಬಿಜ್ಜಳನಿಗೆ ಒಪ್ಪಿಸುವಾಗ ಬಿಜ್ಜಳ ಹೇಳುವ ಮಾತುಗಳು ಬಸವಣ್ಣನವರ ವ್ಯಕ್ತಿತ್ವವನ್ನು ಅರ್ಥಮಾಡಿಸುತ್ತವೆ. ಬಸವಣ್ಣ ನಾನು ನಿನ್ನಿಂದಲೇ ಬೆಳೆದು ನಿನ್ನ ದಯೆಯಿಂದಲೇ ಸಾಮ್ರಾಜ್ಯ ಅಭಿವೃದ್ಧಿಯಾಗಿದೆ. ಅದಕ್ಕೆಂದಲೇ ಈ ಭಂಡಾರದ ಕೀಯನ್ನು ಹಿಂದಕ್ಕೆ ಮರಳಿಸಬೇಡ ಎಂದು ಹೇಳುವಾಗ ಬಸವಣ್ಣನವರು ರಾಜ್ಯಕಾರ್ಯಕ್ಕಿಂತ ಜನಸಾಮಾನ್ಯರ ಯೋಗಕ್ಷೇಮ ಮತ್ತು ಅನುಭವಮಂಟಪದ ಕಾರ್ಯಕಲಾಪಗಳು ನಿರ್ವಹಿಸಬೇಕಾಗಿದೆ ಎಂದು ಹೇಳಿ ಅದನ್ನು ಅಷ್ಟೇ ಪ್ರೀತಿಯಿಂದ ನಿರಾಕರಿಸುತ್ತಾರೆ.

**ಬಸವಣ್ಣ - ಅಕ್ಕ ನಾಗಮ್ಮ**

ಅಕ್ಕ ನಾಗಲಾಂಬಿಕೆಯ ಜೀವನ ಬಸವಣ್ಣನ ಜೀವನದೊಂದಿಗೆ ಅವಿನಾಭಾವ ಸಂಬಂಧವಾಗಿ ಬೆರೆತು ಹೋಗಿದೆ. ಕೇವಲ ಅವಳ ಜೀವನವಲ್ಲ ಅವಳ ಪತಿ ಮತ್ತು ಮಗ ಜೀವನವು ಸಹ ಬಸವಣ್ಣನವರ ಚರಿತ್ರೆಯೊಂದಿಗೆ ಬೆಸೆದುಕೊಂಡಿದೆ. ಈ ಮೂವರು ಕಾದಂಬರಿಕಾರರು ಈ ಅಂಶವನ್ನು ಪರಿಗಣಿಸಿದ್ದಾರೆ.

ಬಿ. ಪುಟ್ಟಸ್ವಾಮಯ್ಯನವರ ಕಾದಂಬರಿಗಳಲ್ಲಿ ನಾಗಲಾಂಬಿಕೆ ಮತ್ತು ಬಸವಣ್ಣನವರ ತಂದೆ-ತಾಯಿ ಬೇರೆ ಬೇರೆ, ಆದರೆ 'ಕರ್ತಾರನ ಕಮ್ಮಟ'ದಲ್ಲಿ ಅವಳ ಪಾತ್ರ ಮಹತ್ವಪೂರ್ಣವಾಗಿ ಮೂಡಿಬಂದಿದೆ. ಇವರಿಬ್ಬರ ಸಂಬಂಧದಲ್ಲಿ ದೈವಿಕ ತೇಜಸ್ಸಿನ ಪ್ರಭಾವವಿರುವುದನ್ನು ಗುರುತಿಸ ಬಹುದು. ಜಿ.ಎಚ್. ಹನ್ನೆರಡುಮಠರವರ ಕಾದಂಬರಿಗಳಲ್ಲಿ ಕಲ್ಪನೆಯ ನಾಗಲಾಂಬಿಕೆ ಬಸವಣ್ಣ ಸ್ಥಾಪಿಸಿದ ಅನುಭವ ಮಂಟಪಕ್ಕೆ ಅನುಪಮವಾದ ಸೇವೆ ಸಲ್ಲಿಸಿರುವುದರೊಂದಿಗೆ ಆಧ್ಯಾತ್ಮಿಕ ಕ್ಷೇತ್ರದ ಸಾಧಕಿಯಾಗಿ ಕಂಗೊಳಿಸಿದ್ದಾಳೆ.

ಕಲ್ಯಾಣ ಮತ್ತು ಎಲ್ಲಾ ಶರಣರ ನಿರ್ನಾಮವಾದಗಲೂ ಕಾದಂಬರಿಯ ಕೊನೆಗೂ ಅವಳು ಜೀವಂತವಾಗಿ ಉಳಿದಿದ್ದಾಳೆ. ಬಸವಣ್ಣ ನಾಗಲಾಂಬಿಕೆಯನ್ನು ನೋಡುವ ದೃಷ್ಟಿ ತಾಯಿ ಸಮಾನವಾದದ್ದು. ಆದ್ದರಿಂದಾಗಿಯೇ ಬಸವಣ್ಣ ಎಲ್ಲಿರುತ್ತಾನೆಯೋ ಅಲ್ಲಿ ನಾಗಲಾಂಬಿಕೆ ಇರುತ್ತಾಳೆ. ಶಿವಸ್ವಾಮಯ್ಯ ಲಿಂಗೈಕ್ಯರಾದ ಮೇಲೆ ಚನ್ನಬಸವಣ್ಣನವರ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಾನೆ. ಬಸವಣ್ಣನವರು ಈಶಾನ್ಯ ಗುರುಗಳಲ್ಲಿ ವಿದ್ಯಾಭ್ಯಾಸ ಕಲಿಯುವಾಗ ವೈದಿಕ ಧರ್ಮದ ಕಂದಾಚಾರಗಳನ್ನು ಬಸವಣ್ಣನವರು ವಿರೋಧಿಸಿದಂತೆ ಅಕ್ಕ ನಾಗಮ್ಮನವರು ಸಹ ವಿರೋಧಿಸುತ್ತಾರೆ. ಬಲದೇವನ ಮಗಳಾದ ಗಂಗಾಂಬಿಕೆಯೊಂದಿಗೆ ಬಸವಣ್ಣನನ್ನು ಮದುವೆಗೆ ಒಪ್ಪಿಸಲು ಅಕ್ಕ ನಾಗಮ್ಮಳು ಮಹತ್ವದ ಪಾತ್ರವನ್ನು ವಹಿಸುತ್ತಾಳೆ. ಮುಂದೆ ನೀಲಾಲೋಚನೆ ಮತ್ತು ಗಂಗಾಂಬಿಕೆ ಇಬ್ಬರು ಗೆಳತಿಯರಾಗಿ ನೀಲಾಲೋಚನೆಯು ಸಹ ಬಸವಣ್ಣನವರನ್ನು ಇಷ್ಟಪಟ್ಟಾಗ ಎರಡನೇ ಮದುವೆ ಮಾಡಿಸುವಲ್ಲಿ ಅಕ್ಕ ನಾಗಮ್ಮ ಯಶಸ್ವಿಯಾಗುತ್ತಾಳೆ. ಬಸವಣ್ಣನು ಬಿಜ್ಜಳನ ಮಂತ್ರಿ ಪದವಿಗೆ ರಾಜೀನಾಮೆಯನ್ನು ನೀಡಿ ಮನೆಗೆ ಬಂದಾಗ ಮೊದಲು ಸ್ವಾಗತಿಸುತ್ತಾಳೆ. ರಾಜಕೀಯ ಬೆಳಕಿಗಿಂತ ಧಾರ್ಮಿಕ ಬೆಳಕು ಸಮಾಜವನ್ನು ಬೆಳಗಬೇಕು ಎಂದು ಹೇಳಿ ಬಸವಣ್ಣನವರಿಗೆ ಆರತಿ ಎತ್ತುವ ಸಂದರ್ಭ ಮಹತ್ವದ್ದಾಗಿದೆ. ಬಸವಣ್ಣನವರು ಕಲ್ಯಾಣದಲ್ಲಿರುವ ಅನುಭವಮಂಟಪದ ನಿರ್ವಹಣೆಗೆ ಅಕ್ಕನಾಗಮ್ಮನನ್ನು ನೇಮಿಸಿರುವುದು. ಅವಳ ಭಕ್ತಿ ಮತ್ತು ಶ್ರದ್ಧೆಯೆತ್ತಿ ತೋರಿಸುತ್ತದೆ.

**ಬಸವಣ್ಣ ಮತ್ತು ಗಂಗಾಂಬಿಕೆ**

ಈ ಗಂಗಾಂಬಿಕೆ ಬಸವಣ್ಣನವರ ದೂರದ ಸಂಬಂಧಿಯಾದ ಬಲದೇವ ಅರಸನ ಮಗಳು. 'ಕ್ರಾಂತಿ ಕಲ್ಯಾಣ' ಮತ್ತು 'ಕರ್ತಾರನ ಕಮ್ಮಟ' ಕಾದಂಬರಿಗಳಲ್ಲಿ ಈ ಪಾತ್ರ

ಅನ್ಯೋನ್ಯವಾಗಿ ಮೂಡಿಬಂದಿದೆ. ಬಸವಣ್ಣ ಈ ಪಾತ್ರವನ್ನು ಕಂಡಿರುವ ರೀತಿ ನಾಗರಿಕ ಸಮಾಜಕ್ಕೆ ಸತಿಯ ಬಗೆಗಿನ ವೈಜ್ಞಾನಿಕ ಮನೋಭಾವ ಎದ್ದು ಕಾಣುತ್ತದೆ. ಗಂಗಾಂಬಿಕೆ ಮೊದಲು ಭೇಟಿಯಾಗುವುದು ಬಸವಣ್ಣನವರನ್ನು ಕಪ್ಪಡಿಯಲ್ಲಿ ತನ್ನ ಗೆಳತಿಯರಾದ ನೀಲಾಲೋಚನೆ ಮತ್ತು ಲಾವಣ್ಯವತಿಯರೊಂದಿಗೆ ಕೂಡಿ ಪಾಜ ಮಾರ್ಗದಲ್ಲಿ ಬರುವಾಗ ನರ್ತನೆ ಮಾಡುವ ಸಂದರ್ಭದಲ್ಲಿ ಬಸವಣ್ಣನನ್ನು ನೋಡಿ ಮೂಕವಿಸ್ಮಿತಳಾಗುತ್ತಾಳೆ. 'ಕ್ರಾಂತಿ ಕಲ್ಯಾಣ' ಕಾದಂಬರಿಯ ಮಧ್ಯದಲ್ಲಿ ಬಸವಣ್ಣನವರ ಮನೆಗೆ ಕಳ್ಳನು ಕನ್ನ ಹಾಕಿದಾಗ ಕಿವಿಯಲ್ಲಿರುವ ಓಲೆಯನ್ನು ಬಿಚ್ಚಿಕೊಡಲು ಹೇಳುವಂತ ದೃಶ್ಯ ಸಮಾಜದಲ್ಲಿ ಬಡವ ಶ್ರೀಮಂತ ಎಂಬ ಭೇದಭಾವ ಹೋಗಲಾಡಿಸಲು ಈ ವಸ್ತು ಯಾರು ಕೊಟ್ಟರೋ ಅವರು ಒಯ್ಯುವುದರಿಂದ ಯಾವ ಸಮಸ್ಯೆಯು ಉದ್ಭವಿಸುವುದಿಲ್ಲ. 'ಕರ್ತಾರನ ಕಮ್ಮಟ' ಕಾದಂಬರಿಯ ಕೊನೆಯಲ್ಲಿ ಬಸವಣ್ಣನವರು ಕಲ್ಯಾಣವನ್ನು ತೊರೆದು ಕಪ್ಪಡೆಗೆ ಹೋದಾಗ ಸಂಗಮನು ಚಿಕ್ಕವನಾಗಿರುವುದರಿಂದ ಮನೆಯ ವ್ಯವಹಾರವನ್ನೆಲ್ಲ ನೋಡಿಕೊಳ್ಳುತ್ತಾಳೆ. ಅವನು ವಯಸ್ಕನಾದ ಮೇಲೆ ಲಿಂಗೈಕ್ಯಳಾಗುತ್ತಾಳೆ.

**ಬಸವಣ್ಣ ಮತ್ತು ನೀಲಾಂಬಿಕೆ**

ನೀಲಾಂಬಿಕೆ ಬಿಜ್ಜಳ ಮಹಾರಾಜನ ತಂಗಿಯಾಗಿದ್ದು, ಅವಳು ಗಂಗಾಂಬಿಕೆಯ ಅತ್ಯಂತ ಪ್ರೀತಿಯ ಗೆಳತಿಯಾಗಿರುತ್ತಾಳೆ. ಬಸವಣ್ಣನನ್ನು ಬಿಜ್ಜಳನು ವಿಕ್ರಮಾದಿತ್ಯ ನಿಧಿಯ ಕುರಿತು ಚರ್ಚೆಗೆ ಕರೆದ ಸಭೆಯಲ್ಲಿ ಅಲ್ಲಿ ಕುಳಿತಿದ್ದ ನೀಲಾಲೋಚನೆ ಬಸವೇಶನಲ್ಲಿ ಅತೀವ ಪ್ರೀತಿ ತಳೆದಳು. ಒಂದು ವರ್ಷದ ಹಿಂದೆಯೆ ಸಂಗಮೇಶ್ವರದಲ್ಲಿ ಬಸವೇಶನನ್ನು ನೋಡಿದ ತಕ್ಷಣವೇ ತನ್ನ ಹೃದಯವನ್ನು ಅರ್ಪಿಸಿದ ನೀಲಾಲೋಚನೆ ಅಂದು ದೃಢ ನಿರ್ಧಾರ ಮಾಡಿಕೊಂಡು ಬಸವೇಶನಿಗೆ ತನ್ನ ತನುಮನವನ್ನು ಅರ್ಪಿಸಲು ಸಿದ್ಧಳಾದಳು. ಆ ರಾತ್ರಿಯೆ ವಟುವಿನ ವೇಷಧರಿಸಿ ಬಸವೇಶನನ್ನು ಮಹಾಮನೆಯಲ್ಲಿ ನೋಡಿ ತನ್ನ ಇಂಗಿತವನ್ನು ಬಸವೇಶನ ಮುಂದೆ ನಿವೇದಿಸಿಕೊಳ್ಳುತ್ತಾಳೆ. ಗಂಗಾಂಬಿಕೆ ಮತ್ತು ನಾಗಲಾಂಬಿಕೆಯರ ಪ್ರಯತ್ನದ ಫಲವಾಗಿ ಬಸವಣ್ಣನವರ ಜೊತೆ ಮದುವೆಯಾಗುತ್ತದೆ.

ಕರ್ತಾರನ ಕಮ್ಮಟದಲ್ಲಿ ನೀಲಾಲೋಚನೆಗೆ ಸಂಗ ಎಂಬ ಮಗುವು ಜನಿಸುತ್ತದೆ. ಅದನ್ನು ಗಂಗಾಂಬಿಕೆ ಮತ್ತು ನೀಲಾಂಬಿಕೆ ಇಬ್ಬರು ತಮ್ಮ ಮಗು ಎಂದೆ ಭಾವಿಸಿ ಆತ್ಮ ತೃಪ್ತಿಯಿಂದ ಜೀವನ ನಡೆಸುತ್ತಾರೆ. ಕರ್ತಾರನ ಕಮ್ಮಟದಲ್ಲಿ ಗಂಗಾಂಬಿಕೆಗೆ ತನಗೆ ಮಗುವಾಗಲಿಲ್ಲ ಎಂಬ ಕೊರಗು ಇಲ್ಲ. ಅಲ್ಲಿ ಸಂಗಯ್ಯ ಮಗುವೇ ಎಂದು ನಂಬಿದ ಉದಾತ್ತ ವ್ಯಕ್ತಿತ್ವವಿದ್ದರೆ, ಜಿ.ಎಚ್. ಹನ್ನೆರಡುಮಠರವರ ಕಲ್ಪನೆಯ ಗಂಗಾಂಬಿಕೆಗೆ ಮಗುವಾಗಲಿಲ್ಲ ಎಂದು ಕೊರಗು ಇದೆ.

ಬಸವಣ್ಣ ಐಕ್ಯವಾಗುವ ಸಮಯದಲ್ಲಿ ನೀಲಾಂಬಿಕೆ ಮತ್ತು ಗಂಗಾಂಬಿಕೆಯರನ್ನು ಸಂಗಮಕ್ಕೆ ಬರುವಂತೆ ಹೇಳಿ ಕಳಿಸುತ್ತಾರೆ. ಆ ಸಮಯದಲ್ಲಿ ಗಂಗಾ "ನಾವಿಬ್ಬರಿದ್ದರೆ ಅವರ ಬಳಿಯಲ್ಲಿ ಒಬ್ಬರು ಇಲ್ಲದಂತ ಆಗಬಾರದು ನಮ್ಮ ಕರ್ತವ್ಯವನ್ನು ಹಂಚಿಕೊಳ್ಳುವಾಗ ಅಕ್ಕ ನಾನು

ಶರಣರನ್ನು ಹಿಂಬಾಲಿಸಿ ಈ ಕಾಯಕದಲ್ಲಿ ದೇಹವಿಡುತ್ತೇನೆ. ನಮ್ಮಿಬ್ಬರ ಪರವಾಗಿ ನೀನು ಅವರ ಸೇವೆ ಮಾಡಬೇಕೆಂಬುದು ಪ್ರಾರ್ಥನೆ"[೨] ಎಂದು ಹೇಳುವಾಗ ಗಂಗಾಂಬಿಕೆ ಮತ್ತು ನೀಲಾಂಬಿಕೆಯರು ಎಷ್ಟೊಂದು ಅನ್ಯೋನ್ಯವಾಗಿದ್ದರು ಎಂಬುದು ತಿಳಿದುಬರುತ್ತದೆ. ಇಲ್ಲಿ ಅವರಿಬ್ಬರ ಬಾಂಧವ್ಯ ಅರ್ಥಪೂರ್ಣವಾಗಿ ಮೂಡಿಬಂದಿದೆ. ಬಸವಣ್ಣನು ಐಕ್ಯವಾಗುವ ಸಂದರ್ಭದಲ್ಲಿ ಅವರ ಕಳವಳ, ಸಾಮಾಜಿಕ ಚಿಂತನೆ ಗಮನಾರ್ಹವಾಗಿದೆ.

**ಬಸವಣ್ಣ ಮತ್ತು ಕಾಮೇಶ್ವರಿ**

ತೈಲಪನ ಮಹಾರಾಣಿಯಾದ ಕಾಮೇಶ್ವರಿ ಮತ್ತು ಬಸವಣ್ಣನವರು ಆ ಪಾತ್ರವನ್ನು ನೋಡಿರುವ ರೀತಿ ಈ ಮೂವರು ಕಾದಂಬರಿಯ ಹಿನ್ನೆಲೆಯಲ್ಲಿ ನೋಡಿದಾಗ ಅವರಿಬ್ಬರ ಭೇಟಿಯಾಗುವುದು. ತೈಲಪದೇವನು ಬನವಾಸಿಯನ್ನು ಬಿಟ್ಟ ಮೇಲೆ ಮಹಾರಾಜರನ್ನು ಅರಸಿ ಕಾಮೇಶ್ವರಿ ದೇವಿ ಬನವಾಸಿಗೆ ಬಂದು ಮಹಾದೇವ ಅರಸರ ಬಿಡಾರದಲ್ಲಿ ಉಳಿದು ತನ್ನ ಗೆಳತಿಯಾದ ಕುಸುಮವಳಿಯನ್ನು ಮತ್ತು ಬಸವಣ್ಣನವರನ್ನು ಸಂಧಿಸುವಂತೆ ಮಾಡುತ್ತಾಳೆ.

ಕಾಮೇಶ್ವರಿಯೂ ಕಂಚುಕಿಯೊಬ್ಬಳು ಚಾಲುಕ್ಯ ಬಿಡಾರದಲ್ಲಿ ನಿಮ್ಮ ಬರುವನ್ನೇ ನಿರೀಕ್ಷಿಸುತ್ತಿದ್ದಾಳೆ ಎಂಬ ಪಾತ್ರವನ್ನು ಬಸವನಿಗೆ ಕೊಟ್ಟಾಗ ಹಿಂದೆ-ಮುಂದೆ ನೋಡದೆ ಕಾಮೇಶ್ವರಿ ದೇವರನ್ನು ಕಾಣದ ತತ್‌ಕ್ಷಣವೇ ಬಸವೇಶನು ಹೊರಟನು. ಆದರೆ ಅಲ್ಲೊಂದು ವಿಚಿತ್ರಾನುಭವ ಬಸವೇಶನಿಗೆ ಕಾದಿರುತ್ತದೆ. ನಾಲ್ಕು ವಾರಗಳ ಸೇವೆ ನಡೆಸಿದ ಕುಸುಮಾವಳಿ ಬಸವೇಶ್ವರರಲ್ಲಿ ಅವ್ಯಕ್ತ, ಅನುರಾಗ ತಳೆದಿದ್ದಳು. ವಿರಹವನ್ನು ಹೋಗಲಾಡಿಸಿ ಪ್ರಿಯ ಸಂಗವನ್ನು ಕಲ್ಪಿಸಲು ರಾಣಿವೊಂದು ಓಟವನ್ನೇ ಹೂಡಿ ಬಸವೇಶನನ್ನು ಅರಮನೆಗೆ ಕರೆಸಿದಳು. ಮುಂದೆ ಬಸವಣ್ಣ ಕಾಮೇಶ್ವರಿ ಬಿಜ್ಜಳನನ್ನು ಕಲಚೂರಿಯರ ರಾಜ್ಯವನ್ನು ರಕ್ಷಣೆ ಮಾಡುವಲ್ಲಿ ಬಸವೇಶನ ಸಹಾಯವನ್ನು ಪಡೆಯಲು ಆಪೇಕ್ಷಿಸುತ್ತಾಳೆ.

ಈ ಪಾತ್ರವು ಬಿ. ಪುಟ್ಟಸ್ವಾಮಯ್ಯನವರು ನವೀನ ಸೃಷ್ಟಿ, ವಿಲಾಸ ಸ್ವಚ್ಛ ಪ್ರವೃತ್ತಿಗಳೇ ಇವಳ ಹುಟ್ಟು ಗುಣಗಳು. ಪುತ್ರಸಂತಾನಕ್ಕಾಗಿ ಮೈದುನನಾದ ಜಗದೇಕಮಲ್ಲನನ್ನು ಕೂಡುತ್ತಾಳೆ. ಶೀಲವಂತನ ಮೇಲಿನ ಅದಮ್ಯ ಪ್ರೇಮದಿಂದ ಕರುಣದೇವನ ತೋಳು ಸೆರೆಯಲ್ಲಿ ಬಂಧಿಯಾಗಲು ಒಪ್ಪುತ್ತಾಳೆ. ಬಿ. ಪುಟ್ಟಸ್ವಾಮಯ್ಯನರ ಕಾದಂಬರಿಗಳಲ್ಲಿ 'ಕಾಮೇಶ್ವರಿ' ಮುಖ್ಯ ಪಾತ್ರವಾಗಿ ಕಾಣಿಸಿಕೊಳ್ಳುತ್ತಾಳೆ.

**ಬಸವಣ್ಣ ಕುಸುಮಾವಳಿ**

ಈ ಪಾತ್ರವು ಬಿ. ಪುಟ್ಟಸ್ವಾಮಯ್ಯನವರು ಬರೆದ ನವೀನ ಸೃಷ್ಠಿ. ನಿಶ್ವಾರ್ಥ ಸೇವಾ ಮನೋಭಾವ ಹಾಗೂ ಸನ್ಯಾಸಿಯಾದ ಅಲ್ಲಮಪ್ರಭುದೇವರ ಮಾಯಾದೇವಿಯವರ ತಂಗಿ ಹಾಗೂ ಕದಂಬ ಕುಲದ ಕೀರ್ತಿಯ ದೇವ ಅರಸನ ಎರಡನೇ ಮಗಳು. ಮೊದಲನೆ ಮಗಳು ಕಾಮಲತೆ. ಅಕ್ಕ ಮರಣನಾದ ನಂತರ ಮಧುಕೇಶ್ವರ ನರ್ತಕಿ ಸ್ಥಾನವನ್ನು ಕುಸುಮಾವಳಿ ತುಂಬುತ್ತಾಳೆ. ಬಸವಣ್ಣನು ಸಂಧಾನಕಾರನಾಗಿ ಬನವಾಸಿಗೆ ಹೋದ ಸಂದರ್ಭದಲ್ಲಿ ತೈಲಪನ

ಮನವೊಲಿಸಲು ಅವನ ಸಾಮಂತ ದೊರೆಗಳಾದ ವಿಷ್ಣುಚಿತ್ತ ಪೆರ್ಮಡಿಯು ಭಟ್ಟರನ್ನು ಕಳುಹಿಸಿ ಬಸವೇಶನ ಮೇಲೆ ಬೀಳುವಂತೆ ಮಾಡುತ್ತಾನೆ. ಇದರಿಂದ ಬಸವಣ್ಣನಿಗೆ ಸಣ್ಣಪುಟ್ಟ ಗಾಯಗಳಾಗುತ್ತವೆ. ಅಂತಹ ಸಂದರ್ಭದಲ್ಲಿ ಸ್ವಯಂ ಕುಸುಮವಳಿಯು ಬಸವೇಶನ ಸೇವೆಗೆ ನಿರತಳಾಗುತ್ತಾಳೆ. ಈ ಸಮಯದಲ್ಲಿ ಕುಸುಮವಳಿಯಿಂದ ಅವಳ ಅಕ್ಕ ಅಲ್ಲಮಪ್ರಭುವಿನ ಮಾಹಿತಿಯನ್ನು ಪಡೆದುಕೊಳ್ಳುತ್ತಾಳೆ. ಮುಂದೆ ಬನವಾಸಿಗೆ ಬಂದಾಗ ಕಾಮೇಶ್ವರಿಯ ಕುತಂತ್ರದಿಂದ ಮತ್ತೆ ಕುಸುಮವಳಿಯನ್ನು ಕಾಣುವ ಸಂದರ್ಭ ಬರುತ್ತದೆ.

ಕಾಮೇಶ್ವರಿ ಮತ್ತು ಕುಸುಮವಳಿಯು ಅತ್ಯಂತ ಪ್ರೀತಿಯ ಸ್ನೇಹಿತೆಯರು. ಬಸವಣ್ಣನವರನ್ನು ಹೋಲಿಸಿಕೊಳ್ಳದ ಸಾಧ್ಯವಾಗದ ಸಂದರ್ಭದಲ್ಲಿ ಕುಸುಮಳಿ ಶೀಲವಂತನನ್ನು ಮುಗಿಸುತ್ತಾಳೆ. ಆಗ ಶರಣಾದೇವನು ಅವಳನ್ನು ಪಡೆಯಲೇಬೇಕೆಂಬ ಹಂಬಲ ಹೊಂದಿರುತ್ತಾನೆ. ಬಿಜ್ಜಳನ ಆಜ್ಞೆಯ ಮೇರೆಗೆ ಸೋಮೇಶ್ವರನ ಪಟ್ಟಾಭಿಷೇಕಕ್ಕೆ ಬಂದಾಗ ಕುಸುಮವಳಿ ಶರಣದೇವನ ಬಲತ್ಕಾರಕ್ಕೆ ಒಳಗಾಗಬೇಕಾಗುತ್ತದೆ. ಆದರೆ ದೂರದೃಷ್ಟಿ ಶೀಲವಂತನಿಂದ ರಕ್ಷಣೆ ಪಡೆಯುತ್ತಾಳೆ.

**ಬಸವಣ್ಣ ಮತ್ತು ಅಲ್ಲಮಪ್ರಭು**

ಬೆಳ್ಳಗಾವಿಯ ನಿರಾಂಕರಿ ಸುಜ್ಞಾನಿಗಳ ಮಗಳಾದ ಅಲ್ಲಮಪ್ರಭುದೇವರು ಬ್ರಹ್ಮಚಾರಿಗಳು ಅವರ ಪುರಾತನ ಕಾಲದಿಂದಲೂ ಬಂದ ಆಂಜನೇಯ ದೇವರ ಗುಡಿ ಮುಂದೆ ಮದ್ದಲಿಗೆ ಬಾರಿಸುವುದು. ಆತನ ದಿನದ ಕಾಯಕ ಹೀಗಿರುವಾಗ ಈತನ ರೂಪ ಲಾವಣ್ಯಕ್ಕೆ ಮನಸೋತ ಮಾಯಾದೇವಿ ಅಂದರೆ, ಕುಸುಮಾವಳಿಯ ಅಕ್ಕ ಕದಂಬ ಕುಲ ಕೀರ್ತಿಯ ದೇವ ಅರಸನ ಮೊದಲನೇ ಮಗಳು ವೈರಾಗ್ಯಿಯಾದ ಅಲ್ಲಮಪ್ರಭು ಅವಳ ಪ್ರೀತಿಯನ್ನು ನಿರಾಕರಿಸಿದಾಗ ವಿರಾಹ ಹೊಂದಿ ಸಾವನ್ನೊಪ್ಪುತ್ತಾಳೆ. ಆ ನೃತ್ಯಯನ್ನು ಮುಂದುವರಿಸಿದ ಕುಸುಮವಳಿಯಿಂದ ಬಸವಣ್ಣನವರು ಅಲ್ಲಮಪ್ರಭುವಿನ ವಿಚಾರವಾಗಿ ತಿಳಿದುಕೊಳ್ಳುತ್ತಾರೆ. ಅವರನ್ನು ಮೊದಲು ಸಂದರ್ಶಿಸಿದ್ದು ಬಸವಣ್ಣನವರ ಅಳಿಯನಾದ ಚೆನ್ನಬಸವಣ್ಣನವರು ವಿದ್ಯಾಭ್ಯಾಸ ಮಾಡಲು ಬಳ್ಳಿಗಾವಿಯಲ್ಲಿ ಇರುತ್ತಾನೆ. ಇಲ್ಲಿಗೆ ಬಸವಣ್ಣನವರು ಹೋದಾಗ ಅವರನ್ನು ಭೇಟಿ ಮಾಡಿ ಅವರ ಪ್ರತಿಭೆಯನ್ನು ಗಮನಿಸಿ ಕಲ್ಯಾಣದ ಅನುಭವ ಮಂಟಪದ ಪೀಠಾಧ್ಯಕ್ಷರನ್ನಾಗಿ ನೇಮಕ ಮಾಡುತ್ತಾರೆ. ಅಲ್ಲಮಪ್ರಭು ಬಸವಣ್ಣ ಮತ್ತು ಅಕ್ಕಮಹಾದೇವಿಯರ ಸಂವಾದಗಳು ಸಮಾಜದಲ್ಲಿರುವ ಕಂದಾಚಾರಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವುದು ಕಾಣುತ್ತೇವೆ.

**ಬಸವಣ್ಣ ಮತ್ತು ಚೆನ್ನಬಸವಣ್ಣ**

ವೈರಾಗ್ಯಗಳ ಜ್ಞಾನನಿಧಿ ಅಲ್ಲಮಪ್ರಭುದೇವರಿಂದ ಶ್ರೇಷ್ಠ ಗುರುವಿನ ಸ್ಥಾನವನ್ನು ಪಡೆದ ಚೆನ್ನಬಸವಣ್ಣನವರು ಬಸವಣ್ಣನವರ ಅಕ್ಕನಾದ ನಾಗಲಾಂಬಿಕೆಯ ಮಗ ತಂದೆ ಶಿವಮಾಯ ಅಕಾಲ ಮೃತ್ಯುವಿಗೆ ಒಳಗಾದ ನಂತರ ಚೆನ್ನಬಸವಣ್ಣನು ಬಸವಣ್ಣನವರನ್ನು ಆಶ್ರಯಿಸುತ್ತಾನೆ. ಬಳ್ಳಿಗಾವಿಯಲ್ಲಿ ವಿದ್ಯಾಭ್ಯಾಸವನ್ನು ಪಡೆದು ಪರಿಣಿತನಾಗಿ ಕಲ್ಯಾಣಕ್ಕೆ ಬಂದಾಗ ಅನುಭವ ಮಂಟಪದಲ್ಲಿ ಸಂವಾದದಲ್ಲಿ ಪಾಲ್ಗೊಳ್ಳುತ್ತಾನೆ. ಸಿದ್ದರಾಮನಿಗೆ ಲಿಂಗದೀಕ್ಷೆಯನ್ನು ಕೊಡುತ್ತಾನೆ.

ಮುಂದೆ ಬಸವಣ್ಣನವರು ಬಿಜ್ಜಳ ಸಾಮ್ರಾಜ್ಯವನ್ನು ತೊರೆದಾಗ ಬಿಜ್ಜಳನು ಅವರನ್ನು ಕರೆಸಿ ಬಸವಣ್ಣನವರಿಂದ ಖಾಲಿಯಾದ ಸ್ಥಾನವನ್ನು ತಾವು ನಿರ್ವಹಿಸಬೇಕೆಂದು ವಿನಂತಿಸಿಕೊಳ್ಳುತ್ತಾನೆ. ಆಗ ಚೆನ್ನಬಸವಣ್ಣ ರಾಜನ ಮಾತಿಗೆ ಮನ್ನಿಸಿ. ಆ ರಾಜ್ಯ ಪರಿಷತ್ತಿನ ನಿರ್ವಹಣೆ ಒಪ್ಪಿಕೊಳ್ಳುತ್ತಾನೆ. ಶೀಲವಂತ ಮತ್ತು ಲಾವಣ್ಯ ವತಿಯರ ಮದುವೆಯಿಂದ ಯುದ್ಧ ಕೋಲಾಹಲದ ಬಗ್ಗೆ ನ್ಯಾಯಾಧೀಶರಾಗಿ ವೈದ್ಯಕೀಯ ಸಂಪ್ರದಾಯವನ್ನು ಕಿತ್ತೊಗೆಯುವ ಪ್ರಯತ್ನವನ್ನು ಮಾಡುತ್ತಾರೆ. ಅದರ ತೀರ್ಪು ಶೀಲವಂತನ ಪರವಾಗಿ ಇರುತ್ತದೆ. ಮುಂದೆ ಬಸವಣ್ಣನವರು ಕಪ್ಪಡಿಗೆ ಬಂದ ಮೇಲೆ ಕಲ್ಯಾಣದಲ್ಲಿ ರಾಜಪ್ರಭುತ್ವದ ವಿರುದ್ಧ ಶರಣರ ಕ್ರಾಂತಿ ಉಲ್ಬಣಗೊಳ್ಳುತ್ತದೆ. ಆಗ ಮಾದರಸರ ಪರವಾಗಿ ಹೋರಾಟದ ಮುಂಚೂಣಿ ಯಲ್ಲಿರುತ್ತಾರೆ. ಬಸವಣ್ಣನ ತೀವ್ರ ಪ್ರಭಾವಕ್ಕೆ ಒಳಗಾಗಿರುವ ಚೆನ್ನಬಸವಣ್ಣನಲ್ಲಿ ಬಸವಣ್ಣನವರ ತತ್ವದ ವಿಚಾರಗಳು ಸಾಬೀತಾಗುತ್ತವೆ.

"ಚೆನ್ನಬಸವ : ಭಕ್ತಿಯ ಕುಳಸ್ಥಳವನ್ನು
ಮರ್ತ್ಯಲೋಕದಲ್ಲಿ ಹರಹಲೆಂದು
ಬಂದನಯ್ಯಾ ಬಸವಣ್ಣನು
ಆಚಾರದ ಶಿವಾಚಾರದ ಮುಂದಣ ಕನ್ನಡವ ಕಳೆದು
ಕರತಾಳಮಲಕ ಮಾಡಿದನಯ್ಯಾ ಬಸವಣ್ಣನು
ಕೂಡಲ ಚೆನ್ನಸಂಗಮದೇವರಲ್ಲಿ ಬಸವಣ್ಣನ ನಿಲವ
ಹೊಗಳುವರೆ ಎನ್ನಳವಲ್ಲ, ನಿನ್ನಳವಲ್ಲ, ಕೇಳಾ ಪ್ರಭುವೆ".[೩]

ಹೀಗೆ ಚೆನ್ನಬಸವಣ್ಣನು ಅನುಭವಮಂಟಪದ ಸಕಲ ವಿಚಾರಗಳಲ್ಲಿ ಬಸವಣ್ಣನ ಅಣತಿಯಂತೆ ಕೆಲಸ ಕಾರ್ಯಗಳಲ್ಲಿ ತೊಡಗುತ್ತಾನೆ. ಮಹಾಮನೆಯ ರಚನಾತ್ಮಕ ಕಾರ್ಯಗಳಲ್ಲಿ ಕೇಂದ್ರಬಿಂದು ವಾಗಿ ಕಾಣಿಸಿಕೊಳ್ಳುತ್ತಾ ಹೋಗುತ್ತಾನೆ. ಜನಪ್ರಿಯ ಪಠ್ಯಗಳು ಸುಖಾಂತಗೊಳಿಸಬೇಕೆಂಬ ಕಾರಣಕ್ಕಾಗಿ ಚೆನ್ನಬಸವಣ್ಣನನ್ನು ಬಸವಣ್ಣನ ಉತ್ತರಾಧಿಕಾರಿಯನ್ನಾಗಿ ಚಿತ್ರಿಸಿರುವುದನ್ನು ಮನಗಾಣಬಹುದು.

### ಬಸವಣ್ಣ ಮತ್ತು ತೈಲಪ

ಚಾಲುಕ್ಯರ ಶ್ರೇಷ್ಠ ದೊರೆಯಾದ ೨ನೇ ತೈಲಪನು ವಿಲಾಸಿಯಾಗಿ ಸ್ತ್ರೀಯರ ವ್ಯಾಮೋಹದಲ್ಲಿ ಮುಳುಗಿ ರಾಜ್ಯವು ಅರಾಜಕತೆಯಲ್ಲಿ ತೇಲಾಡುತ್ತದೆ. ಅಂತಹ ಸಂದರ್ಭದಲ್ಲಿ ಪಟ್ಟದ ರಾಣಿಯನ್ನು ತೊರೆದು ಅಫ್ರೊಡೈಟ್ ಮತ್ತು ಪಾಟಿಯಾಲ ಇಬ್ಬರ ಪ್ರೇಯಾಸಿಯೊಂದಿಗೆ ಬನವಾಸಿಗೆ ಬರುತ್ತಾನೆ. ಬನವಾಸಿಯಲ್ಲಿ ವಿಕ್ರಮಾದಿತ್ಯನ ನಿಧಿ ಸಂಗ್ರಹವನ್ನು ತೆಗೆದುಕೊಂಡು ಗೋಕರ್ಣಕ್ಕೆ ಮರಳುತ್ತಾನೆ. ಗೋಕರ್ಣಕ್ಕೆ ಹೋಗುವ ಮಧ್ಯದಲ್ಲಿ ಗಜಪತಿ ಪೊಲ್ಲರಾಜನ ಶಿಬಿರದ ಮತಿ ಕೈಸೆರೆಯಾಗುತ್ತಾನೆ. ಅದೇ ಸಮಯದಲ್ಲಿ ಬಸವಣ್ಣನು ಪೊಲ್ಲರಾಜ ಮತ್ತು ರಾಚಮಲ್ಲನನ್ನು ಸಂದಿಸಿ ನಿಜಸ್ಥಿತಿಯನ್ನು ಹರಿದು ತೈಲಪನನ್ನು ಬಿಡುಗಡೆ ಮಾಡುತ್ತಾನೆ. ಆನಂತರ ತೈಲಪ ದೇವನನ್ನು ತುಂಗಭದ್ರೆಯ ನಡುಗಡ್ಡೆಯ ಮೇಲಿದ್ದ ವಿಹಾರದಲ್ಲಿ ಕಂಡು ಬನವಾಸಿಯಲ್ಲಿ

ಅರ್ಧಕ್ಕೆ ನಿರತ ಧೂತ ಕಾರ್ಯವನ್ನು ಯಶಸ್ವಿಯಾಗಿ ನಡೆಸಿ ತೈಲಪನಿಂದ ನಿರೂಪವೊಂದನ್ನು ಬರೆಸಿದನು. ನಿರೂಪದಲ್ಲಿ ತೈಲಪದೇವ ತನ್ನೆಲ್ಲ ಅಧಿಕಾರವನ್ನು ಬಿಜ್ಜಳನಿಗೆ ಕೊಟ್ಟಿರುವುದಾಗಿ ಕೀರ್ತಿವರ್ಮ ರಾಜ್ಯದ ಉತ್ತರಾಧಿಕಾರಿಯೆಂದು ತನ್ನ ಜೀವಿತದ ಉಳಿದ ಕಾಲವನ್ನು ಕಂಪನಿ ದುರ್ಗದಲ್ಲಿ ಕಳಿಯುವುದಾಗಿಯೂ ತೀರ್ಮಾನಿಸಿರುತ್ತಾರೆ. ಬಸವೇಶ ಈ ವಿಷಯ ಹೊತ್ತು ಹೋರಾಟ ಸಂದರ್ಭದಲ್ಲಿ ಮಾಂಡಲೀಕರೆಲ್ಲರಿಗೂ ಒಂದು ಬಗೆಯ ಸಂತೃಪ್ತಿ ತಂದಿರುತ್ತದೆ. ಬಿಜ್ಜಳನ ರಾಜನೀತಿ ದಕ್ಷತೆಯನ್ನು ಕಂಡು ಜನ ತಲೆದೂಗಿದರು.

**ಬಸವಣ್ಣ ಮತ್ತು ಅಪ್ರೊಡೈಟ್**

ತೈಲಪದೇವನು ಕಲ್ಯಾಣದಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಹೆಸರಿಗೆ ಮಾತ್ರ ದೊರೆಯಾಗಿದ್ದನು. ತೈಲಪನು ಹೊಯ್ಸಳ ವೀರ ನರಸಿಂಹ ೩೮೪ ಜನ ಗಣಿಕೆಯರಿಗೆ ಒಡೆಯನಾಗಿ ಇನ್ನೂ ಸ್ತ್ರೀರತ್ನಗಳಿಗಾಗಿ ಚಪ್ಪನ್ನು ದಶಗಳನ್ನು ಶೋಧಿಸುತ್ತಿರುವುದನ್ನು ಕೇಳಿ ಚಿಂತೆಗೆ ಒಳಗಾದನು. ಅವನ ಸಂಖ್ಯೆಯನ್ನು ಮೀರಿಸುವ ಗಣಕಿಯರನ್ನು ಕಲೆ ಹಾಕಬೇಕೆಂಬ ಯೋಚನೆಯಲ್ಲಿ ನಿರತನಾದ ತೈಲಪನು ಪಾರೆಶಿ ವರ್ಣಿಕನೊಬ್ಬನು ಅಲೆಗ್ಸಾಂಡಿಯಾದ ಗುಲಾಮ ಮಾರುಕಟ್ಟೆಯಲ್ಲಿ ಕೊಂಡ ಮೆಸಿಡೊನಿಯ ರಾಜಕುಲದಲ್ಲಿ ಹುಟ್ಟಿದ ಕನ್ಯಾ ಅಪ್ರೊಡೈಟ್‌ಳ ನೃತ್ಯ ಸೌಂದರ್ಯಗಳಿಗೆ ಮಾರು ಹೋದನು. ಪ್ರಿಯಿಕ್ಕೆ ಪಾಟಲಿಕೆಯಿಂದ ಅವಳ ಬೆಲೆ ೩೦,೦೦೦ ವರಗಳೆಂದು ತಿಳಿದ ರಾಜ ಅವಳನ್ನು ಕೊಳ್ಳಲು ಆ ರಾಮನೆಯ ಕೋಶಗಾರದಲ್ಲಿ ಹಣವಿರುವುದಿಲ್ಲ. ಆಗ ಅವಳನ್ನು ಮಾರಲು ಬಂದವನನ್ನು ಬಂಧಿಸಿ ಅವಳನ್ನು ಪಡೆಯಲು ಅವಾಣಿಕೆಯಲ್ಲಿರುತ್ತಾನೆ. ಅದೇ ಸಂದರ್ಭದಲ್ಲಿ ಬಿಜ್ಜಳನು ತೈಲಪನ್ನು ಸಂದರ್ಶಿಸಲು ಬಂದಾಗ ಮುಂಗಡ ಹಣವನ್ನು ಪಡೆದುಕೊಳ್ಳುತ್ತಾನೆ. ಹಾಗೆ ಪಡೆದಂತಹ ಅಪ್ರೊಡೈಟ್‌ಳ ಸೌಂದರ್ಯದ ಮತ್ತೆಯಲ್ಲಿ ಮುಳುಗಿದ ತೈಲಪನು ಎಚ್ಚರಿಸುವ ಗೋಸ್ಕರ ಪಟ್ಟದ ರಾಣಿ ಕಾಮೇಶ್ವರಿಯು ವಿಲಾಸ ಪ್ರಿಯತೆಯನ್ನು ಕಡಿಮೆ ಮಾಡಿ ಎಂದು ಬೇಡಿಕೊಳ್ಳುತ್ತಾಳೆ.

ಮುಂದೆ ತೈಲಪನು ಬನವಾಸಿಗೆ ಬಂದಂತಹ ಸಂದರ್ಭದಲ್ಲಿ ಅವನ ಪ್ರೇಯಸರಾದ ಅಪ್ರೊಡೈಟ್ ಮತ್ತು ಪಾಟಲಿಕೆಯು ಬರುತ್ತಾರೆ. ಒಂದು ದಿನ ಸಮುದ್ರ ವಿಹಾರಕ್ಕಾಗಿ ಹೋದಾಗ ಸುಳಿಯಲ್ಲಿ ಸಿಕ್ಕು ಹರಿದುಕೊಂಡು ಹೋಗುವಾಗ ಓರ್ವ ಸನ್ಯಾಸಿಯಿಂದ ಅವಳ ರಕ್ಷಣೆಯಾಗುತ್ತದೆ. ಆತ ಬೇರೆ ಯಾರು ಅಲ್ಲ. ಅಲ್ಲಮಪ್ರಭು ತೈಲಪನು ಮರಣನಾದ ನಂತರ ಇಬ್ಬರು ಪ್ರೇಯಸಿಯರು ತಮ್ಮ ಜೀವನವನ್ನು ನಡೆಸುವುದಕ್ಕೋಸ್ಕರ ಕಾಶ್ಮೀರದಿಂದ ಬಂದಿದ್ದ ಮಾರಸಿಂಹನ ಮಡದಿಯರಾಗಲು ಒಪ್ಪಿಕೊಳ್ಳುತ್ತಾರೆ. ಮಾರಸಿಂಹ ಪ್ರೇಮಾವತಿಯ ಸರಳ ನಡತೆ ನಿಷ್ಕಲ್ಮತ ಜೀವನವನ್ನು ನೋಡಿ ಅವಳ ಮದುವೆಯಾದವರಂತೆ ನಡೆಸಿಕೊಳ್ಳಲು ಒಪ್ಪಿದನು. ಪಾಟಲಿಕೆಯ ಮಾರಸಿಂಹ ಪ್ರೇಯಸಿಯಾದಳು. ನವರಾತ್ರಿಯಲ್ಲಿ ಸೋಮೇಶನ ಪಟ್ಟಾಭಿಷೇಕ ಸಮಾರಂಭಕ್ಕೆ ಮಾರಸಿಂಹನಿಗೂ ಆಹ್ವಾನ ಹೋಗುತ್ತದೆ. ಆ ರಾಜ್ಯ ಸಭೆಗೆ ತನ್ನಿಬ್ಬರ ಅರಸಿಯರನ್ನು ಕರೆದುಕೊಂಡು ಬಂದಿರುತ್ತಾನೆ. ಇದನ್ನು ಕಂಡ ನಾರಾಯಣ ಕ್ರಮಿತ ಮಂಚಣ್ಣ ಪ್ರಮಿತ

ಶರಣದೇವ ಸಿಡಿದೆದ್ದು ಬಿಜ್ಜಳನಿಗೆ ವಿಚಾರ ನಡೆಸಲು ಮನವಿ ಮಾಡುತ್ತಾರೆ. ಆಗ ಆ ವಿಚಾರಣೆಯ ನ್ಯಾಯಾಧೀಶರ ಸ್ಥಾನವನ್ನು ಬಸವಣ್ಣನವರು ವಹಿಸಿಕೊಳ್ಳುತ್ತಾರೆ.

ವಿಚಾರಣೆ ನಡೆದ ನಂತರ ಪಾಟಲಿಕೆ ಮತ್ತು ಪ್ರೇಮಾವತಿಯರ ನಡತೆ ಸಭ್ಯೆ ಮಹಿಳೆಯರನ್ನು ನಾಚಿಸುವಂತಿದೆ. ತನ್ನ ಕುಟುಂಬದವರಂತೆ ಕಾಣುತ್ತಿರುವುದು ನ್ಯಾಯಬಾಹಿರವೆಲ್ಲ ಎಂದು ಘೋಷಿಸಿದರು. ಇದನ್ನು ಕೇಳಿದ ನಾರಾಯಣ ಕ್ರಮಿತರು ಬಸವಣ್ಣನ ಮೇಲೆ ಕೋಪಗೊಳ್ಳುತ್ತಾರೆ. ಬಸವೇಶ್ವರರ ನ್ಯಾಯಾ ತೀರ್ಪನ್ನು ಕೇಳಿ ಬಸವಣ್ಣನವರ ಮಹಾಮನೆಗೆ ಹೋಗಿ ಬರುತ್ತಿದ್ದಳು. ಗೋಕರ್ಣಯಲ್ಲಿ ತನ್ನನ್ನು ರಕ್ಷಿಸಿದ ವೀರ ಸನ್ಯಾಸಿಯಾದ ಅಲ್ಲಮನ ಮೂರ್ತಿಯನ್ನು ರಚಿಸಿ, ನಿತ್ಯ ಪೂಜಿಸುತ್ತಿದ್ದಳು. ಇದನ್ನು ಕಂಡ ಮಾರಸಿಂಹ ಆ ಮೂರ್ತಿಯನ್ನು ಕಡೆದು ಉರುಳಿಸಿದ ಆಗ ಪ್ರೇಮಾವತಿಯ ಪ್ರಾಣ ಹಾರಿಹೋಯಿತು. ಒಂದೇ ದೇಹದಂತಿದ್ದ ಪಾಟಲಿಕೆಯ ಪ್ರಾಣವು ಹಾರಿ ಹೋಗುತ್ತದೆ. ಆಗ ಮಾರಿಸಿಂಹನು ಸನ್ಯಾಸನಿ ದೀಕ್ಷೆಯನ್ನು ತೊಡುತ್ತಾನೆ.

## ಬಸವಣ್ಣ ಮತ್ತು ಶೀಲವಂತ

ಈ ಮೂರು ಕಾದಂಬರಿಗಳಲ್ಲಿ ಸ್ತ್ರೀ ವ್ಯಾಮೋಹದ ಇನ್ನೊಂದು ಪಾತ್ರವೇ ಮಾದರಸ ಅರಳಯ್ಯನ ಮಗನಾದ ಶೀಲವಂತನು. ಮಾದರಸನ ಮಗಳಾದ ಲಾವಣ್ಯವತಿಯನ್ನು ಪ್ರೀತಿಸಿ ಮುಂದೆ ಅವಳನ್ನು ಮದುವೆಯಾಗುವ ಸಂದರ್ಭ ಬರುತ್ತದೆ. ಅವನ ಅದ್ಭುತ ಕಲೆಗಾರಿಕೆಗೆ ಮನಸೋಲುವರೆ ಇರುವುದಿಲ್ಲ. ಅವನು ಬಿಡಿಸಿರುವ ಚಿತ್ರವನ್ನು ಬಸವಣ್ಣನವರು ಸಹ ಮೆಚ್ಚಿಕೊಳ್ಳುತ್ತದೆ. ಆ ಚಿತ್ರಗಳನ್ನು ಬಿಜ್ಜಳನ ಅನುಮತಿಯನ್ನು ಪಡೆದು ಅರಮನೆಯಲ್ಲಿ ಸಂಗ್ರಹಿಸಿರುವುದರಿಂದ ಶೀಲವಂತನು ಆರ್ಥಿಕವಾಗಿ ಸಬಲನಾಗುತ್ತಾನೆಂಬುದನ್ನು ಬಸವಣ್ಣನವರು ಮನಗಂಡಿದ್ದರು. ಶೀಲವಂತನು ತನ್ನ ಚಿತ್ರಕಲಾ ನೈಪುಣ್ಯತೆಯಿಂದ ತೈಲಪನ ಮಹಾರಾಣಿಯಾದ ಕಾಮೇಶ್ವರಿಯನ್ನು ಸಹ ಮೆಚ್ಚುವಂತೆ ಮಾಡಿದ್ದನು. ಶೀಲವಂತನನಿಗೆ ಹಾವು ಕಡಿದಾಗ ವಿಷ ಹೇರಿದಾಗ ಅದನ್ನು ಕುಸುಮಾವಳಿ ಹಲ್ಲಿನಿಂದ ಕಚ್ಚಿ ತಾನು ಸತ್ತು ಅವನು ಉಳಿಯುವಂತೆ ಮಾಡುತ್ತಾಳೆ.

ಶೀಲವಂತ ಪಾತ್ರವು ಬಿ. ಪುಟ್ಟಸ್ವಾಮಯ್ಯನವರ ಕಾದಂಬರಿಗಳಲ್ಲಿ ಪ್ರಮುಖ ಪಾತ್ರವಾಗಿ ಕಾಣಿಸಿಕೊಂಡಿದೆ. ಇಲ್ಲಿಯ ಶೀಲವಂತ ಪ್ರಸಿದ್ಧ ಚಿತ್ರಕಲಾವಿದನಾಗಿ ಕಂಗೊಳಿಸುತ್ತಾನೆ. ವರ್ಣಸಂಕರ ವಿವಾಹದ ಸಂದರ್ಭ ಬಂದಾಗ ಪುರೋಹಿತಶಾಹಿಗಳ ನ್ಯಾಯಮಂಡಳಿ ಕೈಯಲ್ಲಿ ಬಲಿಪಶುವಾಗಿ ಕಾಣಿಸಿಕೊಳ್ಳುತ್ತಾನೆ. ಕ್ರಮಿತನು ಶೀಲವಂತನ ಮೇಲೆ ಹೊರಿಸುವ ಅಪರಾಧ ಇಲ್ಲಿ ಕಾಣಬಹುದು.

"ಕ್ರಮಿತ : ಅಂತ್ಯಜನಾದ ನೀನು ನಿನ್ನ ರೂಪ ಯೌವ್ವನ ಅಭಿಜ್ಞತೆಗಳಿಂದ ಉತ್ತಮ ವರ್ಣದ ಕುಲೀನ ಸ್ತ್ರೀಯರನ್ನು ಆಕರ್ಷಿಸಿ, ಅವರ ಶೀಲಭಂಗ ಮಾಡಿ ವರ್ಣಸಂಕರದ ಈ ವ್ಯವಹಾರದಲ್ಲಿ ಪ್ರಮುಖ ಪಾತ್ರವಹಿಸಿರುವೆ.[೪]

ಹೀಗೆ ನ್ಯಾಯಮಂಡಳಿಯು ಕೊನೆಗೆ ಶೀಲವಂತನನ್ನು ಅಪರಾಧಿಯೆಂದು ಪರಿಗಣಿಸಿ, ಶಿಕ್ಷೆ ವಿಧಿಸುವುದನ್ನು ಕಾಣುತ್ತೇವೆ. ಶೀಲವಂತ ಪಾತ್ರವು ಇಡೀ ತಳಸಮುದಾಯದಲ್ಲಿ ಬದುಕುವ ಮುಗ್ಧರನ್ನು ಪ್ರತಿನಿಧಿಸುತ್ತಾರೆ.

### ಬಸವಣ್ಣ ಮತ್ತು ಲಾವಣ್ಯವತಿ

ಲಾವಣ್ಯವತಿಯು ಲಾವರಸನ ಏಕೈಕ ಮಗಳು. ಇವಳು ಮಾದರ ಅರಳಯ್ಯನ ಮಗಳಾದ ಶೀಲವಂತನಿಗೆ ಮನಸೋತಿದ್ದನು. ಈ ಮೂರು ಕಾದಂಬರಿಕಾರರಲ್ಲಿ ಲಾವಣ್ಯವತಿಯ ಪಾತ್ರ ಬರುತ್ತದೆ. ಗಂಗಾಂಬಿಕೆ, ನೀಲಾಂಬಿಕೆ ಲಾವಣ್ಯವತೀಯರು ಸ್ನೇಹಿತೆಯರು ಮತ್ತು ಉನ್ನತ ಕುಲದಲ್ಲಿ ಹುಟ್ಟಿರುವಂತರು. ಆದರೆ, ಬಸವಣ್ಣನವರ ಸಾಮಾಜಿಕ ಪರಿವರ್ತನ ಚಳುವಳಿಯಿಂದಾಗಿ ಇವರಿಬ್ಬರು ತಂದೆ ತಾಯಿಗಳನ್ನೊಪ್ಪಿಸಿ ಮದುವೆಯಾಗುತ್ತಾರೆ. ಮುಂದೆ ಬಸವಣ್ಣನವರು ಅವರಿಗೆ ಆಶೀರ್ವದಿಸಿ ಚಿರಕಾಲ ಬಾಳಿರೆಂದು ಹೇಳುತ್ತಾರೆ. ಈ ಒಂದು ಕಾರಣದಿಂದಾಗಿ ಕಲ್ಯಾಣದಲ್ಲಿ ರಾಜಪ್ರಭುತ್ವ ಮತ್ತು ಶರಣರ ಕ್ರಾಂತಿ ಬಿರುಗಾಳಿಯಂತೆ ಹರಡುತ್ತದೆ. ಅನೇಕ ಶರಣರು ಕಲ್ಯಾಣವನ್ನು ತೊರೆದು ಬಿಜ್ಜಳನ ಅವನತಿಯು ಆಗುತ್ತದೆ.

ಒಟ್ಟಾರೆಯಾಗಿ ಬಸವಣ್ಣನವರನ್ನು ಕುರಿತು ಬಂದಿರುವ ಕಾದಂಬರಿಗಳನ್ನು ಅವಲೋಕನ ಮಾಡಿದಾಗ ಬಸವಣ್ಣನವರು ಸಾಮಾಜಿಕ ಬದಲಾವಣೆ, ರಾಜಕೀಯ ಬದಲಾವಣೆ, ಶೈಕ್ಷಣಿಕ ಬದಲಾವಣೆಯನ್ನು ತರುವ ಮನೋಭಾವವನ್ನು ಹೊಂದಿರುವುದರಿಂದ ಹಲವಾರು ಪಾತ್ರಗಳನಲು ಅವರು ನೋಡಿರುವ ರೀತಿ ಸಮಯ ಸಂದರ್ಭ ಕಾಲ ಇವುಗಳ ಆಧಾರದ ಮೇಲೆ ವಿಷಯ ವಸ್ತು ನಿಂತಿದೆ. ಹಾಗೇನೆ ಸಾಮಾಜಿಕ ಪರಿವರ್ತನೆಯ ಹರಿಕಾರನಾದ ಬಸವಣ್ಣನನ್ನು ಇತರ ಪಾತ್ರಗಳು ಪವಾಡ ಪುರುಷನೆಂಬುವಂತೆ ದೈವ ಪುರುಷನೆಂಬುವಂತೆ ಕಾಣುತ್ತವೆ.

**ಕೊನೆಟಿಪ್ಪಣಿಗಳು**

೧. ಬಿ. ಪುಟ್ಟಸ್ವಾಮಯ್ಯ, ೨೦೦೩, **ಉದಯರವಿ,** ಪುಟ ೧೫೫.

೨. ತಿಪ್ಪೇರುದ್ರಸ್ವಾಮಿ, ೧೯೮೯, **ಕರ್ತಾರನ ಕಮ್ಮಟ,** ಪುಟ ೮೦೮.

೩. ಅ.ನ.ಕೃ. ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೧೨೦-೧೨೧.

೪. ಬಿ. ಪುಟ್ಟಸ್ವಾಮಯ್ಯ, **ಕ್ರಾಂತಿಕಲ್ಯಾಣ,** ೨೦೦೪, ಪುಟ ೨೫೧.

□□□

## ಅಧ್ಯಾಯ : ಏಳು

# ಉಳಿದ ಪಾತ್ರಗಳು ಬಸವಣ್ಣನನ್ನು ನೋಡುವ ರೀತಿ

ಸೃಜನಶೀಲ ಪಠ್ಯಗಳಿಗೆ ಪಾತ್ರಗಳೇ ಜೀವಾಳ. ಪಾತ್ರಗಳ ಮೂಲಕ ಸಮಾಜದಲ್ಲಿ ನಡೆಯುವ ಮತಾಂಧತೆ, ಭ್ರಷ್ಟಾಚಾರ ಮತ್ತು ರಾಜಕೀಯ ಸನ್ನಿವೇಶಗಳನ್ನು ಬಹುಮುಖವಾಗಿ ತಿಳಿಸುವಲ್ಲಿ ಪಾತ್ರಗಳು ಜೀವಂತವಾಗುತ್ತವೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಗಮನಿಸಿದಂತೆ ಬಸವಣ್ಣನವರದು ಬಹುಮುಖ ಪ್ರತಿಭೆ ಮತ್ತು ವ್ಯಕ್ತಿತ್ವ ಅನಾವರಣಗೊಳ್ಳುವಲ್ಲಿ ವಿವಿಧ ಮುಖಗಳಾಗಿ ಉಳಿದ ಪಾತ್ರಗಳು ಕಾಣಿಸಿಕೊಳ್ಳುತ್ತಾ ಹೋಗುತ್ತವೆ. ಏಕೆಂದರೆ ಪ್ರತಿಯೊಬ್ಬ ಮನುಷ್ಯ ಹುಟ್ಟುತ್ತಾನೆ, ಸಾಯುತ್ತಾನೆ. ಆದರೆ ಅವೆರಡರ ಮಧ್ಯೆ ಬದುಕುವ ಮನುಷ್ಯ ತನ್ನ ವ್ಯಕ್ತಿತ್ವದ ಮೂಲಕ ಸಮಾಜಕ್ಕೆ ಪರಿಚಯವಾಗುತ್ತಾನೆ. ಕ್ರಿ.ಪೂ. ಬುದ್ಧನ ನಂತರ ಸಮಾಜದಲ್ಲಿ ಬಹುಮುಖ ವ್ಯಕ್ತಿತ್ವದ ಪ್ರತಿಭೆ ಎಂದರೆ ಬಸವಣ್ಣ. ಈತನು ಬದುಕಿದ್ದ ಕಾಲ ರಾಜ್ಯದ ಆಳರಸರ ಸಂದರ್ಭದಲ್ಲಿ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನ ವ್ಯಕ್ತಿತ್ವಕ್ಕನುಗುಣವಾಗಿ ಅಧಿಕಾರ ದಕ್ಕುತ್ತದೆ. ಆದರೆ ಅಧಿಕಾರದ ಆಸೆಗೆ ಬೆನ್ನತ್ತದೆ, ಅದರ ಮೂಲಕ ಸಮಾಜ, ಧರ್ಮ ಮತ್ತು ರಾಜಕೀಯ ಅವಿವೇಕತನದ ಪರಮಾವಧಿಗೆ ತೆರೆ ಎಳೆಯುತ್ತಾ ಬಂದಿದ್ದಾನೆ. ಹೀಗಾಗಿ ಬಸವಣ್ಣನವರು ತಮ್ಮ ಅಂತರಂಗದ ಶುದ್ಧಿಯ ಮೂಲಕ 'ದಯವೇ ಧರ್ಮದ ಮೂಲವಯ್ಯ' ಎಂಬ ಸಿದ್ಧಾಂತವನ್ನು ಬೋಧಿಸಿ ಸಕಲ ಜೀವಿಗಳಿಗೆ ದಯೆ ತೋರಿಸಿದ ಮಹಾಪುರುಷ. ಅಷ್ಟೇ ಅಲ್ಲದೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ಚತುರ್ವರ್ಗಗಳನ್ನು ನಾಶ ಮಾಡಿ ಮಾನವ ಕುಲ ಒಂದೇ ಎಂದು ಸಾರಿ ಇಂದಿಗೂ ಉಳಿದುಕೊಂಡಿದ್ದಾನೆ. ಉಚ್ಚ ಸಂಸ್ಕೃತಿಯ ಅಡಿಯಲ್ಲಿ ಬದುಕುವ ಬಹುಸಂಖ್ಯಾತ ಜನರು ಪ್ರತಿಭಟಿಸದೇ ಮೂಕರಾಗಿದ್ದರು. ಇಂತಹ ಬಹುಸಂಖ್ಯಾತರ ಮೂಕವೇದನೆಯನ್ನು ಅರಿತ ಬಸವಣ್ಣನವರು ಚಳುವಳಿಯ ಮೂಲಕ ಅವರಿಗೆ ಮಾತನಾಡಲು ಮುಕ್ತ ಅವಕಾಶವನ್ನು ಕಲ್ಪಿಸಿಕೊಟ್ಟರು. ಹೀಗಾದಾಗ ಬಹುಸಂಖ್ಯಾತ ಶೋಷಿತ ವರ್ಗಗಳು ಬಸವಣ್ಣನ ವ್ಯಕ್ತಿತ್ವ, ದಯೆ ಮತ್ತು ಧಾರುಣತ್ವ ಗುಣಗಳನ್ನು ಒಪ್ಪಿಕೊಂಡು ಅಪ್ಪಿಕೊಂಡರು. ಆದರೆ ಅಲ್ಪಸಂಖ್ಯಾತರಾಗಿದ್ದ ಪುರೋಹಿತಶಾಹಿಗಳು ಬಸವಣ್ಣನವರಿಂದ ತಮ್ಮ ಸಂಸ್ಕೃತಿ ಹಾಳಾಗುತ್ತದೆ ಎಂಬ ಹಿನ್ನೆಲೆಯಿಂದ

ಆತನ ವ್ಯಕ್ತಿತ್ವಕ್ಕೆ ಕಳಂಕ ತರುವಲ್ಲಿ ಮುಂದಾದರು. ಹೀಗಾಗಿ ಬಸವಣ್ಣನವರನ್ನು ಮತ್ತು ಅವರ ಸಮಸಮಾಜದ ಕನಸನ್ನು ಕೆಲವರು ಒಪ್ಪಿಕೊಂಡರೆ ಇನ್ನು ಕೆಲವರು ವಿರೋಧಿಸಿದ್ದೂ ಉಂಟು. ಇಡೀ ಬಸವಣ್ಣನ ಕುರಿತ ನಾಟಕಗಳನ್ನು ಅವಲೋಕನ ಮಾಡಿದಾಗ ಹೆಚ್ಚು ಕಡಿಮೆ ಒಂದೇ ವಿಷಯವಸ್ತುವನ್ನು ಹೇಳಿದರೂ ತಂತ್ರ, ಶೈಲಿ ಹಾಗೂ ಪಾತ್ರಗಳ ಬದಲಾವಣೆಗಳಿಂದ ಬಸವಣ್ಣನವರ ವಿವಿಧ ಮುಖಗಳನ್ನು ಅನಾವರಣಗೊಳಿಸಲಾಗಿದೆ. ಹೀಗಾಗಿ ಬಸವಣ್ಣನವರು ಜನಪರ, ಜೀವಪರ ವ್ಯಕ್ತಿಯಾಗಿ ನಿಂತು ಸಮಸಮಾಜದ ಧ್ವನಿಗೆ ಪೂರಕವಾಗಿ ನಿಂತಿದ್ದಾರೆ. ಇಂತಹ ಬಸವಣ್ಣನ ಹೃದಯದ ವ್ಯಕ್ತಿತ್ವವನ್ನು ಉಳಿದ ಶರಣರು, ಜನಸಾಮಾನ್ಯರು ಅಲ್ಲದೇ ಪೋಷಕ ಪಾತ್ರಗಳು ಯಾವ ರೀತಿಯಾಗಿ ಕಾಣುತ್ತವೆ ಎಂಬುದೇ ಇದರ ಉದ್ದೇಶವಾಗಿದೆ.

೧. **ಜಾತವೇದ ಮುನಿ** : ಹಿಂದೆ ಗುರು, ಮುಂದೆ ಗುರಿ, ಮಾತೃದೇವೋಭವ ಮತ್ತು ಗುರುದೇವೋ ಭವ, ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎಂಬ ಉಕ್ತಿಗಳನ್ನು ಗಮನಿಸಿದಾಗ ಬಾಲ್ಯದ ಜೀವನವು ಹೆತ್ತ ತಾಯಿಗೆ ಅರ್ಥವಾಗುತ್ತದೆ. ಅದರಂತೆ ಆ ಮಗುವಿನ ಜಾತಕ ಮತ್ತು ಜ್ಞಾನ ಗುರುವಿಗೆ ಅರ್ಥವಾಗುತ್ತದೆ. ಹೀಗೆ ಬಸವಣ್ಣನವರ ಹುಟ್ಟು ಕೈಲಾಸದಿಂದ ಶುರುವಾಗುತ್ತದೆ. ಭೂಲೋಕದಲ್ಲಿ ಮಾದರಸ ಮತ್ತು ಮಾದಲಾಂಬಿಕೆಯರ ಶಿವಧ್ಯಾನದಿಂದ ಹುಟ್ಟಿದ ಮಗುವಿಗೆ ಬಸವಣ್ಣನೆಂದು ನಾಮಕರಣ ಮಾಡಿದವನೇ ಜಾತವೇದಮುನಿ. ಅಂದಿನಿಂದಲೇ ಆತನೊಬ್ಬ ಜಗತ್ತಿಗೆ ಮಾರ್ಗದರ್ಶಕ, ಜಗಜ್ಯೋತಿ, ಭಕ್ತಿ ಭಂಡಾರಿಯಾಗುತ್ತಾನೆಂದು ಭವಿಷ್ಯ ನುಡಿದ ಜಾತವೇದ ಮುನಿಗಳು ಪ್ರತಿಯೊಂದು ಹಂತದಲ್ಲೂ ಬಸವಣ್ಣನ ವಿವೇಕಕ್ಕೆ ಪುಷ್ಠಿ ಕೊಡುತ್ತಾ ಹೋಗುತ್ತಾನೆ. ಮೊದಲೇ ಹೇಳಿರುವಂತೆ ಈ ಮಗು ೬ ವರ್ಷದವರೆಗೆ ನಿಮ್ಮದು. ನಂತರದಲ್ಲಿ ಆ ಮಗು ನಿಮ್ಮದಲ್ಲ ಎಂದು ಹೇಳುವ ಮೂಲಕ ಬಸವಣ್ಣನ ಭವಿಷ್ಯತ್ತಿನ ವಿಚಾರಗಳನ್ನು ನುಡಿಯುತ್ತಾನೆ. ಅಲ್ಲದೇ ಬಸವಣ್ಣನವರು ಜನಿವಾರವನ್ನು ಕಿತ್ತೊಗೆದು, ವಿದ್ಯೆ ಪಾರಂಗತನಾಗಲು ಕೂಡಲಸಂಗಮಕ್ಕೆ ಬಂದಾಗ ಜಾತವೇದ ಮುನಿಗಳು ಅವನ ಜ್ಞಾನವನ್ನು ವಿಸ್ತರಿಸುತ್ತಾ ಹೋಗುತ್ತಾರೆ. ಜಾತವೇದ ಮುನಿಗಳು ದೇವರಲ್ಲಿ ಭಕ್ತಿ, ವಿಷಯದಲ್ಲಿ ವಿರಕ್ತಿ ಇವೆಲ್ಲ ಬಸವಣ್ಣನ ಹುಟ್ಟು ಗುಣಗಳಾಗಿವೆ ಎಂದು ಹೇಳುತ್ತಾ ಆತನಿಂದ ಜಗತ್ತು ಬೆಳಕು ಕಾಣಬೇಕಾಗಿದೆ ಎಂದು ಆಲೋಚನೆ ಗೈಯುತ್ತಾರೆ. ಜಾತವೇದ ಮುನಿಗಳು ಮುಂದುವರಿದು ನಾನು ನಿನಗೆ ನಿಮಿತ್ತ ಮಾತ್ರನಾದ ಗುರುವು ಎಂದು ಹೇಳುತ್ತಾ ನೀನೀಗ ಗುರುಕುಲ ವಾಸ ಮಾಡಿ ಹದಿನೆಂಟು ವರ್ಷ ಕಳೆದೆ, ನಿನ್ನ ಅಭ್ಯಾಸ ಪೂರ್ಣವಾಯಿತು. ಇನ್ನು ಮುಂದೆ ನೀನು ವಿಶಾಲ ವಿಶ್ವದಲ್ಲಿ ಕಾಲಿಡಬೇಕು. ಜಗತ್ತಿಗೆ ಗುರುವಾಗಬೇಕು. ವಿಶ್ವಾತ್ಮರ ಸೇವೆಯಲ್ಲಿ ಕಾಲ ಕಳೆಯಬೇಕು ಎಂದು ಬಸವಣ್ಣನಿಗೆ ಆತ್ಮವಿಶ್ವಾಸವನ್ನು ತುಂಬುತ್ತಾನೆ. ಹಾಗೇ ಮುಂದುವರಿದು ಮುಂದೆ ಎದುರಾಗುವ ಕಷ್ಟಗಳನ್ನು ಧೈರ್ಯದಿಂದ ಎದುರಿಸಲು ಸನ್ನದ್ಧನಾಗಿರಬೇಕು ಎನ್ನುವ ವಿಚಾರಗಳನ್ನು ಬಿತ್ತರಿಸುತ್ತಾನೆ.

"**ಜಾತವೇದ** : ಸತ್ಯದ ಬೆಳಕು ಹೃದಯ ಹೊಕ್ಕರೆ ಈ ಕಾಯವಿಕಾರ, ಮನದ ಮರ್ಕಟತನ ಅಣಗುವುದು ಬಸವಣ್ಣ. ಆದರೆ ಅಲ್ಲಿಯವರೆಗೆ ಸಾಧಕ ತಾಳ್ಮೆಯಿಂದಿರಬೇಕು-

ಬಂದುದನ್ನೆಲ್ಲಾ ಧೈರ್ಯದಿಂದ ಎದುರಿಸಬೇಕು. ನನ್ನ ಬಸವಣ್ಣನಲ್ಲಿ ಆ ಧೈರ್ಯ ಮನೆ ಮಾಡಿದೆಯೆಂದು ನಾನು ಬಲ್ಲೆ.

**ಬಸವಣ್ಣ :** ಗುರು ಕರುಣೆಯಿಂದ ಕೃತಾರ್ಥನಾದೆ"[7]

ಹೀಗೆ ಬಸವಣ್ಣನಲ್ಲಿ ಅಗಾಧ ಶಕ್ತಿ ಇದೆ ಎಂದು ಗುರುತಿಸಿ ಆಶ್ರಮದಲ್ಲಿ ಪಾಠ ಪ್ರವಚನಗಳ ಜೊತೆಗೆ ಸಾಮಾಜಿಕ ಹೊಣೆಗಾರಿಕೆಯನ್ನು ಬೋಧಿಸಿ ಬಸವಣ್ಣನ ವ್ಯಕ್ತಿತ್ವ ವಿಕಸನಕ್ಕೆ ಕಾರಣರಾಗುತ್ತಾರೆ. ಬಸವಣ್ಣ ಮಠದಲ್ಲಿಯ ಅನೈತಿಕತೆಯನ್ನು ಕುರಿತು ಪ್ರಶ್ನಿಸುವ ಮೂಲಕ ಮಠಾಧಿಪತಿಗಳ ಕೋಪಕ್ಕೆ ಗುರಿಯಾಗುತ್ತಾನೆ. ಮಠಾಧಿಪತಿಗಳ ದೈಹಿಕ ಮತ್ತು ಮಾನಸಿಕ ಹಿಂಸೆಯಿಂದ ಜರ್ಜರಿತನಾಗುತ್ತಾನೆ. ಇಂಥ ಸಮಯದಲ್ಲಿ ಅಸಹಾಯಕತೆಯಿಂದ ಇದ್ದ ಜಾತವೇದಮುನಿಗಳು ಮಠಾಧೀಶರ ವಿರುದ್ಧ ಯಾವುದೇ ಪ್ರತಿಕ್ರಿಯೆಗಳನ್ನು ನೀಡುವುದಿಲ್ಲ. ಆದರೆ ಬಸವಣ್ಣನಿಗೆ ನಿನ್ನ ತತ್ವ ಸಿದ್ಧಾಂತಗಳು ಸಮಾಜಮುಖಿಯಾಗಿವೆ. ಅವುಗಳನ್ನು ಅನುಷ್ಠಾನಗೊಳಿಸಲು ಕೂಡಲಸಂಗಮದಂತಹ ಈ ಪುಟ್ಟ ಗ್ರಾಮದಲ್ಲಿ ಸಾಧ್ಯವಾಗುವುದಿಲ್ಲ. ಆದ್ದರಿಂದ ನೀನು ಇಲ್ಲಿಂದ ಹೊರಟು ಹೋಗು. ನಿನ್ನ ಸೋದರಮಾವನಾದ ಬಲದೇವ ಮಂತ್ರಿಯು ಇರುವ ಬಿಜ್ಜಳನ ರಾಜ್ಯಭಾರದಲ್ಲಿ ಕಾರ್ಯನಿರ್ವಹಿಸಲು ತೆರಳು ಎಂದು ಹೇಳುವುದರ ಮೂಲಕ ಬಸವಣ್ಣನನ್ನು ಬೀಳ್ಕೊಡುತ್ತಾನೆ. ಬಸವಣ್ಣನ ಶಕ್ತಿ ಸಾಮರ್ಥ್ಯಗಳನ್ನು ಒರೆಗಲ್ಲಿಗೆ ಹಚ್ಚಿ ಗುರು ಜಾತವೇದಮುನಿ ಸಲಹೆ-ಸೂಚನೆ ನೀಡುತ್ತಾನೆ. ಹೀಗೆ ಬಸವಣ್ಣನ ಬದುಕಿನಲ್ಲಿ ಮುಖ್ಯನಾಗುತ್ತಾನೆ.

**ನಾಗಲಾಂಬಿಕೆ ಪಾತ್ರ**

ವಚನ ಸಾಹಿತ್ಯದಲ್ಲಿ ಮಹಿಳಾ ವಚನಕಾರ್ತಿಯರಲ್ಲಿ ನಾಗಲಾಂಬಿಕೆಯು ಒಬ್ಬಳು. ಈಕೆ ಭಕ್ತಿಭಂಡಾರಿ ಬಸವಣ್ಣನವರ ಸಹೋದರಿ, ಚೆನ್ನಬಸವಣ್ಣನ ತಾಯಿಯಾಗಿದ್ದಾಳೆ. ತಂದೆ-ತಾಯಿಯರಾದ ಮಾದರಸ ಮಾದಲಾಂಬಿಕೆಯರ ಬಯಕೆಯಂತೆ ಬಸವಣ್ಣ ಮತ್ತು ನಾಗಲಾಂಬಿಕೆ ಬಾಲ್ಯದಿಂದಲೂ ಆಟವಾಡಿಕೊಂಡು ಮನೆ ಪರಿವಾರದೊಂದಿಗೆ ಕಾಲ ಕಳೆಯುತ್ತಿದ್ದಳು. ಬಸವಣ್ಣ ದೈವಿಶಕ್ತಿಯಾಗಿದ್ದರಿಂದ ಬಾಲ್ಯದಲ್ಲಿಯೇ ಅಗ್ರಹಾರ ಸಂಸ್ಕೃತಿಯಿಂದ ಬೇಸತ್ತು, ಗುರು ಹೇಳಿದಂತೆ ತನ್ನ ಎಂಟನೆಯ ವಯಸ್ಸಿನಲ್ಲಿ ವಿದ್ಯೆ ಕಲಿಯಲು ಕೂಡಲಸಂಗಮಕ್ಕೆ ತೆರಳುವಾಗ ತಂದೆ ತಾಯಿಗಳು ಚಿಂತಿಸುತ್ತಾರೆ. ಆಗ ನಾಗಲಾಂಬಿಕೆ ಅಣ್ಣನ ವಿದ್ಯೆಗೆ ಅಡ್ಡಿಪಡಿಸದೇ ಆತನ ಲೋಕೋತ್ತರ ವಿಚಾರಗಳಿಗೆ ಸ್ಪಂದಿಸುವ ನಿಲುವುಗಳು ನಿದರ್ಶನವಾಗಿವೆ. ಬಸವಣ್ಣನವರು ಕೂಡಲಸಂಗಮಕ್ಕೆ ತೆರಳುವಾಗ ತಂದೆಯಾದ ಮಾದರಸರು ಉಪನಯನ ಮುಗಿಸಿಕೊಂಡು ತೆರಳುವುದು ಉಚಿತವಲ್ಲವೇ ಎಂದಾಗ ತಾಯಿಯಾದ ಮಾದಲಾಂಬಿಕೆಯು ನೆರವಿಗೆ ನಿನ್ನ ಅಕ್ಕನಾದ ನಾಗಲಾಂಬಿಕೆಯು ಬರುವಳು ಎನ್ನುತ್ತಾಳೆ. ಆಗ ಬಸವಣ್ಣನವರು ನಾಡಿನ ಮಗನಾಗಿ ನಾನು ಸೇವೆ ಸಲ್ಲಿಸಲು ಮಮಕಾರವನ್ನು ಮರೆತು ಬೀಳ್ಕೊಡಿ, ನಿಮಗೆ ನಾನು ಯಾವ ರೀತಿಯಲ್ಲಿ ಸಮಾಧಾನಿಸಬೇಕು ಎಂಬುದು ತಿಳಿಯದಾಗಿದೆ ಎಂದಾಗ,

"ನಾಗಲಾಂಬಿಕೆ : ಅಮ್ಮ, ಬಸವಣ್ಣ ನಮ್ಮ ಮಗನಾದರೂ ಲೋಕದ ಮಗನಾಗುವ ಛಾಯೆ ಹೊತ್ತಿರುವನು ಎಂದು ಮುನಿಗಳು ನುಡಿದುದನ್ನು ಮರೆತಿರೇನು ಬಸವಣ್ಣ ನೆಪ ಮಾತ್ರಕ್ಕೆ ನಿಮ್ಮ ಮಗ ಅಷ್ಟೇ ನಿಮ್ಮ ಧರ್ಮವನ್ನೇ ಅವಲಂಬಿಸ ಬೇಕೆಂಬುದರಲ್ಲಿ ಅರ್ಥವಿಲ್ಲ. ಮುನಿಗಳ ಕರೆಗೆ ಓಗೊಟ್ಟು ಹೊರಟಿರುವ ಬಸವಣ್ಣನನ್ನು ನಿರ್ಬಂಧಿಸದೆ ಸಂತೋಷವಾಗಿ ಈ ಸಮಾರಂಭದಲ್ಲಿಯೇ ಬೀಳ್ಕೊಡಿ ನಿಮ್ಮ ಆಶೀರ್ವಾದ ಬಲವು ಚಿರರಕ್ಷೆಯಾಗಿರಲಿ.

ಬಸವಣ್ಣ : ಹೌದಮ್ಮ ಅಕ್ಕನ ನುಡಿಯಲ್ಲಿ ಕೋಟಿ ಸತ್ಯವಿದೆ. ಲೋಕದ ಪುರುಷನೋ, ಕಾರಣ ಪುರುಷನೋ ಆದಾವುದರ ನಂಬಿಕೆ ಎನಗಿಲ್ಲ. ಕರ್ತವ್ಯದ ಕರೆಯಾವುದೋ ಕೈ ಬೀಸಿ ಕರೆಯುತ್ತಿದೆ. ಮುನಿಗಳ ನುಡಿ ಮನದಲ್ಲಿ ಧ್ವನಿ ಎತ್ತಿದೆ. ಅಕ್ಕನ ನೆರವು ದೊರಕಿದೆ, ನನ್ನನ್ನು ಬೀಳ್ಕೊಡುವಿರಾದರೆ ನಾನೇ ಧನ್ಯ."[3]

ಹೀಗೆ ಬಸವಣ್ಣನವರನ್ನು ಬೀಳ್ಕೊಟ್ಟ ನಂತರ ನಾಗಲಾಂಬಿಕೆ ತನ್ನ ತಂದೆ ತಾಯಿ ದೈವಾಧೀನರಾದ ಮೇಲೆ ಬಸವಣ್ಣನ ಹಿಂದೆ ನಡೆಯುತ್ತಾಳೆ. ಪ್ರತಿಯೊಂದು ಹಂತದಲ್ಲೂ ಬಸವಣ್ಣನ ಭಕ್ತಿ ಮತ್ತು ಆತನ ಏಳಿಗೆಗೆ ಶ್ರಮಿಸುತ್ತಾಳೆ. ಕೂಡಲಸಂಗಮಕ್ಕೆ ವಿದ್ಯೆ ಕಲಿಯಲು ಹೋದ ಬಸವಣ್ಣನಿಗೆ ಅಲ್ಲಿನ ಮಠಮಾನ್ಯಗಳಲ್ಲದೇ ಅಲ್ಲಿನ ಪೀಠಾಧಿಪತಿಗಳಿಗೆ ಮೂಲಭೂತತನಕ್ಕೆ ಬೇಸತ್ತು ಅದರ ವಿರುದ್ಧ ಧ್ವನಿಯೆತ್ತಿ ಮಾನವೀಯತೆಯನ್ನು ಮೆರೆಯುತ್ತಾನೆ. ಆಗ ಮಠಾಧಿಪತಿಗಳು ಈತನ ಅಂತರ್ಯವನ್ನು ಗಮನಿಸಿ ಬಸವಣ್ಣನಿಂದ ಮಠಗಳಲ್ಲಿರುವ ಪಾವಿತ್ರ್ಯತೆ ಹಾಳಾಗುತ್ತದೆ ಎಂದಾಗ ಬಸವಣ್ಣನವರು ಹಾಳಾಗುತ್ತಿರುವುದು ನನ್ನಿಂದ ಅಲ್ಲ. ನಿಮ್ಮಿಂದ ಎನ್ನುತ್ತಾನೆ. ಆಗ ಪೀಠಾಧಿಪತಿಗಳಾದ ಪಶುಪತಿಗಳು ಬಸವಣ್ಣನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಅವನಿಂದ ಒತ್ತಾಯಪೂರ್ವಕ ಕೈಕಾಲುಗಳನ್ನು ಕಟ್ಟಿ 'ಅಪರಾಧಿ' ಪತ್ರವನ್ನು ಬರೆಯಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲದೆ ಬಸವಣ್ಣನವರಿಗೆ ರಕ್ತ ಬರುವಂತೆ ಥಳಿಸುತ್ತಾರೆ. ಗಾಯಗಳಿಂದ ತತ್ತರಿಸಿದ ಬಸವಣ್ಣನಿಗೆ ಅಕ್ಕನಾದ ನಾಗಲಾಂಬಿಕೆ ದುಃಖದಿಂದ ಕೈತುತ್ತು ಮಾಡಿ ಉಣಿಸುತ್ತಾ ಇರುವಾಗ ಅಳಬೇಡ ನನಗೆ ಏನೂ ಆಗುವುದಿಲ್ಲ ಎಂದಾಗ ನಾಗಲಾಂಬಿಕೆಗೆ ಅವ್ವನ ನೆನಪಾಯಿತು. ಅವಳು ಬದುಕಿದ್ದರೆ ನನಗಿಂತ ಇನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು ಎಂದಾಗ ಬಸವಣ್ಣನವರು ನೀನೆ ನನಗೆ ತಾಯಿ ತಂದೆ ಎಂದಾಗ ತಂದೆ ತಾಯಿಯಿಲ್ಲದೆ ನಮಗೆ ಸಮಾಜವೇ ತಂದೆ ತಾಯಿಯಾಗಬೇಕು. ಆದರೆ ಈ ಸಮಾಜ ನಿನಗೆ ದಾರಿ ಮಾಡಿಕೊಡುತ್ತಿಲ್ಲ ಎಂದು ದುಃಖಿಸುತ್ತಾಳೆ. ಆಗ ಬಸವಣ್ಣನವರು ನನ್ನ ದಾರಿ ನನಗೆ ಸ್ಪಷ್ಟವಾಗಿದೆ. ಈ ಭಯೋತ್ಪಾದಕರ ಅಂಜಿಕೆಯೇ ನನಗಿಲ್ಲ ಎನ್ನುತ್ತಾನೆ. ಆಗ ನಾಗಲಾಂಬಿಕೆ ನನಗೆ ಈ ವಾತಾವರಣದಿಂದ ಭಯವುಂಟಾಗಿದೆ ಎಂದಾಗ ಭಯವೇಕಮ್ಮ ನನ್ನನ್ನು ಇವರು ಕೊಲ್ಲಬಹುದು. ಆದರೆ ನನ್ನ ವಿಚಾರಗಳನ್ನು ಕೊಲ್ಲಲಾರರು ಎಂದಾಗ,

"**ನಾಗಲಾಂಬಿಕೆ** : ಹೌದು. ನಿನ್ನನ್ನು ಕೊಲ್ಲುತ್ತಾರೆ. ಪೀಠಾಧಿಪತಿಗಳಲ್ಲಿ ಹಣವಿದೆ. ಅವರ ಮುಖಂಡತ್ವಕ್ಕೆ ತಾಳ ಹಾಕುವ ಭಕ್ತರಿದ್ದಾರೆ.

**ಬಸವಣ್ಣ** : ಹೌದು. ದುಷ್ಟರ ಸಮಾಜದಲ್ಲಿ ಅತಿ ದುಷ್ಟರೇ ಮುಖಂಡ ಎನ್ನುವಂತಿದೆ. ಇಲ್ಲಿಯ ಪರಿಸ್ಥಿತಿ ಕೈಯಲ್ಲಿ ನಾಲ್ಕು ದುಡ್ಡು ನಾಲ್ಕು ಜನ ದುಷ್ಟರು ಇದ್ದರೆ ಧರ್ಮದ ಹೆಸರಿನಲ್ಲಿ ಬೇಕಾದುದನ್ನು ಮಾಡಬಹುದೆಂದು ಭಾವಿಸಿದ್ದಾರೆ. ಆದರೆ ಈ ಹಣ, ಈ ಹಣಕ್ಕಾಗಿ ಸೇರಿರುವ ಈ ಸ್ವಾಮಿಗಳು ಅವರ ಭಕ್ತರು ಈ ಮಠಕ್ಕೆ ಮೃತ್ಯುವಾಗಿ ಪರಿಣಮಿಸುವ ಕಾಲ ದೂರವಿಲ್ಲ."[೩]

ಹೀಗೆ ಬಸವಣ್ಣನ ವಿಚಾರಗಳನ್ನು ಅರಿತ ನಾಗಲಾಂಬಿಕೆಯು ಈ ಮಠ ಈ ಸ್ವಾಮಿಗಳನ್ನು ಗಮನಿಸಿದಾಗ ಹುತ್ತನ್ನು ಸೇರಿಕೊಂಡ ಘಟಸರ್ಪ ಮತ್ತು ಅದರ ಪರಿವಾರಗಳು ನೆನಪಾಗುತ್ತವೆ ಎನ್ನುತ್ತಿದ್ದಂತೆಯೇ ಜಾತವೇದ ಮುನಿಗಳು ಬರುತ್ತಾರೆ. ಆಗ ನಾಗಲಾಂಬಿಕೆಯು ದೊಡ್ಡ ಧ್ವನಿಯಿಂದ ಅಳುತ್ತಾ ತಂದೆ ತಾಯಿಗಳಿಲ್ಲದ ಪರದೇಶಿ ಮಕ್ಕಳು ನಾವು ಕಳೆದ ವಾರ ನೀವು ಇಲ್ಲದ ಸಂದರ್ಭದಲ್ಲಿ ನನ್ನ ಅಣ್ಣನ ಮೇಲೆ ಪೀಠಾಧಿಪತಿಗಳಿಂದ ದೊಡ್ಡ ಹಲ್ಲೆ ನಡೆಯಿತು. ಹೇಗಾದರೂ ಮಾಡಿ ನನಗಾಗಿ ನನ್ನ ಅಣ್ಣನನ್ನು ಉಳಿಸಿಕೊಡಿ ಎಂದು ಕೇಳಿಕೊಳ್ಳುವಲ್ಲಿ ಸಂಬಂಧ ಗಟ್ಟಿಯಾಗಿ ನಿಲ್ಲುತ್ತದೆ. ಆಗ ಗುರುಗಳು ನಿನಗಾಗಿ ಅಲ್ಲ, ಜಗತ್ತಿಗಾಗಿ ನಿನ್ನ ಅಣ್ಣನಾದ ಬಸವಣ್ಣ ಉಳಿಯಬೇಕಾಗಿದೆ ಎಂದಾಗ ನಾಗಲಾಂಬಿಕೆಯು ನನ್ನ ಅಣ್ಣ ಕರುಣೆಯ ಮೂರ್ತಿ. ಇಂತಹ ಮೂರ್ತಿಯ ಮೇಲೆ ದಾಳಿ ನಡೆದು ಮೈಮೇಲೆ ಗಾಯಗಳಾಗಿವೆ. ನಾನು ಇನ್ನೂ ಚಿಕ್ಕವಳು ಹೇಗಾದರೂ ಮಾಡಿ ನನ್ನ ಅಣ್ಣನ ಮನಸ್ಥಿತಿಯನ್ನು ಗುರುಗಳಾದ ತಾವು ಅರಿಯಬೇಕು ಎಂದು ಹೇಳುವ ನಾಗಲಾಂಬಿಕೆಯ ಮಾತಿನಲ್ಲಿ ಸಂಬಂಧ ಮರುಗುವ ಸ್ಥಿತಿ ಅರ್ಥವಾಗುತ್ತದೆ. ಆಗ ಗುರುಗಳು ಇನ್ನೊಬ್ಬರ ಕಾಲ ಮುಳ್ಳು ನಟ್ಟರೆ ಮರುಗುವ ನಿನ್ನ ಸಹೋದರ ಬಸವಣ್ಣನಿಗೆ ಈ ಗತಿ ಬರಬಾರದಾಗಿತ್ತು. ಆದರೆ ಈತನ ವೈಜ್ಞಾನಿಕ ವಿಚಾರಗಳು ಪೀಠಾಧಿಪತಿಗಳಿಗೆ ಹಿಡಿಸುವುದಿಲ್ಲ ಎಂದು ಹೇಳಿ ಬಸವಣ್ಣನವರನ್ನು ಕಲ್ಯಾಣಕ್ಕೆ ಕಳುಹಿಸಿಕೊಡುತ್ತಾನೆ.

ಈಗಾಗಲೇ ಬಸವಣ್ಣನ ಸೋದರಮಾವನಾದ ಬಲದೇವನು ಕಲ್ಯಾಣದ ಬಿಜ್ಜಳ ಆಸ್ಥಾನದಲ್ಲಿ ಮಹಾಮಂತ್ರಿಯಾಗಿ ಸೇವೆ ಸಲ್ಲಿಸುತ್ತಿರುತ್ತಾನೆ. ಗುರುವಿನ ಆಜ್ಞೆಯಂತೆ ತೆರಳಿ ಬಲದೇವನನ್ನು ಭೇಟಿಯಾಗುತ್ತಾನೆ. ಆಗ ಬಲದೇವರು ಬಸವಣ್ಣನ ಕಾಯಕ ನಿಷ್ಠೆಯನ್ನು ಅರಿತು ಬಿಜ್ಜಳನ ರಾಜ್ಯದಲ್ಲಿ ಕರುಣಿಕನಾಗಿ ಸೇವೆಗೆ ಸೇರಿಸುತ್ತಾನೆ. ಆಗ ನಾಗಲಾಂಬಿಕೆಯು ಬಲದೇವರು ಹೇಳಿದಂತೆ ಬಿಜ್ಜಳನ ಆಸ್ಥಾನದಲ್ಲಿ ಆಶ್ರಯ ಪಡೆದು ಜೀವನಕ್ಕೆ ದಾರಿ ಮಾಡಿಕೊಳ್ಳಬೇಕಾಗಿದೆ ಎಂದು ಹೇಳಿ ಕಾಯಕದ ಮರ್ಮವನ್ನು ಇಬ್ಬರು ಒಪ್ಪಿಕೊಳ್ಳುವುದರ ಮೂಲಕ ಅದರ ತತ್ವವನ್ನು ಜಗತ್ತಿಗೆ ಸಾರುತ್ತಾರೆ.

**ನಾಗಲಾಂಬಿಕೆ** : ಕಲ್ಯಾಣದ ಕೀರ್ತಿ ದಿನದಿಂದ ದಿನಕ್ಕೆ ಎಲ್ಲೆಡೆ ಹರಡುತ್ತಿದೆ. ಬೇರೆ ಬೇರೆ ಪ್ರಾಂತ್ಯ-ಪ್ರದೇಶಗಳಿಂದ ಧರ್ಮಾಸಕ್ತರು ಅನುಭವ ಮಂಟಪಕ್ಕೆ ಆಗಮಿಸುತ್ತಿದ್ದಾರೆ. ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎನ್ನುವ ತತ್ವದಲ್ಲಿ

ವಿಶ್ವಾಸವಿರಿಸಿ ಮಠ, ದೇವಾಲಯಗಳನ್ನು ತ್ಯಜಿಸಿ ಎಲ್ಲರೂ ಲಿಂಗಧಾರಿ ಗಳಾಗುತ್ತಿರುವ 'ಕಾಯಕವೇ ಕೈಲಾಸ'ವೆಂದು ನಂಬಿ ನಡೆಯುತ್ತಿರುವರು.

**ಬಸವಣ್ಣ :** ಆದರೂ ಹಲವು ವೇಷಧಾರಿಗಳು ಮತ್ತು ಮುದ್ರೆಧಾರಿಗಳಿಂದ ನಮ್ಮ ಮಂಟಪಕ್ಕೆ ಕಳಂಕ ತಟ್ಟುತ್ತಿದೆ. ಅದನ್ನೇ ಸನಾತನಿಗಳು ಮುಂದೆ ಮಾಡಿಕೊಂಡು ದೋಷಗಳನ್ನು ಹುಡುಕುತ್ತಿದ್ದಾರೆ.

**ನೀಲಾಂಬಿಕೆ :** 'ಆನೆಯ ಮೇಲೆ ಹೋಗುವವರನ್ನು ನೋಡಿ ನಾಯಿ ಬೊಗಳುವುದು ಸಹಜ' ಅದಕ್ಕಾಗಿ ಚಿಂತಿಸುವ ಅಗತ್ಯವಿಲ್ಲ ಸ್ವಾಮಿ."[9]

ಹೀಗೆ ನೀಲಾಂಬಿಕೆ, ಬಸವಣ್ಣ ಮಾತನಾಡುವಾಗ ನಾಗಲಾಂಬಿಕೆಯು ಗುರುವಾದರೂ ಕಾಯಕದಿಂದಲೇ ಮುಕ್ತಿ ಎನ್ನುವ ತತ್ವ ಅನುಭವಮಂಟಪದ್ದಾಗಿದೆ ಎಂದು ಹೇಳುವಾಗ ಬಸವಣ್ಣನವರು ಈಗಾಗಲೇ ಮಂತ್ರಿಯ ಪದವಿಯನ್ನು ಅಲಂಕರಿಸಿದ್ದಾರೆ. ಮುಂದುವರೆದ ಬಸವಣ್ಣ ನನ್ನ ಕಾಯಕತತ್ವದ ಬಗ್ಗೆ ಇಲ್ಲಸಲ್ಲದ ಅಪವಾದಗಳನ್ನೇ ಹೇಳಿ ಪ್ರಭುಗಳ ಮನಸ್ಸನ್ನು ಕೇಡಿಸುವರು ಎಂದಾಗ ನೀಲಾಂಬಿಕೆಯು ನನಗೆ ಅಣ್ಣನಾದ ಬಿಜ್ಜಳ ಈ ರಾಜ್ಯಕ್ಕೆ ಪ್ರಭುವಾಗಿರಬಹುದು. ಆದರೆ ಅವರು ಏನೆಂದು ನಿಮಗಿಂತಲೂ ನನಗೆ ಚೆನ್ನಾಗಿ ಗೊತ್ತು. ಪ್ರಭುಗಳು ಸರಿಯಾದದ್ದನ್ನು ಮಾಡುತ್ತಾರೆ ಎಂದಾಗ ಬಸವಣ್ಣನವರು ನಿನಗೆ ರಾಜರ ಹೊರಮುಖ ಮಾತ್ರ ಗೊತ್ತು. ಆದರೆ ಅಧಿಕಾರದ ವಿಷಯಕ್ಕೆ ಬಂದಾಗ ಹಲವು ಮುಖಗಳಾಗಿ ಪ್ರಭುಗಳ ಅವಿಶ್ವಾಸಕ್ಕೆ ನಾವು ಕಟ್ಟಿದ ಮಹಾಮನೆ ಬಲಿಯಾಗಬಾರದು. ಏಕೆಂದರೆ ನಾನು ಪ್ರಧಾನಿಯಾಗಿ ಮಾಡುವ ಕೆಲಸಕ್ಕಿಂತಲೂ ಮಹಾಮನೆಯ ಸದಸ್ಯನಾಗಿ ಮಾಡಬೇಕಾದ ಕೆಲಸ ಸಾಕಷ್ಟು ಇದೆ. ಏಕೆಂದರೆ ರಾಜಕೀಯದಲ್ಲಿ ಸಿಕ್ಕು ಸ್ಥಾವರ ಆಗುವುದಕ್ಕಿಂತ ಶರಣರ ಸದಸ್ಯನಾಗಿ ಜಂಗಮನಾಗುವ ಆಸೆಯಿದೆ ಎಂದಾಗ ನಾಗಲಾಂಬಿಕೆಯು ಕೂಡಲಸಂಗಮನಾಥನು ಬರೆದ ಬರಹವನ್ನು ಯಾರು ತಪ್ಪಿಸಲಾರರು. ಅದಕ್ಕಾಗಿ ಅನುಭವಮಂಟಪದ ಕೆಲಸ ಕಾರ್ಯಗಳೊಂದಿಗೆ ಬಿಜ್ಜಳರು ವಹಿಸಿಕೊಟ್ಟ ಕೆಲಸ ಕಾರ್ಯಗಳನ್ನು ಲಿಂಗಪೂಜೆಯೆಂದು ನಂಬುವುದರ ಮೂಲಕ ನಿನ್ನ ಕಾಯಕವೆಂದು ಮುಂದುವರೆಸು ಎಂದು ತಿಳಿಸುತ್ತಾಳೆ.

ನಾಗಲಾಂಬಿಕೆಯು ಬಿಜ್ಜಳ ಅರಸನನ್ನು ಅಣ್ಣನ ಸ್ಥಾನದಲ್ಲಿ ಇರಿಸಿ ನೋಡುವುದರ ಮೂಲಕ ಹತ್ತಿರವಾಗುತ್ತಾಳೆ. ಜೊತೆಗೆ ಬಿಜ್ಜಳನ ತಂಗಿಯಾದ ನೀಲಾಂಬಿಕೆಯ ಗೆಳತಿಯಾಗುತ್ತಾಳೆ. ಬಸವಣ್ಣನ ನಿಷ್ಠೆ ಪ್ರಾಮಾಣಕತೆ, ಭಕ್ತಿಯನ್ನು ಕಂಡ ನೀಲಾಂಬಿಕೆಯು ಮನಸಾರೆ ಬಸವಣ್ಣನನ್ನು ಮದುವೆಯಾಗಬೇಕೆಂಬ ಹಂಬಲದಲ್ಲಿದ್ದು. ಅಣ್ಣನಾದ ಬಿಜ್ಜಳನಿಗೆ ಈ ವಿಷಯವನ್ನು ಪ್ರಸ್ತಾಪಿ ಸುತ್ತಾಳೆ. ನೀಲಾಂಬಿಕೆ ಮತ್ತು ಬಿಜ್ಜಳನಿಗೆ ಈಗಾಗಲೇ ಬಸವಣ್ಣನವರು ತನ್ನ ಸೋದರಮಾವನಾದ ಬಲದೇವನ ಮಗಳಾದ ಗಂಗಾಂಬಿಕೆಯನ್ನು ವಿವಾಹವಾಗಿರುವುದು ಗೊತ್ತಿದ್ದರೂ ಅರಸನಾದ ಬಿಜ್ಜಳನು ತಂಗಿಯ ಮನಸ್ಸಿಗೆ ಬೇಸರ ತರಬಾರದು ಎಂದು ಇಚ್ಛಿಸುವ ಮೂಲಕ ಈ ಮದುವೆಗೆ ಒಪ್ಪಿಕೊಳ್ಳುತ್ತಾನೆ. ತಂಗಿಯ ಬಯಕೆಯನ್ನು ನೇರವಾಗಿ ಬಸವಣ್ಣನಿಗೆ ತಿಳಿಸಬಹುದಾಗಿತ್ತು.

ಆದರೆ ಬಿಜ್ಜಳನು ಬಸವಣ್ಣನ ಅಕ್ಕಳಾದ ನಾಗಲಾಂಬಿಕೆಯನ್ನು ಕರೆದು ಬಸವಣ್ಣನನ್ನು ಒಪ್ಪಿಸಲು ಸೂಚಿಸುತ್ತಾರೆ. ಇದಕ್ಕೆ ಗಂಗಾಂಬಿಕೆಯ ಒಪ್ಪಿಗೆಯೂ ಇರುತ್ತದೆ. ಆಗ ನಾಗಲಾಂಬಿಕೆ ನೀಲಾಂಬಿಕೆಯ ಬಗ್ಗೆ ಎಲ್ಲ ವಿಷಯವನ್ನು ಬಸವಣ್ಣನಿಗೆ ತಿಳಿಸುತ್ತಾಳೆ. ಮುಂದುವರೆದು

**ನಾಗಲಾಂಬಿಕೆ** : ಹೌದು ಬಸವಣ್ಣಾ ಗಂಗಾಳ ಪ್ರೇರಣೆ, ಚಕ್ರವರ್ತಿಗಳ ಪ್ರಯತ್ನ ನೀನು ವಿವಾಹಿತನಾದರೂ ನೀಲಾಂಬಿಕೆ ನಿನ್ನ ಮೇಲೆ ಇಟ್ಟಿದ್ದ ಅತೀವ ವ್ಯಾಮೋಹ ನನ್ನನ್ನು ಇಷ್ಟೊಂದು ಪ್ರಯತ್ನಿಸುವಂತೆ ಮಾಡಿತು.

**ಬಸವಣ್ಣ** : ಅಕ್ಕಾ ಮನ ನುಡಿಯುತಿಹುದು ಮಾನವ ಕಲ್ಯಾಣಕ್ಕೆ ಮೀಸಲೆಂದು ನಿಮ್ಮ ಪ್ರಯತ್ನ ಅರಿಷಡ್ವರ್ಗಗಳ ಅಂಧಕಾರದಲ್ಲಿ ಮುಳುಗೆಂದು, ಯೋಗಿಯಾಗ ಬಯಸಿದ್ದವನು ಗುರು ಪ್ರೇರಣೆಗೆ ಸಿಲುಕಿ ಸಂಸಾರಿಯಾದೆ. ಸಂಸಾರ ಸಾಗರವ ದಾಟಲೆಂದೇ ಧರ್ಮ ಬೋಧನೆಯೆಂಬ ದೋಣಿಯ ನಿರ್ಮಿಸಿ ನಾವಿಕರು ನಾವು ನಗು ನಗುತ್ತಾ ಸಾಗರವ ದಾಟಲೆಂದೆಣಿಸಿದರೆ ಬೃಹದಾಕಾರವಾದ ಬಂಡೆಯೊಂದನ್ನು ನಿರ್ಮಿಸಿ ದೋಣಿಯ ನುಚ್ಚುನೂರಾಗಿಸಲು ಹವಣಿಸಿದಂತಾಗುತ್ತಿದೆಯಲಕ್ಕಾ".[೫]

ಹೀಗೆ ನಾಗಲಾಂಬಿಕೆಯು ತಂದೆ ತಾಯಿಗಳನ್ನು ಕಳೆದುಕೊಂಡು ಬಸವಣ್ಣನ ಕಾಯಕತತ್ವಕ್ಕೆ ಜೀವಾಳವನ್ನು ತುಂಬುತ್ತಾ ಆತನ ಜೀವನಕ್ಕೆ ಹಾಗೂ ಆತನಿಂದ ಜಗತ್ತಿನ ಉದ್ಧಾರಕ್ಕೆ ಎಷ್ಟು ಕಷ್ಟವಿದ್ದರೂ ಸಹಿಸಿಕೊಳ್ಳುವುದರ ಮೂಲಕ ಶ್ರಮಿಸುತ್ತಾಳೆ. ಒಂದು ಕಡೆ ಕರುಳುಬಳ್ಳಿಯ ಸಂಬಂಧ ಮುಖ್ಯವಾದರೆ ಇನ್ನೊಂದು ಕಡೆ ಗುರುಗಳ ಆಜ್ಞೆಯನ್ನು ಪಾಲಿಸಿ ಶರಣತತ್ವವನ್ನು ಬಿತ್ತರಿಸಬೇಕೆಂಬ ಹಂಬಲವನ್ನುಳ್ಳ ನಾಗಲಾಂಬಿಕೆಯು ಹೆಣ್ಣಿನ ಮನಸ್ಸಿನ ವ್ಯಾಮೋಹವನ್ನು ಅರಿತು ಬಸವಣ್ಣನಿಗೆ ನೀಲಾಂಬಿಕೆಯನ್ನು ಮದುವೆ ಮಾಡಿಸುವುದರ ಮೂಲಕ ಮಾನವೀಯತೆ ಯನ್ನು ಮರೆಯುತ್ತಾಳೆ. ಈಕೆಯ ಮನಸ್ಸಿನಲ್ಲಿ ಅಗ್ರಹಾರ ಸಂಸ್ಕೃತಿಯ ವಿರೋಧದ ಮನೋಭಾವನೆ ಗಳು ವ್ಯಕ್ತವಾಗುತ್ತಾ ಹೋಗುತ್ತವೆ. ಹೀಗಾಗಿ ಬಸವಣ್ಣನ ಮೂಲಕ ಅನುಭವ ಮಂಟಪದ ಒಳಗೆ ಚರ್ಚೆಯಾಗುವ ವಿಷಯಗಳ ಮಧ್ಯೆ ತಾನು ಸಂಪ್ರದಾಯಬದ್ಧ ವಿಚಾರಗಳ ವಿರುದ್ಧ ಧ್ವನಿ ಎತ್ತುತ್ತಾಳೆ.

**ಅಲ್ಲಮಪ್ರಭು**

೧೨ನೇ ಶತಮಾನ ಜ್ಞಾನಿ, ಯೋಗಿ, ಭಕ್ತಿ ಮುಂತಾದವುಗಳ ಕೇಂದ್ರವಾಗಿ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ಹಿತಾಸಕ್ತಿಗೆ ಚಿಂತನೆಯನ್ನು ನಡೆಸಿ ಹಲವಾರು ಜಾತಿಯ ಶರಣರನ್ನು ಒಳಗೊಂಡಂತೆ ಭಕ್ತಿ ಚಳುವಳಿ ನಡೆದದ್ದು ಗಮನಾರ್ಹ ಸಂಗತಿ. ಬಸವಣ್ಣನವರು ಈ ಚಳುವಳಿಯ ನೇತಾರ. ಹೀಗಾಗಿ ಅಗ್ರಹಾರ ಮತ್ತು ಅರಮನೆಯ ಸಂಸ್ಕೃತಿಯಿಂದ ಒಬ್ಬ ಮಂತ್ರಿಯಾಗಿ ಏನು ಸಾಧಿಸಲು ಸಾಧ್ಯವಿಲ್ಲವೆಂದು ಅರಿತು ಮಹಾಮನೆ ಎಂಬ ಹೆಸರಿನ ಶರಣರನ್ನು ಒಳಗೊಂಡಂತೆ ಅನುಭವಮಂಟಪವನ್ನು ಸ್ಥಾಪಿಸುತ್ತಾನೆ. ಈ ಅನುಭವಮಂಟಪವು

ಧರ್ಮ ಮತ್ತು ಸಮಾಜಪರ ಚಿಂತನೆಗಳಿಗೆ ದಾರಿ ಮಾಡಿಕೊಡಬೇಕೆಂಬ ಶರಣರ ನೈತಿಕತೆಗೆ ಇದು ಕ್ರಾಂತಿಗೆ ಚಾಲನೆ ನೀಡುತ್ತದೆ. ಈಗಾಗಲೇ ಹೇಳಿರುವಂತೆ ಬಸವಣ್ಣನವರ ಚಿಂತನೆ ಜಾತಿರಹಿತವಾದದ್ದು ಒಂದಡೆ ಆದರೆ 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ತತ್ವವನ್ನು ಸಾರುವಾಗ ನೆನಪಾದದ್ದು ಜ್ಞಾನಿ ಅಲ್ಲಮ. ಅಲ್ಲಮಪ್ರಭುಗಳನ್ನು ಶರಣ ಸಿದ್ಧಾಂತದ ಸಮರ್ಥವಾಹಕ ಎಂದು ತಿಳಿದ ಬಸವಣ್ಣನವರು ಅನುಭವಮಂಟಪ ಎನ್ನುವ ಮಹಾಮನೆಗೆ ಅಧ್ಯಕ್ಷನನ್ನಾಗಿ ನಿಯಮಿಸುತ್ತಾನೆ. ಆಗ ಧರ್ಮಾಂಧರು ಜಾತಿಯ ದೃಷ್ಟಿಯಿಂದ ಅಲ್ಲಮನನ್ನು ಶೂನ್ಯ ಪೀಠಾಧಿಕಾರಿಯಾಗಿ ನಿಯಮಿಸಿರುವುದು ಒಂದು ತಪ್ಪಾದರೆ, ಈ ಮಹಾಮನೆಯು ಅರಮನೆಯ ಪೀಠಕ್ಕೆ ದ್ರೋಹ ಬಗೆಯುವುದು ಮತ್ತೊಂದು ತಪ್ಪು ಆಗುತ್ತದೆ ಎಂದಾಗ ಬಸವಣ್ಣನವರು ಕಂದಾಚಾರದ ಪೀಠ ನಿಮಗೆ ಇರಲಿ ನಾವು ಶರಣರನ್ನು ಒಳಗೊಂಡಂತೆ ಅಸ್ತಿತ್ವಕ್ಕೆ ತಂದಿರುವುದು ಜಾತಿ ಪೀಠವಲ್ಲ. 'ಜ್ಞಾನಪೀಠ'. ಅಲ್ಲದೆ ಜ್ಞಾನಕ್ಕೂ ಜಾತಿಗೂ ಸಂಬಂಧವಿಲ್ಲ ಪ್ರಭುದೇವರು ಜಂಗಮರು. ಹಾಗಾಗಿ ಜಂಗಮಕ್ಕೆ ಜಾತಿ ಇಲ್ಲ ಎಂಬ ಸಿದ್ಧಾಂತವನ್ನು ಬೋಧಿಸುವುದು ಶರಣರ ತತ್ವ, ಹೀಗಾಗಿ ಜಾತಿಯನ್ನು ನಿರಾಕರಿಸಿ ಜ್ಞಾನವನ್ನು ಎತ್ತಿ ಹಿಡಿಯುವುದೇ ನಮ್ಮ ಧ್ಯೇಯ ಇದರಿಂದಾಗಿ ನಮ್ಮ ಪ್ರಭುದೇವ ಕೇವಲ ಜಂಗಮನಲ್ಲ ಮಹಾಜಂಗಮ. ಆದ್ದರಿಂದ ಅವರೇ ಈ ಪೀಠಕ್ಕೆ ಅರ್ಹರು ಎಂದು ತಿಳಿದು ನಾವು ಅವರನ್ನು ನಿಯಮಿಸಿದ್ದೇವೆ.

ಹೀಗೆ ಅಲ್ಲಮಪ್ರಭು ಅನುಭಮಂಟಪದ ಅಧ್ಯಕ್ಷರಾಗಿ ಸಮಾಜದ ನಾನಾ ಚಿಂತನೆಗಳನ್ನು ಶರಣರೊಂದಿಗೆ ಚರ್ಚಿಸುವಾಗ ಜಾತಿ, ಲಿಂಗ ಮತ್ತು ಕಾಯಕತತ್ವದ ಬಗ್ಗೆ ಚಿಂತನೆಯ ಜೊತೆಗೆ ಜಂಗಮದ ಅರಿವನ್ನು ಉಂಟು ಮಾಡುತ್ತಾರೆ. ಏಕೆಂದರೆ ಈಗಾಗಲೇ ಬಸವಣ್ಣನ ಮನೆಯಿಂದ ಹಿಂದಿರುಗಿದ ಪ್ರಭುದೇವರು ಲಿಂಗಪೂಜೆಯಲ್ಲಿ ಬಸವಣ್ಣನಿಗೆ ಜಂಗಮದ ಅರಿವಿಲ್ಲ ಎನ್ನುತ್ತಾರೆ. ಆಗ ಬಸವಣ್ಣನವರು ಅಪರಾಧ ತಂದೆ ಬಾಗಿಲಿಗೆ ಬಂದ ಜಂಗಮನನ್ನು ಹಿಂದಕ್ಕಟ್ಟಿದ್ದು ನನ್ನ ಅಹಂಕಾರ ಎಂದಾಗ ಪ್ರಭುದೇವರ ಲಿಂಗ ಪೂಜೆಯಲ್ಲಿದ್ದ ನಿನಗೆ ಜಂಗಮದ ಹಂಗೇನು ಎಂದಾಗ ಬಸವಣ್ಣನವರು ಜಂಗಮ ಮುನಿದರೆ ನಾನೆಂತು ಬದುಕವೆನಯ್ಯಾ, ಲಿಂಗ ಜಂಗಮವ ತಿಳಿಯದ ಅಜ್ಞಾನಿ ನಾನು. ನನ್ನ ಅಹಂಕಾರವನ್ನು ಕಳೆದು ಉದ್ಧರಿಸಯ್ಯ ಎಂದಾಗ ಪ್ರಭುದೇವರು ಜಂಗಮ ಮುಂದಿರಲು ಲಿಂಗಾರ್ಚನೆ ಡಾಂಭಿಕವಾಗಿ ಮಾಡಿದರೆ ನಮ್ಮ ಗುಹೇಶ್ವರ ನಗುವನಯ್ಯಾ ಎಂದಾಗ ಬಸವಣ್ಣನವರು ಮನದಲ್ಲಿ ದೃಢವಿಲ್ಲದ ಭಕ್ತಿ ಫಲಿಸಬಲ್ಲದೇ, ಕಲ್ಲು ನೀರಿನಲ್ಲಿ ಎಷ್ಟು ದಿನ ಮುಳುಗಿದ್ದರೇನು? ನೆನೆದು ಮೃದುವಾಗಬಲ್ಲದೇ ಎಂದು ಹೇಳುತ್ತಿದ್ದಂತೆ ಶಿವಭಕ್ತಿಗೆ ಅರಿವೇ ಮುಖ್ಯ ಹೊರತು ಅಹಂಕಾರವಲ್ಲ ಎಂದಾಗ ಬಸವಣ್ಣನವರು,

"**ಬಸವಣ್ಣ** : ಅಯ್ಯಾ, ಲಿಂಗ ಜಂಗಮನ ಒಂದೆಂಬ ಶಿಕಾ ಶಾಸ್ತ್ರದಿಂದ ಹೊಯ್ದು ಎನ್ನ ಅಜ್ಞಾನ ಪರಿಹರಿಸು, ಒಲೆಹತ್ತಿ ಉರಿದರೆ ನಿಲ್ಲಬಹುದಲ್ಲದೆ ಧರೆ ಹತ್ತಿ ಉರಿದರೆ ನಿಲ್ಲಬಹುದೇ? ಒಂಡು ನೀರುಂಡರೆ, ಬೇಲಿ ತೋಟ ಮೈಯ್ದರೆ ಮಗುವಿಗೆ

ತಾಯಿಯ ಮೊಲೆ ಹಾಲು ವಿಷವಾದರೆ ಕಾವರಾರಯ್ಯ ಜಂಗಮ ಮುನಿದರೆ ನಾನು ಸೈರಿಸಬಲ್ಲೆನೇ?

**ಪ್ರಭು** : ಅಹಹ! ಭಕ್ತಿಯ ಬೆಳಕು ಬಸವಂಣ! ನಾನಿಂದು ಆಯತ ಸ್ವಾಯತ ಸಂನಿಹಿತಗಳಲ್ಲಿ ಪೂರ್ವಾಚಾರಿಯ ಕಡೆ! ಗುಹೇಶ್ವರ ಲಿಂಗದಲ್ಲಿ ಪೂರ್ವಾಚಾರಿಯ ಕಂಡರೆ ಬಸವಂಣಾ, ನಿನ್ನ ಕಂಡು ಎನ್ನ ತನು ಬಯಲಾಗಿತ್ತು. ನಿನ್ನ ಮುಟ್ಟು ಎನ್ನ ಕ್ರಿಯೆ ಬಯಲಾಗಿತ್ತು! ನಿನ್ನ ನೆನೆದು ಎನ್ನ ಮನ ಬಯಲಾಯಿತ್ತು! ನಿನ್ನ ಅನುಭವ ಕೇಳಿ ಎನ್ನ ಭವನಾಕ್ತಿಯಾಯಿತ್ತು ನಿನ್ನ ಕಂಡು ನಾನು ಬದುಕಿದೆನಯ್ಯ".[೬]

ಹೀಗೆ ಅಲ್ಲಮಪ್ರಭುದೇವರು ಜಂಗಮದ ಪರಿಕಲ್ಪನೆಯನ್ನು ಬಿತ್ತುತ್ತಾ ಅದರ ಅಂತರಾಳದ ಭಕ್ತಿಯ ಮಹತ್ವವನ್ನು ಅರಿತು ಬಸವಣ್ಣನವರನ್ನು ಭಕ್ತಿಲೋಕಕ್ಕೆ ಹರಡಿಸುವ ಉದ್ದೇಶದಿಂದ ಈ ಮೇಲಿನಂತೆ ಮಾತನಾಡಿದರೆ ಮುಂದುವರಿದ ಪ್ರಭುದೇವರು ಜಾತಿಯ ಅಂತರವನ್ನು ಕುರಿತು ತಮ್ಮದೇ ಆದ ವಿರೋಧ ನಿಲುವನ್ನು ತಾಳುವುದರ ಮೂಲಕ ಜಾತಿ ಮನುಷ್ಯ ನಿರ್ಮಿತ ಕೊಳೆ ಎಂದು ಹೇಳುತ್ತಾರೆ. ಅಲ್ಲದೇ ನಡೆ-ನುಡೆ ಶುದ್ಧವಾಗಿರುವ ವ್ಯಕ್ತಿಯೇ ಕುಲಜ ಎಂದು ಹೇಳುವ ಪ್ರಭುದೇವರು ಹುಟ್ಟಿನಿಂದ ಕುಲ-ಹೊಲೆ ಸೂತಕವಿಲ್ಲ. ಆದರೆ ಕೆಲವರು ಜಾತಿಯನ್ನೇ ಮೂಲವಾಗಿಟ್ಟುಕೊಂಡು ಕೀಳು ಎಂಬ ಭಾವನೆಗೆ ಪ್ರಭುದೇವರು ವಿರೋಧಿಸುತ್ತಾರೆ. ಆಗ ಸತ್ಯಕ್ಕ ಎನ್ನುವ ವಚನಕಾರ್ತಿ ಬಸವಣ್ಣನವರು ಬ್ರಾಹ್ಮಣ ಕುಲದಿಂದ ಬಂದಿದ್ದಾರೆ. ಜಾತಿ ವಿಷಯವಾಗಿ ಬಸವಣ್ಣನವರ ಅಭಿಪ್ರಾಯವೇ ಬಹುಮುಖ್ಯ ಎಂದಾಗ ಬಸವಣ್ಣನವರು ವಿಪ್ರ ಮೊದಲಾಗಿ ಅಂತ್ಯಜ ಕಡೆಯಾಗಿ, ಹಾರವ ಮೊದಲಾಗಿ ಶ್ವಪಚ ಕಡೆಯಾಗಿ ಶಿವಭಕ್ತರೆಲ್ಲರೂ ಒಂದೇ. ನಾನು ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೋರಿಸಿದರಯ್ಯಾ ಎಂದು ಹೇಳುತ್ತಾನೆ. ಅಂದರೆ ಹುಟ್ಟಿನಿಂದ ಕುಲದ ನಿರ್ಣಯವಾಗುವುದಿಲ್ಲ. ಅವರವರ ನಡೆ-ನುಡಿಗಳಿಂದ ನಿರ್ಣಯವಾಗುತ್ತದೆ ಎಂಬುದಾಗಿ ಬಸವಣ್ಣನವರು ನುಡಿಯುತ್ತಾರೆ.

ಮಧುವರಸ ಮತ್ತು ಹರಳಯ್ಯನವರ ಮಕ್ಕಳಿಗೆ ಮದುವೆ ವಿಚಾರವಾಗಿ ಶೂನ್ಯ ಸಿಂಹಾಸನದಲ್ಲಿ ಚರ್ಚೆ ನಡೆಯುವಾಗ ಪ್ರಭುದೇವರು ಬಸವಣ್ಣನನ್ನು ಕುರಿತು ಕೇಳಿದಾಗ ಬಸವಣ್ಣನವರು ಪ್ರಭುರಾಯ, ಆರು ಮುನಿದು ನಮ್ಮನೇನು ಮಾಡುವರು, ಹರಳಯ್ಯ ಮತ್ತು ಮಧುವರಸರು ಜಾತಿಯನ್ನು ಮರೆತು ಶರಣರಾಗಿ ಶರಣ ಕುಲದ ಮದುವೆಗೆ ಒಪ್ಪಿಕೊಂಡಾಗ ಇವರ ಸ್ವಾಮಿಯ ಕಾರ್ಯಕ್ಕೆ ಸ್ವಾಮಿಯೇ ರಕ್ಷಕ. ಇಂದು ನಾವು ಮಾಡುವ ಕಾರ್ಯ ಒಳ್ಳೆಯದೋ, ಕೆಟ್ಟದ್ದೋ, ನಾಳೆಯ ಚಿಂತೆ ನಮಗೇಕೆ? ಮೂಲಭೂತವಾದಿಗಳು ಅನರ್ಥವನ್ನೇ ಭಾವಿಸುವುದಾದರೆ ಅದಕ್ಕೇಕೆ ನಮ್ಮ ಯೋಚನೆ ಎಂದಾಗ ಪ್ರಭುದೇವರು ವೇದಗಳು, ಶಾಸ್ತ್ರಗಳು ಪುರಾಣಗಳು ಅರಿಯದೇ ನಾವು ಹಿರಿಯರು ಹೇಳಿದಂತೆ ಅನಾಚಾರಕ್ಕೆ ಈಡಾಗಿದ್ದೇವೆ. ಈ ಮದುವೆ ಒಳ್ಳೆಯದೆಂದ ಮೇಲೆ ಅದರ ಫಲಾಪೇಕ್ಷೆ ಬೇಡ ಎಂದು ಬಸವಣ್ಣನವರ ತತ್ವದ ತಾತ್ಪರ್ಯವನ್ನು ಹೊಗಳುತ್ತಾ ಹೋಗುತ್ತಾರೆ.

ಮೋಳಿಗೆ ಮಾರಯ್ಯ, ಹರಳಯ್ಯ, ಕಿನ್ನರಿ ಬೊಮ್ಮಯ್ಯ, ಚೆನ್ನಬಸವಣ್ಣ, ಸಕಳೇಶ ಮಾದರಸ, ಇನ್ನು ಸಮಾನ ಮನಸ್ಕರಾದ ಶರಣರೆಲ್ಲರೂ ಸೇರಿ ವಿಚಾರಗಳನ್ನು ವ್ಯಕ್ತಪಡಿಸುವಾಗ ಸಾಮಾಜಿಕ

ಸಮಸ್ಯೆ ಎದುರಾಗಿ ನಿಲ್ಲುತ್ತದೆ. ಏಕೆಂದರೆ ಎಲ್ಲರೂ ಲಿಂಗಧಾರಿಗಳಾಗಿ ಶಿವಭಕ್ತರಾದ ಮೇಲೆ ಜಾತಿಯ ಮಾತೆಲ್ಲಿ ಬರುತ್ತದೆ. ಶಿವಾಚಾರಕ್ಕೊಳಗಾದವರೆಲ್ಲರು ಸಮಾನರು. ಇದಕ್ಕೆ ಎಲ್ಲರ ಸರ್ವಾನುಮತವಿದೆ. ಈ ಶರಣರ ಎಲ್ಲ ವಿಚಾರಗಳನ್ನು ಪರಿಶೀಲಿಸಿದ ಪ್ರಭುದೇವರು ಮಾನವ ಜನಾಂಗದಲ್ಲಿ ಭಾವೈಕ್ಯ ಬೆಳೆಯದೇ ವಿಶ್ವಕಲ್ಯಾಣವಾಗಲಾರದು. ಈ ನಿಮ್ಮ ನಿರ್ಣಯಗಳು ಭಾವೈಕ್ಯತೆಗೆ ಭದ್ರ ಬುನಾದಿಯಾಗಿವೆ. ಇದಕ್ಕಾಗಿ ಸರ್ವ ಶರಣ-ಶರಣೆಯರು ಸಹ ಜೀವದ ಹಂಗು ತೊರೆದು ಶ್ರಮಿಸಬೇಕು. ಒಂದು ವೇಳೆ ಇದಕ್ಕಾಗಿ ಪ್ರಾಣವನ್ನೇ ಪಣವನ್ನಾಗಿ ಒಡ್ಡಬೇಕಾದ ಪ್ರಸಂಗ ಬಂದರೆ ನೀವು ಯಾರು ಅಂಜಬಾರದು ಎಂದು ಹೇಳುವುದರ ಮೂಲಕ ಜಾತಿರಹಿತ ಸಮಾಜದ ನೀತಿಗೆ ಪೀಠಾಧ್ಯಕ್ಷರಾದ ಪ್ರಭುದೇವರು ಒಪ್ಪಿಗೆಯನ್ನು ನೀಡುತ್ತಾರೆ.

ಯಾವ ಬಸವಣ್ಣ ಅಲ್ಲಮಪ್ರಭುಗಳನ್ನು ಪೀಠಾಧಿಪತಿಯನ್ನಾಗಿ ನೇಮಿಸಿ ಅವರ ಜ್ಞಾನಕ್ಕೆ ಮತ್ತು ವಯಸ್ಸಿಗೆ ಅನುಗುಣವಾಗಿ ನಡೆದುಕೊಳ್ಳುವುದರ ಮೂಲಕ ಅನುಭವಮಂಟಪದೊಳಗೆ ಪ್ರತಿಯೊಂದು ವಿಷಯದ ಚರ್ಚೆ ನಡೆದಾಗ ಎಲ್ಲಾ ಶರಣರು ಬಸವಣ್ಣನ ವಿಚಾರಗಳನ್ನೇ ಪ್ರಸ್ತಾಪಿಸುತ್ತಾರೆ. ಅದನ್ನು ಆಲಿಸಿದ ಅಲ್ಲಮರು ಬಸವಣ್ಣನ ದಿವ್ಯ ದರ್ಶನವನ್ನು ಕಂಡು ಬೆರಗಾಗುವುದಷ್ಟೇ ಅಲ್ಲದೇ ಆತನ ವಿಚಾರಗಳಿಂದ ಉತ್ತೇಜಿತಗೊಳ್ಳುತ್ತಾರೆ. ಶರಣರಲ್ಲಿಯೇ ಜ್ಞಾನಿಯಾದ ಪ್ರಭುದೇವರು.

"**ಪ್ರಭು** : ಬಸವಣ್ಣನಿಂದ ಎನ್ನ ಮನ ಬಯಲು, ಎನ್ನ ತನು ಬಯಲು,
ಜ್ಞಾನಕ್ಕೆ ಭಕ್ತಿಯ ಪುಟದಿಟ್ಟವಯ್ಯಾ, ಬಸವಣ್ಣ
ಆರೂಢ ದಾಸೋಹಿ ಬಸವಣ್ಣ
ನಿಸ್ಸಂಗ ನಿಜರೂಪ ಬಸವಣ್ಣ".[೭]

ಹೀಗೆ ಹೇಳುವುದರ ಮೂಲಕ ಜ್ಞಾನಿಯಾದ ಪ್ರಭುದೇವ ಬಸವಣ್ಣನ ಬಹುಮುಖ ವ್ಯಕ್ತಿತ್ವವನ್ನು ಕಂಡು ಆತನ ಭಕ್ತಿ, ದಾಸೋಹ ಹಾಗೂ ಅನುಭವಮಂಟಪದ ರಚನಾತ್ಮಕ ಕಾರ್ಯಗಳನ್ನು ಕಂಡು ಬಸವಣ್ಣನ ಲೋಕೋತ್ತರ ವಿಚಾರಗಳಿಗೆ ಪುಷ್ಠಿ ನೀಡುವಲ್ಲಿ ಶ್ರಮಿಸುತ್ತಾರೆ.

**ಸಿದ್ಧರಾಮ** : ಸಿದ್ಧರಾಮನಿಂದ ವೀರಶೈವ ಆಂದೋಲನ ಹೆಚ್ಚು ವ್ಯಾಪಕವಾಯಿತು. ಪ್ರಭಾವಶಾಲಿ ಶರಣನಾಗಿದ್ದರಿಂದಲೇ ಈತನಿಗೆ ವಿಶೇಷವಾಗಿ ಕಾಯಕ-ಯೋಗಿ ಸಿದ್ಧರಾಮನೆಂದು ಸಂಬೋಧಿಸುವುದರ ಮೂಲಕ ಶರಣ ಕುಲದ ಶರಣರನ್ನಾಗಿ ಗುರುತಿಸಿದ್ದಾರೆ. ಈತನ ಹುಟ್ಟೂರು ಈಗಿನ ಮಹಾರಾಷ್ಟ್ರದ ಸೊಲ್ಲಾಪುರದ ಸಮೀಪದಲ್ಲಿರುವ ಸೊನ್ನಲಿಗೆ. ತಂದೆ - ಮೋರಡಿಯ ಮುದ್ದ, ತಾಯಿ ಸುಗ್ಗಳೆ. ಈ ದಂಪತಿಗಳಿಗೆ ಸುಮಾರು ವರ್ಷಗಳ ನಂತರ ಅಂದರೆ ಇಳೆ ವಯಸ್ಸಿನಲ್ಲಿ ಗರ್ಭ ಕಾಣಿಸಿಕೊಂಡಿತು. ಇದನ್ನು ಕಂಡು ಸುತ್ತಲಿನ ಜನರು ಆಶ್ಚರ್ಯವಾಗಿದ್ದು ಉಂಟು. ಆಗ ರೇವಣಸಿದ್ಧ ಎನ್ನುವ ಶರಣರು ಸುಗ್ಗಳೆಗೆ ನಿನ್ನ ಗರ್ಭದಿಂದ

ಲೋಕೋತ್ತರ ಶಿಶು ಜನಿಸುತ್ತದೆ ಎಂದು ಹೇಳಿದಂತೆ ಆ ಶಿಶು ಜನಿಸಿದಾಗ ಮನೆಯ ದೇವರಾದ ಧೂಳಿ ಮಕಾಳನ ಹೆಸರನ್ನು ಈ ಮಗುವಿಗೆ ನಾಮಕರಣ ಮಾಡುತ್ತಾರೆ. ಬಾಲ್ಯದಲ್ಲಿ ಸಿದ್ಧರಾಮ ಶ್ರೀ ಶೈಲದ ಯಾತ್ರಿಕರೊಡನೆ ತಂದೆ ತಾಯಿಗೆ ಹೇಳದೇ ಕೇಳದೇ ನಡೆದು ದೈವಭಕ್ತನಾಗಿ ಹಿಂದಿರುಗಿ ಮಲ್ಲಿಕಾರ್ಜುನನ ಲಿಂಗವನ್ನು ಪ್ರತಿಷ್ಠಾಪಿಸಿ ಮಠವನ್ನು ಕಟ್ಟಿಕೊಂಡ ಎಂಬ ವಿಚಾರ ಒಂದೆಡೆಯಾದರೆ ಅಲ್ಲಮಪ್ರಭು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆ ತಂದು ಚೆನ್ನಬಸವಣ್ಣನಿಂದ ದೀಕ್ಷೆ ಕೊಡಿಸಿದರು ಎಂಬುದು ಮತ್ತೊಂದು ವಿಚಾರ. ಬಸವಣ್ಣನ ಪ್ರಭಾವಕ್ಕೆ ಒಳಗಾಗುವುದರ ಮೂಲಕ ಲಿಂಗ ಆರಾಧಕನಾಗಿದ್ದ ಸಿದ್ಧರಾಮ ಇಷ್ಟಲಿಂಗ ಆರಾಧಕನಾಗಿ ಅನೇಕ ವಚನಗಳನ್ನು ರಚಿಸಿ ಶರಣರಲ್ಲಿ ಶರಣನಾಗಿ ಪ್ರತಿಯೊಂದು ಹಂತದಲ್ಲೂ ಬಸವಣ್ಣನ ಚಿಂತನೆಗಳಿಗೆ ತತ್ವಗಳಿಗೆ ಮತ್ತು ಆಚಾರ-ವಿಚಾರಗಳಿಗೆ ಬದ್ಧನಾಗುತ್ತಾ ಬಸವಣ್ಣನ ನಿಲುವುಗಳಿಗೆ ಸಾಟಿ ನೀಡುತ್ತಾನೆ.

ಬಸವಣ್ಣನವರು ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ ಆಗಮದ ಮೂಗ ಕೊಯ್ಯುವೆ ಎಂದು ನುಡಿದರೆ ಆ ವಿಚಾರವಾಗಿ ಅನುಭವಮಂಟಪದಲ್ಲಿ ಜಾತಿಯ ವಿಷಯದ ಕುರಿತು ಚರ್ಚೆ ನಡೆದಾಗ ಪ್ರಭುದೇವರು ಈ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬುದಕ್ಕೆ ಸಿದ್ಧರಾಮನವರೇ ನೀವು ಏನು ಹೇಳುವಿರಿ ಎಂದಾಗ

"ಸಿದ್ಧರಾಮಣ್ಣ : ಸ್ಮೃತಿಗಳು ಸಮುದ್ರದ ಪಾಲಾಗಲಿ,
ಶ್ರುತಿಗಳು ವೈಕುಂಠ ಸೇರಲಿ,
ಪುರಾಣಗಳು ಅಗ್ನಿಯ ಸೇರಲಿ,
ಆಗಮಗಳು ವಾಯುವ ಹೊಂದಲಿ,
ಎಮ್ಮ ನುಡಿ ಕಪಿಲಸಿದ್ಧ ಮಲ್ಲಿಕಾರ್ಜುನ
ಮಹಾಲಿಂಗನ ಹೃದಯದಲ್ಲಿ ಗ್ರಂಥಿಯಾಗಲಿ".[೮]

ಹೀಗೆ ಸಿದ್ಧರಾಮನವರು ಸಮತೆಯ ಶಿರೋಮಣಿಯಾಗಿ ಅಲ್ಲಮಪ್ರಭುಗಳಿಗೆ ಗೋಚರಿಸುತ್ತಾರೆ. ಭಕ್ತಿ ಭಂಡಾರಿ ಬಸವಣ್ಣನವರ ನೈತಿಕತೆಯನ್ನು ಅಳವಡಿಸಿಕೊಂಡ ಸಿದ್ಧರಾಮನು ಮಧುವರಸ ಮತ್ತು ಹರಳಯ್ಯ ದಂಪತಿಗಳ ಮಕ್ಕಳಿಗೆ ವಿವಾಹದ ವಿಷಯ ಬಂದಾಗ ಸಿದ್ಧರಾಮರು ಈ ಮದುವೆ ಸಮಾಜ ಪದ್ಧತಿಗೆ ವಿರುದ್ಧವಾದುದು, ನಿಜ. ಶರಣ ಧರ್ಮಕ್ಕೆ ಶರಣ ಕುಲಕ್ಕೆ ಇದು ಹೊರತಲ್ಲ. ಇದು ಶರಣ ಬಳಗಕ್ಕೆ ಕಳಶ ಪ್ರಾಯದ ಕೆಲಸ. ಒಂದು ವೇಳೆ ಇದರಿಂದ ಲೋಕವಿರೋಧ ಕಟ್ಟಿಕೊಳ್ಳಬೇಕಾಗಬಹುದು. ಕಟ್ಟಿಕೊಂಡರೂ ಚಿಂತೆಯಿಲ್ಲ. ಇದು ದೇವ ಮೆಚ್ಚಿಕೊಳ್ಳುವ ಕಾರ್ಯ. ಹೆಣ್ಣು ಹೊನ್ನು ಮಣ್ಣುಗಳನ್ನು ಅಳಿಯದಿರು. ನಿನ್ನ ಮನ ಅವುಗಳಿಗೆ ಒಳಗಾದರೆ ಬಳಲಿಯಾದರೂ ದೊರಕಿಸಿ ಸುಖಿಸುವುದು. ಸಂಸಾರ ಯೋಗವು ಸದ್ಗತಿಗೆ ಸಾಧನವೆಂದೇ ನನ್ನ ವಿಚಾರ ಎಂದು ನುಡಿಯುವುದರ ಮೂಲಕ ಬಸವಣ್ಣನವರ ತತ್ವದ

ಸಿದ್ಧಾಂತಕ್ಕೆ ಒಳಗಾಗಿ ತನ್ನ ಕಾಲದ ಅನೇಕ ದುಷ್ಟ ನಡವಳಿಕೆಗಳನ್ನು ಖಂಡಿಸಿದ್ದಾರೆ. ಅಲ್ಲದೇ ತನ್ನ ಭಕ್ತಿ ಅನುಭಾವಗಳಿಗೆ ಅಭಿವ್ಯಕ್ತಿಯನ್ನು ಕೊಟ್ಟಿರುವುದಲ್ಲದೇ ಬಸವ, ಅಲ್ಲಮ ಮೊದಲಾದ ಶಿವಶರಣರನ್ನು ಮನದುಂಬಿ ಹೊಗಳಿದ್ದಾರೆ. ಹೀಗೆ ಸಿದ್ಧರಾಮ ನಾಟಕಗಳಲ್ಲಿ ನೇರವಾಗಿ ಬಸವಣ್ಣನ ಜೊತೆಗೆ ಸಂಭಾಷಣೆಗೆ ಇಳಿಯದೇ ಹೋದರೂ ಕೂಡ ಅನುಭವಮಂಟಪದ ಗೋಷ್ಠಿಗಳಲ್ಲಿ ನಡೆಯುವ ಪ್ರತಿಯೊಂದು ವಿಷಯದ ಬಗ್ಗೆ ಪ್ರಭುದೇವರು ವ್ಯಕ್ತಪಡಿಸುವಾಗ ಸಿದ್ಧರಾಮನನ್ನು ಮುಖ್ಯವಾಗಿಟ್ಟುಕೊಂಡು ಚಿಂತನೆಗಳು ನಡೆದಾಗ ಬಸವತತ್ವ, ಕಾಯಕನಿಷ್ಠೆ ಮತ್ತು ಜಂಗಮದ ಪರಿಕಲ್ಪನೆಗೆ ಪೋಷಕವಾಗಿ ನಿಂತು ಶರಣರ ನೈತಿಕ ವಿಚಾರಗಳಿಗೆ ಪ್ರಾಮಾಣಿಕವಾಗಿ ಬದ್ಧನಾಗುತ್ತಾನೆ.

**ಚೆನ್ನಬಸವಣ್ಣ** : ಚೆನ್ನಬಸವಣ್ಣನು ವೀರಶೈವ ಧರ್ಮಕ್ಕೆ ತಾತ್ವಿಕ ನೆಲೆಗಟ್ಟನ್ನು ವಹಿಸಿದ ಬುದ್ಧಿಜೀವಿ. ಈತ ಬಸವಣ್ಣನ ಸೋದರಿ ಅಕ್ಕನಾಗಮ್ಮನ ಮಗ. ಡೋಹರ ಕಕ್ಕಯ್ಯನ ಪ್ರಸಾದದಿಂದ ಚೆನ್ನಬಸವಣ್ಣನು ಜನಿಸಿದನೆಂದು ಹೇಳುವ ಕತೆಗಳೂ ಕೂಡ ಇವೆ. ಅದೇನೇ ಇರಲಿ ಬಸವಣ್ಣ ಸೋದರಮಾವನು ಹೌದು. ಲಿಂಗೋಪದೇಶವನ್ನು ಮಾಡಿದ ಗುರುವೂ ಹೌದು. ಬಸವಣ್ಣನವರು ಭಂಡಾರಿಯಾಗಿ ಕೆಲಸ ಮಾಡಬೇಕಾಗಿದ್ದರಿಂದ ಚೆನ್ನಬಸವಣ್ಣನ ಸಹಕಾರವನ್ನು ಪಡೆದುಕೊಂಡ. ಸದಾ ಅಧ್ಯಯನಶೀಲನಾಗಿದ್ದ ಚೆನ್ನಬಸವಣ್ಣ ಬಸವಣ್ಣನ ಮನೆಯ ಆಗು-ಹೋಗುಗಳನ್ನು ನೋಡಿಕೊಳ್ಳುವ ಮೂಲಕ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ಮುಂದಾಗಿದ್ದು ಜೊತೆಗೆ ಚೆನ್ನಬಸವಣ್ಣನ ಬೌದ್ಧಿಕ ಔನ್ನತ್ಯದ ಬಗ್ಗೆ ಬಸವಣ್ಣನಿಗೆ ಗೌರವವಿತ್ತು ಎಂದು ಹೇಳಲಾಗಿದೆ. ಚೆನ್ನಬಸವ ತನ್ನನ್ನು ಬಸವಣ್ಣನ ಸಂಪ್ರದಾಯದ ಕೂಡ ನೋಡಾ ನಾನು ಎಂದು ಹೇಳಿಕೊಂಡಿದ್ದಾನೆ. ಬಸವಣ್ಣನ ತೀವ್ರ ಪ್ರಭಾವಕ್ಕೆ ಒಳಗಾಗಿರುವ ಚೆನ್ನಬಸವಣ್ಣನಲ್ಲಿ ಬಸವನ ತತ್ವದ ವಿಚಾರಗಳು ಸಾಬೀತಾಗುತ್ತವೆ.

"**ಬಸವಣ್ಣ** : (ಚೆನ್ನಬಸವನ ಕೈಹಿಡಿದು)

"ನಾನು ಬಂದ ಕಾರ್ಯಕ್ಕೆ ನೀವು ಬಂದಿರಿ
ನೀವು ಬಂದ ಕಾರ್ಯಕ್ಕೆ ನಾನು ಬಂದೆ.
ನಾನೂ ನೀವೂ ಬಂದ ಕಾರ್ಯಕಕೆ ಬಂದಾತ
ನಲ್ಲಮ ಪ್ರಭುದೇವರು

ಮುಂದೆ ಕೆಲವು ದಿವಸಕ್ಕೆ ಕಲ್ಯಾಣವೆಂಬುದು ಪ್ರಣತಿಯಾಯಿತು.
ನಾನು ತೈಲವಾದೆನು, ಚಿಕ್ಕದಂಡನಾಯಕರು
ಬತ್ತಿಯಾದರು, ಪ್ರಭುದೇವರೇ ಜ್ಯೋತಿಯಾದರು
ಪ್ರಣತಿ ಒಡೆಯಿತು, ತೈಲವರಿತಿತ್ತು. ಜ್ಯೋತಿ ಬಯಲಾಗಿತ್ತು".
(ಹೋಗುವನು)

**ಚೆನ್ನಬಸವ** : "ಭಕ್ತಿಯ ಕುಳಸ್ಥಳವನು
ಮರ್ತ್ಯಲೋಕದಲ್ಲಿ ಹರಹಲೆಂದು

ಬಂದನಯ್ಯಾ ಬಸವಣ್ಣನು
ಆಚಾರದ ಶಿವಾಚಾರದ ಮುಂದಣ ಕನ್ನಡವ ಕಳೆದು
ಕರತಳಾಮಲಕ ಮಾಡಿದನಯ್ಯ ಬಸವಣ್ಣನು
ಕೂಡಲ ಚೆನ್ನಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ
ಎನ್ನಳವಲ್ಲ, ನಿನ್ನಳವಲ್ಲ, ಕೇಳಾ ಪ್ರಭುವೆ."[೯]

ಹೀಗೆ ಚೆನ್ನಬಸವಣ್ಣನು ಬಸವಣ್ಣನ ವಿಚಾರಗಳನ್ನು ತಾತ್ವಿಕವಾಗಿ ಗ್ರಹಿಸಿ ಆತನ ಅಣತಿಯಂತೆ ಅನುಭವಮಂಟಪದ ಸಕಲ ವಿಚಾರಗಳಲ್ಲಿ ಕೇಂದ್ರ ಬಿಂದುವಾಗಿ ಕಾಣಿಸಿಕೊಳ್ಳುತ್ತಾ ಹೋಗುತ್ತಾನೆ. ಬಸವಣ್ಣನು ಅರಮನೆಯ ಕೆಲಸ ಕಾರ್ಯಗಳಲ್ಲಿ ತೊಡಗಿದಾಗ ಉಳಿದ ಶರಣರೆಲ್ಲರಿಗೂ ತಾತ್ವಿಕ ವಿಚಾರಗಳನ್ನು ಹಂಚುವ ಮೂಲಕ ತನ್ನ ಬೌದ್ಧಿಕತೆಯನ್ನು ತೋರ್ಪಡಿಸುತ್ತಾನೆ.

ನಂತರದಲ್ಲಿ ಬಿಜ್ಜಳ, ಜಗದೇವ, ಮಲ್ಲಿಬೊಮ್ಮ ಈ ಮೂರು ಪಾತ್ರಗಳು ತಮ್ಮ ತಮ್ಮಲ್ಲಿ ವೈಷಮ್ಯವನ್ನು ಕಟ್ಟಿಕೊಳ್ಳುವುದರ ಮೂಲಕ ಜಗದೇವನಿಂದ ಬಿಜ್ಜಳ ಕತ್ತಿಯಿಂದ ನೆಲಕ್ಕೆ ಬೀಳುತ್ತಾನೆ. ಆಗ ಬಿಜ್ಜಳನ ಹೆಂಡತಿ ಆತನ ಸ್ಥಿತಿಯನ್ನು ಗಮನಿಸಿ ಮಗನ ಅಳುವನ್ನು ಕಂಡು ನಿಮ್ಮ ತಂದೆ ಇಂದು ಪರಮಶಾಂತಿಯಲ್ಲಿ ಪವಡಿಸಿದ್ದಾನೆ. ಒಂದು ವೇಳೆ ಬಸವಣ್ಣನವರು ಇದ್ದರೆ ಈ ಸ್ಥಿತಿಗತಿ ಬರುತ್ತಿರಲಿಲ್ಲ. ಮರಣ ಸಂಕಟವನ್ನು ಅನುಭವಿಸುತ್ತಾ ಬಿಜ್ಜಳ ನಿನ್ನ ಅಜ್ಞಾನಿ ಬಂಧುವನ್ನು ಕ್ಷಮಿಸು ಎಂದು ಹೇಳಿಕೊಳ್ಳುವಲ್ಲಿ ಬಸವಣ್ಣನ ಮಹತ್ವ ಅರಿವಿಗೆ ಬರುತ್ತದೆ. ಆ ನೋವಿನಿಂದ ಮುಂದುವರಿದು ನನ್ನನ್ನು ಕೊಂದವರು ತಮ್ಮ ಮಕ್ಕಳೇ ಎಂದು ಹೇಳುತ್ತಿದ್ದಂತೆಯೇ ಜೀವದ ಕೊನೆಯುಸಿರನ್ನು ಎಳೆಯುತ್ತಾನೆ. ಆಗ ಗಂಡನನ್ನು ಕಳೆದುಕೊಂಡ ಬಿಜ್ಜಳನ ಹೆಂಡತಿ ದುಃಖದಲ್ಲಿ ಇರುವಾಗ ಜಗದೇವನು ತಾಯಿ ಎಂದಾಗ ನನ್ನನ್ನು ತಾಯಿಯೆಂದು ಸಂಬೋಧಿಸಬೇಡಿ. ಏಕೆಂದರೆ ನೀವು ತಂದೆಯನ್ನು ಕೊಂದ ಕೊಲೆಪಾತಕರು ಎಂದು ತನ್ನ ರೋಧನೆಯನ್ನು ವ್ಯಕ್ತಪಡಿಸುವಾಗ ಆಗಮಿಸಿದ ಚೆನ್ನಬಸವಣ್ಣನವರು ಬಿಜ್ಜಳನ ಶವವನ್ನು ಕಂಡು ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕಾಗಿದ್ದ ಬಿಜ್ಜಳ ಮಹಾರಾಜ ಭೂಮಿಯ ಮೇಲೆ ಮಲಗುವಂತಾಯಿತೇ ಎಂದು ತನ್ನ ದುಃಖದ ಧಾರುಣತೆಯನ್ನು ತೋರಿಸುವುದರ ಮೂಲಕ ಬಿಜ್ಜಳನ ದಯೆ ಪರ ಚಿಂತನೆಯನ್ನು ಮೆಲುಕು ಹಾಕುತ್ತಾನೆ. ಮುಂದುವರಿದ ಚೆನ್ನಬಸವಣ್ಣ -

"ನನ್ನ ದೊರೆಯ ರಕ್ಷಣೆ ನಿನ್ನದು-ಆತನಿಗೆ ಕಿಂಚಿತ್ತು ಹಿಂಸೆ
ಅಪಮಾನವಾದರೂ ನಾನು ಸಹಿಸೆ" ಎಂದು ಸಂದೇಶವಿತ್ತರು.
ಹರನಾಣೆಯಿಟ್ಟು ಪ್ರಮಾಣ ಮಾಡಿದೆ. ಜೀವವನ್ನಾದರೂ ಒತ್ತೆಯಿಟ್ಟು
ಪ್ರಭುವನ್ನು ರಕ್ಷಿಸುವೆನೆಂದು... ಮಾತು ತಪ್ಪಿದೇ ತಾಯಿ... ನನ್ನನ್ನು ಶಿಕ್ಷಿಸು,
ಈ ಹುತಾತ್ಮನ ರಕ್ತದೊಂದಿಗೆ ನನ್ನ ರಕ್ತ ಬೆರೆತು ನಾಳಿನ ಭಾರತದಲ್ಲಿಯಾದರೂ
ಬಂಧು ಪ್ರೇಮ ಎಲ್ಲರಲ್ಲಿಯೂ ಬಿತ್ತರಿಸಲಿ... (ತಲೆಬಾಗಿ ನಿಲ್ಲುವನು)[೧೦]

ಎಂದು ಹೇಳುತ್ತಾ ಚೆನ್ನಬಸವಣ್ಣನವರು ತನ್ನ ಮಾವನಿಗೆ ನೀಡಿದ ಅಪ್ಪಣೆಯನ್ನು ಉಳಿಸಿಕೊಳ್ಳದೇ ಬಸವಣ್ಣನವರಿಗೆ ನಾನು ಹೇಗೆ ಮುಖ ತೋರಿಸಲಿ ಎಂಬ ಚಿಂತನೆಗೆ ಬಸವಣ್ಣನವರ ಆಸೆಗೆ ಈತನು ನೀರೆರೆದಂತೆ ಕಾಣಿಸಲಾಗದೇ ದುಃಖಕ್ಕೆ ಈಡಾಗುತ್ತಾನೆ. ಅಷ್ಟೇ ಅಲ್ಲದೇ ಬಸವಣ್ಣನವರು ವಹಿಸಿಕೊಟ್ಟ ಜವಾಬ್ದಾರಿಯನ್ನು ಬಿಜ್ಜಳನ ಮಗ ಸೋವಿದೇವ ಆಸ್ಥಾನದ ಅರಸನಾಗುವವರೆಗೂ ಎಲ್ಲಾ ವ್ಯವಸ್ಥೆಯನ್ನು ನೋಡಿಕೊಳ್ಳುವ ಪಾತ್ರವಾಗಿ ಕಾಣಿಸಿಕೊಳ್ಳುತ್ತಾ ಹೋಗುತ್ತಾನೆ. ಹೀಗೆ ನಾಟಕಗಳು ಬಿಜ್ಜಳನ ಕೊಲೆ ಮತ್ತು ಬಸವಣ್ಣನ ಕಲ್ಯಾಣದಿಂದ ನಿರ್ಗಮನ ಇವೆರಡರ ದೃಷ್ಟಿಯಿಂದಾಗಿ ಅಂತ್ಯಗೊಳ್ಳುತ್ತವೆ. ಆದರೆ ಚೆನ್ನಬಸವಣ್ಣ ಚಿಕ್ಕ ವಯಸ್ಸಿನಲ್ಲಿಯೇ ಬಸವತತ್ವ, ತತ್ವದ ನಿಷ್ಠೆ ಮತ್ತು ಪ್ರಾಮಾಣಿಕತೆಗೆ ಬದ್ಧನಾಗಿ ಜೀವಪರ ಚಿಂತನೆಗೆ ನಾಂದಿಯಾಗುತ್ತಾನೆ. ಅಷ್ಟೇ ಬಸವ ವಿಚಾರಗಳನ್ನು ಒಪ್ಪಿಕೊಳ್ಳುವುದರ ಮೂಲಕ ಸಮಾಜಪರ ಚಿಂತನೆಗೆ ನಾಂದಿ ಯಾಗುತ್ತಾನೆ. ಅಷ್ಟೇ ಬಸವ ವಿಚಾರಗಳನ್ನು ಒಪ್ಪಿಕೊಳ್ಳುವುದರ ಮೂಲಕ ಸಮಾಜಪರ ಚಿಂತನೆಗೆ ಮುಂದಾಗುತ್ತಾನೆ ಎಂಬ ಅಂಶಗಳು ನಾಟಕಗಳಲ್ಲಿ ಅಭಿವ್ಯಕ್ತಿಗೊಂಡಿವೆ. ಜನಪ್ರಿಯ ನಾಟಕಕಾರರು ತಮ್ಮ ನಾಟಕಗಳನ್ನು ಸುಖಾಂತಗೊಳಿಸಬೇಕೆಂಬ ಕಾರಣಕ್ಕಾಗಿ ಚೆನ್ನಬಸವಣ್ಣನನ್ನು ಬಸವಣ್ಣನ ಉತ್ತರಾಧಿಕಾರಿಯನ್ನಾಗಿ ಚಿತ್ರಿಸಿರುವುದನ್ನು ಮನಗಾಣಬಹುದಾಗಿದೆ.

**ಕಲಾವತಿ** : ರಾಜ್ಯವನ್ನು ಆಳುತ್ತಿದ್ದ ಅರಸರು ಆಗಿನ ಕಾಲದಲ್ಲಿ ತಮ್ಮ ಮನಸ್ಸಂತೋಷ ಎನ್ನುವುದಕ್ಕಿಂತ ಮನರಂಜನೆಗಾಗಿ ಅಭಿನಯ ಕಲೆಗಳನ್ನು ಅರಮನೆಯಲ್ಲಿ ಏರ್ಪಡಿಸುತ್ತಿದ್ದರು. ಏಕೆಂದರೆ ಅದರ ಜೊತೆ ಜೊತೆಗೆ ಸಂಗೀತ ಮತ್ತು ನೃತ್ಯಕ್ಕೆ ಪ್ರೋತ್ಸಾಹ ನೀಡುವುದು ಆ ಕಾಲದ ವಿಶೇಷವಾಗಿತ್ತು. ಆ ಸ್ಥಾನದಲ್ಲಿ ಗಾಯಕಿಯಾದ ಕಲಾವತಿಯು ತನಗಾಗಿ ಸಿದ್ಧಪಡಿಸಿದ್ದ ವೇದಿಕೆಯಲ್ಲಿ ಕುಳಿತುಕೊಂಡು ರಾಜರ ಬರುವಿಕೆಗಾಗಿ ಉಳಿದ ಜನರೊಂದಿಗೆ ಕಾಯುತ್ತಿದ್ದಳು. ಬಿಜ್ಜಳ ಆಸ್ಥಾನದ ಗಾಯಕಿಯ/ಕಲಾವತಿಯ ಸಂಗೀತ ಸೇವೆಗೆ ಅಪ್ಪಣೆಯನ್ನು ಇಟ್ಟು ಆಕೆಯ ಸಂಗೀತಕ್ಕೆ ಬೆರಗಾಗುತ್ತಾನೆ. ಹೆಣ್ಣು, ಹೊನ್ನು, ಮಣ್ಣು ಮಾಯೆಯೆಂಬ ಜನಪದ ವಾಣಿಗೆ ವಚನಕಾರರು ಇವು ಯಾವುವು ಮಾಯೆಯಲ್ಲ. ಮನದ ಮುಂದಣ ಆಸೆಯೇ ಮಾಯೆ ಎನ್ನುವುದರ ಮೂಲಕ ಸ್ತ್ರೀಪರ ಚಿಂತನೆಗೆ ಮುಂದಾಗುತ್ತಾರೆ. ಕಲಾವತಿ ಹಾಗೇ ನೋಡಿದರೆ ದೇವದಾಸಿ. ಇದೊಂದು ದಾಸ್ಯ ಪದ್ಧತಿಯು ಆಗಿತ್ತು. ಹೀಗಾಗಿ ಆಕೆ ತನ್ನ ಜೀವನ ಮತ್ತು ಹೊಟ್ಟೆಯನ್ನು ಹೊರೆದುಕೊಳ್ಳಲು ಹಲವಾರು ಮಾರ್ಗಗಳನ್ನು ಅನುಸರಿಸಬೇಕಾಗಿತ್ತು. ಆದರೆ ಕಲಾವತಿಯು ಸಂಗೀತ ಮತ್ತು ನೃತ್ಯದಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದಳು.

"**ಕಲಾವತಿ** : ಪುರುಷನ ಮುಂದೆ ಮಾಯೆ,
ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ.
ಸ್ತ್ರೀಯ ಮುಂದೆ ಪುರುಷನೆಂಬ ಮಾಯೆ
ಅಭಿಮಾನವಾಗಿ ಕಾಡಿತ್ತು ನೋಡಾ
ಲೋಕವೆಂಬ ಮಾಯೆಗೆ ಶರಣರ ಚರಿತೆ

ಮರುಳಾಗಿ ತೋರುವುದು ನೋಡಾ.
ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ /
ಮಾಯೆಯಿಲ್ಲ / ಮರೆವಿಲ್ಲ / ಅಭಿಮಾನವೂ ಇಲ್ಲ".[೧೧]

ಹೀಗೆ ಕಲಾವತಿಯು ಅಕ್ಕಮಹಾದೇವಿಯ ವಚನಗಳನ್ನು ಗಾಯನದ ಜೊತೆಗೆ ನೃತ್ಯವನ್ನು ಸಭಾದಲ್ಲಿ ಅಭಿವ್ಯಕ್ತಿಸುತ್ತಾಳೆ. ಹೀಗೆ ಅಭಿವ್ಯಕ್ತಿಸಿದ ನೃತ್ಯಕ್ಕೆ ರಾಜನನ್ನು ಮತ್ತು ಮಂತ್ರಿಗಳನ್ನು ಎಲ್ಲರಿಗೂ ಮೆಚ್ಚಿಕೆಯಾಗುತ್ತಾಳೆ. ಈಕೆಯ ನೃತ್ಯವನ್ನು ವೀಕ್ಷಿಸಿದ ಬಿಜ್ಜಳನು ಆಕೆಗೆ ಮುತ್ತಿನಹಾರವನ್ನು ನೀಡಲು ಸೂಚಿಸುತ್ತಾರೆ. ಆಗ ಕಲಾವತಿಯು ವಿನಮ್ರವಾಗಿ ಆ ಬಹುಮಾನವನ್ನು ಸ್ವೀಕರಿಸಲಾರೆ ನೆಂದು ಹೇಳುತ್ತಾಳೆ. ಇದಕ್ಕೆ ಕಾರಣವೇನೆಂದು ವಿಚಾರಿಸಲಾಗಿ ನಿನ್ನ ನೃತ್ಯಕ್ಕೆ ಇದು ಯೋಗ್ಯವಲ್ಲವೇ? ಎಂದು ಕೇಳಲಾಗುತ್ತದೆ. ಆಗ

"**ಕಲಾವತಿ** : ಹಾಗೇನಿಲ್ಲ. ನಾನು ಯಾವ ಬಹುಮಾನವನ್ನೂ ಸ್ವೀಕರಿಸಲಾರೆ.
ಹಾಗೇ ನನ್ನ ಗುರುಗಳ ಆಜ್ಞೆಯಾಗಿದೆ.
**ಮಧುವರಸ** : ಆಜ್ಞೆ! ಯಾರು ನಿನ್ನ ಗುರುಗಳು?
**ಕಲಾವತಿ** : ಭಕ್ತಿ ಭಂಡಾರಿ ಬಸವಣ್ಣನವರು".[೧೨]

ಹೀಗೆ ಮಹಾಪ್ರಭುಗಳಲ್ಲಿ ವಿನಂತಿಸಿ ಇದೇ ನನ್ನ ಕೊನೆಯ ಸೇವೆ ಎಂದು ಅಭಿವ್ಯಕ್ತಿಸುತ್ತಾಳೆ. ಇದಕ್ಕೆ ಕಾರಣವೆಂದರೆ ಬಸವಣ್ಣನವರ ತತ್ವಸಿದ್ಧಾಂತಗಳಲ್ಲಿ ದೇವದಾಸಿ ಪದ್ಧತಿ, ನೃತ್ಯದಂತಹ ಅನಿಷ್ಟ ಪದ್ಧತಿಗಳಿಂದಾಗಿ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು ಅಧೋಗತಿಗೆ ಇಳಿದಿವೆ. ಆದ್ದರಿಂದ ಇಂತಹ ನೃತ್ಯಗಳಿಂದ ಹೊರಬಂದು ಕಾಯಕತತ್ವದಲ್ಲಿ ಲೀನವಾಗಬೇಕೆಂಬ ತುಡಿತವು, ಆಶಯವು ಅಡಗಿದೆ.

ಕಲಾವತಿಯು ತನ್ನ ಮನದಿಚ್ಛೆಯಂತೆ ಬಸವಣ್ಣನವರ ಸಲಹೆಯಂತೆ ಮಹತ್ವಪೂರ್ಣವಾದ ವಚನಗಳನ್ನು ಹಾಡಿ ಜನಜಾಗೃತಿಗಳನ್ನು ಉಂಟುಮಾಡಬಲ್ಲ – ಕಾಯಕದಲ್ಲಿ ನಿರತಳಾಗುತ್ತಾಳೆ. ಹೀಗೆ ಕಲಾವತಿಯು ಬಸವಣ್ಣನವರ ತತ್ವ ಸಿದ್ಧಾಂತಗಳಿಗೆ ಅನುಗುಣವಾಗಿ ಸೇವೆ ಸಲ್ಲಿಸಲು ಸನ್ನದ್ಧಳಾಗುತ್ತಾಳೆ. ಹೀಗೆ ನಾಟಕಗಳಲ್ಲಿ ನಾಟಕಕಾರರು ಪ್ರೇಕ್ಷಕರನ್ನು ಗಮನದಲ್ಲಿಟ್ಟುಕೊಂಡು ನೃತ್ಯ ಹಾಗೂ ಹಾಡುಗಳನ್ನು ಬಳಸುವುದರ ಸಂದರ್ಭದಲ್ಲಿ ಕಲಾವತಿ ಪಾತ್ರವನ್ನು ತಂದರೂ ಬಸವಣ್ಣನವರ ತತ್ವಸಿದ್ಧಾಂತಗಳನ್ನು ಪ್ರಚಾರ ಮಾಡುವುದಕ್ಕೆ ದುಡಿಸಿಕೊಂಡಿದ್ದಾರೆ.

**ಸಾವಂತ್ರಿ** : ಚಂದ್ರಶೇಖರ ಕಂಬಾರರ 'ಶಿವರಾತ್ರಿ' ನಾಟಕದಲ್ಲಿ ಕಾಣಿಸಿಕೊಳ್ಳುವ ಮುಖ್ಯ ಪಾತ್ರವಾಗಿದೆ. ಈ ನಾಟಕವು 'ಅರಮನೆ' ಮತ್ತು 'ಮಹಾಮನೆ' ಎಂಬ ಎರಡು ಕೇಂದ್ರ ರೂಪಕಗಳ ಸುತ್ತ ನಾಟಕ ಕಟ್ಟಲ್ಪಟ್ಟಿದೆ. ಪರಸ್ಪರ ವಿರುದ್ಧವಿರುವ ಈ ಎರಡು ರೂಪಕಗಳು ಸೂಳೆ ಸಾವಂತ್ರಿಯ ಮನೆಯಲ್ಲಿ ಪರಸ್ಪರ ಎದುರಾಗುತ್ತವೆ. ಅರಮನೆಯನ್ನು ಪ್ರತಿನಿಧಿಸುವ ಬಿಜ್ಜಳ ವೇಶ್ಯೆಯ ಸಂಗಕ್ಕಾಗಿ ಆಕೆಯ ಮನೆಗೆ ಬಂದರೆ ಮಹಾಮನೆಯನ್ನು ಪ್ರತಿನಿಧಿಸುವ ಬಸವಣ್ಣ ಮುಗ್ಧ ಸಂಗಯ್ಯನನ್ನು ಹುಡುಕಿಕೊಂಡು ಬರುತ್ತಾನೆ. ನಾಟಕಕಾರರು ಅರಮನೆ ಮತ್ತು ಮಹಾಮನೆಯ ಮೌಲ್ಯಗಳನ್ನು ಮುಖಾಮುಖಿಯಾಗಿಸುತ್ತಾರೆ. ಬಸವಣ್ಣನಿಗೆ ಸಾವಂತ್ರಿಯು

ತಾಯಿಯಾಗಿ ಕಂಡರೆ ಬಿಜ್ಜಳನಿಗೆ ಅವಳು ತನ್ನ ದೇಹವನ್ನು ಮಾರಿ ಜೀವಿಸುವ ವೇಶ್ಯೆಯಾಗಿ ಕಂಡು ಬರುತ್ತಾಳೆ. ಆಕೆಯು ಬಸವಣ್ಣನ ಪ್ರಭಾವಕ್ಕೆ ಒಳಗಾದವಳು. ಮಹಾಮನೆಯ ಬಗ್ಗೆ ಸಾವಂತ್ರಿಗೆ ಅಪಾರವಾದ ಗೌರವವಿದೆ. ಬಸವಣ್ಣನ ಸಾಮಾಜಿಕ ಸುಧಾರಣೆಯನ್ನು ಆಕೆ ಮನಃಪೂರ್ವಕವಾಗಿ ಒಪ್ಪಿಕೊಂಡಿದ್ದಾಳೆ. ಹಾಗಾಗಿ ಅರಮನೆಗಿಂತ ಮಹಾಮನೆಯು ಹೇಗೆ ಭಿನ್ನ ಎನ್ನುವುದನ್ನು ಬಿಜ್ಜಳನಿಗೆ ಹೇಳುತ್ತಾಳೆ. ಮಹಾಮನೆಯ ಬಗ್ಗೆ ತಮಗೆ ಯಾರೋ ತಪ್ಪು ಮಾಹಿತಿಯನ್ನು ಕೊಟ್ಟಿದ್ದಾರೆ ಎಂದು ಹೇಳುತ್ತಾ ಬಸವಣ್ಣನವರ ಪ್ರತಿಯೊಂದು ನಡೆ-ನುಡಿಯಲ್ಲಿಯೂ ನಿಷ್ಠೆ, ಪ್ರಾಮಾಣಿಕತೆ ಮತ್ತು ಅಂತಃಕರಣವಿದೆ. ಸಮಾಜದಲ್ಲಿ ಶೋಷಣೆಗೆ ಒಳಗಾದವರ ಕುರಿತು ಕಾಳಜಿಯಿದೆ ಎನ್ನುತ್ತಾ ಅಲ್ಲಿ ಎಲ್ಲರೂ ಸಮಾನರಾಗಿ ಜಾತಿ, ಲಿಂಗ, ಧರ್ಮದಿಂದ ವಿಭಾಗಿಸದೇ ಸಮಾನತೆಯಿಂದ ಬದುಕುತ್ತಿದ್ದಾರೆ. ಅಲ್ಲಿರುವ ದಲಿತರು, ಆಯಾಗಾರರು ಸೋಮಾರಿಗಳಲ್ಲ. ಕಾಯಕ ಜೀವಿಗಳಾಗಿದ್ದಾರೆ. ಅವರೆಲ್ಲರೂ ಸುಖದಿಂದ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ. ಇದು ಮಹತ್ವದಲ್ಲವೇ ಪ್ರಭು ಎಂದು ಪ್ರಶ್ನಿಸುತ್ತಾಳೆ. ಆಗ ಬಿಜ್ಜಳನು ಹೀಗೆ ಪ್ರಶ್ನಿಸುತ್ತಾನೆ. ಮಂತ್ರಿಯಾದವನು ಅರಮನೆಯಿಂದಲೇ ಮಾಡಬಹುದಿತ್ತಲ್ಲ ಎಂದಾಗ,

"**ಸಾವಂತ್ರಿ** : ಅರಮನೆಯೆಂದರೆ ಕಾನೂನುಗಳು, ಸಾವಿರಾರು ವರ್ಷಗಳಿಂದ ಅರಮನೆಗಳಿದ್ದರೂ ಅವುಗಳ ಕಾನೂನುಗಳಿಂದ ಅವರಿಗೆ ನೆಮ್ಮದಿಯಾಗಲಿ ದೇವರಾಗಲಿ ಸಿಕ್ಕಲಿಲ್ಲ. ಮನುಷ್ಯತ್ವಕ್ಕೂ ಎರವಾದ ಜನ ಅವರು. ಮನುಷ್ಯನಲ್ಲಿ ದಯೆ ಇರುವುದೇ ಸಾಧ್ಯವಿಲ್ಲವೆಂದು ನಂಬಿದವರು, ನೀವೇ ಮುಂದಾಗಿ ದಯೆ ತೋರಿದರೂ ಅದನ್ನು ಅನುಮಾನಿಸುವವರು/ ಅಂಥವರನ್ನು ಪರಿವರ್ತಿಸಿ ಅವರಲ್ಲಿರುವ ದೇವರನ್ನು ತೆರೆದು ತೋರಿಸುವುದು ಅವರಿವರಿಂದ ಸಾಧ್ಯವೇ ಪ್ರಭು?"[೧೩]

ಹೀಗೆ ಹೇಳುವ ಸಾವಂತ್ರಿಯ ಮಾತು ರಾಜಪ್ರಭುತ್ವದಲ್ಲಿ ಸಂಪ್ರದಾಯವು ಮತ್ತು ಪರಂಪರೆ ಎಂಬ ಹೆಸರಿನಲ್ಲಿ ಹಳೆಯ ಕಾಲದ ಶ್ರೇಣೀಕೃತ ವ್ಯವಸ್ಥೆಯನ್ನೇ ಮುಂದುವರಿಸುತ್ತವೆ ಎಂಬುದಾಗಿದೆ. ಹೀಗೆ ಅವುಗಳನ್ನು ಶುದ್ಧೀಕರಿಸುವ ಪ್ರಯತ್ನಕ್ಕೆ ಅರಮನೆಯಲ್ಲಿ ಹಲವು ಅಡ್ಡಿಗಳಿವೆ. ಇಂತಹ ಕಂದಕಗಳಿಂದ ಹೊರಬಂದು ನವಸಮಾಜದ ನಿರ್ಮಾಣಕ್ಕೆ ಹಾಗೂ ಬಸವಣ್ಣನ ಸಂಕಲ್ಪಕ್ಕೆ ಮಹಾಮನೆಯನ್ನು ಕ್ಷೇತ್ರವಾಗಿರಿಸಿಕೊಂಡಿದ್ದಾನೆ ಎನ್ನುವ ಸಾವಂತ್ರಿಯ ಮಾತುಗಳು ಬಸವಣ್ಣನ ತತ್ವಗಳಿಗೆ ಪ್ರೇರೇಪಿತಳಾಗಿದ್ದಳು ಎಂಬುದನ್ನು ಈ ಮೇಲಿನ ಸಂಗತಿಗಳು ಸ್ಪಷ್ಟಪಡಿಸುತ್ತವೆ.

**ರುದ್ರ** : ಈ ಪಾತ್ರವು ಆಧುನಿಕ ನಾಟಕಗಳಲ್ಲಿ ದಲಿತ ಪ್ರಜ್ಞೆಯ ಸಾಂಕೇತಿಕವಾಗಿ ಕಾಣಿಸಿಕೊಳ್ಳುವುದರ ಹಿಂದೆ ಬಸವ ತತ್ವದ ಚಿಂತನೆಯನ್ನು ಮೈಗೂಡಿಸಿಕೊಂಡಿದೆ. ನಾಟಕಕಾರರು ಈ ರುದ್ರನನ್ನು ಬಸವಣ್ಣನವರ ಮಹಾಭಕ್ತನನ್ನಾಗಿ ಚಿತ್ರಿಸಿ ಸಮಾನತೆಯನ್ನು ಸಾರಿದ್ದಾರೆ. ನಮಗೆ ಇಲ್ಲಿ ಮುಖ್ಯವಾಗುವ ಸಂಗತಿಯೆಂದರೆ ಕೆಳಜಾತಿಗೆ ಸೇರಿದ ರುದ್ರನು ಶರಣರ

ಸಮಾನತೆಯ ಧ್ಯೋತಕವಾಗಿ ಕಾಣಿಸಿಕೊಳ್ಳುವುದರ ಮೂಲಕ ವರ್ಣಸಂಕರ ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಪ್ರವೃತ್ತಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಏಕೆಂದರೆ ಯಾವ ಶ್ರೇಣೀಕೃತ ಸಮಾಜವು ಬ್ರಾಹ್ಮಣ ಹುಡುಗಿಯನ್ನು ಮದುವೆಯಾಗುವುದು ಒಂದು ಕಡೆ ಇರಲಿ ಒಂದು ವೇಳೆ ಕಣ್ಣೆತ್ತಿ ನೋಡಿದರೆ ಕಣ್ಣನ್ನು ಕೀಳುವಂತಹ ಕಾಲದಲ್ಲಿ ವಚನಕಾರರು ಅಂತರ್ಜಾತಿ ವಿವಾಹಕ್ಕೆ ನಾಂದಿ ಹಾಡಿದರು. ರುದ್ರ ಜಾತಿಯಿಂದ ದಲಿತನಾದರೂ, ದಲಿತನಾಗಿ ಒರಟ ಸ್ವಭಾದವ ಎಂದು ಹೇಳುವಲ್ಲಿ ನಾಟಕಕಾರರು ಈ ಪಾತ್ರದ ಮೂಲಕ ದಲಿತರು ಒರಟರು ಎಂದು ಹೇಳುವಂತೆ ಭಾಸವಾಗುತ್ತದೆ. ಅದೇನೇ ಇರಲಿ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದ ಉಷಾ ಎಂಬುವವಳು ಒರಟ ರುದ್ರನನ್ನು ಪ್ರೇಮಿಸುವುದರ ಮೂಲಕ ಆತನಲ್ಲಿರುವ ಒರಟು ಸ್ವಭಾವವನ್ನು ಹೊಡೆದೋಡಿಸಿ ಮನುಷ್ಯನನ್ನಾಗಿ ಮಾಡುವ ಚಿಂತನೆ ಒಂದೆಡೆಯಾದರೆ, ಬಸವಣ್ಣನವರು ಮನುಷ್ಯನನ್ನು ಮನುಷ್ಯನನ್ನಾಗಿ ನೋಡುವ ಮೂಲಕ ಇಷ್ಟಲಿಂಗ ಭಕ್ತಿಗೆ ಹೆಚ್ಚು ಒತ್ತು ಕೊಟ್ಟು ಶರಣರನ್ನಾಗಿಸುವುದು ಮತ್ತೊಂದೆಡೆ. ಇವೆರಡು ಅಂಶಗಳು ಮಾನವೀಯತೆಗೆ ಹಿಡಿದ ಕೈಗನ್ನಡಿಯಾಗಿವೆ. ಒಂದು ದುರಂತವೆಂದರೆ ಯಾವ ಒರಟು ರುದ್ರನನ್ನು ಪ್ರೀತಿಸಿದ ಬ್ರಾಹ್ಮಣ ಕನ್ನೆಗೆ ತನ್ನ ಪ್ರೀತಿಯಿಂದಲೇ ಆತನನ್ನು ಬದಲಾವಣೆ ಮಾಡಬೇಕೆಂಬ ಚಿಂತನೆಯಿತ್ತು. ಆದರೆ ಬಸವತತ್ವದಿಂದ ಶರಣನಾದ ರುದ್ರನಿಗೆ ಆಕೆಯ ಮನಸ್ಸು ಇರಲಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣವೇನೆಂದರೆ ಪ್ರೀತಿ ಎರಡು ಹೃದಯದ ಸಂಗಮ. ಅದು ಯಾವ ರೀತಿಯಿಂದಲೋ ತನ್ನ ಅಂಕುರವನ್ನು ಚಾಚಿಕೊಂಡಿರುತ್ತದೆ. ಹೀಗೆ ಶರಣ ರುದ್ರನಾದ ಮೇಲೆ ಉಷಾ ಆತನ ಮೇಲೆ ಅತ್ಯಾಚಾರದ ಅಪರಾಧವನ್ನು ಹೋರಿಸುವುದರ ಮೂಲಕ ಆತನನ್ನು ತಿರಸ್ಕರಿಸುತ್ತಾಳೆ ಎಂಬ ಅಂಶ ಕೆಲವು ನಾಟಕಗಳಲ್ಲಿ ವ್ಯಕ್ತಗೊಂಡಿದೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ದಲಿತ ರುದ್ರನಷ್ಟೇ ಅಲ್ಲ. ಅಲ್ಪಸಂಖ್ಯಾತರಿಂದ ಸನಾತನ ಕಾಲದಿಂದಲೂ ತುಳಿತಕ್ಕೊಳಪಟ್ಟ ಬಹುಸಂಖ್ಯಾತವರ್ಗದ ಪ್ರತಿನಿಧಿಯಾಗಿ ನಿಂತ ರುದ್ರ ಬಸವಣ್ಣನ ಭಕ್ತಿ, ಕಾಯಕನಿಷ್ಠೆ, ಪ್ರಾಮಾಣಿಕತೆ ಮತ್ತು ಸತ್ಯಕ್ಕೆ ಶರಣಾಗುತ್ತಾನೆ.

ಉಷಾ ನಿಮ್ಮಪ್ಪ ಆಗಬೇಕಾದದ್ದು ಶರಣನಲ್ಲ ಎಂದಾಗ ರುದ್ರನು ಬಸವಣ್ಣನನ್ನು ಕೇಳು ಹೇಳುತ್ತಾರೆ ಎಂದಾಗ ಉಷಾ ಶೂದ್ರ ಮುಂಡೇವಕ್ಕೆ ಎಲ್ಲಿಂದ ಗೊತ್ತಾಗುತ್ತೆ ಎಂದಾಗ ರುದ್ರ ನಾವು ಇವತ್ತು ಕತ್ತೆಗಳಾಗಿರಬಹುದು. ಆದರೆ ಇವತ್ತಲ್ಲದಿದ್ದರೆ ನಾಳೆ ಬಸವಣ್ಣನ ವಿಚಾರಗಳಿಂದ ಮಾನವರಾಗುತ್ತೇವೆ ಎನ್ನುತ್ತಾನೆ. ಆಗ ಉಷಾಳು ನೀನು ವಿಭೂತಿ ಹಾಕಿ ಮಂತ್ರ ಪಠಣ ಮಾಡುತ್ತಾ ಆಸ್ಥಾನದಲ್ಲಿ ಕೂಡು ಶರಣನಾಗಬೇಕೆಂದುಕೊಂಡಿದ್ದೆಯೇನು? ಎಂಬ ವ್ಯಂಗ್ಯ ಮಾತಿಗೆ ರುದ್ರ ನಮ್ಮನ್ನು ಕಲಿತವರಿಂದ ದೂರ ಇಡೋಕೆ ಆಗಲ್ಲ. ನಮ್ಮನ್ನ ಕಂಡರೆ ದೂರ ಓಡುವ ನೀವು ಕೊನೆಗೆ ಬಸವಣ್ಣನವರಿಂದ ನಾವು ಮನುಷ್ಯರು ಅಂತ ತಿಳಿಕೋಬೇಕಾದಿತು ಎಂದು ಹೇಳುವಲ್ಲಿ ಬಸವಣ್ಣನವರ ನೈತಿಕ ವಿಚಾರಗಳು ಎದ್ದು ಕಾಣುತ್ತವೆ.

“**ರುದ್ರ** : ನನ್ನ ಮಕಕ್ಕೆ ಬೇಕಾದ್ರೆ ಉಗಿ, ಬಸವಣ್ಣನ ತಂಟೆಗೆ ಬಂದ್ರೆ

**ಉಷಾ** : (ನಗುತ್ತಾ) ಬಂದರೆ...

**ರುದ್ರ** : ನಿನ್ನನ್ನು ಹೆಬ್ಬರಳಿನಿಂದ ನೆತ್ತಿತಂಕ ಸಿಗದು ತೋರಣ ಕಟ್ಟೇನಿ–

**ಉಷಾ** : (ನಗುತ್ತಲೇ) ಕಟ್ಟಿ

**ರುದ್ರ** : ಕಟ್ಟಿ ಎಲ್ಲರಿಗೂ ತೋರಿಸ್ತೇನಿ".[೧೪]

ಹೀಗೆ ಬಸವಣ್ಣನ ತತ್ವವನ್ನು ಒಳಗೊಂಡ ರುದ್ರನ ಮಾತಿನಲ್ಲಿ ಬಸವಣ್ಣನ ಆಶಯ ವ್ಯಕ್ತವಾದರೆ ಉಷೆಯ ಮಾತಿನಲ್ಲಿ ಅದರ ವಿಫಲತೆಯ ಕಾರಣ ಚಿತ್ರವಿದೆ. ಹೀಗೆ ರೇಗಿಸುತ್ತಾ ಹೋಗುವ ಉಷೆ ರುದ್ರನ ಆಕ್ರಮಣದಲ್ಲಿ ನಿಜವನ್ನು ಕಾಣುತ್ತಾಳೆ. ನಾಟಕ ರುದ್ರನ ಪಾತ್ರದ ಮೂಲಕ ವೈಚಾರಿಕ ನೆಲೆಯಲ್ಲಿ ಮೂಡಿನಿಂತಿದೆ.

**ಕನ್ನಮಾರಿ** : ಇವನು ಮೂಲತಃ ಕಳ್ಳನಾಗಿ ಕಾಣಿಸಿಕೊಳ್ಳುವ ಪಾತ್ರವಾಗಿದೆ. ಕೆಲವು ಪಠ್ಯಗಳಲ್ಲಿ ಮಾರಿ ತಂದೆ ಎಂದು ಬಳಕೆಯಾಗಿದೆ. ಕಳ್ಳತನದ ಬದುಕಿನ ಸಂದರ್ಭದಲ್ಲಿ ಬಸವಣ್ಣನ ತತ್ವಗಳಿಂದ ಬದಲಾಗುವ ವ್ಯಕ್ತಿತ್ವ ಕಂಡು ಬರುತ್ತದೆ. ಈಗಾಗಲೇ ಬಸವಣ್ಣನವರು ಮಹಾಮನೆಯನ್ನು ಕಟ್ಟಿ ಶರಣರೊಂದಿಗೆ ಸಮಾಜವನ್ನು ಸುಧಾರಿಸುವಂತಹ ಸಂದರ್ಭದಲ್ಲಿ ಕನ್ನಮಾರಿಯು ಕಳ್ಳನಿದ್ದರೂ ಅವನು ತನ್ನ ಮನಸ್ಸಿನಲ್ಲಿ ಬಡವರ ಮನೆಯನ್ನು ಕಳುವು ಮಾಡುವ ಉದ್ದೇಶವನ್ನು ಇಟ್ಟುಕೊಳ್ಳದೇ ಕಳ್ಳರಿಗಿಂತ ಮಹಾಕಳ್ಳರಾದ ಬಲುಗಳ್ಳರನ್ನು ಅವರಿಂದ ಸಂಗ್ರಹಿತವಾದ ಸಂಪತ್ತನ್ನು ಕಳುವು ಮಾಡಬೇಕೆಂಬ ಬಯಕೆಯಿಂದ ಮಹಾಮನೆಗೆ ಬರಲು ನಿರ್ಧರಿಸುತ್ತಾನೆ. ಏಕೆಂದರೆ ಅರಸರು ಅರಮನೆಯಲ್ಲಿ ಸಂಪತ್ತನ್ನು ಕೂಟ್ಟರೆ ಬಸವಾದಿ ಶರಣರು ಮಹಾಮನೆಯಲ್ಲಿ ಸಂಗ್ರಹಿಸಿದ್ದಾರೆ ಎಂಬ ಗುಮಾನಿಯನ್ನು ಹೊಂದಿದ ಆತ ಮಹಾಮನೆಯ ಸತ್ಯವನ್ನು ಬಯಲಿಗೆಳೆಯಬೇಕೆಂಬ ಉದ್ದೇಶವನ್ನು ಹೊಂದಿದ್ದಾನೆ. ಹೀಗಾಗಿ ಮಹಾಮನೆ ಪ್ರವೇಶಕ್ಕೆ ಜಂಗಮರ ವೇಷವನ್ನು ಹಾಕುವುದು. ಆತನಿಗೆ ಮತ್ತು ಆತನ ಸಹಚರರಿಗೆ ಅನಿವಾರ್ಯವಾಗಿತ್ತು. ಹೀಗಾಗಿ ಕೆಲವು ಸ್ತ್ರೀಯಲ್ಲಿ ಜಂಗಮರೊಂದಿಗೆ ಸಂಭಾಷಣೆಯಲ್ಲಿ ತೊಡಗುತ್ತಾನೆ. ಆಗ ಆ ಜಂಗಮರು ಹೀಗೆ ಹೇಳುತ್ತಾರೆ. ಕಳ್ಳತನ ಕಾಯಕವಾಗಲಾರದು. ಬಚ್ಚಲ ನೀರು ಮಜ್ಜನವಲ್ಲ. ನಾಯಿಯ ಹಾಲು ಭೋಜನವಲ್ಲ ಎಂದು ಬಸವಣ್ಣನವರು ಹೇಳಿದ್ದಾರೆಂದು ಹೇಳುತ್ತಾ ಮುಂದುವರೆದು ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಎನ್ನುವ ಮಾತು ಅಣ್ಣನವರು ಹೇಳಿಲ್ಲವೇ ಎಂದು ಹೇಳಿದಾಗ ಅದಕ್ಕೆ ಪ್ರತ್ಯುತ್ತರವಾಗಿ,

**ಮಾರಿ ತಂದೆ** : (ಕೆರಳಿ) ಎಲ್ಲ ಅಧಿಕ ಪ್ರಸಂಗಿ ಜಂಗಮರೇ – ಈ ಲೋಕದಲ್ಲಿ ಎಲ್ಲಿಯಾದರೂ ಹಸಿವಿಲ್ಲದ ಪಶುವುಂಟೇ? ಹುಸಿಯನಾಡದ ನಾಲಗೆಯುಂಟೇ? ಆಸೆಯಿಲ್ಲದ ನರರುಂಟೇ? ಮೋಸವಿಲ್ಲದ ಸಿರಿಯುಂಟೇ? ಆ ನಿಮ್ಮ ಬಸವೇಶ ಲೋಕಕ್ಕೇ ನಿತ್ಯ ದಾಸೋಹ ದೂಟವನ್ನು ಬಡಿಸುತ್ತಿದ್ದಾನಲ್ಲ, ಯಾವ ಮಾಯೆಯಿಂದ? ಹೇಳಬಲ್ಲಿರಾ? ಎಂದು ಮಾರಿ ತಂದೆಯು ಅವರೊಂದಿಗೆ ಮಾತನಾಡುತ್ತಾನೆ. ಆ ಮೂಲಕ ಶರಣರ ನಡೆ-ನುಡಿಗಳನ್ನು ತಿಳಿದುಕೊಳ್ಳುವುದು ಮತ್ತು ಆ ಶರಣರ ಬಟ್ಟೆಗಳನ್ನೆಲ್ಲಾ ವಶಪಡಿಸಿಕೊಂಡು, ಆ ಜಂಗಮರನ್ನು

ಒಂದು ಹಾಳು ದೇವಾಲಯದಲ್ಲಿ ರೂಢಿ ಹಾಕಿ ತಾವೇ ಜಂಗಮರಂತೆ ವೇಷಧಾರಿಯಾಗಿ ಕಳ್ಳತನಕ್ಕಾಗಿ ಮಹಾಮನೆಯನ್ನು ಪ್ರವೇಶಿಸುತ್ತಾರೆ.

ಇತ್ತ ಅರಮನೆಯ ಪರಿವಾರವು ಅರಸರ ಆಜ್ಞೆಯಂತೆ ಕಳ್ಳಮಾರಿಯನ್ನು ಹಿಡಿಯಲು ಪ್ರಯತ್ನಶೀಲರಾಗುತ್ತಾರೆ. ಅವರ ಪ್ರಯತ್ನದ ಫಲವಾಗಿ ಹಾಳುಬಿದ್ದ ದೇವಾಲಯದಲ್ಲಿದ್ದ ಜಂಗಮರು ಕಳ್ಳ ಕನ್ನಮಾರಿಯು ನಮ್ಮ(ಜಂಗಮರ) ವೇಷವನ್ನು ಧರಿಸಿ ಹೋಗಿದ್ದಾನೆ ಎಂಬ ಸುಳಿವನ್ನು ನೀಡುತ್ತಾನೆ. ಆಗ ಅ ಸುಳಿವನ್ನು ಆಧರಿಸಿ ರಾಜ್ಯದ ಸೈನ್ಯವು ಮಹಾಮನೆಗೆ ಪ್ರವೇಶಿಸಿರಬಹುದು ಎಂದು ಅನುಮಾನಿಸಿ ಮಹಾಮನೆಗೆ ಸರ್ಪಗಾವಲನ್ನು ಹಾಕುತ್ತಾರೆ. ಈ ವಿಷಯವು ಮಹಾಮನೆಯ ಶರಣರಿಗೂ ತಲುಪುತ್ತದೆ. ಶರಣರಿಗೆ ಇದನ್ನು ಗುರುತಿಸುವುದು ಅಗ್ನಿಪರೀಕ್ಷೆಯಾಗುತ್ತದೆ. ಇಂತಹ ಅಗ್ನಿಪರೀಕ್ಷೆಯನ್ನು ಗಂಗಾಂಬಿಕೆಯು ಎದುರಿಸಲು ಸಿದ್ಧಳಾಗುತ್ತಾಳೆ. ಅದಕ್ಕಾಗಿ ಆಕೆಯು ತನ್ನ ತವರು ಮನೆಯಿಂದ ತಂದ ಬಂಗಾರದ ಒಡವೆಗಳನ್ನು ಹಾಕಿಕೊಂಡು ಓಡಾಡುತ್ತಾಳೆ.

ಇತ್ತ ಶರಣರ ವೇಷಧಾರಿಯಾಗಿ ಬಂದ ಮಾರಿ ತಂದೆ ಮತ್ತು ಆತನ ಸಹಚರರು ಅನುಭವಮಂಟಪದಲ್ಲಿ ನೆಪಮಾತ್ರಕ್ಕೆ ಚರ್ಚೆಗೆ ಕುಳಿತುಕೊಂಡರೂ ಅವರ ಉದ್ದೇಶ ಮಹಾಮನೆಯಲ್ಲಿ ಎಲ್ಲಿ ಹಣ, ಒಡವೆಗಳಿವೆ ಎಂಬುದನ್ನು ಪತ್ತೆ ಹಚ್ಚುವುದರ ಕಡೆಗಿತ್ತು. ಇಂತಹ ಸಂದರ್ಭದಲ್ಲಿ ಗಂಗಾಂಬಿಕೆಯ ಒಡವೆಗಳು ಆಕರ್ಷಿಸುತ್ತವೆ. ಆಕೆಯ ಒಡವೆಗಳನ್ನು ಕದಿಯಲು ಹೋಗಿ ಶರಣರ ಕೈಗೆ ಸಿಕ್ಕು ಬೀಳುತ್ತಾರೆ. ಹೀಗೆ ಸಿಕ್ಕು ಬಿದ್ದ ಮಾರಿ ತಂದೆಯನ್ನು ಬಂಧಿಸಿ ಗಂಗಾಂಬಿಕೆಯನ್ನು ಪ್ರಶಂಸಿಸುತ್ತಾರೆ. ಇಂತಹ ಸಂದರ್ಭದಲ್ಲಿ ಬಸವಣ್ಣ ಮೌನವಾಗಿ ಎಲ್ಲರನ್ನು ದಿಟ್ಟಿಸುತ್ತಾನೆ. ದಿಟ್ಟಿಸಿ ಕನ್ನಮಾರಿಯನ್ನು ಕುರಿತು ಹೀಗೆ ಕೇಳುತ್ತಾನೆ.

"**ಬಸವಣ್ಣ** : ಮಹಾಮನೆಗೆ ಬಂದಂಥ ನನ್ನ ಒಡೆಯರನ್ನು ಕೈಕಾಲು ಕಟ್ಟಿ ದನಗಳ ಹಾಂಗ ನಿಲ್ಲಿಸಿದ್ದೀರಿ! ಯಾಕಂದ್ರ ಅವರು ಕಳ್ಳರು! ಬಂಗಾರ ತುಡುಗು ಮಾಡ್ತಿದ್ದರು! ಹಾಗಾದರ ಬಂಗಾರವನ್ನಿಟ್ಟುಕೊಂಡಿರುವ ಬಲುಗಳ್ಳರನ್ನು ಯಾಕೆ ಈ ಸಾಲಿನಲ್ಲಿ ನಿಲ್ಲಿಸಿಲ್ಲ? ಮಹಾಮನೀ ನೇಮ ಏನೈತಿ?

'ಅನ್ನದೊಂದಗಳ ಸೀರೆಯೊಂದೆಳೆಯ

ನಾಳೆಗೆಂದೆನ್ನೆ ನನ್ನದೆಂದೆನ್ನೆ'

ಎಲ್ಲಿ ಹೋದವು ತಮ್ಮ ನೇಮಗಳು?... ಕಳ್ಳರನ್ನು ಬಲುಗಳ್ಳರನ್ನು ಒಂದೇ ಸಾಲಿನಲ್ಲಿ ನಿಲ್ಲಿಸಿ ಬುಡ ಸಹಿತ ಬೇರು ಸಹಿತ ನ್ಯಾಯವನ್ನು ಮಾಡಬೇಕಂತ ಶರಣರಲ್ಲಿ - ಮಹಾಮನೆಯ ಹಿರಿಯರಲ್ಲಿ ನನ್ನ ಅರಿಕೆ ಐತಿ"[೧೫]

ಹೀಗೆ ಬಸವಣ್ಣನವರು ಹೇಳಿದಾಗ ಉಳಿದ ಶರಣರಲ್ಲಿ ಗೊಂದಲವುಂಟಾಗುತ್ತದೆ. ಏಕೆಂದರೆ ಬಸವಣ್ಣನವರ ದೃಷ್ಟಿಯಲ್ಲಿ ಒಡವೆಗಳನ್ನು ಕಳ್ಳತನ ಮಾಡುವುದು ಮಾತ್ರ ಕಳ್ಳತನವಲ್ಲ. ಒಡವೆಗಳನ್ನು ಸಂಗ್ರಹಿಸುವವರು ಬಲುಗಳ್ಳರು ಎಂಬುದಾಗಿತ್ತು. ಇಂತಹ ಸಂದರ್ಭದಲ್ಲಿ

ಶರಣರನ್ನು ಕುರಿತು ಗಂಗಾಂಬಿಕೆಯು ನನ್ನದು ಒಂದು ಹರಕೆ ಐತಿ. ಈ ನನ್ನ ಒಡವೆಗಳು ನನಗೆ ನನ್ನ ತವರು ಮನೆಯಿಂದ ಬಂದ ಸ್ತ್ರೀಧನ ಎಂದು ಸಮರ್ಥಿಸಿಕೊಳ್ಳುತ್ತಾಳೆ. ಆಗ ಬಸವಣ್ಣನವರು ಹೀಗೆ ಹೇಳುತ್ತಾರೆ. ಶರಣರೂ ಕೂಡ ಸಂಪತ್ತನ್ನು ಸಂಗ್ರಹಿಸಿಕೊಂಡು, ಸಂಗ್ರಹಿತ ಸಂಪತ್ತನ್ನು ರಕ್ಷಿಸಿಕೊಳ್ಳಲು ಆಯುಧಗಳನ್ನು ಹಿಡಿದುಕೊಂಡರೆ ನಾವೂ ದೊಣ್ಣೆ ನಾಯಕರಾಗುತ್ತೇವೆ ಎಂದು ಹೇಳುತ್ತಾನೆ. ಯಾರ ಹತ್ತಿರ ಆತನ ಅಂದಿನ ಕಾಯಕಕ್ಕಿಂತ ಒಂದು ಕಾಸು ಹೆಚ್ಚಾಗಿರುತ್ತದೆಯೋ ಆತನಿಂದಲೇ ಕಳ್ಳತನಕ್ಕೆ ಕಾರಣವಾಗುತ್ತದೆ ಎನ್ನುವ ಬಸವಣ್ಣನ ಮಾತುಗಳು ಕನ್ನಮಾರಿಯ ಮನಸ್ಸನ್ನು ಪರಿವರ್ತನೆ ಮಾಡುತ್ತದೆ. ಮುಂದುವರಿದು ಬಸವಣ್ಣನವರು ಕನ್ನಮಾರಿಯನ್ನು ರಕ್ಷಿಸಲು ಮಹಾಮಂತ್ರಿಯ ತನ್ನ ವೇಷವನ್ನೇ ಹಾಕಿಸಿ ಮಹಾರಾಜರ ಆಸ್ಥಾನಕ್ಕೆ ಹೋಗುವ ಪಲ್ಲಕ್ಕಿಯಲ್ಲಿ ಕಳುಹಿಸುವ ಕುರಿತು ಯೋಚಿಸುತ್ತಾನೆ. ಆಗ

"**ಕನ್ನಮಾರಿ :** (ಈಗ ಸಂಪೂರ್ಣವಾಗಿ ವಿಚಲಿತನಾಗಿರುವನು. ಕಣ್ಣೀರುಕ್ಕುವುದನ್ನು ತಡೆಗಟ್ಟಲು ಯತ್ನಿಸುತ್ತ) ನನ್ನ ಪ್ರಾಣವನ್ನು ಉಳಿಸಾಕ ನಿಮ್ಮ ಪ್ರಾಣವನ್ನು ಯಾಕೆ ಬಲಿ ಕೊಡಲಿಕ್ಕೆ ಹೊರಟೀರಿ? ಬಸವೇಶ, ನೀವು ಸತ್ಯವಂತರು. ನೀವು ಶರಣರು... ನಾನು ಕಳ್ಳ! ನಿಮ್ಮ ಸತಿಯ ಒಡವೆಗಳನ್ನು ತುಡಗು ಮಾಡಲಿಕ್ಕೆ ಬಂದ ಕಳ್ಳ!...

**ಬಸವಣ್ಣ :** ಲಾಂಛನಕ್ಕೆ ಶರಣೆಂಬೆ. ಮಹಾಮನೆಯ ಅಂಗಳದಲ್ಲಿ ಕಾಲಿಟ್ಟವರೆಲ್ಲ ನಮ್ಮವರೆಂಬೆ. ನನ್ನ ಒಡೆಯರೆಂಬೆ ಮಾರಯ್ಯ, ಇಷ್ಟೇ, ನೀವು ಯಾವಾಗಲೂ ಮನಸ್ಸಿನಲ್ಲಿ ಬಂಗಾರವನ್ನು ಧ್ಯಾನಿಸ್ತಾ ಇದ್ರಿ. ಅದಕ್ಕೆ ಒಡವೆಗಳನ್ನು ಕಂಡಾಗ ನಿಮಗೆ ಆಸೆ ಹುಟ್ಟಿತು. ನೀವು ಆಸೆಪಟ್ಟ ಒಡವೆಗಳನ್ನು ಮಹಾಮನೆಯ ಯಜಮಾನಿ ತಾನಾಗಿಯೇ ನಿಮಗೆ ಕೊಟ್ಟುಬಿಟ್ರೆ ಆಮ್ಯಾಲೆ ಎಲ್ಲಿ ಉಳೀತೈತಿ ನೀವು ಮಾಡಿದ ಕಳ್ಳತನ?... ಮಹಾಮನೆಯಲ್ಲಿ ಯಾರೂ ಯಾವುದನ್ನೂ ತನ್ನೊಬ್ಬನ ಸೊತ್ತೆಂದು ತಿಳಿಯುವುದಿಲ್ಲ. ಇರುವುದೆಲ್ಲ ಎಲ್ಲರಿಗೂ ಸೇರಿದ್ದು. ಎಲ್ಲವೂ ಎಲ್ಲರ ಸೊತ್ತಾದಾಗ ಎಲ್ಲೈತಿ ಕಳ್ಳತನ?... ಮಹಾಮನಿಯಲ್ಲಿ ಕಳುವೆನ್ನೋದೇ ಇಲ್ಲ".[೧೬]

ಹೀಗೆ ಬಸವಣ್ಣನ ಮಾತುಗಳನ್ನು ಆಲಿಸಿದ ಕನ್ನಮಾರಿ ಮತ್ತು ಆತನ ಸಹಚರರು ಬಸವಣ್ಣನ ಕಾಲಿಗೆ ಎರುಗುತ್ತಾರೆ. ಮಹಾಮನೆಯಿಂದ ಹೊರನಡೆಯುತ್ತಾರೆ. ಆಗ ಬಸವಣ್ಣನವರು ರಾಜದ್ರೋಹದ ಅಪರಾಧಕ್ಕೆ ಗುರಿಯಾಗಿದ್ದಾರೆ ಎಂಬುದು ಮಂಚಣ್ಣನವರು ಆರೋಪಿಸುತ್ತಾರೆ. ಆಗ ಬಿಜ್ಜಳನು ಕನ್ನಮಾರಿಯೂ ಎಲ್ಲಿಯೂ ಹೋಗಿಲ್ಲ. ಆತನು ಅರಮನೆಗೆ ಬಂದು ಶರಣಾಗಿದ್ದಾನೆ. ನಡೆದದ್ದೆಲ್ಲಾ ನನ್ನ ಮುಂದೆ ಹೇಳಿದ್ದಾನೆ. ಬಸವಣ್ಣ ನಡೆಯುತ್ತಿರುವ ದಾರಿಯನ್ನು ಕಣ್ಣಾರೆ ಕಂಡ ಮೇಲೆ ನನ್ನ ದಾರಿ ತಪ್ಪಿದೆ ಎಂದು ಕನ್ನಮಾರಿಯು ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ. ಅಲ್ಲದೆ ಮುಂದುವರಿದು ಹೀಗೆ ಹೇಳುತ್ತಾನೆ.

"ಕನ್ನಮಾರಿ : ರಾಜಾ, ಪ್ರಾಣಕ್ಕಿಂತ ಮಿಗಿಲಾರದದ್ದು ಯಾವುದೂ ಇಲ್ಲವೆಂದು ತಿಳಿದಿದ್ದೆ. ಆದ್ರೆ ಬಸವಣ್ಣ ತನ್ನ ಪ್ರಾಣವನ್ನು ಪಣಕ್ಕೊಡ್ಡಿ ನನ್ನ ಪ್ರಾಣವನ್ನು ಉಳಿಸಿದಾಗ ಪ್ರಾಣಕ್ಕೂ ಮಿಗಿಲಾದದ್ದೂ ಯಾವುದೋ ಇನ್ನೊಂದ್ಯೆತಿ ಅಂತ ಆಗ ನನಗೆ ತಿಳೀತು. ನನ್ನನ್ನು ಶೂಲಕ್ಕೆ ಹಾಕಿ ನನ್ನ ಪ್ರಾಣ ತೆಗೀರಿ. ಆದ್ರ ಬಸವಣ್ಣನಿಗೆ ಮಾತ್ರ ಕೇಡು ಮಾಡಬ್ಯಾಡ್ರಿ."[೧೭]

ಬಸವಣ್ಣನವರ ತತ್ವ ವಿಚಾರಗಳ ಜೊತೆಗೆ ಆತನ ಅಂತಃಕರಣಕ್ಕೆ ಮಾರು ಹೋದ ಕನ್ನಮಾರಿಯು ಶರಣರಲ್ಲಿ ಶರಣನಾಗಿ ಅನುಭವಮಂಟಪ, ಕಾಯಕ, ಭಕ್ತಿ ಭಾವಗಳನ್ನು ರೂಢಿಸಿಕೊಂಡು ಮುಂದುವರಿದ ಎಂಬುದನ್ನು ನಾಟಕ ಪಠ್ಯವು ಬಿತ್ತರಿಸುತ್ತದೆ.

ಜಗತ್ತಿನಲ್ಲಿ ಜೀವಜಾಲಗಳು ಯಾವಾಗ ಹುಟ್ಟಿಕೊಂಡವೋ ಅಂದಿನಿಂದಲೇ ಪರ ಮತ್ತು ವಿರೋಧಗಳು ಕಾಣಿಸಿಕೊಂಡವು. ಏಕೆಂದರೆ ನಮ್ಮ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿ ವಿರೋಧಿ ನಿಲುವುಗಳು ಗಮನಾರ್ಹವಾಗಿ ಸಿಗುತ್ತವೆ. ಮನುಷ್ಯನ ಬೌದ್ಧಿಕ ಮಟ್ಟ ಬೆಳೆದಂತೆಲ್ಲಾ ಸತ್ಯ, ನ್ಯಾಯ, ನೀತಿ, ಧರ್ಮ ಮತ್ತು ಸಮಾಜಪರ ನಿಲುವುಗಳಿಗೆ ಕೆಲವರ ಸ್ವಹಿತಾಸಕ್ತಿ ಮೂಲಭೂತ ಕಾರಣವಾಗಿ ಅನ್ಯಾಯ, ಅಧರ್ಮ, ಅಸತ್ಯ ಮತ್ತು ಅಶಾಂತಿಗೆ ಕಾರಣರಾಗುತ್ತಾರೆ. ಏಕೆಂದರೆ ಮನುಷ್ಯನು ಅಂಗಾಂಗಗಳಿಂದ ಒಂದೇ ಆಗಿದ್ದರೂ ವ್ಯಕ್ತಿತ್ವದಲ್ಲಿ ಭಿನ್ನವಾಗಿರುತ್ತಾನೆ. ಹೀಗಾಗ ಸಮಾಜಪರ ನಿಲುವುಗಳನ್ನು ತಾಳಿ ಆ ಚಿಂತನೆಯನ್ನು ಇಟ್ಟುಕೊಂಡು ಹೋರಾಡಿದವರು ಬಹಳ ವಿರಳ. ಅಂಥವರಲ್ಲಿ ಬಸವಣ್ಣನು ಒಬ್ಬ. ಈತನು ಜನಿಸಿದ ಕಾಲ ಸುವರ್ಣಯುಗವೆಂದು ಹೇಳಬೇಕು. ಏಕೆಂದರೆ ಮತಾಂಧತೆಯ ಅಡಿಯಲ್ಲಿ ಸನಾತನ ಹಿಂದೂ ಧರ್ಮ ಆರ್ಯರಿಂದ ಹಲವಾರು ಕಟ್ಟುಪಾಡುಗಳನ್ನು ನಿರ್ಮಿಸಿ ಇವುಗಳಿಗೆ ಸೃಷ್ಟಿಕರ್ತನಾದ ಬ್ರಹ್ಮನೇ ಕಾರಣನೆಂದು ಹೇಳುವುದರ ಮೂಲಕ ವರ್ಣಸಂಕರ ವ್ಯವಸ್ಥೆಯನ್ನು ಹುಟ್ಟುಹಾಕಿದರು. ಇದಕ್ಕೆ ತದ್ವಿರುದ್ಧ ಎಂಬಂತೆ ಬಸವಣ್ಣನು ಸಿಡೆದೆದ್ದ ಇದರ ಪರಿಣಾಮವಾಗಿ ಬಹುಸಂಖ್ಯಾತರು ಬಸವತತ್ವದ ಅನುಸಂಧಾನದಲ್ಲಿ ವಿಲೀನವಾದರೆ ಅಲ್ಪಸಂಖ್ಯಾತರಾದ ಪುರೋಹಿತಶಾಹಿಗಳು ಬಸವಮಾರ್ಗಕ್ಕೆ ಅಡ್ಡಗೋಡೆಯಾಗಿ ನಿಂತರು. ಇಂತಹ ವಿಚಾರಗಳನ್ನು ಕುರಿತು ನಾಟಕಗಳು ವ್ಯಕ್ತಪಡಿಸುವಾಗ ಬಸವಣ್ಣನ ವಿರೋಧಿ ಪಾತ್ರಗಳನ್ನು ಸೃಷ್ಟಿಸಿ ಬ್ರಾಹ್ಮಣ ಕುಲದ ಆಚಾರ ಮತ್ತು ವಿಚಾರಗಳನ್ನು ತಿಳಿಸುವುದರ ಮೂಲಕ ಅವುಗಳನ್ನು ಮುಂದುವರಿಸುವ ರೀತಿಯಲ್ಲಿ ಪ್ರತಿಪಾದಿಸಿರುವ ಅನುಮಾನ ವ್ಯಕ್ತವಾಗಿದೆ. ಹೀಗಾಗಿ ವಿರೋಧಿ ಪಾತ್ರಗಳಾದ ಮಂಚಣ್ಣ, ಕ್ರಮಿತ, ಭಟ್ಟನು, ಶಾಸ್ತ್ರಿ, ಅಬ್ಬಕ್ಕ ಮತ್ತು ಉಜ್ಜ ಮುಂತಾದ ಪಾತ್ರಗಳು ವಿರೋಧದ ನಿಲುವುಗಳನ್ನು ವ್ಯಕ್ತಪಡಿಸುವ ನಿಟ್ಟಿನಲ್ಲಿ ಕಾಣಿಸಿಕೊಳ್ಳುತ್ತವೆ. ಇದರಲ್ಲಿ ಪ್ರಮುಖವಾದ ವ್ಯಕ್ತಿಯೆಂದರೆ ಮಂಚಣ್ಣ. ಈತನು ಬಿಜ್ಜಳ ಅರಸನ ಮಹಾಮಂತ್ರಿಯಾಗಿ ಸೇವೆ ಸಲ್ಲಿಸುತ್ತಾ ಕಾರ್ಯತತ್ಪರನಾಗಿರುತ್ತಾನೆ. ಅಷ್ಟೇ ಅಲ್ಲದೇ ಬಿಜ್ಜಳನ ಭಂಡಾರದ ವ್ಯವಸ್ಥೆಯನ್ನು ಪರಿಪೂರ್ಣವಾಗಿ ಪುರೋಹಿತಶಾಹಿಯ ಅಡಿಯಲ್ಲಿ ಕಾರ್ಯ ನಿರ್ವಹಿಸುವುದರ ಮೂಲಕ ತನ್ನ ಹೆಸರಿಗೆ ತಕ್ಕ ಹಾಗೆ ವರ್ತಿಸುತ್ತಾನೆ. ಇತ್ತ ಕಡೆ ಮಂತ್ರಿಗಳಲ್ಲಿ ಬಲದೇವನೂ ಒಬ್ಬ. ಈತನ ಅಳಿಯನಾದ

ಬಸವಣ್ಣನು ಈಗಾಗಲೇ ತಿಳಿಸಿರುವಂತೆ ಅಗ್ರಹಾರ ಸಂಸ್ಕೃತಿಯಿಂದ ಸಿಡಿದೆದ್ದು ಗುರುಗಳ ಆಜ್ಞೆಯಂತೆ ಬಲದೇವನ ಸಹಾಯದಿಂದ ಮತ್ತು ತನ್ನ ಬೌದ್ಧಿಕ ಚಾಣಾಕ್ಷತನದಿಂದಾಗಿ ಕರಣಿಕನನ್ನಾಗಿ ಕಾಯಕದಲ್ಲಿ ನಿರತನಾಗುತ್ತಾನೆ. ಪ್ರತಿಯೊಂದು ಹಂತದಲ್ಲೂ ಬಸವಣ್ಣನ ಬೌದ್ಧಿಕ ಮಟ್ಟ ಎಲ್ಲ ಮಂತ್ರಿಗಳನ್ನು ಅಚ್ಚರಿಗೊಳಿಸುತ್ತದೆ. ಏನಾದರೂ ಮಾಡಿ ಈ ಬಸವಣ್ಣನನ್ನು ಓಡಿಸಬೇಕೆಂದು ಹಲವಾರು ಕುತಂತ್ರ ನೀತಿಗಳನ್ನು ಅನುಸರಿಸಿದರೂ ಸತ್ಯ ಮತ್ತು ಬುದ್ಧಿಗೆ ಸಾವಿಲ್ಲ ಎಂಬಂತೆ ಬಸವಣ್ಣನು ದಿನಗಳದಂತೆ ಭಂಡಾರದ ಮಂತ್ರಿಯಾಗಿ ಸಮಾಜಪರ ಚಿಂತನೆಗಳಿಗೆ ಮುಂದಾಗಿ ಮಹಾಮನೆಯನ್ನು ಕಟ್ಟಿ ಅದರ ಮೂಲಕ ಇಷ್ಟಲಿಂಗ ಪೂಜೆಗೆ ಒತ್ತುಕೊಟ್ಟು ಸರ್ವಜಾತಿಯ ಜನರನ್ನು ಸಮಾನರೆಂದು ಒಂದುಗೂಡಿಸುತ್ತಾನೆ. ಅಲ್ಲದೇ ಭಂಡಾರದ ಹಣವನ್ನು ಪ್ರಜೆಗಳಿಗೆ ವ್ಯಯ ಮಾಡುತ್ತಾನೆಂಬ ಅಪವಾದಗಳನ್ನು ಎದುರಿಸಿದ ಬಸವಣ್ಣ ಜಾತಿರಹಿತ ಸಮಾಜವನ್ನಾಗಿಸಲು ಪಣತೊಡುತ್ತಾನೆ. ಯಾರೂ ಜಾತಿಯಿಂದ ಕೀಳಿಲ್ಲ, ಯಾರೂ ಜಾತಿಯಿಂದ ಮೇಲಲ್ಲ ಎಂಬ ಉಕ್ತಿಯನ್ನು ಸಾರುತ್ತ ಸರ್ವಜಾತಿಗೂ ಶರಣ ತತ್ವವನ್ನು ಬೋಧಿಸುತ್ತಾನೆ. ಮಡಿವಾಳ ಮಾಚಯ್ಯ, ಹರಳಯ್ಯ, ಸೂಳೆ ಸಂಕವ್ವೆ, ಕಾಳವ್ವೆ, ಸಿದ್ಧರಾಮ ಇನ್ನೂ ಮುಂತಾದ ದಲಿತ ವಚನಕಾರರನ್ನು ಶರಣರನ್ನಾಗಿಸಿ ಶರಣ ಕುಲ ಒಂದೇ ಎಂಬ ಸಿದ್ಧಾಂತವನ್ನು ಮಂಡಿಸುತ್ತಾನೆ. ಯಾವ ಪುರೋಹಿತಶಾಹಿ ಸಂಸ್ಕೃತಿಯಿಂದ ನಿಕೃಷ್ಣವಾಗಿದ್ದ ಜನತೆ ಬಸವಣ್ಣನಿಂದ ಉಜ್ವಲ ಸಂಸ್ಕೃತಿಯನ್ನು ಹೊಂದುತ್ತಿರುವಾಗ ಇದನ್ನು ಸಹಿಸದ ಸನಾತನವಾದಿಗಳು ಬಸವಣ್ಣನ ವಿರುದ್ಧ ದಂಗೆಯೇಳುತ್ತಾರೆ.

**ಮಂಚಣ್ಣ** : ಪ್ರಭೋ, ಕುಲಜಾತಿ ವರ್ಣಾಶ್ರಮಗಳು ಹಾಳಾಗಿ ಹೋಗುತ್ತಿರುವುದನ್ನು ನೋಡಿ ಪ್ರಜೆಗಳು ಅಸಂತುಷ್ಟರಾಗಿದ್ದಾರೆ.

**ಬಿಜ್ಜಳ** : ಇದೇನು ಒಮ್ಮಿಂದೊಮ್ಮೆಲೇ ಕಲ್ಯಾಣದಲ್ಲಿ ಕ್ರಾಂತಿ?

**ಪೆದ್ದರಸ** : ಆ ಕ್ರಾಂತಿಗೆ ಮಹಾಮಂತ್ರಿಗಳಾದ ಬಸವರಾಜರೇ ಮುಖ್ಯರಾಗಿದ್ದಾರೆ.

**ಮಂಚಣ್ಣ** : ಪ್ರಭುಗಳೇ ಬಸವರಾಜರು ತಮ್ಮ ಅಧಿಕಾರ ಬಲದಿಂದ ಕಂಡ ಹೊಲಿಯರಿಗೆಲ್ಲಾ ಲಿಂಗಕಟ್ಟಿ ಅವರನ್ನು ಊರಲ್ಲೆಲ್ಲ ಹೋಗಿಸಿ ಕನಲಿದೆ ಮಹಾಪ್ರಭೋ ।

**ಪೆದ್ದರಸ** : ಉತ್ತಮ ಕುಲದವರು ಊರಲ್ಲಿ ಮುಖವೆತ್ತಿ ಅಡ್ಡಾಡದಂತಾಗಿದೆ. ಅದರ ಕ್ರಾಂತಿಯಿಂದ ಎಲ್ಲರಿಗೂ ವಾಂತಿಯಾಗಿ ಬಿಟ್ಟಿದೆ.

**ಕಲ್ಯಾಣಶೆಟ್ಟಿ** : ಕುಲ ಜಾತಿಗಳನ್ನೆಲ್ಲಾ ಹೋಗಲಿಸಿಬಿಟ್ಟಿದ್ದಾರೆ.

**ಪೆದ್ದರಸ** : ಅದೇನೋ ಕಲ್ಯಾಣಕ್ಕೆ ಅಳೆಗಾಲ ಬಂದ ಹಾಗಿದೆ."[೧೮]

ಹೀಗೆ ಬಸವಣ್ಣನ ತಾತ್ವಿಕ ವಿಚಾರಗಳನ್ನು ವಿರೋಧಿಸುವ ಬೃಹತ್ ಪಡೆಯೇ ಬಿಜ್ಜಳನ ಆಸ್ಥಾನದಲ್ಲಿತ್ತು. ಅವರುಗಳು ತಮ್ಮ ಹಗೆತನವನ್ನು ಸಾರಿದ ಬಗೆಯನ್ನು ಇಲ್ಲಿ ಗಮನಿಸಬಹುದು. ಒಟ್ಟಾರೆ ಪಾತ್ರಗಳು ಬಸವಣ್ಣನನ್ನು ನೋಡುವಾಗ ಆತನ ಸೈದ್ಧಾಂತಿಕತೆ, ಬೌದ್ಧಿಕ ವಿಚಾರಗಳು ಪಠ್ಯಗಳಲ್ಲಿ ಗಮನಾರ್ಹವಾಗಿವೆ.

**ಕೊನೆಟಿಪ್ಪಣಿಗಳು**

೧. ಅ.ನ.ಕೃ., ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೨೨.

೨. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೨೧-೨೨.

೩. ಎಂ.ಎಂ. ಕಲಬುರ್ಗಿ, ೧೯೯೫, **ಕೆಟ್ಟಿತ್ತು ಕಲ್ಯಾಣ,** ಪುಟ ೩೦.

೪. ಪಂಡಿತಾರಾದ್ಯ ಶ್ರೀಶಿವಾಚಾರ್ಯ ಸ್ವಾಮೀಜಿ, ೨೦೦೩, **ಜಂಗಮದಡೆಗೆ,** ಪುಟ ೨೫-೨೬.

೫. ಎಂ.ಸಿ. ರಾಮಲಿಂಗಯ್ಯ, ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಪುಟ ೮೩-೮೪.

೬. ಶ್ರೀಕಂಠಶಾಸ್ತ್ರಿ ನಲವಡಿ ಒಡೆಯರ, ೧೯೮೩, **ಜಗಜ್ಯೋತಿ ಬಸವೇಶ್ವರ,** ಪುಟ ೮೮-೮೯.

೭. ಅ.ನ.ಕೃ., ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೧೨೧.

೮. ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ, ೨೦೦೩, **ಜಂಗಮದೆಡೆಗೆ,** ಪುಟ ೪೧.

೯. ಅ.ನ.ಕೃ., ೧೯೪೯, **ಜಗಜ್ಯೋತಿ ಬಸವೇಶ್ವರ,** ಪುಟ ೧೨೦-೧೨೧.

೧೦. **ಅದೇ** - ಪುಟ ೧೨೮.

೧೧. ಏಣಗಿ ಬಾಳಪ್ಪ (ಸಂ), ೨೦೦೩, **ಗಜ್ಯೋತಿ ಬಸವೇಶ್ವರ,** ಪುಟ ೭.

೧೨. **ಅದೇ** - ಪುಟ ೮.

೧೩. ಚಂದ್ರಶೇಖರ ಕಂಬಾರ, ೨೦೧೧, **ಶಿವರಾತ್ರಿ,** ಪುಟ ೪೯.

೧೪. ಪಿ. ಲಂಕೇಶ್, ೨೦೦೦, **ಸಂಕ್ರಾಂತಿ,** ಪುಟ ೨೧.

೧೫. ವ್ಯಾಸ ದೇಶಪಾಂಡೆ, ೨೦೦೬, **ಇವ ನಮ್ಮವ,** ಪುಟ ೫೯-೬೦.

೧೬. **ಅದೇ** - ಪುಟ ೬೩-೬೪.

೧೭. **ಅದೇ** - ಪುಟ ೬೭-೬೮.

೧೮. ಶ್ರೀಕಂಠಶಾಸ್ತ್ರಿ ನಲವಡಿ, ೧೯೮೩, **ಜ್ಯೋತಿ ಬಸವೇಶ್ವರ,** ಪುಟ ೬೦-೬೧.

❑❑❑

## ಅಧ್ಯಾಯ : ಎಂಟು

# ಸಮಾರೋಪ

ಕನ್ನಡ ಸಾಹಿತ್ಯ ಚರಿತ್ರೆ ಹಲವಾರು ಪ್ರಕಾರಗಳನ್ನು ಒಳಗೊಂಡು ವಿಶಿಷ್ಟ ನೆಲೆಗಳಲ್ಲಿ ತಾತ್ವಿಕತೆಯನ್ನು ಬಿತ್ತರಿಸುತ್ತ ಚಿಂತನೆಗಳನ್ನು ಪಸರಿಸುವ ಮಹತ್ತರ ನೆಲೆಯಾಗಿದೆ. ಕನ್ನಡ ಇತಿಹಾಸದಲ್ಲಿ ಹತ್ತನೆಯ ಶತಮಾನವು ಕ್ಷಾತ್ರಯುಗವೆಂದು ದಾಖಲಾದರೆ, ಹನ್ನೆರಡನೆಯ ಶತಮಾನವು ಶರಣರ ಆಂದೋಲನ ಯುಗವೆಂದು ಪ್ರಸಿದ್ಧಿಯನ್ನು ಪಡೆದಿದೆ. ಕಾರಣ ಆಗಿನ ಸಾಹಿತ್ಯವೆಲ್ಲ ಚಂಪೂವಿನ ಬಿಗಿ ಬಂಧನದಲ್ಲಿ ರಚಿತಗೊಂಡಿದ್ದು, ಆ ಪರಿಸ್ಥಿತಿಯ ಕಾಲಾವಧಿಯಲ್ಲಿ ಬುದ್ಧಿವಂತರೆನಿಸಿಕೊಳ್ಳುವವರೆಲ್ಲರೂ ಕವಿಗಳು, ಉಭಯಭಾಷಾ ವಿಶಾರದರೂ, ಪಂಡಿತರೂ ಎನಿಸಿಕೊಳ್ಳುವುದರಲ್ಲಿ ತೊಡಗಿದ್ದರೆಂಬುದು ವ್ಯಕ್ತವಾಗುತ್ತದೆ. ಆದರೆ ವಚನಕಾರರು ಈ ರೀತಿಯಾಗಿ ಪಂಡಿತರೆನಿಸಿಕೊಳ್ಳಲು, ಕೀರ್ತಿಗಳಿಸಲು ಎಂದಿಗೂ ಹೆಣಗಲಿಲ್ಲ. ಸಮಾಜದಲ್ಲಿದ್ದ ಮೌಢ್ಯಗಳನ್ನು ಅಂಧಶ್ರದ್ಧೆಗಳನ್ನು, ಅಸಮಾನತೆಯನ್ನು ಕಿತ್ತೊಗೆಯಲು ಪ್ರಾಮಾಣಿಕವಾಗಿ ಮಾಡಿದ ಪ್ರಯತ್ನ ಅಪ್ರತಿಮ. ಅಂತೇ ಜನತೆಯ ಬದುಕಿಗೆ ಬೇಕಾದ ನೆಮ್ಮದಿಗೆ ಪೂರಕವೆನ್ನುವಂತೆ ವಚನಕಾರರು ದೇವ ಭಾಷೆಯಾದ ಸಂಸ್ಕೃತದ ಬದಲು ಸಾಮಾನ್ಯ ಜನರೆಲ್ಲರೂ ಮಾತನಾಡುತ್ತಿದ್ದ ಕನ್ನಡವನ್ನೇ ವಿಶಿಷ್ಟ ನುಡಿಯಾಗಿಸಿದರು. ಜಾತಿಮತಗಳ ಬೇರನ್ನೂ ಕಿತ್ತು ಹಾಕಿ, ಗಂಡೂ ಹೆಣ್ಣೆಂಬ ಲಿಂಗಭೇದವನ್ನೂ ಬಿಟ್ಟು, ಉಚ್ಚ-ನೀಚವೆಂಬ ನೀತಿಯನ್ನು ತೆಗೆದೊಗೆದು ಸಕಲರ ಕಲ್ಯಾಣದ ಕುರಿತ ತರ್ಕಬದ್ಧವಾದ ಆಲೋಚನೆ ಮಾಡಿದರು.

ಶರಣರೆಲ್ಲರೂ ಕಾಯಕಕ್ಕೆ ದೈವತ್ವದ ಜೀವ ತುಂಬಿದರು. ಈ ಪಂಕ್ತಿಯಲ್ಲಿ ಬಸವಣ್ಣನ ಕಾರ್ಯ ಜಗತ್ತಿಗೆಯೇ ದಾರಿದೀಪ; ಎಂದು ಹೇಳಿದರೆ ಇನ್ನೂ ಹೆಚ್ಚು ಅರ್ಥಪೂರ್ಣ. ಅಂತೇ ಅನುಭವಮಂಟಪದ ಸ್ಥಾಪನೆ ಅದಕ್ಕೆ ನಾಂದಿಯಾಯಿತು. ಈ ಭವ್ಯ ಮಂಟಪದಲ್ಲಿ ಭೇದಭಾವವಿಲ್ಲದೇ ಆಧ್ಯಾತ್ಮದ ಕುರಿತು ಚರ್ಚಿಸುವುದು. ಚರ್ಚೆಯಿಂದ, ಅನುಭವದಿಂದ ವಚನಗಳನ್ನು ರಚಿಸುವುದು ಮುಂತಾದ ಸತ್‌ಕ್ರಿಯಾಶೀಲ ಕಾಯಕ ಶರಣರದ್ದಾಗಿತ್ತು. ಬಸವಣ್ಣನವರು ಇದಕ್ಕೆಲ್ಲ ಪ್ರೇರಣೆಯಾಗಿ ನಿಂತವರು.

ವಚನ ಸಾಹಿತ್ಯವನ್ನು ಬೆಳಗಿದ ಬಸವಣ್ಣನವರ ಕಾರ್ಯಸಾಧನೆ ಮಹತ್ತರವಾದುದು. ಅವರ ನಿಷ್ಠೆ ಮತ್ತು ಪರಿಶ್ರಮದಿಂದ ಅವರು ಕೆಳವರ್ಗದವರ ಬಗ್ಗೆ ಹೊಂದಿದ್ದ ಅಭಿಮಾನ,

ಪ್ರೀತಿ, ಕರುಣೆ ಈ ಎಲ್ಲಾ ಅಂಶಗಳಿಂದ ಜಗತ್ತಿಗೆ ಬೆಳಕಾಗಿ ನಿಲ್ಲಲು ಸಾಧ್ಯವಾಯಿತು. ಆದ್ದರಿಂದ ಬಸವಣ್ಣನನ್ನು ಕುರಿತ ಆಧುನಿಕ ನಾಟಕ ಹಾಗೂ ಕಾದಂಬರಿಗಳು ಮತ್ತೆ ಮತ್ತೆ ರಚನೆಗೊಳ್ಳುತ್ತಲೇ ಇವೆ. ಸಮಾಜದಲ್ಲಿಯ ಸಮಸ್ಯೆಗಳಿಗೆ ಆತನಲ್ಲಿ ಪರಿಹಾರವಿದೆ ಎಂದು ಹುಡುಕಲು ಪ್ರಯತ್ನಿಸುತ್ತಾರೆ. ಆದ್ದರಿಂದ ಜೀವನದ ವಸ್ತುವನ್ನು ಸಾಹಿತ್ಯ ರೂಪದಲ್ಲಿ ಅಳವಡಿಸಿಕೊಂಡು ಬೆಳೆದಿರುವುದು ಗಮನಿಸಬಹುದಾಗಿದೆ. ಹೊಸಗನ್ನಡ ಸಾಹಿತ್ಯದಲ್ಲಿ ಪ್ರತಿಯೊಬ್ಬ ಲೇಖಕರು ಬಸವಣ್ಣನನ್ನು ನೋಡಿರುವ ವಿಧಾನ, ವಸ್ತುವಿನ ಬದಲಾವಣೆ ಹೇಗೆ ಭಿನ್ನವಾಗಿದೆ, ಇವತ್ತಿನ ಪಥ್ಯದ ಮೂಲಕ ಸಹೃದಯರಿಗೆ ಅವರು ಕೊಡುವ ಆಶಯಗಳೇನು, ಅದರ ಪ್ರಭಾವ ಇವತ್ತಿನ ಸಮಾಜಕ್ಕೆ ಎಷ್ಟರಮಟ್ಟಿಗೆ ಪ್ರಭಾವ ಬೀರುತ್ತವೆ ಎಂದು ತಿಳಿದುಕೊಳ್ಳುವಾಗ ನನ್ನಲ್ಲಿಯೇ ನನಗೆ ಗೊತ್ತಿಲ್ಲದಂತೆ ವಿಶ್ಲೇಷಣೆ ವಿಧಾನ ಮತ್ತು ತೀಕ್ಷ್ಣವಾಗಿ ಚಿಂತಿಸುವ ಗುಣ ಬೆಳೆದುಕೊಂಡು ಬಂದಿದೆ. ಅದನ್ನೇ ಮುಂದಿನ ಸಂಶೋಧಕರಿಗೆ ನನ್ನ ಸಂಶೋಧನೆ ನೆರವಾಗಲಿ ಎಂಬ ಉದ್ದೇಶ ಇಲ್ಲಿ ಅಡಗಿದೆ.

ಹೊಸಗನ್ನಡ ಸಾಹಿತ್ಯದ ರೂಪಗಳಾದ ನಾಟಕ, ಕಾದಂಬರಿ ಇವುಗಳಲ್ಲಿ ಬಸವಣ್ಣನವರ ಕುರಿತ ಸಂಗತಿಗಳು ಒಂದು ಕಡೆ ಕ್ರೋಢೀಕರಿಸಿ ಅವು ಹೇಳುವ ವಸ್ತು ಮತ್ತು ಧ್ವನಿ ಪ್ರಸ್ತುತ ಸಂದರ್ಭದಲ್ಲಿ ಬೀರುವ ಪ್ರಭಾವ ಗುರುತಿಸಲಾಗಿದೆ. ಕವಿ ತಾನು ಕಲ್ಪಿತ ವಸ್ತು ಅಥವಾ ಸಂಗ್ರಹಿಸಿದ ವಸ್ತು ಹೇಳುವಂತಹ ಸಂದರ್ಭದಲ್ಲಿ ತನ್ನದೇ ಆದ ನಿರ್ಧಾರಗಳನ್ನು ಹಾಕಿಕೊಳ್ಳುತ್ತಾನೆ. ಪ್ರಸ್ತುತ ಅಧ್ಯಯನ ಅವೆಲ್ಲವನ್ನು ಗುರುತಿಸುವಾಗ ಕೆಲವು ಅಂಶಗಳ ಮೇಲೆ ಬೆಳಕು ಚೆಲ್ಲಿದ್ದೇನೆ. ಅದು ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಈ ಕ್ಷೇತ್ರಗಳಲ್ಲಿ ಆ ವಿಷಯ ಹೇಗೆ ಹರಡಿಕೊಂಡಿದೆ ಎಂಬುದನ್ನು ಗುರುತಿಸುವಂತಹ ಪ್ರಾಮಾಣಿಕ ಪ್ರಯತ್ನ ಮಾಡಿದ್ದೇನೆ.

ಬಸವಣ್ಣನವರ ಸಮಕಾಲೀನರು ಬಸವಣ್ಣನ ನಂತರದ ಶರಣರು ನಡುವೆ ಇದ್ದ ಸಂಬಂಧ ಹಾಗೂ ಬಸವಣ್ಣನವರನ್ನು ಇತರ ಶರಣರು ಹೇಗೆ ಕಂಡುಕೊಂಡಿದ್ದಾರೆ. ಅವರನ್ನು ಸಮಾಜದಲ್ಲಿ ಹೇಗೆ ಗುರುತಿಸಲು ಪ್ರಯತ್ನಪಟ್ಟಿದ್ದಾರೆಂಬುದನ್ನು ಹಲವಾರು ಪಾತ್ರಗಳ ಮುಖಾಂತರ ವಿಶ್ಲೇಷಿಸಲಾಗಿದೆ. ಹಾಗೇನೇ ಬಸವಣ್ಣನವರು ಇನ್ನುಳಿದ ಶರಣರನ್ನು ಹೇಗೆ ಕಂಡುಕೊಂಡರು, ಆರಾಧಿಸಿದರು, ಅನುಸರಿಸಿದರು, ಅನುಸರಿಸುವ ವಿಧಾನವನ್ನು ವಿಮರ್ಶಿಸಲಾಗಿದೆ.

ಬಹುತೇಕ ಆಧುನಿಕ ಕಾದಂಬರಿಗಳಲ್ಲಿ ಶಾಸನಗಳು, ಮಹಾಕಾವ್ಯಗಳಲ್ಲಿಯ ಉಲ್ಲೇಖಗಳನ್ನು ಆಧಾರವಾಗಿಟ್ಟುಕೊಂಡು ಕಾದಂಬರಿಕಾರರು ಬಸವಣ್ಣನ ಜೀವನ ಚರಿತ್ರೆಗೆ ಒತ್ತು ಕೊಟ್ಟಿದ್ದಾರೆ. ಹಾಗಾಗಿ ಸಹಜವಾಗಿ ಇಲ್ಲಿ ಭಕ್ತಿರಸವು ಹೆಚ್ಚು ಕಾಣಿಸುತ್ತದೆ. ಹಾಗಾಗಿ ಇವು ಮಧ್ಯಕಾಲೀನ ಕಥಾನಕಗಳಂತೆ ಗೋಚರಿಸುತ್ತವೆ. ಆದರೆ ಇದಕ್ಕೆ ತದ್ವಿರುದ್ಧವಾಗಿ ಆಧುನಿಕ ಸಾಹಿತ್ಯದ ಬಹುತೇಕ ನಾಟಕಗಳಲ್ಲಿ ಬಸವಣ್ಣನ ತತ್ವಗಳ ಹುಡುಕಾಟದ ಪ್ರಕ್ರಿಯೆ ಕಾಣಿಸುತ್ತದೆ. ಸಮಕಾಲೀನ ಚಿಂತನೆಗಳ ಮೂಲಕ ಚರಿತ್ರೆಯನ್ನು ಕಟ್ಟಿಕೊಡುವುದು ನಾಟಕಕಾರರ ಪ್ರಯತ್ನವಾಗಿದೆ. ಹೀಗಾಗಿ ಗಂಭೀರ ನಾಟಕಗಳಲ್ಲಿ ಪ್ರಗತಿಪರ ಆಶಯಗಳು ಹೆಚ್ಚು ಕಾಣಿಸಿಕೊಂಡಿವೆ. ವಿಶ್ಲೇಷಣಾ ಸಂದರ್ಭದಲ್ಲಿ

ಲೇಖಕರ ಗ್ರಹಿಕೆಗಳು ಎಂದು ನಾನು ಹೇಳಿದರೂ ಅಂತಿಮವಾಗಿ ಅವು ನನ್ನ ಗ್ರಹಿಕೆಗಳೇ ಆಗಿರುತ್ತವೆ.

**ಅಧ್ಯಯನದ ಫಲಿತಗಳು**

೧. ವೈದಿಕ ಸಂಪ್ರದಾಯ ಸಮಾಜದಲ್ಲಿದ್ದ ಜಾತಿ, ಅಸ್ಪೃಶ್ಯತೆ, ದೇವದಾಸಿ ಮುಂತಾದ ಅನಿಷ್ಟ ಪದ್ಧತಿಗಳಿಂದ ಆಗುತ್ತಿರುವ ಶೋಷಣೆಯನ್ನು ತಡೆಗಟ್ಟಲು ಸಹಪಂಕ್ತಿ ಭೋಜನ, ಇಷ್ಟಲಿಂಗಧಾರಣೆ, ಅಂತರ್‌ಜಾತಿ ವಿವಾಹಗಳಂತಹ ಅನೇಕ ಪ್ರಯೋಗಗಳನ್ನು ಮಾಡುವ ಮೂಲಕ ಸಮಾಜ ಸುಧಾರಣೆಗೆ ಪ್ರಯತ್ನಿಸಿರುವುದನ್ನು ಪಠ್ಯಗಳ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ.

೨. ಚಳುವಳಿ ಹೋರಾಟಗಳ ಮೂಲಕ ಸಮಾಜದ ಏಳಿಗೆ ಸಾಧ್ಯ ಎನ್ನುವುದನ್ನು ಸಾಂಸ್ಕೃತಿಕವಾಗಿ ಪಠ್ಯಗಳು ಮರುವ್ಯಾಖ್ಯಾನಿಸುವ ಅಂಶಗಳನ್ನು ಗುರುತಿಸಲಾಗಿದೆ.

೩. ರಾಜ್ಯದ ಅಭ್ಯುದಯವೆನ್ನುವುದು ಅರಮನೆಯಿಂದ ಸಾಧ್ಯವಿಲ್ಲ. ಅದಕ್ಕಾಗಿ ಪರ್ಯಾಯ ಮಾರ್ಗಗಳನ್ನು ಕಂಡುಕೊಳ್ಳುವ ಅಗತ್ಯವನ್ನು, ಅನಿವಾರ್ಯತೆಯನ್ನು ಗಂಭೀರ ನಾಟಕಗಳು ಪ್ರಯತ್ನಿಸಿರುವ ಪ್ರಸ್ತುತತೆಯನ್ನು ಒರೆಗಲ್ಲಿಗೆ ಹಚ್ಚಲಾಗಿದೆ.

೪. ಬಸವಣ್ಣನ ನಿಲುವುಗಳು ಕೆಲವು ಸಂದರ್ಭದಲ್ಲಿ ಬಿಜ್ಜಳನ(ಪ್ರಭುತ್ವದ) ಪರವಾಗಿದ್ದರೆ, ಕೆಲವು ಸಂದರ್ಭಗಳಲ್ಲಿ ಬಿಜ್ಜಳನ ಆಡಳಿತವನ್ನು ವಿರೋಧಿಸುವ ನೆಲೆಯಲ್ಲಿ ಕಾಣಸಿಗುತ್ತವೆ. ಇಲ್ಲಿ ಬಸವಣ್ಣನಿಗೆ ಅಧಿಕಾರ ಯಾರ ಕೈಯಲ್ಲಿ ಇದ್ದರೂ ಸಮಾಜ ಸುಧಾರಣೆ ಬಸವಣ್ಣನಿಗೆ ಮುಖ್ಯವಾಗಿತ್ತು ಎಂಬುದನ್ನು ಪಠ್ಯಗಳು ವ್ಯಾಖ್ಯಾನಗೊಳಿಸಲು ಪ್ರಯತ್ನಿಸಿರುವ ಅಂಶಗಳನ್ನು ಚರ್ಚಿಸಲಾಗಿದೆ.

೫. ಅಗ್ರಹಾರ, ಮಠಮಾನ್ಯ, ರಾಜಪ್ರಭುತ್ವವನ್ನು ಮೀರಿ ಪ್ರಜಾಕಲ್ಯಾಣದ ಹಾದಿಯಲ್ಲಿ ಬಸವಣ್ಣನ ನಿಲುವುಗಳು ವಿಶಿಷ್ಟವಾಗಿ ಪಠ್ಯಗಳಲ್ಲಿ ಗೋಚರಿಸಿವೆ. ಅವುಗಳನ್ನು ಗುರುತಿಸಲಾಗಿದೆ.

೬. ಜಾತ್ಯಾತೀತ ಸಮಾಜ ನಿರ್ಮಾಣಕ್ಕೆ ಅಂತರ್‌ಜಾತಿ ವಿವಾಹ, ಮತಾಂತರ, ದೀಕ್ಷೆಗಿಂತ ಪ್ರೀತಿ-ಪ್ರೇಮದಿಂದ ಮಾತ್ರ ಸಮಾನತೆ ಸಾಧ್ಯ ಎಂಬ ವಾಸ್ತವಿಕ ವಿಚಾರವನ್ನು ಲಂಕೇಶರ ಸಂಕ್ರಾಂತಿ ಅಂತಹ ಗಂಭೀರ ನಾಟಕಗಳು ಹೇಳಲಿಕ್ಕೆ ಪ್ರಯತ್ನಿಸಿವೆ. ಇವುಗಳನ್ನು ಅಧ್ಯಯನದಲ್ಲಿ ವಿಶೇಷವಾಗಿ ಕಂಡುಕೊಳ್ಳಲಾಗಿದೆ.

೭. ಜನಪ್ರಿಯ ನಾಟಕಕಾರರು ನೀಲಾ-ಶೀಲಾರ ಪ್ರೇಮ-ಪ್ರಸಂಗವನ್ನು ಪ್ರೇಕ್ಷಕರ ಮನರಂಜನೆಗಾಗಿ ಹೆಚ್ಚು ಬಳಸಿಕೊಂಡಿರುವುದನ್ನು ಗುರುತಿಸಲಾಗಿದೆ.

೮. ಅ.ನ.ಕೃ.ರಂತಹ ಪ್ರಗತಿಶೀಲ ಸಾಹಿತ್ಯದ ಬರಹಗಾರ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳುವಳಿಯ ಸಂದರ್ಭದಲ್ಲಿ ಲಿಂಗಾಯತರನ್ನು ಚಳುವಳಿಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲು 'ಜಗಜ್ಯೋತಿ ಬಸವೇಶ್ವರ' ಎಂಬ ನಾಟಕ ರಚಿಸುವ ಮೂಲಕ ಪ್ರಯತ್ನಿಸಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ.

೯. ಗಂಭೀರ ನಾಟಕಕಾರರು ವಾಸ್ತವಿಕ ಸಮಸ್ಯೆಯನ್ನು ಪರಿಣಾಮ ಮೀಮಾಂಸೆಯ ನೆಲೆಯಲ್ಲಿ ನಿಂತು ಆಲೋಚಿಸುವ ಬಗೆಯನ್ನು ಕಂಡುಕೊಳ್ಳಲಾಗಿದೆ. ಇದು ಮಠಮಾನ್ಯ ಹಾಗೂ ಜನಪ್ರಿಯ ನಾಟಕಗಳಿಗಿಂತ ಭಿನ್ನವಾಗಿ ನಿಲ್ಲುವ ಅಂಶಗಳನ್ನು ಕಂಡುಕೊಳ್ಳಲಾಗಿದೆ.

೧೦. ಅಗ್ರಹಾರ, ಮಠಮಾನ್ಯ ಮತ್ತು ಪ್ರಭುತ್ವ ಈ ಮೂರು ನೆಲೆಯಲ್ಲಿ ಡಾ. ಎಂ.ಎಂ. ಕಲಬುರ್ಗಿಯವರಂತಹ ಸಂಶೋಧಕರ ಸೃಜನಶೀಲ ಪಠ್ಯ ಉಳಿದ ಪಠ್ಯಗಳಿಗಿಂತ ಹೇಗೆ ಭಿನ್ನ ಎಂಬುದನ್ನು ಗುರುತಿಸಲಾಗಿದೆ.

೧೧. ಐತಿಹಾಸಿಕ ದಾಖಲೆಗಳು ಪರಂಪರೆಯ ಸತ್ಯವನ್ನು ಸಾರುವ ಸಂದರ್ಭದಲ್ಲಿ ಆಧುನಿಕವಾಗಿ ನಮ್ಮ ಜೀವನದ ಮೇಲೆ ಪ್ರಭಾವ ಬೀರಿದ ಅನೇಕ ವ್ಯಕ್ತಿಗಳ ಜೀವನ ಚರಿತ್ರೆ ಹೀಗೆ ಆಧುನಿಕ ಕಾದಂಬರಿಗಳಲ್ಲಿ ಅನಾವರಣವಾಗಿರುವುದನ್ನು ಕಂಡುಕೊಳ್ಳಲಾಗಿದೆ.

೧೨. ಅನೇಕ ಕಾದಂಬರಿಕಾರರು ತಮ್ಮ ಕಾದಂಬರಿಗೆ ವಸ್ತುವನ್ನು ಒದಗಿಸಿಕೊಳ್ಳುವಂತಹ ಸಂದರ್ಭದಲ್ಲಿ ತಾವು ಹಾಕಿಕೊಂಡಿರುವ ದೃಷ್ಟಿ-ಧೋರಣೆಗಳು ಪ್ರಸ್ತುತ ಸಂದರ್ಭದಲ್ಲಿ ಸಮಸ್ಯೆಯನ್ನು ಯಾವ ರೀತಿ ಪರಿಹರಿಸಬೇಕು ಎಂಬುದನ್ನು ಬಸವಣ್ಣನ ಪಾತ್ರದ ಮೂಲಕ ಗುರುತಿಸಿರುವ ಬಗೆಯನ್ನು ಇಲ್ಲಿ ಗುರುತಿಸಲಾಗಿದೆ.

೧೩. ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ' ಕಾದಂಬರಿಯಲ್ಲಿ ಬಸವಣ್ಣನನ್ನು ಪವಾಡ ಪುರುಷನನ್ನಾಗಿ ಕಾಣದೇ ಪ್ರಸ್ತುತ ಸಂದರ್ಭದಲ್ಲಿ ಜನಸಾಮಾನ್ಯರು ಅನುಭವಿಸುವಂತಹ ಸಮಸ್ಯೆಗಳಿಗೆ ಈಡಾದ ವ್ಯಕ್ತಿ ತೆಗೆದುಕೊಳ್ಳುವ ನಿರ್ಧಾರಗಳಿಗೆ ಒಬ್ಬ ಸುಧಾರಣವಾದಿಯಾಗಿ ಕಾಣುತ್ತಾನೆ. ಈ ಅಂಶವನ್ನು ಗುರುತಿಸಲಾಗಿದೆ.

೧೪. ಜಿ.ಎಚ್. ಹನ್ನೆರಡುಮಠರವರ ಕಾದಂಬರಿ ಸಂಪುಟಗಳು ಬಸವಣ್ಣನ ಜೀವನ ಚರಿತ್ರೆ ಮಾಲಿಕೆಯಾಗಿ ಕಾಣಸಿಗುತ್ತದೆ. ಬಿ. ಪುಟ್ಟಸ್ವಾಮಯ್ಯನವರ ಕಾದಂಬರಿ ಸಂಪುಟಗಳು ಇದೇ ರೀತಿಯನ್ನು ಅನುಸರಿಸಿವೆ. ಆದರೆ ಇವುಗಳ ನಡುವಿನ ಸೂಕ್ಷ್ಮ ವ್ಯತ್ಯಾಸವನ್ನು ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಈ ಸಂಶೋಧನಾ ಪ್ರಬಂಧ ಮುಂದಿನ ಸಂಶೋಧಕರಿಗೆ ಇನ್ನೂ ಅನೇಕ ಆಯಾಮಗಳಲ್ಲಿ ಚರ್ಚಿಸಲಿಕ್ಕೆ ಸಾಧ್ಯತೆಗಳಿವೆ. ನನ್ನ ಸಂಶೋಧನಾ ವಿಷಯ ಆಧುನಿಕ ಕಾದಂಬರಿ ಹಾಗೂ ನಾಟಕ ಪಠ್ಯಗಳಿಗೆ ಮಾತ್ರ ಸಂಬಂಧಿಸಿದೆ. ಇದು ಅಧ್ಯಯನದ ಮಿತಿಯೂ ಹೌದು. ಆಧುನಿಕ ಕವಿಗಳು ಬಸವಣ್ಣನನ್ನು ಕುರಿತು ಬರೆದಿರುವ ಬಿಡಿ ಬಿಡಿಯಾದ ಕವಿತೆಗಳು ಸಿಗುತ್ತವೆ. ಅವುಗಳ ಕುರಿತು ಅಧ್ಯಯನ ಕೈಗೆತ್ತಿಕೊಳ್ಳಬಹುದು. ಮಧ್ಯಕಾಲೀನ ಕಾವ್ಯಗಳ ಕುರಿತು ವಿಸ್ತೃತ ಅಧ್ಯಯನ ನಡೆಸಬಹುದು. ಜನಪದ ಪಠ್ಯಗಳಲ್ಲಿಯ ಬಸವಣ್ಣನ ವೈರುಧ್ಯ ಚಿತ್ರಣಗಳನ್ನು ಅಧ್ಯಯನ ಮಾಡಬಹುದು. ತೌಲನಿಕವಾಗಿಯೂ ನೋಡಬಹುದು. ಹೀಗೆ ಅಧ್ಯಯನದ ಅನೇಕ ಸಾಧ್ಯತೆಗಳು ಇಲ್ಲಿ ಗಮನಾರ್ಹವಾಗಿವೆ.

□□□

# ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ (ಸಂ), ೨೦೦೪**ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ,** ಪ್ರಸಾರಾಂಗ, ವಿಶ್ವವಿದ್ಯಾಲಯ, ಹಂಪಿ.

೨. ಅಶೋಕ ಟಿ.ಪಿ., ೧೯೯೧, **ಸಾಹಿತ್ಯ ಸಂದರ್ಭ,** ಅಕ್ಷರ ಪ್ರಕಾಶನ, ಹೆಗ್ಗೋಡು.

೩. ಅಶೋಕಕುಮಾರ ರಂಜೇರೆ, ೨೦೦೨, **ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೪. ಆಮೂರ ಜಿ.ಎಸ್., ೨೦೦೩, **ಕನ್ನಡ ಕಥನ ಸಾಹಿತ್ಯ: ಸಣ್ಣಕತೆ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೫. ಏಣಗಿ ಬಾಳಪ್ಪ (ಸಂಯೋಜಕರು), ೧೯೫೬, **ಜಗಜ್ಯೋತಿ ಬಸವೇಶ್ವರ (ರಂಗನಾಟಕ),** ಶ್ರೀ ಬಸವೇಶ್ವರ ಪೀಠ, ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಕಲಬುರ್ಗಿ ಎಂ.ಎಂ., ೧೯೯೫, **ಕೆಟ್ಟಿತ್ತು ಕಲ್ಯಾಣ,** ಸಹೃದಯ ಸಾಂಸ್ಕೃತಿಕ ಅಕಾಡೆಮಿ, ಧಾರವಾಡ.

೭. ಕಲಬುರ್ಗಿ ಎಂ.ಎಂ. (ಸಂ), ೧೯೯೩, **ಬಸವಣ್ಣನವರ ವಚನ ಸಂಪುಟ,** ಕರ್ನಾಟಕ ಸರ್ಕಾರ, ಬೆಂಗಳೂರು.

೮. ಕೀರ್ತಿನಾಥ ಕುರ್ತಕೋಟಿ, ೧೯೯೧, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ಮನೋಹರ ಗ್ರಂಥಮಾಲೆ, ಲಕ್ಷ್ಮೀಭವನ, ಸುಭಾಸ ರಸ್ತೆ, ಧಾರವಾಡ.

೯. ಕೀರ್ತಿನಾಥ ಕುರ್ತಕೋಟಿ, ೧೯೯೦, **ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦. ಕೃಷ್ಣಮೂರ್ತಿ ಚಂದರ್ (ಸಂ), **ಗಿರೀಶ್ ಕಾರ್ನಾಡ್ ನಾಟಕಗಳು-ವಿಮರ್ಶೆ,** ಸಪ್ನಬುಕ್‌ಹೌಸ್, ಬೆಂಗಳೂರು.

೧೧. ಕೃಷ್ಣರಾಯ ಅ.ನ., ೧೯೪೯, **ಜಗಜ್ಯೋತಿ ಬಸವೇಶ್ವರ,** ಉಷಾ ಸಾಹಿತ್ಯ ಮಾಲೆ, ಮೈಸೂರು.

೧೨. ಕೃಷ್ಣರಾಯ ಅ.ನ., ೧೯೫೫, **ವಿಶ್ವಬಂಧು ಬಸವೇಶ್ವರ,** ವಿದ್ಯಾನಿಧಿ ಬುಕ್‌ಡಿಪೋ, ಬೆಂಗಳೂರು.

೧೩. ಕೃಷ್ಣರಾಯ ಅ.ನ., ೧೯೭೧, **ಬಸವೇಶ್ವರ,** ಬಿ.ಎಚ್. ಪ್ರಕಾಶನ, ಬೆಂಗಳೂರು.

೧೪. ಗಿರೀಶ್ ಕಾರ್ನಾಡ, ೧೯೯೦, **ತಲೆದಂಡ,** ಮನೋಹರ ಗ್ರಂಥಮಾಲೆ, ಧಾರವಾಡ.

೧೫. ಗುಬ್ಬಣ್ಣ ಶಿವಾನಂದ (ಸಂ), ೧೯೮೮, **ಬಸವಣ್ಣ ನಿನ್ನ ಹೆಸರು,** ಬಸವ ಸಮಿತಿ, ಬೆಂಗಳೂರು.

೧೬. ಗುಂಜಾಳ್ ಎಸ್.ಆರ್., ೧೯೯೩, **ಅನುಭಾವಿಯ ಆತ್ಮಕಥನ,** ಚನ್ನಬಸವೇಶ್ವರ ಸಂಸ್ಥಾನಮಠ, ಹಾರಕೂಡ.

೧೭. ಗುಂಜಾಳ್ ಎಸ್.ಆರ್., ೧೯೯೭, **ಬಸವಣ್ಣನವರ ಸುತ್ತಮುತ್ತ,** ದುರುದುಂಡೇಶ್ವರ ಮಠ, ಮುರುಗೋಡ.

೧೮. ಗುಂಜಾಳ್ ಎಸ್.ಆರ್. (ಸಂ), ೧೯೬೭, **ಬಸವ ಸಾಹಿತ್ಯ ವಾಹಿನಿ ದರ್ಪಣ ಭಾಗ-೧,** ಬಸವ ಜಯಂತಿ, ಬೆಂಗಳೂರು.

೧೯. ಚಂದ್ರಶೇಖರ್ ಟಿ.ಆರ್. (ಅನು), ಶೌಟನ್ (ಮೂಲ), ೨೦೦೦, **ಅನುಭಾವಿಗಳ ಕ್ರಾಂತಿ,** ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ.

೨೦. ಚಂದ್ರಶೇಖರ ಕಂಬಾರ, ೨೦೧೧, **ಶಿವರಾತ್ರಿ,** ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು.

೨೧. ಚಂದ್ರಶೇಖರ್ ಟಿ.ಆರ್., ೨೦೦೪, **ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು,** ಸಿವಿಜಿ ಪಬ್ಲಿಕೇಷನ್, ಬೆಂಗಳೂರು.

೨೨. ಚಿದಾನಂದಮೂರ್ತಿ ಎಂ., ೧೯೯೧, **ಬಸವಣ್ಣನವರು,** ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ.

೨೩. ಚಿದಾನಂದಮೂರ್ತಿ ಎಂ., ೨೦೦೪, **ಸ್ಥಾವರ ಜಂಗಮ,** ಸಪ್ನಬುಕ್‌ಹೌಸ್, ಬೆಂಗಳೂರು.

೨೪. ಚಿದಾನಂದಮೂರ್ತಿ ಎಂ., ೧೯೭೫, **ವಚನ ಸಾಹಿತ್ಯ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೫. ಚಿದಾನಂದಮೂರ್ತಿ ಎಂ., ೧೯೯೮, **ವಚನ ಶೋಧ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೬. ಜವರೇಗೌಡ ದೇ., ೧೯೮೫, **ಕುವೆಂಪು ದೃಷ್ಟಿಯಲ್ಲಿ ಬಸವೇಶ್ವರ,** ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೨೭. ಜೋಳದರಾಶಿ ಕೆ. ದೊಡ್ಡನಗೌಡ, ೧೯೮೬, **ಕ್ರಾಂತಿಪುರುಷ ಬಸವಣ್ಣ,** ತೆಲುಗು ವಿಶ್ವವಿದ್ಯಾಲಯ, ಹೈದರಾಬಾದ್.

೨೮. ತರಳಬಾಳು ಜಗದ್ಗುರು ಶ್ರೀ ಶಿವಕುಮಾರ ಸ್ವಾಮೀಜಿ, ೧೯೮೩, **ಮರಣವೇ ಮಹಾನವಮಿ,** ತರಳಬಾಳು ಪ್ರಕಾಶನ, ಅಣ್ಣನ ಬಳಗ, ಸಿರಿಗೆರೆ.

೨೯. ತಾರನಾಥ ಎಂ.ಎಸ್., ೨೦೦೧, **ಶತಮಾನದ ಸಂಶೋಧನೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೦. ತಿಪ್ಪೇರುದ್ರಸ್ವಾಮಿ ಎಚ್., ೧೯೮೭, **ವಚನ ಚಳುವಳಿ,** ಶ್ರೀ ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾಲಯ, ಗುಲಬರ್ಗಾ.

೩೧. ತಿಪ್ಪೇರುದ್ರಸ್ವಾಮಿ ಎಚ್. (ಸಂ), ೧೯೯೫, **ಬಸವೇಶ್ವರ ವಚನ ದೀಪಿಕೆ,** ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೩೨. ತಿಪ್ಪೇರುದ್ರಸ್ವಾಮಿ ಎಚ್., ೧೯೬೧, **ಬಸವ ಕಲ್ಯಾಣ,** ಪಿ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೩. ತಿಪ್ಪೇರುದ್ರಸ್ವಾಮಿ ಎಚ್., ೧೯೮೩, **ಬಸವೇಶ್ವರ-ಗಾಂಧಿ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೪. ತಿಪ್ಪೇರುದ್ರಸ್ವಾಮಿ ಎಚ್., ೧೯೧೯, **ಕರ್ತಾರರನ ಕಮ್ಮಟ,** ಸಿದ್ಧಗಂಗಾ ಪ್ರಕಾಶನ, ಸಿದ್ಧಗಂಗಾ, ತುಮಕೂರು.

೩೫. ದಿವಸ್ಪಲ್ ಹೆಗಡೆ, ೧೯೯೪, **ಕನ್ನಡ ನವ್ಯನಾಟಕ ಮತ್ತು ಪಾಶ್ಚಾತ್ಯ ಪ್ರಭಾವ,** ಕದಂಬ ಪ್ರಕಾಶನ, ಬೆಂಗಳೂರು.

೩೬. ನಾಗರಾಜ್ ಕಿ.ರಂ., **ವಚನಗಳು,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೭. ನಾರಾಯಣ ಕೆ.ವಿ., ಬಿ. ಕೃಷ್ಣಮೂರ್ತಿ (ಸಂ), ೧೯೯೨, **ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ,** ಬಿ.ಎನ್. ಸತ್ಯನಾರಾಯಣರಾವ್ ರಿಜಿಸ್ಟ್ರಾರ್, ಕರ್ನಾಟ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೮. ಪಾಟೀಲ್ ವೈ.ಬಿ., ೨೦೦೧, ಕನ್ನಡ ಆಧುನಿಕ ನಾಟಕಗಳಲ್ಲಿ ಬಸವ ಪುರಾಣ, ಬೆಳಗು ಪ್ರಕಾಶನ, ಹಿಮಪೂರ್ಣ, ವಿದ್ಯಾನಗರ, ಹರಿಹರ.

೩೯. ಪುಟ್ಟಸ್ವಾಮಯ್ಯ ಬಿ., ೧೯೫೯, **ಉದಯಕವಿ,** ಶಾರದ ಪ್ರಕಟಣಾಲಯ, ಬೆಂಗಳೂರು.

೪೦. ಪುಟ್ಟಸ್ವಾಮಯ್ಯ ಬಿ., ೧೯೬೫, **ರಾಜ್ಯಪಾಲ,** ಶಾರದ ಪ್ರಕಟಣಾಲಯ, ಬೆಂಗಳೂರು.

೪೧. ಪುಟ್ಟಸ್ವಾಮಯ್ಯ ಬಿ, ೧೯೬೦, **ಕಲ್ಯಾಣೇಶ್ವರ,** ಶಾರದ ಪ್ರಕಟಣಾಲಯ, ಬೆಂಗಳೂರು.

೪೨. ಪುಟ್ಟಸ್ವಾಮಯ್ಯ ಬಿ, ೧೯೬೨, **ನಾಗಬಂಧ,** ಶಾರದ ಪ್ರಕಟಣಾಲಯ, ಬೆಂಗಳೂರು.

೪೩. ಪುಟ್ಟಸ್ವಾಮಯ್ಯ ಬಿ, ೧೯೬೨, **ಮುಗಿಯದ ಕನಸು,** ಶಾರದ ಪ್ರಕಟಣಾಲಯ, ಬೆಂಗಳೂರು.

೪೪. ಪುಟ್ಟಸ್ವಾಮಯ್ಯ ಬಿ, ೧೯೬೨, **ಕ್ರಾಂತಿಕಲ್ಯಾಣ,** ಶಾರದ ಪ್ರಕಟಣಾಲಯ, ಬೆಂಗಳೂರು.

೪೫. ಪುರಾಣಿಕ ಸಿದ್ಧಯ್ಯ, ೧೯೭೭, **ಬಸವಣ್ಣನವರ ಜೀವನ ಹಾಗೂ ಸಂದೇಶ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೬. ಬಸವರಾಜು ಎಲ್. (ಸಂ), ೧೯೬೬, **ಬಸವ ವಚನಾಮೃತ,** ಬಸವ ಸಮಿತಿ, ಬೆಂಗಳೂರು.

೪೭. ಬಸವರಾಜು ಎಲ್. (ಸಂ), ೧೯೬೩, **ಶಿವದಾಸ ಗೀತಾಂಜಲಿ,** ಶ್ರೀ ಶಿವರಾತ್ರೀಶ್ವರ ಗ್ರಂಥಮಾಲಾ, ಮೈಸೂರು.

೪೮. ಬಸವರಾಜ ಸಬರದ, ೨೦೦೪, **ವಚನಕಾರರು ಮತ್ತು ದಲಿತ ಸಂವೇದನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಬಸವರಾಜ ಸಬರದ, ೧೯೯೧, **ಬಸವಣ್ಣ ಮತ್ತು ಪ್ರಸ್ತುತ ಸಾಮಾಜಿಕ ಸಂದರ್ಭ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೦. ಬಸವರಾಜ ಸಬರದ, ೧೯೯೩, **ಬಸವೇಶ್ವರ ಮತ್ತು ಪುರಂದರದಾಸರು,** ತರಬಾಳು ಬೃಹನ್ಮಠ, ಸಿರಿಗೆರೆ.

೫೧. ಬಸವರಾಜ ಸಬರದ, ೧೯೯೨, **ವಚನ ಚಳುವಳಿ ಒಂದು ಒಳನೋಟ,** ಪಲ್ಲವಿ ಪ್ರಕಾಶನ, ಗುಲಬರ್ಗಾ.

೫೨. ಬಸವ ಸಮಿತಿ (ಸಂ), ೧೯೭೬, **ಬಸವೇಶ್ವರರ ಸಮಕಾಲೀನರು,** ಬಸವ ಸದನ, ಬಸವೇಶ್ವರ ವೃತ್ತ, ಬೆಂಗಳೂರು.

೫೩. ಬಸವರಾಜ ಕಲ್ಗುಡಿ, ೨೦೦೧, **ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೫೪. ಬಸವೇಶ್ವರ ಪೀಠ (ಸಂ), ೨೦೦೩, **ಬಸವಣ್ಣನವರ ಪ್ರಮುಖ ಚಿಂತನೆಗಳು,** ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೫. ಭೂಸನೂರ ಮಠ ಆರ್.ಸಿ., ೧೯೯೧, **ಬಸವ ಮತ್ತು ವಿಚಾರವಾದ,** ಬಸವ ಸಮಿತಿ, ಬಸವ ಭವನ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು.

೫೬. ಮರುಳಯ್ಯ ಸಾ.ಶಿ., ೨೦೦೩, **ಬಸವಣ್ಣನವರ ಸಿದ್ಧಾಂತಗಳು,** ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೭. ಮಹೇಶ ತಿಪ್ಪಶೆಟ್ಟಿ (ಸಂ), ೨೦೦೩, **ಬಸವತತ್ವ: ಸಾಮಾಜಿಕ ಬದಲಾವಣೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೮. ಮಾತೆ ಮಹಾದೇವಿ, ೧೯೮೫-೯೫, **ವಿಶ್ವಜ್ಯೋತಿ ಬಸವಣ್ಣ,** ಬಸವ ಮಂಟಪ, ಬೆಂಗಳೂರು.

೫೯. ರಂಜಾನ್ ದರ್ಗಾ, ೨೦೦೨, **ಬಸವ ಪ್ರಜ್ಞೆ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೬೦. ರಹಮತ್ ತರೀಕೆರೆ, ೨೦೦೭, **ಕನ್ನಡ ಸಂಶೋಧನೆ ತಾತ್ವಿಕ ವಿಚಾರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೧. ರಹಮತ್ ತರೀಕೆರೆ (ಸಂ), ಅಕ್ಕಮಹಾದೇವಿ **ವಚನಗಳು: ಸಾಂಸ್ಕೃತಿಕ ಮುಖಾಮುಖಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೨. ರಾಘವೇಂದ್ರ ಎಚ್.ಎಸ್. (ಸಂ), ೨೦೦೧, **ಶತಮಾನ ಸಾಹಿತ್ಯ ವಿಮರ್ಶೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೩. ರಾಮಲಿಂಗಯ್ಯ ಎಂ.ಸಿ., ೧೯೯೨, **ಕ್ರಾಂತಿಯೋಗಿ ಬಸವಣ್ಣ,** ಗೀತಾ ಪ್ರಕಾಶನ, ಮಾರನಗೆರೆ.

೬೪. ಲಂಕೇಶ್ ಪಿ., ೧೯೭೩, **ಸಂಕ್ರಾಂತಿ,** ಪತ್ರಿಕೆ ಪ್ರಕಾಶನ, ಬೆಂಗಳೂರು.

೬೫. ವ್ಯಾಸ ದೇಶಪಾಂಡೆ, ೨೦೦೬, **ಇವ ನಮ್ಮವ,** ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ.

೬೬. ವಿಜಯಕುಮಾರ, ೧೯೮೧, **ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರ ವ್ಯಕ್ತಿತ್ವ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೬೭. ವಿರೂಪಾಕ್ಷ ಬಿ., ಮಹಾದೇವಯ್ಯ ಪಿ., ೨೦೦೦, **ವಿಶ್ವಜ್ಯೋತಿ ಬಸವೇಶ್ವರ,** ಬಸವ ಸಮಿತಿ, ಬೆಂಗಳೂರು.

೬೮. ವಿಶ್ವಾರಾಧ್ಯ ಸತ್ಯಂಪೇಟೆ, ೧೯೯೫, **ಬಸವಣ್ಣ ಮತ್ತು ಲೋಹಿಯಾ,** ಅಗ್ನಿ ಅಂಕುರ ಪ್ರಕಾಶನ, ಶಕಪುರ.

೬೯. ವೀರಣ್ಣ ರಾಜೂರ (ಸಂ), ೨೦೦೩, **ಬಸವಣ್ಣನವರ ಪ್ರಮುಖ ಚಿಂತನೆಗಳು,** ಶ್ರೀ ಬಸವೇಶ್ವರ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೦. ಶಂಕರಾನಂದ ಉಲ್ಲಾಸರ, ೨೦೦೨, **ಬಸವಣ್ಣನನ್ನು ಬದುಕಿಸಿ,** ಪ್ರಮೋದ ಪ್ರಕಾಶನ, ವಿಜಾಪುರ.

೭೧. ಶಾಮರಾಯ ತ.ಸು., ೧೯೬೨, **ಕನ್ನಡ ನಾಟಕ,** ಗೀತಾ ಬುಕ್‌ಹೌಸ್, ಬೆಂಗಳೂರು.

೭೨. ಶಿವಪ್ರಕಾಶ್ ಎಚ್.ಎಸ್., ೧೯೮೯, **ಮಹಾಚೈತ್ರ,** ಸ್ನೇಹಾ ಪ್ರಿಂಟರ್ಸ್, ಬೆಂಗಳೂರು.

೭೩. ಶಿವಣ್ಣ ಎಸ್., ೨೦೦೩, **ಬಸವ ಸಾಹಿತ್ಯ ಸೂಚಿ,** ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೪. ಶಿವರುದ್ರಪ್ಪ ಜಿ.ಎಸ್., ೧೯೭೯, **ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೩,** ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೫. ಶಿವರುದ್ರಪ್ಪ ಜಿ.ಎಸ್., ೨೦೦೪, **ಸಮಗ್ರಗದ್ಯ ಸಂಪುಟ-೧,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೭೬. ಶಿವಾನಂದ ವಿರಕ್ತಮಠ, ೧೯೭೮, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೭. ಶಿವಾನಂದ ವಿರಕ್ತಮಠ, ೨೦೦೩, **ಹರಿಹರನ ರಗಳೆಗಳು: ಸಾಂಸ್ಕೃತಿಕ ಮುಖಾಮುಖಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೮. ಶ್ರೀಕಂಠಶಾಸ್ತ್ರಿ ನಲವಡಿ, ೧೯೮೩, **ಜಗಜ್ಯೋತಿ ಬಸವೇಶ್ವರ,** ಮಲ್ಲಪ್ಪ ವಿರೂಪಾಕ್ಷಪ್ಪ ಅರಳಿ ಪುಸ್ತಕ ವ್ಯಾಪಾರಿಗಳು, ಗದಗ.

೭೯. ಶ್ರೀ ಪಂಡಿತಾರಾಧ್ಯ ಶಿವಚಾರ್ಯ, ೨೦೦೩, **ಜಂಗಮದೆಡೆಗೆ,** ಶ್ರೀ ಶಿವಕುಮಾರ ಕಲಾಸಂಘ(ರಿ), ಸಾಣೇಹಳ್ಳಿ, ಚಿತ್ರದುರ್ಗ.

೮೦. ಶೇಷಗಿರಿರಾವ್ ಎಲ್.ಎಸ್., ೧೯೯೩, **ಹೊಸಗನ್ನಡ ಸಾಹಿತ್ಯ,** ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೮೧. ಶ್ರೀನಿವಾಸಮೂರ್ತಿ ಎಂ.ಆರ್., ೧೯೩೧, **ಭಕ್ತಿಭಂಡಾರಿ ಬಸವಣ್ಣನವರು,** ಸೆಂಟ್ರಲ್ ಕಾಲೇಜು, ಬೆಂಗಳೂರು.

೮೨. ಶ್ರೀನಿವಾಸ್ ಮೂರ್ತಿ ಎಂ.ಆರ್., ೨೦೦೩, **ವಚನ ಧರ್ಮಸಾರ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೩. **ಸಂಕ್ರಮಣ (ಪತ್ರಿಕೆ),** ೧೯೮೨, ಸಂಪುಟ-೧೮, ಸಂಚಿಕೆ-೩-೪, ಸಂಕ್ರಮಣ ಪ್ರಕಾಶನ, ಬೆಂಗಳೂರು.

೮೪. ಸಿದ್ಧಲಿಂಗಯ್ಯ ಜಿ.ಎಸ್., ೧೯೯೪, **ಬಸವಣ್ಣ,** ಬಸವ ಸಮಿತಿ, ಬೆಂಗಳೂರು.

೮೫. ಸಿದ್ಧಲಿಂಗಯ್ಯ ಜಿ.ಎಸ್., ೧೯೮೯, **ವಚನ ಸಾಹಿತ್ಯ ಒಂದು ಇಣುಕು ನೋಟ,** ಬಸವ ಸಮಿತಿ, ಬಸವ ಭವನ, ಬಸವೇಶ್ವರ ವೃತ್ತ, ಬೆಂಗಳೂರು.

೮೬. ಹನ್ನೆರಡುಮಠ ಜಿ.ಎಚ್., ೧೯೮೨, **ಕೂಗಿತ್ತು ಕೂಡಲಸಂಗಮ,** ಹನ್ನೆರಡುಮಠ ಪ್ರಕಾಶನ, ಇಲಕಲ್.

೮೭. ಹನ್ನೆರಡುಮಠ ಜಿ.ಎಚ್., ೧೯೮೨, **ಯೋಗಿ ಕಂಡ ಯೌವ್ವನ,** ಇಲಕಲ್.

೮೮. ಹನ್ನೆರಡುಮಠ ಜಿ.ಎಚ್., ೧೯೮೨, **ಗುರುವೆಂದರ‍್ಯಾರು ಹರವೆಂದರ‍್ಯಾರೋ,** ಇಲಕಲ್.

೮೯. ಹನ್ನೆರಡುಮಠ ಜಿ.ಎಚ್., ೧೯೮೩, **ಯೋಗಿಗೆ ಯೋಗಿಣಿಯಾಗಿ ಕಾಡಿತ್ತು,** ಇಲಕಲ್.

೯೦. ಹನ್ನೆರಡುಮಠ ಜಿ.ಎಚ್., ೧೯೮೩, **ಭೃಂಗ ಬಂದಾವೋ ಲಿಂಗ ತುಂಬ್ಯಾವೋ,** ಇಲಕಲ್.

೯೧. ಹನ್ನೆರಡುಮಠ ಜಿ.ಎಚ್., ೧೯೮೩, **ಕಲ್ಯಾಣ ಕೂಗೈತೋ,** ಇಲಕಲ್.

೯೨. ಹನ್ನೆರಡುಮಠ ಜಿ.ಎಚ್., ೧೯೮೪, **ತೇರು ಸಾಗಿತಣ್ಣಾ ಬಸವಣ್ಣನ ಪಾಜ ಬಂದಿತಣ್ಣಾ,** ಇಲಕಲ್.

೯೩. ಹನ್ನೆರಡುಮಠ ಜಿ.ಎಚ್., ೧೯೮೫, **ಉಳವಿಯಲ್ಲಿ ಓಂಕಾರ,** ಇಲಕಲ್.

❑❑❑

